# ಕನ್ನಡದಲ್ಲಿ ಅನುವಾದ ಸಾಹಿತ್ಯ

(1920 ರವರೆಗೆ)

ಡಾ॥ ದೇ. ಜವರೇಗೌಡ
ಮಾರ್ಗದರ್ಶಕರು



ಎ. ಆರ್. ಮಂಜುನಾಥ್
ಸಂಶೋಧಕರು

ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯಕ್ಕೆ ಒಪ್ಪಿಸಿದ

ಪ್ರೌಢಪ್ರಬಂಧ



ಕನ್ನಡ ವಿಶ್ವವಿದ್ಯಾಲಯ - ಹಂಪಿ, ವಿದ್ಯಾರಣ್ಯ

# ಕನ್ನಡದಲ್ಲಿ ಅನುವಾದ ಸಾಹಿತ್ಯ

(1920 ರವರೆಗೆ)


**ಡಾ|| ದೇ. ಜವರೇಗೌಡ**

ಮಾರ್ಗದರ್ಶಕರು





**ಎ. ಆರ್. ಮಂಜುನಾಥ್**

ಸಂಶೋಧಕರು




ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯಕ್ಕೆ ಒಪ್ಪಿಸಿದ

ಪ್ರೌಢಪ್ರಬಂಧ

ಕನ್ನಡ ವಿಶ್ವವಿದ್ಯಾಲಯ - ಹಂಪಿ, ವಿದ್ಯಾರಣ್ಯ

## ಮಾರ್ಗದರ್ಶಕರ ದೃಢೀಕರಣ ಪತ್ರ.

ಶ್ರೀ. ಎ.ಆರ್.ಮಂಜುನಾಥ್ ಇವರು ನನ್ನ ಮಾರ್ಗದರ್ಶನದಲ್ಲಿ "ಕನ್ನಡದಲ್ಲಿ ಅನುವಾದ ಸಾಹಿತ್ಯ" (1920 ರವರೆಗೆ) ಕುರಿತು ಪ್ರೌಢಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ಈ ಪ್ರಬಂಧದ ಯಾವುದೇ ಭಾಗವು ಲೇಖನ ರೂಪದಲ್ಲಾಗಲೀ, ಪುಸ್ತಕ ರೂಪದಲ್ಲಾಗಲೀ ಪ್ರಕಟವಾಗಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ "ಭಾಷಾನಿಕಾಯ" ಕ್ಕೆ ಪ್ರಸ್ತುತ ಪ್ರೌಢಪ್ರಬಂಧವನ್ನು ಸಲ್ಲಿಸಲು ಅನುಮತಿ ನೀಡಿದ್ದೇನೆ.

(ಡಾ: ದೇ.ಜವರೇಗೌಡ)
ಮಾರ್ಗದರ್ಶಿಗಳು.

# ಸಂಶೋಧಕರ ದೃಢೀಕರಣ ಪತ್ರ

ಎ.ಆರ್.ಮಂಜುನಾಥ್ ಆದ ನಾನು ಕನ್ನಡದ ಹೆಸರಾಂತ ಸಾಹಿತಿಗಳಾದ ಪೂಜ್ಯ ಡಾ: ದೇ.ಜವರೇಗೌಡರ ಮಾರ್ಗದರ್ಶನದಲ್ಲಿ "ಕನ್ನಡದಲ್ಲಿ ಅನುವಾದ ಸಾಹಿತ್ಯ" (1920 ರವರೆಗೆ) ಕುರಿತು ಪ್ರೌಢಪ್ರಬಂಧವನ್ನು ಸಿದ್ಧಪಡಿಸಿದ್ದೇನೆ. ಈ ಪ್ರೌಢಪ್ರಬಂಧದ ಯಾವುದೇ ಭಾಗವು ಲೇಖನ ರೂಪದಲ್ಲಾಗಲೀ ಪುಸ್ತಕ ರೂಪದಲ್ಲಾಗಲೀ ಪ್ರಕಟವಾಗಿರುವುದಿಲ್ಲ.

ಹಂಪಿ ಕನ್ನಡ ವಿಶ್ವವಿದ್ಯಾಲಯದ 'ಭಾಷಾ ನಿಕಾಯ'ಕ್ಕೆ ಪ್ರಸ್ತುತ ಪ್ರಬಂಧವನ್ನು ಪಿಹೆಚ್.ಡಿ ಅಧ್ಯಯನದ ಅಂಗವಾಗಿ ನಾನು ಸಲ್ಲಿಸುತ್ತಿದ್ದು ಇದನ್ನು ಸ್ವೀಕರಿಸಲು ಕೋರುತ್ತೇನೆ.

(ಎ.ಆರ್.ಮಂಜುನಾಥ್)
ಸಂಶೋಧಕರು.

# ಪರಿವಿಡಿ

# ಅನುವಾದ - ಪರಿಭಾಷೆ, ತತ್ತ್ವ, ಪ್ರಕಾರ, ವ್ಯಾಪ್ತಿ

## ಅ. ಪರಿಭಾಷೆ

*ಇವಳ ಸೊಬಗನವಳು ತೊಟ್ಟು*

*ನೋಡಬಯಸಿದೆ;*

*ಅವಳ ತೊಡಿಗೆ ಇವಳಿಗಿಟ್ಟು*

*ಹಾಡಬಯಸಿದೆ* [1]

-ಶ್ರೀ

ಮಾನವನು ತನ್ನ ದೈನಂದಿನ ವ್ಯವಹಾರವನ್ನು ಸುಗಮವಾಗಿಸಲು ಭಾಷೆಯನ್ನು ಸೃಷ್ಟಿಸಿದನು. ಅನಂತರ ಶಬ್ದರೂಪದ ಭಾಷೆಗೆ 'ಲಿಪಿ'ಯನ್ನು ರೂಪಿಸಿಕೊಂಡನು. ಇದು ಪರಿಸರದಿಂದ ಪರಿಸರಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುತ್ತದೆ. ಎರಡು ವಿಭಿನ್ನ ಸಂಸ್ಕೃತಿಗಳು ಸಂಪರ್ಕಕ್ಕೆ ಬಂದಾಗ ಕೊಳುಕೊಡೆಗಳ ಕ್ರಿಯೆ ನಡೆಯುತ್ತವೆ. ಅನುಭವದ ... ವಿಸ್ತಾರವಾಗುತ್ತಾ ಹೋಗುತ್ತದೆ. ಹೊಸ ಹೊಸ ಜ್ಞಾನಾನ್ವೇಷಣೆ ನಿರಂತರವಾಗಿ ನಡೆಯುತ್ತದೆ. ಸಂಗ್ರಹಿತ ಅನುಭವದ... ನೂತನ ಅನುಭವಗಳನ್ನು ಹೋಲಿಸಿ ಸಾದೃಶ್ಯ-ವೈದೃಶ್ಯಗಳನ್ನು ಕಂಡುಕೊಳ್ಳುವ ಸಾಧ್ಯತೆ ಇದ್ದೇ ಇರುತ್ತದೆ. ಹೊಸದ... ಸಂಸ್ಕೃತಿಯ ದರ್ಶನಕ್ಕೆ ಅಲ್ಲಿಯ ಕಲೆ, ಸಾಹಿತ್ಯ, ವಿಜ್ಞಾನ, ಇತಿಹಾಸಗಳು ಬೆಳಕಿನ ಕಿಂಡಿಗಳು. ತನ್ನ ಭಾಷೆಯ ಸಾಹಿ... ಸಿಹಿಯನ್ನು ಇತರರಿಗೆ ಹಂಚುವ. ಅಲ್ಲಿಯ ಸೊಬಗನ್ನು ಇಲ್ಲಿಗೆ ಪರಿಚಯಿಸುವ ಅಭಿಲಾಷೆ ಎಲ್ಲಾ ಸಾಹಿತಿಗ... ಸಹಜ. ತನ್ನ ಮನಸ್ಸಿಗೆ ಮುದ ನೀಡಿದ, ವಿವೇಕವನ್ನು ವಿಸ್ತಾರಗೊಳಿಸಿದ, ವ್ಯಕ್ತಿತ್ವವನ್ನು ಗಟ್ಟಿಮಾಡಿದ ಕೃತಿಗಳನ್ನು ಇತರ... ಉಣಬಡಿಸಲು ತವಕ ಅನುವಾದಕನದು. ಈ ಪ್ರಕ್ರಿಯೆಯೇ ಭಾಷಾಂತರ.

ಮಾತೃಭಾಷೆಯಲ್ಲಿ ಯಾವುದೇ ಪರಭಾಷೆಯ ಸಾಹಿತ್ಯವನ್ನು ಹಿಡಿದಿಟ್ಟು ತನ್ನವರಿಗೆ ಹಂಚುವ ಹಂಬಲ ಉಳ್ಳವನು ಅನುವಾದಕನೆಂದೆನಿಸಿಕೊಳ್ಳುತ್ತಾನೆ. ಮೂಲ ಲೇಖಕನ ಕ್ರಿಯೆ ಸೃಷ್ಟಿಕಾರ್ಯವೆನಿಸಿದರೆ ಅನುವಾದಕನದು ಪ್ರತಿ ಸೃಷ್ಟಿಕಾರ್ಯ. ಭಾಷೆ ಮಾನವನ ಭಾವನೆಗಳಿಗಿರುವ ವ್ಯಕ್ತರೂಪ. ಈ ವ್ಯಕ್ತರೂಪ ಮಾತೃಭಾಷೆಗೆ ಒಂದು ಸಹಜಕ್ರಿಯೆಯಾದರೆ ಅನ್ಯಭಾಷೆಗೆ ಅನುಕ್ರಿಯೆ. ಮಾತೃಭಾಷೆಯಲ್ಲಿ ಸಾಹಿತ್ಯಸೃಷ್ಟಿ ಸೃಜನಶೀಲವಾದರೆ ಅನುವಾದದಲ್ಲಿ ಅದು ಅನುಸೃಷ್ಟಿ. ಮನುಷ್ಯ ತನ್ನ

ಭಾವನೆ, ವಿಚಾರ, ಅನುಭವಗಳನ್ನು ಅಭಿವ್ಯಕ್ತಗೊಳಿಸಲು ಭಾಷೆ, ಶಿಲ್ಪ, ಸಂಗೀತ, ಚಿತ್ರಕಲೆಗಳನ್ನು ಸಾಧನವಾಗಿ ಕೊಳ್ಳುತ್ತಾನೆ. ಅನುಭವ ಆಲೋಚನೆಗಳಿಗೆ ಭಾಷಾರೂಪಕೊಟ್ಟಾಗ ಅದು ಭಾಷಾಭಿವ್ಯಕ್ತಿಯಾಗುತ್ತದೆ. ಅವು ಕ್ರಿಯಾ ಸ್ವರೂಪ ಪಡೆದಾಗ ಕ್ರಿಯಾಭಿವ್ಯಕ್ತಿಯಾಗುತ್ತದೆ. ಈ ಭಾಷಾಭಿವ್ಯಕ್ತಿಯನ್ನು ಬೇರೊಂದು ಭಾಷೆಯಲ್ಲಿ ಪಡಿಮೂಡಿಸಿದ ಭಾಷಾಂತರವಾಗುತ್ತದೆ.

ಭಾಷಾಂತರ ಒಂದು ವಿಶಿಷ್ಟವಾದ ಕಲೆ. ಅದರಿಂದ ಬಹುಮುಖವೂ ವ್ಯಾಪಕವೂ ಆದ ಪ್ರಯೋಜನಗಳವ ಭಾವೈಕ್ಯದಿಂದ ಹಿಡಿದು ಭಾಷೆ ಸಾಹಿತ್ಯಗಳ ಸಂವರ್ಧನೆಯವರೆಗೆ ಅನೇಕ ಕಾರ್ಯಗಳನ್ನು ಸಾಧಿಸುವ ಸಾಮರ್ಥ್ಯ ಅದಕ್ಕುಂಟು. ಅದು ವಿಶ್ವಬಾಂಧವ್ಯವನ್ನು ಸ್ಥಾಪಿಸುವುದು ಮಾತ್ರವಲ್ಲದೇ, ವಿವಿಧ ಜನಾಂಗಗಳ ನಡುವೆ ಆಲೋಚನಾ ವಿನಿಮಯವನ್ನು ಏರ್ಪಡಿಸಿ ವೈಚಾರಿಕ ಕ್ರಾಂತಿಯನ್ನು ರೂಪಿಸಿ ಬಾಳಿಗೆ ಹೊಸತನ ಹಾಗೂ ಜೀವಂತಿಕೆಗಳನ್ನು ತುಂಬುವ ನವನವೋನ್ಮೇಷಶಾಲಿನಿಯಾದ ಪ್ರಕ್ರಿಯೆಯೆನಿಸುತ್ತದೆ. ಭಾರತಕ್ಕೆ ಬ್ರಿಟಿಷರು ಮೊದಲಾಗಿ ಪಾಶ್ಚಾತ್ಯರು ಬಂದ ಮೇಲೆ ಇಲ್ಲಿನ ಸಾಹಿತ್ಯ ಹಾಗೂ ಇತರ ವಿಚಾರಗಳು ಆ ದೇಶಕ್ಕೆ ರವಾನೆಯಾದವು. ಮಹಾಕವಿ ಕಾಳಿದಾಸನ "ಶಾಕುಂತಲ" ನಾಟಕವನ್ನು ವಿಲಿಯಂ ಜೋನ್ಸ್ ಇಂಗ್ಲಿಷಿಗೆ ಅನುವಾದಿಸಿದಾಗ ಪಾಶ್ಚಾತ್ಯರಿಗೆ ಕಾಳಿದಾಸನ ಪ್ರತಿಭೆ ಮಾತ್ರ ಪರಿಚಯವಾಗಲಿಲ್ಲ ಭಾರತೀಯರ ನವಿರಾದ ಶೃಂಗಾರರಸದ ಪರಿಚಯವಾಯಿತು. ಪಿ. ವಿ. ರಾಣೆಯವರು ಭವಭೂತಿಯ 'ಉತ್ತರ ರಾಮಚರಿತಂ' ನಾಟಕವನ್ನು ಇಂಗ್ಲಿಷಿನಲ್ಲಿ ಪಡಿಮೂಡಿಸಿದಾಗ ಉದಾತ್ತರಾಮನ ಪರಿಚಯ ಪಾಶ್ಚಾತ್ಯರಿಗೆ ದೊರೆಯಿತು. ಅದೇ ರೀತಿ ಮಾಕ್ಸ್‌ಮುಲ್ಲರ್‌ನ ಋಗ್ವೇದ ಅನುವಾದ ಭಾರತೀಯ ತತ್ವಶಾಸ್ತ್ರದ ಪರಿಚಯ ಹೊರಗಿನವರಿಗೆ ದೊರೆಯಲು ಸಹಾಯಕವಾಯಿತು. ಇದು ಕೇವಲ ಸಾಹಿತ್ಯ, ತತ್ವ, ಶಾಸ್ತ್ರಗಳಿಗೆ ಮಾತ್ರ ಸೀಮಿತವಾಗಿಲ್ಲ. ಭಾಷಾಂತರ ಎಲ್ಲಾ ಶಾಸ್ತ್ರಗಳಿಗೂ ಜೀವನದಿಯಂತೆ. ಗ್ರೀಕರ ಮಹಾ ತತ್ವಜ್ಞಾನಿಗಳಾದ ಪ್ಲೇಟೋ ಹಾಗೂ ಅರಿಸ್ಟಾಟಲ್‌ರನ್ನು ರಾಜ್ಯಶಾಸ್ತ್ರದ ಮೂಲಪುರುಷರೆಂದು ಪರಿಗಣಿಸಲಾಯಿತು. ಪ್ರಸಿದ್ಧ ವಿದ್ವಾಂಸರಾದ ಆರ್. ಶಾಮಾಶಾಸ್ತ್ರಿಗಳು ಕೌಟಿಲ್ಯನ 'ಅರ್ಥಶಾ... ಕೃತಿಯನ್ನು ಇಂಗ್ಲಿಷಿಗೆ ಅನುವಾದ ಮಾಡಿದಾಗ ಹೊಸ ಲೋಕವೊಂದು ಪರಿಚಯವಾಯಿತು. ಮೌರ್ಯವಂಶ ಸ್ಥಾಪಕ ಚಂದ್ರಗುಪ್ತಮೌರ್ಯನ ಅಮಾತ್ಯ ಕೌಟಿಲ್ಯ ಕ್ರಿಸ್ತಪೂರ್ವದಲ್ಲೇ ರಾಜ್ಯಶಾಸ್ತ್ರದ ಅಧ್ಯಯನಕ್ಕೆ ಬೀಜಾಂಕುರ ಮಾಡಿದ್ದ... ನಿರ್ಣಯಿಸಲಾಯಿತು. ಭಾಷಾಂತರ ಕೃತಿಯಿಂದ ಹೊಸ ಅಂಶವೊಂದು ಮಾನವಿಕ ಶಾಸ್ತ್ರಗಳ ಅಧ್ಯಯನದಲ್ಲಿ ಬೆ... ಬಂತು. ಈ ವಿಚಾರ ಭಾರತೀಯ ಸಾಹಿತ್ಯಕ್ಕೂ ಅನ್ವಯಿಸುತ್ತದೆ. ಪಾಶ್ಚಾತ್ಯ ಶಿಕ್ಷಣ-ಸಾಹಿತ್ಯದ ಪರಿಚಯದ ಫಲ... ನಮ್ಮ ಸಾಹಿತ್ಯ ವಲಯದಲ್ಲಿ ಹೊಸ ಹೊಸ ಆಲೋಚನೆಗಳು ಸ್ಫುರಿಸಿದವು.

ಸೊಫೋಕ್ಲಿಸ್, ಈಸ್ಕಿಲಸ್ ಹಾಗೂ ಯೂರಿಪಿಡಿಸ್ ಮೊದಲಾದ ಗ್ರೀಕ್ ನಾಟಕಕಾರರು ಷೇಕ್ಸ್‌ಪಿಯರ್ ಮೊದಲಾದ ಇಂಗ್ಲಿಷ್ ನಾಟಕಕಾರರ ಪರಿಚಯದ ನಂತರ ತಮ್ಮ ಆಲೋಚನಾ ವಿಧಾನಗಳನ್ನು ಬದಲಾಯಿಸಿಕೊಂಡರು. ಯೂರಿಪಿಡಿಸ್‌ನ 'ಅಂತಿಗೊನೆ' ಹಾಗೂ ಷೇಕ್ಸ್‌ಪಿಯರ್‌ನ 'ಹ್ಯಾಮ್ಲೆಟ್', 'ಕಿಂಗ್‌ಲಿಯರ್' ಮೊದಲಾದ ನಾಟಕಗಳು ನಮ್ಮವರಿಗೆ ರನ್ನನ 'ದುರ್ಯೋಧನ' ಹಾಗೂ ನಾಗಚಂದ್ರನ 'ರಾವಣ' ಬೇರೆಯವರಾಗಿ ಗೋಚರಿಸಿದರು. ಅಲ್ಲಿನ ದುರಂತ ಛಾಯೆಯನ್ನು ಇಲ್ಲೂ ಕಾಣತೊಡಗಿದರು. ಹೀಗೆ ಭಾಷಾಂತರ ವಿವಿಧ ಜನಾಂಗಗಳ ಆಲೋಚನಾ ವಿಧಾನವನ್ನು ಹಾಗೂ ವೈಚಾರಿಕ

ಕ್ರಾಂತಿಯನ್ನು ಸಮನ್ವಯ ಸಾಧಿಸುತ್ತದೆ. ಒಟ್ಟಾರೆ ಹೇಳುವುದಾದರೆ ವಿಶ್ವಮಾನವ ಪ್ರಜ್ಞೆಯನ್ನು ಅರಳಿಸಲು ಭಾಷಾಂತರ ಅತ್ಯಂತ ಪ್ರಮುಖ ಮಾರ್ಗೋಪಾಯವೆಂದರೆ ಅದು ಅತಿಶಯೋಕ್ತಿಯೆನಿಸುವುದಿಲ್ಲ.

ಭಾವ, ಭಾವನೆ ಮತ್ತು ಅನುಭವಗಳು ವ್ಯಕ್ತಿಯಿಂದ ವ್ಯಕ್ತಿಗೆ, ದೇಶದಿಂದ ದೇಶಕ್ಕೆ, ಕಾಲದಿಂದ ಕಾಲಕ್ಕೆ ಬದಲಾಗುತ್ತದೆ. ಹಾಗಾಗಿ ಈ ಆಲೋಚನೆಗಳ ಶಬ್ದಾಂತರ ಅಷ್ಟು ಸುಲಭ ಕ್ರಿಯೆಯಲ್ಲ. ಆದರೂ ಆಯಾಯಾ ಪ್ರಾದೇಶಿಕ ಪರಿಸರ, ಜನರ ಸಂಸ್ಕಾರ, ಸಂಪ್ರದಾಯಕ್ಕನುಗುಣವಾಗಿ ಅಲ್ಲಿಯ ಭಾಷೆಯ ಸ್ವರೂಪ ನಿರ್ಣಯವಾಗುವುದರಿಂದ ಶಬ್ದಾರ್ಥದ ಬಗ್ಗೆ ಅವರಲ್ಲಿ ಸಹಮತವೇರ್ಪಟ್ಟಿರುತ್ತದೆ. "ಒಟ್ಟಿನ ವಿಚಾರಾನುಭವಗಳು ಅವನು ಟಂಕಿಸಿದ ಶಬ್ದಗಳಿಂದ ಅವನ ಸಮಾಜದ ಇತರರು ಮಾಡುವ ಬಳಕೆಯಿಂದ ನಾಣ್ಯತೆಯನ್ನು ಗಳಿಸುತ್ತವೆ. ಭಾವನೆ, ವಿಚಾರ, ಅನುಭವಗಳು ಹೆಪ್ಪುಗಟ್ಟಿ ಶಬ್ದಗಳ ರೂಪದಲ್ಲಿ ಹೊರಬಂದು ಭಾಷೆಯ ಮಾಧ್ಯಮದಲ್ಲಿ ಚಲಾವಣೆಗೆ ಬರುತ್ತವೆ. ಅದೇ ರೀತಿ ಒಂದು ಪ್ರದೇಶದ ಸಂಸ್ಕೃತಿಯ, ಜನಾಂಗದ ಮನೋಧರ್ಮಗಳನ್ನು ಅರಿಯಲು ಅವರ ಸಾಹಿತ್ಯಾಭ್ಯಾಸ ಮಾಡಬೇಕಾಗುತ್ತದೆ. ಈ ಅಧ್ಯಯನದ ಪರೋಕ್ಷ ವಿಧಾನಕ್ಕೆ ಭಾಷಾಂತರ ಸಾಧನ. ಇದರಿಂದ ಸೃಷ್ಟಿಯಲ್ಲಿ ಅಡಗಿರುವ ಸಮಷ್ಟಿಯನ್ನು ಅರಿಯಲು ಸಾಧ್ಯವಾಗುತ್ತದೆ. ಹಾಗೆಯೇ ಜ್ಞಾನದ ಭಿನ್ನ, ಅವಶ್ಯಕತೆ ಪೂರೈಕೆಗಾಗಿ ಇನ್ನೊಂದು ಸಂಸ್ಕೃತಿ, ನಾಗರಿಕತೆ, ಭಾಷೆಯೊಡನೆ ಸಂಪರ್ಕ ಬೆಳೆಸಲು ಇರುವ ತೊಂದರೆ ನಿವಾರಿಸಲು ಇರುವ ಸಾಧನವೇ ಭಾಷಾಂತರ"[2]

ಭಾಷಾಂತರವೆಂಬ ಪದವೇ ಸೂಚಿಸುವಂತೆ ಅದು ಭಾಷೆಯ ನಡುವೆ ಇರುವ ಅಂತರವೇ ಹೊರತು ಭಾವದಲ್ಲಲ್ಲ. ಮೂಲಕೃತಿಯಲ್ಲಿ ಅಭಿವ್ಯಕ್ತಿಗೊಂಡಿರುವ ಕೃತಿಕಾರನ ಉದಾತ್ತ ಭಾವನೆಗಳನ್ನು ಅನುಭವಗಳನ್ನು ಮೈಗೂಡದಂತೆ ಮತ್ತೊಂದು ಭಾಷೆಯಲ್ಲಿ ಪಡಿಮೂಡಿಸುವುದೇ ಭಾಷಾಂತರ. ಅಂದರೆ ಮೂಲದ ಅರ್ಥ ತದ್ವತ್ತಾಗಿ ಇನ್ನೊಂದು ಭಾಷೆಯಲ್ಲಿ ಅಭಿವ್ಯಕ್ತವಾಗಬೇಕು. "ಕೇವಲ ಸಾರಾಂಶವಾಗಲೀ, ಸಂಕ್ಷಿಪ್ತ ಬರಹವಾಗಲೀ, ತಾತ್ಪರ್ಯವಾಗಲೀ, ಬೇರೊಂದು ಕ್ರಮದಲ್ಲಿ ಮೂಲಬರಹವನ್ನು ಅಭಿವ್ಯಕ್ತಿಸುವುದಾಗಲೀ ಭಾಷಾಂತರವೆನಿಸಿಕೊಳ್ಳುವುದಿಲ್ಲ. ಮೂಲದಲ್ಲಿರುವ ಯಾವುದನ್ನೂ ಬಿಡಬಾರದೆಂದಲ್ಲ. ಹಾಗೆಂದು ಅನಾವಶ್ಯಕವಾಗಿ ಯಾವುದೇ ಪದವನ್ನು ಬಿಡುವ ಸ್ವಾತಂತ್ರ್ಯವೂ ಇಲ್ಲ. ಇದೊಂದು ಹೊಸ ಅವತಾರ. ಒಂದು ವೇಳೆ ಮೂಲ ಲೇಖಕನೇ ಆ ಭಾಷೆಯಲ್ಲಿ ಬರೆದಿದ್ದರೆ ಆ ಬರಹ ಹೇಗಿರುತ್ತದೆಯೋ ಹಾಗಿರಬೇಕು ಭಾಷಾಂತರ."[3]

ಭಾಷಾಂತರ, ಅನುವಾದ, ತರ್ಜುಮೆ, ಕನ್ನಡಿಸು - ಒಂದೇ ಅರ್ಥದಲ್ಲಿ ಬಳಕೆಯಲ್ಲಿರುವ ಶಬ್ದಗಳು. ಭಾಷಾಂತರ ಭಾಷೆಯ ಅಂತರವಾದರೆ, ಅನುವಾದ ಅನುಸರಿಸಿ ಹೇಳುವುದು. ಫಾರಸೀ ಶಬ್ದವಾದ 'ತರ್ಜುಮಾ'ವನ್ನು ಅದೇ ಅರ್ಥದಲ್ಲಿ ಬಳಸಲಾಗುತ್ತದೆ. "ಕನ್ನಡ" ಶಬ್ದಕ್ಕೆ ಇಸು ಪ್ರತ್ಯಯ ಸೇರಿಸಿದಾಗ 'ಕನ್ನಡಿಸು' ಎಂದಾಗುತ್ತದೆ. ಇದು ಇತರ ಭಾಷೆಗಳ ಸಾಹಿತ್ಯಗಳನ್ನು ಕನ್ನಡಕ್ಕೆ ತರುವ ಕ್ರಿಯೆಯನ್ನು ಸೂಚಿಸಲಾಗುತ್ತದೆ. ಭಾಷಾಂತರಕ್ಕೂ ಲಿಪ್ಯಂತರಕ್ಕೂ ವ್ಯತ್ಯಾಸವಿದೆ. ಮೂಲ ಭಾಷೆಯ ಧ್ವನಿ ಸಂಕೇತಗಳಿಗೆ ಉದ್ದಿಷ್ಟ ಭಾಷೆಯ ಧ್ವನಿ ಸಂಕೇತ ಅಳವಡಿಸಿದಲ್ಲಿ ಅದು ಲಿಪ್ಯಂತರವಾಗುತ್ತದೆ. ಲಿಪ್ಯಂತರ ಭಾಷಾಂತರವಾಗಲಾರದು. ಅನುವಾದ ಬೇರೆ ಭಾಷೆಯ ಸಾಹಿತ್ಯ ಕೃತಿಯನ್ನು ತನ್ನ ಭಾಷೆಗೆ ತರುವಾಗ ಅಲ್ಲಿನ ಆಲೋಚನೆ,

ಸಂದೇಶ ಹಾಗೂ ಸಂವೇದನೆಗಳನ್ನು ತನ್ನೊಡನೆ ತೆಗೆದುಕೊಂಡು ಬರುತ್ತದೆ. ರಾಜಾಜಿಯವರು ಇಂಗ್ಲಿಷ್ ಬಲ್ಲವರಿಗಾಗಿ 'ರಾಮಾಯಣ' 'ಮಹಾಭಾರತ'ಗಳನ್ನು ಅನುವಾದ ಮಾಡಿದ್ದಾರೆ. ಈ ಅನುವಾದದಲ್ಲಿ ಅವರು ನಿರ್ದಿಷ್ಟ ಓದುಗರನ್ನು ದೃಷ್ಟಿಯಲ್ಲಿಟ್ಟುಕೊಂಡಿರುವುದರಿಂದ ಆ ಎರಡು ಮಹಾಕಾವ್ಯಗಳ ಮೌಲ್ಯಗಳನ್ನು ಇಂಗ್ಲಿಷ್ ಓದುಗರಿಗೆ ಸಮರ್ಪಕವಾಗಿ ಪರಿಚಯಿಸಿದ್ದಾರೆ.

ಭಾಷಾಂತರ ಎಂಬ ಶಬ್ದವು ಇಂಗ್ಲಿಷ್‌ನ Translation, version, rendering ಎಂಬ ಪದಗಳಿಗೆ ಸಂವಾದಿಯಾಗಿದೆ. ವಿವಿಧ ನಿಘಂಟುಗಳು ವಿವಿಧ ರೀತಿಯಲ್ಲಿ ಈ ಪದವನ್ನು ವಿವರಿಸಿವೆ. ಆಪ್ಟೆಯವರ ಸಂಸ್ಕೃತ ಕೋಶದಲ್ಲಿ 'ಅನುವಾದ' ಎಂಬ ಶಬ್ದಕ್ಕೆ 'ಪ್ರಾಪ್ತಸ್ಯ ಪುನಃ ಕಥನ', Repetition, explanation, corroboration ಎಂಬ ಅರ್ಥಗಳನ್ನು ಕೊಡಲಾಗಿದೆ. ಇದರರ್ಥ ಯಾವುದೇ ಕೃತಿಯನ್ನು ಮೂಲದ ಅಭಿಪ್ರಾಯಕ್ಕೆ ಕುಂದಿಲ್ಲದಂತೆ, ಏರುಪೇರುಗಳಿಲ್ಲದಂತೆ ಯಥಾವತ್ತಾಗಿ ಹೇಳುವುದು. ಒಂದು ಭಾಷೆಯಲ್ಲಿ ಹೇಳಿದ್ದನ್ನು ಇನ್ನೊಂದು ಭಾಷೆಯಲ್ಲಿ ಹೇಳುವುದೆಂಬ ಅರ್ಥ. 'ವದ್' ಮೂಲಧಾತುವಾಗಿದ್ದು ಅದಕ್ಕೆ ಅನು - ಉಪಸರ್ಗ ಸೇರಿ ಅನುವಾದ ಪದದ ನಿಷ್ಪತ್ತಿ ಆಗಿದೆ. Translation ಎಂಬ ಶಬ್ದಕ್ಕೆ 'ಚಪ್ಪಲಿ ರಿಪೇರಿ ಮಾಡುವುದು' ಎಂಬುದರಿಂದ ಹಿಡಿದು 'ಸಜೀವ ಸ್ವರ್ಗಾವರೋಹಣ ಮಾಡುವುದು', ಚರ್ಚ್ ಒಂದರ ಬಿಷಪ್‌ರನ್ನು ಮತ್ತೊಂದು ಚರ್ಚಿಗೆ ವರ್ಗಾಯಿಸುವುದು ಎಂಬುದರವರೆಗೆ ವಿವಿಧ ಅರ್ಥಗಳಿವೆ. New Universal Encyclopaedia ಹೀಗೆ ಹೇಳುತ್ತದೆ : "Literally, the act of moving across. The word is used for the act turning passages from one language into another. In an ecclesiastical sence it means the transfer of a Bishop from one seat to another and also the removal of bones of a saint from one place to another. Example : The feast of the translation of St. Martin is kept on July 4"[4] ಧಾರ್ಮಿಕ ಕ್ಷೇತ್ರದಲ್ಲಿ ಒಂದು ಪೀಠದಿಂದ ಇನ್ನೊಂದು ಪೀಠಕ್ಕೆ ಧರ್ಮಾಧಿಕಾರಿಯ ವರ್ಗಾವಣೆ ಮತ್ತು ಸಂತನ ಅಸ್ಥಿಯನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಕೊಂಡೊಯ್ಯುವುದು ಸಹ ಇಲ್ಲಿ ಸೇರಿದೆ. ಕಾಲಕ್ರಮೇಣ ಈ ಶಬ್ದ, ಸಾಹಿತ್ಯ ಕ್ಷೇತ್ರಕ್ಕೂ ಕಾಲಿಟ್ಟು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ 'ಕೊಂಡೊಯ್ಯುವ' ಕ್ರಿಯೆಯನ್ನು ಸೂಚಿಸತೊಡಗಿತು. ಏನನ್ನು ಕೊಂಡೊಯ್ಯುವುದು ಎಂಬ ಪ್ರಶ್ನೆಗೆ ನಾವೇ 'ಭಾವ'ವನ್ನು ಎಂಬ ಉತ್ತರವನ್ನು ಕಂಡುಕೊಳ್ಳಬೇಕಾಗುತ್ತದೆ. ಡಾ॥ ಜಾನ್ಸನ್ "To change into another language retaining sense" ಎಂದು ಅರ್ಥೈಸಿದ್ದಾನೆ.

ಇನ್ನೊಂದು ಪದಕೋಶದಲ್ಲಿ ಭಾಷಾಂತರಕ್ಕೆ "To turn something written or spoken from one language to another", the rendering of something into another language", "A translation is rendering of some ideas in a different language from the original"[5] ಎಂಬ ಪರಿಭಾಷೆ ನೀಡಲಾಗಿದೆ. ಅಂದರೆ ಯಾವುದೇ ಸಂಗತಿಯನ್ನು ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ತರುವುದು ಅಥವಾ ಮಾತನಾಡುವುದು ಅನುವಾದವಾಗುತ್ತದೆ. ಇಷ್ಟಲ್ಲದೇ ಇನ್ನೂ ಮುಂದುವರಿದು ಭಿನ್ನ ಭಾಷೆಗಳಲ್ಲಿ ಮೂಲದಲ್ಲಿನ ಭಾವಸಂಪತ್ತನ್ನು ಹಾಗೆಯೇ ಉಳಿಸಿಕೊಳ್ಳುವುದೆಂದಾಗುತ್ತದೆ. ಅಂದರೆ ಮೂಲದ ಭಾವಸಂಪತ್ತು ಪೂರ್ಣವಾಗಿ ಪ್ರತಿಫಲಿಸಿದಾಗ ಅನುವಾದ

ಸಾರ್ಥಕಗೊಳ್ಳುತ್ತದೆ ಎಂದಾಯಿತು. ಇನ್ನೊಂದು ಪದಕೋಶದಲ್ಲಿ ಇದನ್ನು ಕುರಿತು "The action of process of turning from one language into another also product of this, a version in a different language"[6] ಎಂದು ಹೇಳಿದೆ. ಅಂದರೆ ಯಾವುದೇ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಪರಿವರ್ತಿಸುವ ಕಾರ್ಯ ವಿಧಾನವು ಅನುವಾದವೆನಿಸಿಕೊಳ್ಳುತ್ತದೆ ಎಂಬ ವಿವರಣೆಯಲ್ಲಿ ಯಾವುದೇ ಕೃತಿ ಭಿನ್ನಭಾಷೆಯಲ್ಲಿ ಮಾಡಿ ಬರುವ ಅಂಶವನ್ನು ಮಾತ್ರ ಒತ್ತಿ ಹೇಳಲಾಗಿದೆ.

'ಅನುವಾದ' ಶಬ್ದವನ್ನು ಕುರಿತಂತೆ ವಿದ್ವಾಂಸರು ನಾನಾ ರೀತಿಯ ವ್ಯಾಖ್ಯಾನ ಮಾಡಿದ್ದಾರೆ. ಎ. ಎಲ್. ಸ್ಮಿತ್ ಪ್ರಕಾರ "Translation is the change into another language retaining as much of the sense as and can, for some of the original effect is always lost" ಅಂದರೆ ಅನುವಾದದಲ್ಲಿ ಸಾಮಾನ್ಯವಾಗಿ ಮೂಲದ ಪರಿಣಾಮ ಒಂದಲ್ಲ ಒಂದು ರೀತಿಯಲ್ಲಿ ನಶಿಸುತ್ತದೆ. ಮೂಲದ ಪರಿಣಾಮ ನಶಿಸುವುದರಿಂದ ಅರ್ಥವಂತಿಕೆಯನ್ನು ಕಾಯ್ದಿಟ್ಟುಕೊಳ್ಳಬೇಕೆಂಬುದು ಮುಖ್ಯ. ಆದರೆ ರೋಜರ್ ಟಿ. ಬೆಲ್ ಅರ್ಥವಂತಿಕೆ ಮತ್ತು ಶೈಲಿಯನ್ನು ಅನುವಾದದಲ್ಲಿ ಸಂರಕ್ಷಿಸಿಕೊಂಡು ಬರುವ ಬಗ್ಗೆ ಹೆಚ್ಚು ಒತ್ತು ನೀಡುತ್ತಾನೆ. ಅವನು ಡುಬಾಯ್ಸ್‌ನ ವ್ಯಾಖ್ಯಾನವನ್ನು ಉಲ್ಲೇಖಿಸುತ್ತಾ ಹೀಗೆ ಹೇಳುತ್ತಾನೆ : "Translation is the expression in another language (or target language) of what has been expressed in another source language preserving source language, preserving sematic and stylistic equivalences"[7] ಅದೇ ಅಭಿಪ್ರಾಯವನ್ನು ನೀಡಾ ಕೂಡ ನೀಡಿದ್ದಾಳೆ. Translating consists in producing in the closest natural equivivalent to the message of the source language, first in meaning and secondly in style"[8]

ವಿಲಾಮೋ ವಿಟ್ಜ್ (Wilmuwitx) ಅನುವಾದವನ್ನು ಪರಕಾಯ ಪ್ರವೇಶವೆಂದು ಕರೆಯುತ್ತಾನೆ (True translation is metamorphosis). ಅವನ ಪ್ರಕಾರ ಮೂಲಕರ್ತೃವಿನ ಮನಸ್ಥಿತಿ, ಆಶಯಗಳನ್ನು ಸೂಕ್ಷ್ಮವಾಗಿ ಗ್ರಹಿಸಿದಷ್ಟೂ ಅನುವಾದಕ ಹೆಚ್ಚುಹೆಚ್ಚು ಮೂಲಕ್ಕೆ ಹತ್ತಿರವಾಗಿರುತ್ತಾನೆ. ಆದರೆ ಜೆ. ಸಿ. ಕ್ಯಾಟ್‌ಫೋರ್ಡ್ (J. C. Catford) ಪ್ರಕಾರ ಅನುವಾದವು ಮೂಲಪಠ್ಯಕ್ಕೆ ಬದಲಾಗಿ ಮತ್ತೊಂದು ಭಾಷೆಯ ಸಮಾನಪಠ್ಯವನ್ನು ತರುವ ಪ್ರಕ್ರಿಯೆ. ಇದನ್ನೇ ಕುರಿತು ಅವನು "The replacement of textual material in one language by equivalent textual material in another language"[9] ಎಂದು ಅಭಿಪ್ರಾಯಪಟ್ಟಿದ್ದಾನೆ. ಹೀಗಾಗಿ ಮೂಲ ಪಠ್ಯವಸ್ತುವಿಗೆ ಸಂವಾದಿಯಾದ ಪದಸಂಪತ್ತು ಮತ್ತೊಂದು ಭಾಷೆಯಲ್ಲಿರಬೇಕು ಎಂದಾಗುತ್ತದೆ. ಆಗ ಅನುವಾದಕಾರ್ಯ ಸುಲಭ. ಕೆಲವೊಮ್ಮೆ ಸಂವಾದಿ ಪದಗಳು ದೊರಕದಾಗ ಮೂಲಪಠ್ಯದ ಪದಗಳನ್ನೇ ಸ್ವೀಕರಿಸಬೇಕಾಗುತ್ತದೆ. ಸೃಜನಶೀಲ ಸಾಹಿತ್ಯದ ಅನುವಾದದಲ್ಲಿ ಈ ಕಾರ್ಯ ಕಠಿಣವಾಗಿ ಅನುವಾದಕನಿಗೆ ಸವಾಲಾಗಿ ಪರಿಗಣಿಸುತ್ತದೆ.

ಜೆ. ಪಿ. ಪೋಸ್ಟ್‌ಗೇಟ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೀಗೆ ಹೇಳುತ್ತಾನೆ. ''ಸಾಹಿತ್ಯದಲ್ಲಿ ಅನುವಾದ ಒಂದು ಭಾಷೆಯಲ್ಲಿ ಬರೆದಿರುವುದನ್ನು ಇನ್ನೊಂದು ಭಾಷೆಗೆ ತರುವ ಕಲೆ. ಅನುವಾದ ಕಲೆ ಕೇವಲ ಒಂದು ಭಾಷೆಯ ಶಬ್ದಾರ್ಥವನ್ನು ಇನ್ನೊಂದು ಭಾಷೆಗೆ ತರುವುದು ಮಾತ್ರವಲ್ಲ ಅಲ್ಲಿರುವ ಭಾವನೆ, ವಿಚಾರ ಮತ್ತು ಆ ಕೃತಿಯ ಚಾರಿತ್ರ್ಯ ಬಿಂಬಿಸುವುದಾಗಿದೆ. ಅನುವಾದ ಮುಕ್ತಾಯಗೊಂಡಾಗ ಅದು ಗುಣದಲ್ಲಿ ಮೂಲಕ್ಕೆ ಎಲ್ಲಾ ರೀತಿಯಲ್ಲಿ ಸಮಾನವಾಗಿರಬೇಕು''[10] ಎಂದಿದ್ದಾನೆ. ಅವನ ಪ್ರಕಾರ ಅನುವಾದ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಸಾಹಿತ್ಯವನ್ನು ತರುವ ಕಲೆ ಮಾತ್ರವಲ್ಲ, ಅನುಭವ, ಸಂವೇದನೆ, ಆಲೋಚನೆ ಗುಣ ಲಕ್ಷಣಗಳನ್ನು ಸರಿಸಮವಾಗಿ ಬಿಂಬಿಸುವ ಕ್ರಿಯೆ ಎಂದು ಪ್ರತಿಪಾದಿಸುತ್ತಾನೆ. ಇದು ಅನುವಾದದ ಸಮಗ್ರತೆ ಬಗ್ಗೆ ಕುರಿತಾಗಿ ಹೇಳಿದಂತಾಗಿದೆ. ಆದರ್ಶ ಭಾಷಾಂತರದ ಬಗ್ಗೆ ಪೋಸ್ಟ್‌ಗೇಟ್ ಮುಂದುವರಿದು ಹೀಗೆ ಹೇಳುತ್ತಾನೆ ''ಭಾಷಾಂತರವೆಂದರೆ ಎಂತಹ ವರದಿಯಾಗಿರಬೇಕೆಂದರೆ ಅದು ಬೇರೆಲ್ಲ ವಿಷಯಗಳಿಗಿಂತಲೂ ಮುಖ್ಯವಾಗಿ ೧) ಮೂಲದ ಪ್ರತಿಯೊಂದು ಶಬ್ದದ ಅರ್ಥವನ್ನು ಗ್ರಹಿಸಿರಬೇಕು. ೨) ಆ ಭಾಷೆಯ ಪಾಂಡಿತ್ಯದಲ್ಲಿ ಎಷ್ಟರಮಟ್ಟಿಗೆ ಸಾಧ್ಯವೋ ಅಷ್ಟು ಸಮೀಪದ ಸಮಾನಾರ್ಥ ನೀಡುವುದು. ಮತ್ತು ೩) ಆ ಸಮಾನಾರ್ಥ ಶಬ್ದಗಳನ್ನು ಹೇಗೆ ವ್ಯವಸ್ಥಿತವಾಗಿ ಇಡಬೇಕೆಂದರೆ ಇಡೀ ಪಠ್ಯ, ವಾಕ್‌ಪ್ರಯೋಗ ಹಾಗೂ ಶೈಲಿಯಲ್ಲಿ ಮೂಲಪಠ್ಯದ ಯಥಾವತ್ ಪ್ರತಿರೂಪವಾಗಿರಬೇಕು.'' ಅಂದರೆ ಆದರ್ಶ ಭಾಷಾಂತರದಲ್ಲಿ ಮೊದಲ ಹೆಜ್ಜೆ ಮೂಲದಲ್ಲಿ ಯಾವ ಅರ್ಥದಲ್ಲಿ ಶಬ್ದ ಬಳಕೆಯಾಗಿದೆಯೋ ಅದರ ಅರ್ಥವನ್ನು ಸ್ಪಷ್ಟವಾಗಿ ಗ್ರಹಿಸುವುದು. ಅನಂತರ ಭಾಷೆಯ ಜಾಯಮಾನವನ್ನು ಗಮನದಲ್ಲಿಟ್ಟುಕೊಂಡು ಆದಷ್ಟು ಹತ್ತಿರದ ಸಮಾನಾರ್ಥಕ ಪದಗಳನ್ನು ಆಯ್ದುಕೊಳ್ಳುವುದು ಹಾಗೂ ಮೂಲದ ಪದವಿನ್ಯಾಸಕ್ಕೆ, ಶೈಲಿಗೆ ಅನುಗುಣವಾಗಿ ಅಳವಡಿಸುವುದು ಎಂದು ಹೇಳಿದ ಹಾಗಾಯಿತು. ಮಾಲ್ಕಮ್ ಕೌಲೆಯ ಪ್ರಕಾರ ಅನುವಾದ ಒಂದು ಪುನಃಸೃಷ್ಟಿ ಕಲೆ. "Translation is an art that involves the recreation of a work in another language for reader with a different background."

1. ಭಾಷಾಂತರಿಸುವಾಗ ''ಒಂದು ಭಾಷೆಯ ವಾಕ್ಯರಚನೆಯಲ್ಲಿರುವ ಅರ್ಥವನ್ನು ತಿಳಿಯುವುದೆಂದರೆ ಆ ಭಾಷೆಯನ್ನಾಡುವ ಜನರ ಬಗ್ಗೆ, ಅವರ ಪರಿಸರದ ಬಗ್ಗೆ, ಅವರ ಸಮಾಜದ ಬಗ್ಗೆ ಹಾಗೂ ಅವರ ನಂಬಿಕೆಗಳ ಬಗ್ಗೆ ತಿಳಿಯುವುದಾಗಿದೆ''[11] ಎನ್ನುತ್ತಾನೆ ಟೈಮಾಜ್ಕೊ. ಅಂದರೆ ನಾವು ಒಂದು ಭಾಷೆಯನ್ನು ಮಾತ್ರ ಕಲಿತು ಭಾಷಾಂತರಿಸಲು ಹೊರಟರೆ ಭಾಷಾಂತರ ಸಮರ್ಪಕವಾಗಿ ಆಗಲಾರದು. ಆ ಭಾಷೆಯನ್ನು ಮಾತನಾಡುವ ಜನರ ಬಗ್ಗೆ ಸಂಪೂರ್ಣವಾಗಿ ಅಭ್ಯಾಸ ಮಾಡಿದಾಗ ಮಾತ್ರ ಭಾಷಾಂತರ ಪರಿಪೂರ್ಣವಾಗಬಲ್ಲದು ಎಂಬುದು ಅವರ ಮಾತಿನ ಅರ್ಥ.

2. ಕ್ಯಾಟ್‌ಫೋರ್ಡ್‌ನ ಪ್ರಕಾರ ''ಭಾಷಾಂತರ ಒಂದು ದಿಕ್ಕಿನೆಡೆ ನಿರ್ದೇಶಿತವಾದ ಪ್ರಕ್ರಿಯೆ. ಇದನ್ನು ಯಾವಾಗಲೂ ಮೂಲಭಾಷೆಯಿಂದ ಉದ್ದಿಷ್ಟ ಭಾಷೆಯ ಕಡೆಗೆ ಒಂದು ನಿರ್ದಿಷ್ಟ ದಿಕ್ಕಿನಲ್ಲಿ ಕೈಗೊಳ್ಳಲಾಗುತ್ತದೆ. ಭಾಷಾಂತರವನ್ನು ಈ ಮುಂದಿನಂತೆ ವ್ಯಾಖ್ಯಾನಿಸಬಹುದು. ಮೂಲ ಪಠ್ಯವಸ್ತುವನ್ನು ಅದಕ್ಕೆ ಸಮನಾದ ಉದ್ದಿಷ್ಟ ಪಠ್ಯವಸ್ತುವಿನಿಂದ ಬದಲಾಯಿಸುವುದು. ಭಾಷಾಂತರ ಕ್ರಿಯೆಯ ಪ್ರಮುಖ ಸಮಸ್ಯೆ ಅಂದರೆ ಉದ್ದಿಷ್ಟ ಭಾಷೆಯಲ್ಲಿ ಸಮಾನಾರ್ಥವನ್ನು ಕಂಡು ಹಿಡಿಯುವುದು''.[12] ಇವನ ಪ್ರಕಾರ ಭಾಷಾಂತರ ಕ್ರಿಯೆಯಲ್ಲಿ ಯಾವುದೇ ಅಂಕುಡೊಂಕುಗಳಿಗೆ ಅವಕಾಶವಿಲ್ಲ. ಅದು

ನೇರವಾಗಿ ಉದ್ದಿಷ್ಟ ಭಾಷೆಯಲ್ಲಿ ಸಮಾನಾರ್ಥವನ್ನು ಕಂಡುಹಿಡಿದು ಪಡಿಮೂಡಿಸುವ ಕ್ರಿಯೆಯೇ ಹೊರತು ಯಾವುದು ಬದಲಾವಣೆಗೆ ಅವಕಾಶವಿಲ್ಲ. ಹಾಗೆ ಮಾಡಿದಲ್ಲಿ ಉದ್ದೇಶ ಸಾಫಲ್ಯವಾಗುವುದಿಲ್ಲವೆಂಬುದು ಅವನ ಅಭಿಪ್ರಾಯ.

3. ''ಭಾಷಾಂತರ ಕೇವಲ ಭಾಷೆಗೆ ಸಂಬಂಧಿಸಿದ ಕ್ರಿಯೆ ಮಾತ್ರವಲ್ಲ, ಅದು ಒಂದು ರೀತಿಯ ಭಾಷಾ ಮಾನಸ ಪ್ರಕ್ರಿಯೆ. ಅದು ಉದ್ದಿಷ್ಟ ಭಾಷೆಯಲ್ಲಿನ ಉದ್ದಿಷ್ಟಿತ ಅರ್ಥವನ್ನು ಭಾಷ್ಪೀಕರಣ ಮಾಡುವುದಾಗಿದೆ[13]'' ಎಂದೆನ್ನುತ್ತಾನೆ ವಿಲ್ ಫ್ರಾರ್ಮ ವಿಲ್ಸ್. ಆದರಂತೆ ಭಾಷಾಂತರ ಕೇವಲ ಎರಡು ಭಾಷೆಗಳ ಮಧ್ಯೆ ನಡೆಯುವ ಒಂದು ಕ್ರಿಯೆ ಮಾತ್ರವಲ್ಲ. ಎರಡೂ ಭಾಷೆಗಳನ್ನಾಡುವ ಜನರ ಮಾನಸಿಕ ಭಾವನೆಗಳ ಹಿನ್ನೆಲೆಯಲ್ಲಿ ನಡೆಯುವ ಒಂದು ಪ್ರಕ್ರಿಯೆ. ಅವನು ಮುಂದುವರಿದು ಅನುವಾದಕ್ಕಿರುವ ವಿವಿಧ ಸಮಾನಾಂತರ ಅರ್ಥಗಳನ್ನು ಈ ಕೆಳಕಂಡಂತೆ ಗುರುತಿಸುತ್ತಾನೆ.

''ಕಾರ್ಯಾರ್ಥಕ್ಕೆ ಸಮಾನಾರ್ಥ ಜಗರ್, ವ್ಯತ್ಯಾಸದಲ್ಲಿ ಸಮಾನಾರ್ಥ ಜಾಕೋಬ್‌ಸನ್, ಸಂದರ್ಭದ ಮಟ್ಟಕ್ಕೆ ಭಾಷಾಂತರವನ್ನು ಕಾಪಾಡಿಕೊಂಡು ಉಳಿಸಿಕೊಂಡು ಬರುವುದು ಕೇಡ್, ಪಠ್ಯದ ಪರಿಣಾಮದ ಗುಣಮಟ್ಟ ಕೊಲ್ಲಾರ್, ಭ್ರಮಿತವಾದ ಅಥವಾ ಭ್ರಾಮಾತೀತವಾದ ಭಾಷಾಂತರ ಲೇ, ಸಮೀಪದ ಸ್ವಾಭಾವಿಕವಾದ ಸಮಾನಾರ್ಥ ನಿಡಾ. ಔಪಚಾರಿಕ ಪದವ್ಯವಹಾರದ ವಿರುದ್ಧವಾಗಿ ಸತ್ವಯುತವಾದ ಸಮಾನಾರ್ಥ ನಿಡಾ, ಶೈಲಿಯುತವಾದ ಸಮಾನಾರ್ಥ ಪೊಪೇನಿಕ್, ಕಾರ್ಯಾರ್ಥಕ್ಕೆ ಅಚಂಚಲತೆ ರೆಗ್‌ನೋವಾ, ಸಂಭಾಷಣಾ ಸಮಾನಾರ್ಥ ರೆಯಿಸ್, ಕಾರ್ಯಕ್ರಮ ಸಮಾನಾರ್ಥ ವಿಲ್ಸ್..

ಜಗರ್ ದೃಷ್ಟಿಯಲ್ಲಿ ನಿಮ್ಮ ಕೆಲಸ ಸಾಧನೆಗೆ ಎಷ್ಟು ಬೇಕೋ ಅಷ್ಟಕ್ಕೇ ಸಮಾನಪದ ಕಂಡುಕೊಳ್ಳುವುದು ಭಾಷಾಂತರದ ಉದ್ದೇಶ. ಅದಕ್ಕಿಂತ ಹೆಚ್ಚು ದೂರಹೋಗುವುದು ಅಗತ್ಯವಿಲ್ಲವೆನ್ನುವುದು. ಆದರೆ ಈ ದೃಷ್ಟಿಯಿಂದ ಪರಿಪೂರ್ಣ ಭಾಷಾಂತರ ಸಾಧ್ಯವಾಗುವುದಿಲ್ಲ. ಜಾಕೋಬ್‌ಸನ್ ಎರಡು ಭಾಷೆಗಳಲ್ಲಿ ಇರುವ ವ್ಯತ್ಯಾಸದಲ್ಲಿ ಸಾಧ್ಯವಾದ ಮಟ್ಟಿಗೆ ಸಮಾನಪದ ಹುಡುಕಿ ಭಾಷಾಂತರ ಮಾಡಬಹುದು ಎನ್ನುತ್ತಾನೆ. ಆಗಲೂ ಕೂಡ ಭಾಷಾಂತರ ಪೂರ್ಣತೆಯನ್ನು ಮುಟ್ಟಲಾರದು. ಕೇಡನ ಪ್ರಕಾರ ಆಯಾ ಸಂದರ್ಭಕ್ಕೆ ಎಷ್ಟು ಅಗತ್ಯವೋ ಅಷ್ಟರಮಟ್ಟಿಗೆ ಭಾಷಾಂತರವನ್ನು ಕಾಪಾಡಿಕೊಂಡು ಬರುವುದು. ಆದರೆ ಇದರಿಂದ ಸಂದರ್ಭದಿಂದ ಸಂದರ್ಭಕ್ಕೆ ಬದಲಾದಂತೆ ಹೋದಾಗಲೆಲ್ಲಾ ಓದುಗರಿಗೆ ಗೊಂದಲ ಉಂಟಾಗುವುದು ಸಹಜ. ಕೊಲ್ಲಾರ್ ತಿಳಿಸಿದಂತೆ ಪಠ್ಯ ಪರಿಣಾಮದ ಗುಣಮಟ್ಟ ಕಾಪಾಡಿಕೊಂಡು ಬರಬೇಕು ಎಂಬುದರಲ್ಲಿ ಅರ್ಥವಿದೆ. ಭ್ರಮೆಯಿಂದ ಕೂಡಿದ ಅಥವಾ ಭ್ರಮಾತೀತವಾದ ಭಾಷಾಂತರದ ಬಗ್ಗೆ ಲೇ ಹೇಳಿಕೆ ನಮ್ಮನ್ನು ವಾಸ್ತವ ಜಗತ್ತಿನಿಂದ ಭ್ರಮಾಲೋಕಕ್ಕೆ ಎಳೆದೊಯ್ಯುತ್ತದೆ. ನಿಡಾ ಪ್ರತಿಪಾದಿಸುವ ಸಮೀಪದ ಸ್ವಾಭಾವಿಕ ಸಮಾನಾರ್ಥ ಕಂಡುಕೊಳ್ಳಬೇಕೆಂಬುದರಲ್ಲಿ ಭಾಷಾಂತರ ಫಲಕಾರಿಯಾಗಬಲ್ಲದು. ಔಪಚಾರಿಕ ಪದವ್ಯವಹಾರದ ವಿರುದ್ಧ ಸತ್ವಯುತವಾದ ಸಮಾನಾರ್ಥವನ್ನು ಭಾಷಾಂತರದಲ್ಲಿ ಬಳಸಬೇಕೆನ್ನುವ ನಿಡಾ ಹೇಳಿಕೆ ಪ್ರಥಮ ಆಕರ್ಷಣೆ ನೀಡಬಲ್ಲದೇ ವಿನಾ ನಿಜಾರ್ಥವನ್ನು ತಿಳಿಸಲಾರದು. ಕಾರ್ಯಾರ್ಥದಲ್ಲಿ ಯಾವುದೇ ರೀತಿಯ ಅಚಂಚಲತೆ ತಲೆದೋರಬಾರದೆಂಬ ರೆಗ್‌ನೋವಾ ಹೇಳಿಕೆಯಲ್ಲಿ ತಾತ್ಕಾಲಿಕ ಪರಿಹಾರ ಕಾಣುವುದೇ ವಿನಾ ಆಳ ಅಧ್ಯಯನಕ್ಕೆ ಆಸ್ಪದವಿಲ್ಲವೆಂದಾಗುತ್ತದೆ. ವಿಲ್ಸ್ ಪ್ರತಿಪಾದಿಸುವ ಕಾರ್ಯಕ್ರಮ ಸಾಧನೆ ಸಮಾನಾರ್ಥ ಬಳಕೆ. ರೆಯಿಸ್ ಹೇಳುವ ಸಂಭಾಷಣಾ ಸಮಾನಾರ್ಥದ ಬಳಕೆಗಿಂತ ಭಾಷಾಂತರವನ್ನು

ಸಮೃದ್ಧಿಗೊಳಿಸಬಹುದು. ಈ ಎಲ್ಲಾ ಹೇಳಿಕೆಗಳೂ ಕೆಲಸ ಸಾಧನೆಗೆ ಮಾತ್ರ ಸೀಮಿತವಿದ್ದಂತೆ ತೋರುತ್ತದೆ. ನಮಗೆ ಆಯಾಯ ಹೊತ್ತಿನಲ್ಲಿ ಎಷ್ಟು ಬೇಕೋ ಅಷ್ಟು ಸಮಾನಾರ್ಥ ಬಳಕೆಯನ್ನು ಪ್ರತಿಪಾದಿಸುತ್ತದೆ. ಆಳ ಅಧ್ಯಯನ ನಡೆಸಿ ಯಾವುದು ಎಷ್ಟು ಸೂಕ್ತಪದ, ಆ ಪದದ ಬಳಕೆಯಿಂದ ಮೂಲಪಾಠವನ್ನು ಯಥಾವತ್ತಾಗಿ ಭಾಷಾಂತರದಲ್ಲಿ ಬಿಂಬಿಸಲು ಸಾಧ್ಯವಾಗಿದೆಯೇ ಎಂದುನೋಡುವುದು ಮುಖ್ಯ.

4. ''ಮೂಲಭಾಷೆಯ ಸಂದೇಶವನ್ನು ಅತಿ ಸಮೀಪದ ಸ್ವಾಭಾವಿಕ ಸಮಾನಾರ್ಥ ಬಳಕೆಯಿಂದ ಅರ್ಥವತ್ತಾಗಿ ನಂತರ ಶೈಲಿಯುತವಾಗಿ ಉದ್ದಿಷ್ಟ ಭಾಷೆಯಲ್ಲಿ ಬಿಂಬಿಸುವುದೇ ಭಾಷಾಂತರ ಕ್ರಿಯೆ''[14] ಎನ್ನುತ್ತಾರೆ ನಿಡಾ ಹಾಗೂ ಟೇಕರ್. ಇದು ಹೆಚ್ಚು ಸಮರ್ಪಕವಾದ ವ್ಯಾಖ್ಯೆ. ಅತಿ ಸಮೀಪದ ಸ್ವಾಭಾವಿಕವಾದ ಸಮಾನಾರ್ಥವನ್ನು ಬಳಸುವುದರಿಂದ ಸಂದೇಶ ಅರ್ಥವತ್ತಾಗಿ ಮೂಡಬಲ್ಲದು. ಜೊತೆಗೆ ಶೈಲಿಯೂ ಸೇರಿಕೊಳ್ಳುವುದರಿಂದ ಮೂಲಪಠ್ಯದಂತೆಯೇ ಓದಿಕೊಂಡು ಹೋಗುವುದು.

5. ''ನನ್ನ ಮಟ್ಟಿಗೆ ಭಾಷಾಂತರ ಕ್ರಿಯೆ ಎಂದರೆ ಒಬ್ಬ ವ್ಯಕ್ತಿ ಮೂಲಭಾಷೆ ಮತ್ತು ಉದ್ದಿಷ್ಟಭಾಷೆಗಳೆರಡನ್ನೂ ತಿಳಿದಿದ್ದು ಮೂಲಭಾಷೆಯ ಸಂದೇಶವನ್ನು ಉದ್ದಿಷ್ಟಭಾಷೆಯಲ್ಲಿ ಸೂಕ್ತ ಶಬ್ದಗಳಿಂದ ತೆರೆದಿಡುವುದು''[15] ಎನ್ನುತ್ತಾಳೆ ನಿಡಾ. ಅಂದರೆ ಭಾಷಾಂತರಕಾರ ಎರಡೂ ಭಾಷೆಗಳನ್ನು ಚೆನ್ನಾಗಿ ತಿಳಿದಿರಬೇಕು ಎಂದಾಯಿತು. ಅವನು ಶಬ್ದಗಳಲ್ಲಿ ಹುದುಗಿರುವ ಗೌಪ್ಯ ಅರ್ಥವನ್ನು ಗ್ರಹಿಸಿ ಅದನ್ನು ಬಿಟ್ಟು, ನಂತರ ಉದ್ದಿಷ್ಟ ಭಾಷೆಯಲ್ಲಿ ಅಷ್ಟೇಗೋಪ್ಯ ಅರ್ಥ ಗ್ರಹಿಸಿ ಸಮಾನಾರ್ಥದಿಂದ ತೆರೆದಿಡಬೇಕಾಗುತ್ತದೆ. ಅಲ್ಲಿಗೆ ಭಾಷಾಂತರ ಕ್ರಿಯೆ ಪರಿಪೂರ್ಣವಾಗುತ್ತದೆ.

೬. ಲಿಯೋನ್ ಬರ್ನೆಟ್ ಪ್ರಕಾರ ''ಭಾಷಾಂತರ ಮತ್ತು ದಂತಕತೆಗಳು ಒಂದು ಸಾಮಾನ್ಯ ವಿಚಾರವನ್ನು ಹಂಚಿಕೊಳ್ಳುತ್ತವೆ. ವ್ಯತ್ಯಾಸವೆಂದರೆ ಭಾಷಾಂತರ ಮೂಲಪಠ್ಯಕ್ಕೆ ಸಂಬಂಧಿಸಿದ್ದು (ಕಾರ್ಯ, ಆಕೃತಿ ಮತ್ತು ಸ್ವರಗಳು ಸಂಧಿಸುವ ಬಿಂದು) ದಂತಕತೆಯ ಕರ್ತೃವಿನದು ಪಠ್ಯವಿಲ್ಲದ್ದು (ಮನುಷ್ಯ ಮತ್ತು ಪ್ರಕೃತಿ ಸೇರುವ ಅಡ್ಡರಸ್ತೆ).''[16] ಈ ವ್ಯಾಖ್ಯಾನ ಬಹಳ ಆಳವಾದ ಅರ್ಥದಿಂದ ಕೂಡಿದೆ. ಹೋಲಿಕೆ ಕೂಡ ವಿಶೇಷವಾದುದು. ಸೂಕ್ಷ್ಮವಾಗಿ ಗಮನಿಸಿದಾಗ ಇದರಲ್ಲಿನ ಸತ್ಯ ಅರಿವಾಗುತ್ತದೆ. ಒಂದು ಹಂತದಲ್ಲಿ ಭಾಷಾಂತರಕಾರ ಒಬ್ಬ ದಂತಕತೆಯ ಕರ್ತೃವಿನ ಸ್ಥಾನಕ್ಕೆ ಏರುತ್ತಾನೆ. ಮೂಲಪಠ್ಯ ಅವನನ್ನು ವಾಸ್ತವ ಜಗತ್ತಿಗೆ ಹಿಡಿದಿಟ್ಟಿರುತ್ತದೆ. ಅದನ್ನು ಸ್ವಲ್ಪಮಟ್ಟಿಗೆ ಕೈಬಿಟ್ಟರೂ ಭಾಷಾಂತರ ಭಾಷಾಂತರವಾಗದೇ ಒಂದು ದಂತಕತೆಯಾಗುತ್ತದೆ. ಇದು ಸತ್ಯ ಕೂಡ.

7. ''ಒಂದು ಉತ್ತಮ ಭಾಷಾಂತರದಲ್ಲಿ ಒಬ್ಬ ಭಾಷಾತಜ್ಞನಲ್ಲಿರುವ ಮೇಲ್ಮಟ್ಟದ ಪರಿಶ್ರಮ ಒಬ್ಬ ಸಾಹಿತ್ಯ ವಿಮರ್ಶಕನಲ್ಲಿರುವ ಸ್ಪಷ್ಟತೆ, ಒಬ್ಬ ತತ್ವಜ್ಞಾನಿಯಲ್ಲಿರುವ ಜ್ಞಾನದ ಹಸಿವು - ಇವು ಮೂರೂ ಒಟ್ಟಿಗೆ ಸೇರಿರಬೇಕು. ಮತ್ತೆ ಇದು ಭಾಷಾಂತರದಲ್ಲಿ ಉದ್ಭವಿಸುವ ಯಾವುದೇ ಸಮಸ್ಯೆಗೆ ಸೂಚಿಸಬಹುದಾದ ಏಕೈಕ ಪರಿಹಾರ ಕೂಡ[17]'' ಎನ್ನುತ್ತಾನೆ ಫ್ರಾಲೇ. ಅಂದರೆ ಭಾಷಾಂತರಕಾರ ಒಬ್ಬ ಭಾಷಾತಜ್ಞ ಒಂದು ಭಾಷೆಯ ಆಳವನ್ನು ಅಭ್ಯಸಿಸುವಾಗ ಪಡುವ ಪರಿಶ್ರಮವನ್ನು ಭಾಷಾ ಅಧ್ಯಯನದಲ್ಲಿ ಪಡಬೇಕಾಗುತ್ತದೆ. ಒಬ್ಬ ವಿಮರ್ಶಕನಿಗೆ ವಿಷಯದ ಸ್ಪಷ್ಟತೆ ಹೇಗಿರಬೇಕೋ ಭಾಷಾಂತರಕಾರನು ಅಷ್ಟೇ ಸ್ಪಷ್ಟವಾದ ವಿಚಾರವನ್ನು ಇಟ್ಟುಕೊಂಡು ಭಾಷಾಂತರ ಕ್ರಿಯೆಗೆ ಕೈಹಾಕಬೇಕಾಗುತ್ತದೆ. ಹಾಗೆಯೇ

ಹೇಗೆ ಒಬ್ಬ ತತ್ವಜ್ಞಾನಿ ಜ್ಞಾನಸಂಗ್ರಹಕ್ಕಾಗಿ ಅನೇಕ ಪುಸ್ತಕಗಳನ್ನು ಓದುತ್ತಾನೋ ಹಾಗೆಯೇ ಭಾಷಾಂತರಕಾರ ಕೂಡ ತನ್ನ ಜ್ಞಾನದಹಸಿವನ್ನು ಹೆಚ್ಚಿಸಿಕೊಳ್ಳಬೇಕಾಗುತ್ತದೆ. ಈ ಮೂರು ಗುಣಗಳು ಒಟ್ಟಿಗೆ ಸೇರಿದಾಗ ಮಾತ್ರ ಭಾಷಾಂತರ ಪರಿಪೂರ್ಣವಾಗಬಲ್ಲದು ಎನ್ನುವ ವ್ಯಾಖ್ಯೆ ಭಾಷಾಂತರಕಾರನಲ್ಲಿರಬೇಕಾದ ಮುಖ್ಯ ಲಕ್ಷಣಗಳ ಪ್ರತಿಪಾದನೆ ಮಾಡಿದಂತಾಗಿದೆ. ಈ ವ್ಯಾಖ್ಯಾನದ ಪ್ರಕಾರ ಒಬ್ಬ ಶ್ರೇಷ್ಠ ಭಾಷಾಂತರಕಾರ ಸೃಜನಶೀಲ ಬರಹಗಾರನಿಗಿಂತ ಶ್ರೇಷ್ಠ ನೆನಿಸಿಕೊಳ್ಳುತ್ತಾನೆ.

8. ''ಉತ್ತಮ ಭಾಷಾಂತರ ಭಾಷಾಂತರದಂತೆ ಕಾಣುವುದಿಲ್ಲ''[18] ವೆನ್ನುತ್ತಾಳೆ ನಿಡಾ. ಇವಳ ಪ್ರಕಾರ ಭಾಷಾಂತರ ಉತ್ತಮವಾಗಿ ಆಗಿದ್ದಲ್ಲಿ ಅದು ಮೂಲಕೃತಿಯನ್ನೇ ಪ್ರತಿಬಿಂಬಿಸುತ್ತದೆ. ಓದುಗನಿಗೆ ಮೂಲವಸ್ತುವನ್ನೇ ಓದಿದಂತಹ ಅನುಭವ ಆಗುತ್ತದೆ. ಡಾ: ದೇಜಗೌರವರ 'ಶ್ರೀ ರಾಮಾಯಣ ದರ್ಶನಂ ವಚನಚಂದ್ರಿಕೆ'ಯನ್ನು ಓದುತ್ತಿದ್ದಾಗ ಕುವೆಂಪುರವರ ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು ಗದ್ಯರೂಪದಲ್ಲಿ ಓದುತ್ತಿದ್ದೇವೆಯೋ ಎಂಬ ಅನುಭವವಾಗುತ್ತದೆ. ಅದು ಭಾಷಾಂತರಿಸಿದಂತೆ ಕಾಣುವುದೇ ಇಲ್ಲ.

9. ''ಒಬ್ಬ ಭಾಷಾಂತರಕಾರನ ಕೈಚಳಕ ಅವನಲ್ಲಿರುವ ಶಬ್ದ ಸಂಪತ್ತು ಹಾಗೂ ಅವುಗಳ ಮೇಲಿರುವ ಹಿಡಿತ ಹಾಗೂ ಅವುಗಳ ಎಲ್ಲಾ ಅರ್ಥಗಳ ಜ್ಞಾನ ಮತ್ತು ಅವುಗಳ ಘನತೆ ಹಾಗೂ ಸ್ಪಷ್ಟತೆಯನ್ನು ಮೇಳೈಸಿಕೊಂಡು ಹೋಗುವ ಪ್ರಾವೀಣ್ಯತೆಯಲ್ಲಿ ಅಡಗಿದೆ. ಎಲ್ಲಾ ಭಾಷಾಂತರ ಸಮಸ್ಯೆಗಳ ಉದ್ದಿಷ್ಟ ಭಾಷೆಯಲ್ಲಿ ಎಷ್ಟು ಚೆನ್ನಾಗಿ ಬರೆಯಬಲ್ಲ ಎಂಬುದರಲ್ಲಿ ಪರಿಹಾರ ಕಂಡುಕೊಳುತ್ತದೆ''[19] ಎನ್ನುತ್ತಾನೆ ನ್ಯೂಮಾರ್ಕ್. ನ್ಯೂಮಾರ್ಕನ ಈ ವ್ಯಾಖ್ಯೆಯಲ್ಲಿ ಭಾಷಾಂತರಕಾರನಿಗಿರಬೇಕಾದ ಭಾಷಾಜ್ಞಾನದ ಬಗ್ಗೆ ಹಾಗೂ ಅವುಗಳನ್ನು ಉಪಯೋಗಿಸುವ ಚಮತ್ಕಾರದ ಅರಿವಿನ ಬಗ್ಗೆ ಸ್ಪಷ್ಟಪಡಿಸಲಾಗಿದೆ. ಇವೆಲ್ಲದರ ಫಲಿತಾಂಶ ಭಾಷಾಂತರ ಕೃತಿಯಲ್ಲಿ ಮೂಡಿಬರಬೇಕು. ಅದೇ ಅದರ ಸತ್ವಪರೀಕ್ಷೆ. ಈ ವ್ಯಾಖ್ಯೆ ಹೆಚ್ಚು ಅರ್ಥಗರ್ಭಿತವಾಗಿದೆ.

10. ''ಭಾಷಾಂತರ ಒಂದು ಸೃಜನಶೀಲ ಕ್ರಿಯೆಯೇ ಹೊರತು ಸ್ವಾಭಾವಿಕ ಪ್ರಕ್ರಿಯೆ ಅಲ್ಲ. ಅದೊಂದು ಸೃಜನಶೀಲ ಕ್ರಿಯೆ ಎಂದು ಹೇಳುವಾಗ ನನ್ನ ಅರ್ಥವೇನೆಂದರೆ ಭಾಷಾಂತರಿಸುವಾಗ ನೀವು ನಿಮ್ಮ ಅರ್ಥೈಸುವ ಹಾಗೂ ಸಂಪಾದಕತ್ವದ ಜಾಣ್ಮೆಯನ್ನು ಪ್ರದರ್ಶಿಸಬೇಕಾಗುತ್ತದೆ. ಏಕೆಂದರೆ ಅನೇಕ ಸಂದರ್ಭಗಳಲ್ಲಿ ಮೂಲಕೃತಿಯ ರಚನಕಾರನಿಗೆ ತಾನು ಏನು ಹೇಳಬೇಕೆಂದಿತ್ತೋ ಅದನ್ನು ಅಷ್ಟು ಸ್ಪಷ್ಟವಾಗಿ ಹೇಳಲು ಸಾಧ್ಯವಾಗದಿದ್ದಿರಬಹುದು. ಆಗ ಭಾಷಾಂತರಕಾರನಾಗಿ ನಿಮ್ಮ ಕೆಲಸವೇನೆಂದರೆ ಒಬ್ಬ ಲೇಖಕ ಏನು ಹೇಳಲು ಉದ್ದೇಶಿತನಾಗಿದ್ದನೋ ಅದನ್ನು ಅರ್ಥಮಾಡಿಕೊಂಡು ಉದ್ದಿಷ್ಟ ಭಾಷೆಯಲ್ಲಿ ಸ್ಪಷ್ಟವಾಗಿ ಹೇಳುವುದು''[20] ಎನ್ನುತ್ತಾರೆ ಜೆಫರ್ ಸಮುಲ್‌ಸನ್ ಮತ್ತು ಬ್ರೌನ್. ಈ ವ್ಯಾಖ್ಯೆಯಲ್ಲಿ ಭಾಷಾಂತರಕಾರನನ್ನು ಸೃಜನಶೀಲ ಲೇಖಕನ ಮಟ್ಟಕ್ಕೆ ಏರಿಸಲಾಗಿದೆ. ಇದ್ದದ್ದನ್ನು ಇದ್ದ ಹಾಗೆ ಉದ್ದಿಷ್ಟಭಾಷೆಯಲ್ಲಿ ಹೇಳುವುದರ ಬದಲಿಗೆ ಮೂಲಲೇಖಕನ ಉದ್ದೇಶ ಅರ್ಥಮಾಡಿಕೊಂಡು ಆ ಉದ್ದೇಶಕ್ಕೆ ತಕ್ಕಂತೆ ಮೂಲಪಾಠದಲ್ಲಿ ವ್ಯತ್ಯಾಸ ಮಾಡಿ ಹೊಸರೂಪದಲ್ಲಿ ಆ ಕೃತಿಯನ್ನು ಜನರ ಮುಂದೆ ಇಡುವುದು. ಈ ಸ್ವಾತಂತ್ರ್ಯದಿಂದಾಗಿ ಕೆಲವೊಮ್ಮೆ ಮೂಲವಸ್ತು

ಸಂಪೂರ್ಣ ಬದಲಾಗಿ ಒಂದು ಹೊಸ ಸಾಹಿತ್ಯವೇ ಸೃಷ್ಟಿಯಾಗಬಹುದು. ಭಾಷಾಂತರ ಭಾಷಾಂತರವಾಗಿರದ ಹೋಗಬಹುದು. ಆದರೂ ಭಾಷಾಂತರಕಾರನ ಸ್ವಲ್ಪಮಟ್ಟಿನ ಸ್ವಾತಂತ್ರ್ಯ ಕೆಲವೊಮ್ಮೆ ಅಗತ್ಯವೆನಿಸುತ್ತದೆ. ಇದಕ್ಕೊಂದು ಸಣ್ಣ ಉದಾಹರಣೆ - ವ್ಯಾಸ ಮಹಾಭಾರತದಲ್ಲಿ ಕುಂತಿ, ಕರ್ಣನನ್ನು ಕೃಷ್ಣನ ಸಲಹೆಯಂತೆ ನೋಡಲು ಬಂದು 'ತೊಟ್ಟ ಬಾಣ ತೊಡದಂತೆ' ವರ ಕೇಳುತ್ತಾಳೆ. ಕನ್ನಡದ ಆದಿಕವಿ ಪಂಪ ತನ್ನ ಕೃತಿಯಲ್ಲಿ ಕರ್ಣ-ಕುಂತಿ ಸಂಧಿಸಿದಾಗ ಗಂಗ ಪ್ರತ್ಯಕ್ಷವಾಗಿ ಈ ಹಿಂದೆ ತನಗೊಪ್ಪಿಸಿದ ಹಸುಗೂಸಿನ ಬದಲಾಗಿ ಪ್ರಬುದ್ಧ ಕರ್ಣನನ್ನು ಕುಂತಿಗೆ ಕೊಡುತ್ತಾಳೆ ಎಂದು ಬದಲಾಯಿಸಿಕೊಂಡಿದ್ದಾನೆ. ಇಲ್ಲಿ ಪಂಪ ಮಾಡಿಕೊಂಡ ಬದಲಾವಣೆಯಿಂದ ಕುಂತಿಯ ತಪ್ಪು ಕಡಿಮೆಯಾದಂತೆ ಕಾಣುತ್ತದೆ. ಅವಳು ಮಗುವನ್ನು ಸಾಕಲು ಗಂಗೆಗೆ ಒಪ್ಪಿಸಿದ್ದು ಗಂಗೆ ಈಗ ಬೆಳೆದು ನಿಂತ ಕರ್ಣನನ್ನು ಪುನಃ ಒಪ್ಪಿಸುತ್ತಿದ್ದಾಳೆಂಬ ಅರ್ಥ ಬರುತ್ತದೆ.

11. ''ಭಾಷಾಂತರ ಎನ್ನುವುದು ಭಾಷೆ ಎನ್ನುವ ಒಂದು ಸಂಕೀರ್ಣ ಅದ್ಭುತದ ಸಂಕೀರ್ಣ ಉಪಯೋಗ. ಭಾಷಾಂತರವನ್ನು ಸಮಾನಾರ್ಥವನ್ನು ಹುಡುಕಿ ಪಡಿಮೂಡಿಸುವ ಒಂದು 'ಅರ್ಥವ್ಯವಹಾರ'ವೆಂದು ಸಾಮಾನ್ಯವಾಗಿ ಪರಿಗಣಿಸಲಾಗಿದೆ. ಭಾಷಾಂತರ ಕ್ರಿಯೆಯೊಡನೆ ತರ್ಜುಮೆ ಮಾಡುವ ಕ್ರಿಯೆಯನ್ನು ಜೋಡಿಸಲಾಗಿದೆ. ಭಾಷಾಂತರವು ಕ್ವಿನ್‌ನ 'ಅನಿಶ್ಚಯ ಸಿದ್ಧಾಂತ' ವನ್ನು ಪ್ರತಿಪಾದಿಸುತ್ತದೆ. ಟೈಮೆಜ್ಕೊ ಪ್ರಕಾರ ಭಾಷೆಯ ಅರ್ಥ ವ್ಯವಸ್ಥೆಯೊಡನೆ ಮಾಡುವ ಸಮಾನಾರ್ಥ ಹುಡುಕುವ ವ್ಯವಹಾರ ಸಾಪೇಕ್ಷತೆಯೇ ಭಾಷಾಂತರ''[21] ಎನ್ನುತ್ತಾರೆ ಎ. ಪಿ. ಅಂಡ್ರ್ಯೂಕುಟ್ಟಿ.

ಈ ವ್ಯಾಖ್ಯೆ ಸ್ವಲ್ಪ ಕ್ಲಿಷ್ಟವಾಗಿದೆ. ಭಾಷೆಯ ಮಾರ್ಕೆಟ್ಟಿನಲ್ಲಿ ಒಂದು ಶಬ್ದಕ್ಕೆ ನಾನಾ ಅರ್ಥಕೊಡುವ ಪದಗಳ ರಾಶಿಗಳಿವೆ. ಭಾಷಾಂತರಕಾರ ಅಲ್ಲಿಗೆ ಹೋಗಿ ತನಗೆ ಬೇಕಾದ ಸೂಕ್ತ ಪದವನ್ನು ಚೌಕಾಸಿ ಮಾಡಿ ವ್ಯಾಪಾರಮಾಡಿಕೊಂಡು ಬರಬೇಕು. ಹೀಗೆ ಮಾಡುವಾಗ ಅವನಿಗೆ ಒಳ್ಳೆಯ ಪದಗಳನ್ನು ಆಯ್ಕೆ ಮಾಡುವ ಅರ್ಹತೆ, ಚೌಕಾಸಿ ಮಾಡಲು ಬೇಕಾದ ವ್ಯವಹಾರ ಜ್ಞಾನವಿರಬೇಕು. ಹಾಗಾದಾಗ ಭಾಷಾಂತರಕಾರ ಭಾಷಾ ಮಾರ್ಕೆಟ್ಟಿನ ವ್ಯವಹಾರದಲ್ಲಿ ಪರಿಣಿತನಾಗಿರಬೇಕು ಎಂದಾಯಿತು.

12. ರಘುನಾಥರಾವ್ ಪ್ರಕಾರ ''ಓದುಗನ ಮನಸ್ಸಿನ ಮೇಲೆ ಮೂಲಕೃತಿಯನ್ನು ಓದಿದಾಗ ಯಾವ ಪರಿಣಾಮವಾಗುತ್ತದೆಯೋ ಅದೇ ರೀತಿ ಪರಿಣಾಮ ಬೀರುವಂತೆ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ವಿಚಾರಗಳನ್ನು ವರ್ಗಾಯಿಸುವ ಕಲೆಯೇ ಭಾಷಾಂತರ''.[22] ಇಲ್ಲಿ ಭಾಷಾಂತರವನ್ನು ಒಂದು ಕಲೆ ಎಂದು ಗುರುತಿಸಲಾಗಿದೆ. ಇಲ್ಲಿ ಕಲೆ ಕಲಾಕಾರನ ಕುಂಚದಿಂದ ಮಾಡಿದುದಲ್ಲ, ಛಾಯಾ ಚಿತ್ರ. ಮೂಲದ ಪಡಿಯಚ್ಚಿನಂತಿದ್ದು ಅಷ್ಟೇ ಪರಿಣಾಮ ಅದು ಓದುಗನ ಮೇಲೆ ಬೀರಬೇಕು ಎಂದಾಯಿತು.

13. ''ವಿವಿಧ ವಿಭಾಗಗಳು ನೀಡುವ ಶಬ್ದಾರ್ಥಗಳು ಸಂಕೀರ್ಣತೆಯ ಜೊತೆಗೆ ಭಾಷೆಗಳ ಮಧ್ಯೆ ಇರುವ ಅಸಮಾನ ಶಬ್ದಗಳು ಭಾಷಾಂತರದಲ್ಲಿ ಸಮಾನಾಂತರ ಶಬ್ದ ಹುಡುಕುವುದರಲ್ಲಿ ಸಮಸ್ಯೆಯನ್ನು ಸೃಷ್ಟಿಸುತ್ತವೆ. ಭಾಷೆಯ ಅಸಮಾನ ಶಬ್ದಗಳು ಭಾಷೆಯಲ್ಲಿರುವ ವ್ಯತ್ಯಾಸವನ್ನು ಅದರಲ್ಲೂ ಮುಖ್ಯವಾಗಿ ಶಬ್ದಾರ್ಥಗಳಲ್ಲಿರುವ ವ್ಯತ್ಯಾಸವನ್ನು ತೋರಿಸುತ್ತವೆ.

ಇದು ನಿರ್ದಿಷ್ಟಾರ್ಥವನ್ನು ಹುಡುಕುವುದು, ಸೂಚ್ಯಾರ್ಥಲೋಪ ಹಾಗೂ ಸಾಂಸ್ಕೃತಿಕ ವ್ಯತ್ಯಾಸವನ್ನು ಒಳಗೊಂಡಿರುತ್ತದೆ''[23] ಎನ್ನುತ್ತಾರೆ ಕೆ. ಬಾಲಸುಬ್ರಹ್ಮಣ್ಯನ್‌ರವರು.

ಈ ವ್ಯಾಖ್ಯೆ ಭಾಷಾಂತರದಲ್ಲಿ ಉದ್ಭವಿಸುವ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಒಂದು ಶಬ್ದಕ್ಕೆ ಬೇರೆಬೇರೆ ಸಂದರ್ಭದಲ್ಲಿ ಬೇರೆಬೇರೆ ಅರ್ಥವಿರುತ್ತದೆ. ಅಲ್ಲದೆ ಒಂದು ಭಾಷೆಯಲ್ಲಿರುವ ಶಬ್ದಕ್ಕೆ ಇನ್ನೊಂದು ಭಾಷೆಯಲ್ಲಿ ಸಮಾನಾಂತರ ಶಬ್ದ ದೊರೆಯದೇ ಹೋಗಬಹುದು. ನಿರ್ದಿಷ್ಟಾರ್ಥ ಒಂದಾದರೆ ಸೂಚ್ಯಾರ್ಥ ಇನ್ನೊಂದು ಇರುತ್ತದೆ. ಒಂದು ಭಾಷೆಯ ಸಾಂಸ್ಕೃತಿಕ ಹಿನ್ನೆಲೆ ಇನ್ನೊಂದು ಭಾಷೆಯ ಸಾಂಸ್ಕೃತಿಕ ಹಿನ್ನೆಲೆಗೆ ಹೊಂದಿಕೊಳ್ಳದೇ ಹೋಗಬಹುದು. ಇವೆಲ್ಲಾ ತೊಂದರೆಗಳನ್ನು ಇಟ್ಟುಕೊಂಡು ಭಾಷಾಂತರ ಮಾಡುವುದು ಒಂದು ಸಾಹಸ ಕಾರ್ಯವಾಗುತ್ತದೆ. ಉದಾಹರಣೆಗೆ- ''ಅವನು ಮನೆಯಿಂದ ಹೊರಗೆ ಹೆಜ್ಜೆ ಇಟ್ಟಾಗ ಬೆಕ್ಕು ಅಡ್ಡಬಂತು'' ಎಂಬ ವಾಕ್ಯವನ್ನು ಇಂಗ್ಲಿಷಿಗೆ ಭಾಷಾಂತರಿಸುವಾಗ- "When he stepped out of the house a cat came across" ಎಂದಾಗುತ್ತದೆ. ಹೀಗೆ ಕೇವಲ ಸಮಾನಾರ್ಥ ನೀಡಿದರೆ ಇಲ್ಲಿನ ಸಾಂಸ್ಕೃತಿಕ ಹಿನ್ನೆಲೆ ಅರ್ಥವಾಗುವುದಿಲ್ಲ. ಇಲ್ಲಿ 'ಬೆಕ್ಕು ಅಡ್ಡಬರುವುದು' 'ಅಪಶಕುನ'ವೆಂದು ಪರಿಗಣಿಸಲಾಗುತ್ತದೆ. ಈ ವಿಚಾರ ಇಂಗ್ಲಿಷ್ ಓದುಗರಿಗೆ ತಿಳಿಯದಿದ್ದಲ್ಲಿ ಭಾಷಾಂತರ ಪರಿಪೂರ್ಣವಾಗುವುದಿಲ್ಲ.

14. ''ಒಂದು ಒಳ್ಳೆಯ ಭಾಷಾಂತರ ಆಳವಾದ ಅರ್ಥವ್ಯವಸ್ಥೆಗೆ ಸಂಬಂಧಿಸಿದಂತೆ ಅತ್ಯುನ್ನತ ಶೈಲಿಯನ್ನು ಮುಟ್ಟುವ ಮೂಲಕ ಕಾರ್ಯಸಾಧನೆಗೈಯುವ ಅಥವಾ ನೈಜ ಸಮಾನಾರ್ಥವನ್ನು ಹುಡುಕುವ ಪ್ರಕ್ರಿಯೆಯಾಗಿದೆ. ಇದರ ಫಲಿತಾಂಶ ಕೇವಲ ಏಕಮುಖವಾದ ಸಾಮಾನ್ಯ ಅರ್ಥ ಅಥವಾ ಶಬ್ದಾರ್ಥವನ್ನು ಗುರಿಯಾಗಿಟ್ಟುಕೊಳ್ಳದೇ ಸ್ವರೂಪ, ಸಂದರ್ಭ, ವಾಕ್ಯ ವಿನ್ಯಾಸ ಸಮಾನಾರ್ಥಗಳೆಲ್ಲವನ್ನೂ ಕ್ರೋಡೀಕರಿಸಿದ ಒಂದು ಹೊಸ ಸಮಷ್ಟಿಯನ್ನು ಪಡೆಯುವುದಾಗಿದೆ''[24] ಎನ್ನುತ್ತಾರೆ ಕೆ. ಚೆಲ್ಲಪ್ಪನ್.

ಈ ವ್ಯಾಖ್ಯೆಯಲ್ಲಿ ಭಾಷಾಂತರದ ನಿಜವಾದ ಗುರಿಯ ಬಗ್ಗೆ ವಿಶ್ಲೇಷಿಸಲಾಗಿದೆ. ಭಾಷಾಂತರ ಕೇವಲ ಒಂದು ಶಬ್ದಕ್ಕೆ ಸಮಾನಾರ್ಥ ಹುಡುಕುವ ಸಾಮಾನ್ಯ ಕ್ರಿಯೆ ಅಲ್ಲ. ಅದು ಸಂದರ್ಭ, ವಸ್ತುವಿನ ಸ್ವರೂಪ, ವಾಕ್ಯ ವಿನ್ಯಾಸ, ಸಮಾನಾರ್ಥ ಇವೆಲ್ಲವನ್ನೂ ಒಳಗೊಂಡಂತಹ ಒಂದು ಸಮಗ್ರ ಸಮಷ್ಟಿ ಎಂದು ಹೇಳುವಾಗ ಈ ಕ್ರಿಯೆ ಒಂದು ಸಾಮಾನ್ಯ ಕ್ರಿಯೆಯಲ್ಲ, ಒಂದು ದೊಡ್ಡ ಸಾಧನೆ ಎಂದು ಪ್ರತಿಪಾದಿಸುತ್ತದೆ. ಅಂದರೆ ಸಮುದ್ರದ ಆಳಕ್ಕೆ ಮುಳುಗಿ ಮುತ್ತು ಸಂಗ್ರಹಿಸಿದಂತೆ. ಈ ವ್ಯಾಖ್ಯೆಯಲ್ಲಿ ಭಾಷಾಂತರ ಒಂದು ಶ್ರೇಷ್ಠವಾದ ಹಾಗೂ ಆಳವಾದ ಪ್ರಕ್ರಿಯೆ ಎಂಬುದನ್ನು ಪ್ರತಿಪಾದಿಸಲಾಗಿದೆ.

15. ''ಕವಿ, ಕವಿತೆ, ಭಾಷೆಯ ಆಧಾರದ ಮೇಲೆ ಹಾಗೂ ಆ ಸಂದರ್ಭಕ್ಕೆ ತಕ್ಕಂತಹ ಶಬ್ದದ ಒತ್ತಡಕ್ಕೆ ಅನುಗುಣವಾಗಿ ಭಾಷಾಂತರಕಾರ ''ಮುಕ್ತ'' ಅಥವಾ ''ಶಬ್ದಾರ್ಥಿ''ಯಾಗಿರಬೇಕು. ಒಂದೇ ಮಾತಿನಲ್ಲಿ ಹೇಳುವುದಾದರೆ ಅವನು ಒಬ್ಬ ಕಲಾಕಾರನಾಗುವುದರಲ್ಲಿ ಹೇಗೆ ತನ್ನ ಮುಂದಿರುವ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುತ್ತಾನೆ ಎಂಬುದರಲ್ಲಿ ಅದು ಹೊಂದಿಕೊಂಡಿದೆ - ಅವನು ಊಹಿಸಬೇಕು, ಪ್ರಯೋಗಗಳನ್ನು ಮಾಡಬೇಕು ಹಾಗೂ ಈ ಪ್ರಕ್ರಿಯೆಯಲ್ಲಿ ತಪ್ಪುಗಳೂ ಆಗುತ್ತಿರಬೇಕು''[25] ಎನ್ನುತ್ತಾನೆ ಬರ್ಟನ್ ರೋಫೆಲ್. ಈ ವ್ಯಾಖ್ಯೆಯಲ್ಲಿ ಭಾಷಾಂತರಕಾರನಿಗೆ ಹೆಚ್ಚು ಸ್ವಾತಂತ್ರ್ಯ

ನೀಡಲಾಗಿದೆ. ಇಲ್ಲಿ ಇವನನ್ನು ಒಬ್ಬ ವಿಜ್ಞಾನಿಗೆ ಹೋಲಿಸಲಾಗಿದ್ದು, ಈತ ತನ್ನ ಪ್ರಯೋಗಶಾಲೆಯಲ್ಲಿ ನಾನಾ ರೀತಿಯ ಪ್ರಯೋಗಗಳನ್ನು ಮಾಡಿ ತನ್ನ ಗುರಿಸಾಧನೆ ಮಾಡಬೇಕು ಎಂದು ಹೇಳಿದೆ. ಒಟ್ಟಿನಲ್ಲಿ ಈ ಎಲ್ಲಾ ಪ್ರಯೋಗಗಳ ಪರಿಣಾಮ ಅವನು ಒಬ್ಬ ಶ್ರೇಷ್ಠ ಕಲಾಕಾರನಾಗಿ ಹೊರಹೊಮ್ಮುವುದು. ಇಲ್ಲಿ ತಪ್ಪು ಮಾಡಲೂ ಅವಕಾಶ ಕಲ್ಪಿಸಲಾಗಿದೆ. ಆದರೆ ಇದೆಲ್ಲದರ ಫಲಿತಾಂಶ ಮೂಲಕ್ಕೆ ಮೆರುಗು ನೀಡುವುದಾದರೆ ಸರಿ. ಮೂಲವನ್ನೇ ತಿರುಚುವಂತಾದರೆ ತಪ್ಪಾಗುತ್ತದೆ. ಆದಾಗದಂತೆ ನೋಡಿಕೊಳ್ಳಬೇಕು.

16. "ಒಬ್ಬ ಪರಿಪೂರ್ಣ ಭಾಷಾಂತರಕಾರ ಒಬ್ಬ ಪರಿಪೂರ್ಣ ಕವಿಯಾಗಿರಬೇಕು"[26] ಎನ್ನುತ್ತಾನೆ ಡ್ರೈಡನ್. ಒಂದು ಕವಿತೆಯನ್ನು ಭಾಷಾಂತರಿಸಲು ಭಾಷಾಂತರಕಾರ ಮೂಲ ಕವಿಯಷ್ಟೇ ಶ್ರೇಷ್ಠ ಕವಿಯಾಗಿರಬೇಕು ಎಂಬುದು ಈ ವ್ಯಾಖ್ಯೆಯ ಅರ್ಥ. ಇಲ್ಲದಿದ್ದರೆ ಭಾಷಾಂತರಕಾರ ಕವಿಯ ಮಟ್ಟಕ್ಕೆ ಬರಲಾರನು. ಕವಿ ಹೃದಯ ಇಲ್ಲದವನು ಕವಿತೆಯನ್ನು ಭಾಷಾಂತರಿಸಲು ಹೊರಟರೆ ಅವನು ತನ್ನ ಗುರಿಸಾಧಿಸಲಾರ. ಉದಾಹರಣೆಗೆ ಬಿಎಂಶ್ರೀಯವರು ಒಬ್ಬ ಶ್ರೇಷ್ಠ ಕವಿಯಾಗಿದ್ದರಿಂದಲೇ ಅವರ "ಇಂಗ್ಲಿಷ್ ಗೀತಗಳು" ಒಂದು ಉತ್ತಮ ಭಾಷಾಂತರವಾಗಲು ಸಾಧ್ಯವಾಯಿತು.

17. "ಒಂದು ಭಾಷೆಯ ಕವಿತೆ ಇನ್ನೊಂದು ಭಾಷೆಯಲ್ಲಿ ಹೋಲಿಕೆ ಮಾಡಬಹುದಾದ ಅಷ್ಟೇ ಮೌಲ್ಯದ ಕವಿತೆಗೆ ಸ್ಫೂರ್ತಿ ನೀಡುವುದು ಅಪರೂಪ"[27] ಎನ್ನುತ್ತಾನೆ ಹರ್ಬರ್ಟ್ ರೀಡ್. ಹೀಗೆ ಹೇಳುವಾಗ ಭಾಷಾಂತರ ಮೂಲದಷ್ಟು ಶ್ರೇಷ್ಠವಾಗಲಾರದು ಎಂಬ ಶಂಕೆ ವ್ಯಕ್ತಪಡಿಸಿದಂತಾಗುತ್ತದೆ. ಭಾಷಾಂತರಿತ ಕವಿತೆ ಉದ್ದಿಷ್ಟ ಭಾಷೆಯ ಸೃಜನಶೀಲ ಕವಿತಾ ಸೃಷ್ಟಿಗೆ ಸ್ಫೂರ್ತಿ ನೀಡಲಾರದು ಎನ್ನುವುದು ಸರಿಯಲ್ಲ. ಕನ್ನಡದಲ್ಲಿ 'ಶ್ರೀ' ಯವರ 'ಇಂಗ್ಲಿಷ್ ಗೀತಗಳು' ಹೊಸ ಒಂದು ಪರಂಪರೆಯನ್ನೇ ಸೃಷ್ಟಿಮಾಡಿ ಅನೇಕ ಸೃಜನಶೀಲ ಕವಿಗಳಿಗೆ ಸ್ಫೂರ್ತಿ ನೀಡಿದುದು ಈಗ ಇತಿಹಾಸ.

18. "ಕವಿತಾ ಭಾಷಾಂತರ ಒಂದು ಕಲೆ, ಅದು ವಿಜ್ಞಾನವಲ್ಲ. ಏನನ್ನು ಆಯ್ಕೆ ಮಾಡಬೇಕು, ಯಾವುದನ್ನು ಇಟ್ಟುಕೊಳ್ಳಬೇಕು, ಯಾವುದನ್ನು ಬಿಡಬೇಕು, ಯಾವ ಧ್ವನಿಯನ್ನು ನೀಡಬೇಕು, ಯಾವ ಸ್ವರೂಪ ಕೊಡಬೇಕು ಎಂಬುದು ಈ ಕಲೆಯಲ್ಲಿ ಅಡಗಿದೆ"[28] ಎನ್ನುತ್ತಾನೆ ಬರ್ಟನ್ ರಾಫೆಲ್. ಕವಿತಾ ಭಾಷಾಂತರದ ಕುರಿತಿರುವ ಬರ್ಟನನ ಈ ವ್ಯಾಖ್ಯೆ ಹೆಚ್ಚು ಅರ್ಥಗರ್ಭಿತವಾಗಿದೆ. ಕವಿತಾ ಭಾಷಾಂತರದಲ್ಲಿ ಭಾಷಾಂತರಕಾರನಿಗೆ ಹೆಚ್ಚು ಸ್ವಾತಂತ್ರ್ಯವಿರಬೇಕು. ಮಕ್ಕಿಕಾಮಕ್ಕಿ ಭಾಷಾಂತರವಾದಲ್ಲಿ ಕವಿತೆ ತನ್ನ ಸೊಗಡನ್ನು ಕಳೆದುಕೊಳ್ಳುತ್ತದೆ. ಮೂಲಕ್ಕೆ ಮಾತ್ರ ದ್ರೋಹ ಬಗೆಯಬಾರದು.

19. "ಕವಿತಾ ಭಾಷಾಂತರ ಆವಿಯಾಗಿ ಹೋಗುವ ದ್ರವವಿದ್ದಂತೆ. ಈ ದ್ರವವನ್ನು ಒಂದು ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ಸುರಿಯುವಾಗ ಅದರಲ್ಲಿ ಸ್ವಲ್ಪ ಭಾಗ ಆವಿಯಾಗಿ ಹೋಗುತ್ತದೆ. ಹಾಗೆಯೇ ಈ ಕವಿತಾ ಭಾಷಾಂತರ"[29] ಎನ್ನುತ್ತಾನೆ ಎಂ. ಎನ್. ವಿಲಿಯಮ್ಸ್. ಕವಿತೆಯನ್ನು ಭಾಷಾಂತರಿಸುವಾಗ ಸಂಪೂರ್ಣವಾಗಿ ಭಾಷಾಂತರಿಸಲು ಸಾಧ್ಯವಿಲ್ಲವೆಂಬುದು ಇದರ ಅರ್ಥ. ಒಂದು ಕವಿತೆಯನ್ನು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ತರುವಾಗ ಸ್ವಲ್ಪ ಭಾಗ ಅನಿವಾರ್ಯವಾಗಿ ಕೈಬಿಡುತ್ತದೆ. ಯಥಾವತ್ತಾಗಿ ತರಲು ಸಾಧ್ಯವಿಲ್ಲ, ಒಂದು ವೇಳೆ ತಂದರೂ ಮೂಲದ ಸ್ವಾರಸ್ಯ ಅದರಲ್ಲಿ ಇರುವುದಿಲ್ಲ.

20. ''ತನ್ನ ಮನಸ್ಸಿನಲ್ಲಿ ಹುದುಗಿದ್ದ ಕಾವ್ಯಾನುಭವವನ್ನು ಇನ್ನೊಂದು ಭಾಷೆಯಲ್ಲಿ ವ್ಯಕ್ತಪಡಿಸಲಾಗದ ಕವಿಯ ಕೆಲಸವನ್ನು ಅವನ ಪರವಾಗಿ ಪುನಃಸೃಷ್ಟಿಸುವ ಕೆಲಸವೇ ಭಾಷಾಂತರಕಾರನದು''[30] ಎನ್ನುತ್ತಾನೆ ಬರ್ಟನ್ ರಾಫೆಲ್.

ಕವಿಯ ಮನಸ್ಸಿನಲ್ಲಿ ಕಾವ್ಯಾನುಭವ ಉತ್ಪತ್ತಿಯಾಗುತ್ತದೆ. ಅದಕ್ಕೆ ಭಾಷೆಯ ಸ್ವರೂಪ ನೀಡುತ್ತಾನೆ. ಆ ಕವಿಗೆ ತಿಳಿಯದ ಇನ್ನೊಂದು ಭಾಷೆಯಲ್ಲಿ ಆ ಕಾವ್ಯಾನುಭವವನ್ನು ತನ್ನದಾಗಿಸಿಕೊಂಡು ಭಾಷಾಂತರಕಾರ ಪುನಃಸೃಷ್ಟಿ ಮಾಡುತ್ತಾನೆ. ಹೀಗೆ ಮಾಡುವಾಗ ಭಾಷಾಂತರಕಾರ ಕವಿಯ ಮನಸ್ಸಿನಲ್ಲಿದ್ದ ಭಾವನೆಯನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳಬೇಕು. ಹಾಗೆ ಮಾಡದಿದ್ದಲ್ಲಿ ಭಾಷಾಂತರ ತನ್ನ ಸತ್ವವನ್ನು ಕಳೆದುಕೊಳ್ಳುತ್ತದೆ. ಕವಿತಾ ಭಾಷಾಂತರದ ಬಗ್ಗೆ ಇರುವ ಈ ವ್ಯಾಖ್ಯೆ ಹೆಚ್ಚು ಅರ್ಥವತ್ತಾಗಿದೆ.

21. '' 'ಪದಶಃ' ಭಾಷಾಂತರಕಾರ ಹಾಗೂ 'ಸ್ವತಂತ್ರ' ಭಾಷಾಂತರಕಾರ ಇಬ್ಬರೂ ಕೂಡ ಭಾಷೆಯ ನುಡಿಕಟ್ಟು, ವಾಕ್ಯರಚನೆ, ಸ್ವರ ಹಾಗೂ ಲಯವನ್ನು ಕವಿತೆಯನ್ನು ಭಾಷಾಂತರಿಸುವ ಭಾಷೆಗೆ ತರುವ ಬಗ್ಗೆ ಒತ್ತಿ ಹೇಳುತ್ತಾರೆ. ವ್ಯತ್ಯಾಸವೇನೆಂದರೆ ಬಾಯಾರಿದ ಮಕ್ಕಳಿಗೆ ನೀರುಕುಡಿಸುವ ತಾಯಂದಿರಂತೆ - ಒಬ್ಬರು ನೀರಿದ್ದಲ್ಲಿ ಮಗುವನ್ನು ತರಲು ಬಯಸಿದರೆ, ಇನ್ನೊಬ್ಬರು ನೀರನ್ನು ಮಗುವಿದ್ದಲ್ಲಿ ತರಲುಬಯಸುತ್ತಾರೆ''[31] ಎನ್ನುತ್ತಾನೆ ಬರ್ಟನ್ ರಾಫೆಲ್. ಪದಶಃ ಭಾಷಾಂತರಕಾರ ಮತ್ತು ಸ್ವತಂತ್ರ ಭಾಷಾಂತರಕಾರ - ಈ ಇಬ್ಬರ ಉದ್ದೇಶವೂ ಒಂದೇ- ಓದುಗರ ಬಾಯಾರಿಕೆ ತಣಿಸುವುದು. ಮೊದಲನೆಯವನು ಓದುಗನನ್ನು ಕವಿತೆ ಹತ್ತಿರ ತೆಗೆದುಕೊಂಡು ಹೋಗುತ್ತಾನೆ, ಎರಡನೆಯವನು ಕವಿತೆಯನ್ನು ಓದುಗನ ಹತ್ತಿರ ತೆಗೆದುಕೊಂಡು ಹೋಗುತ್ತಾನೆ. ಇಲ್ಲಿ ಉದ್ದೇಶ ಒಂದೇ ಆದರೂ ಮಾರ್ಗ ಮಾತ್ರ ಬೇರೆ ಅಷ್ಟೆ.

22. ''ಒಂದು ಕವಿತೆಯನ್ನು ಇನ್ನೊಂದು ಹೊಸ ಭಾಷೆಯಲ್ಲಿ ಇಡುವ ಉದ್ದೇಶವೇನೆಂದರೆ, ಒಂದು ಹೊಸ ಸೌಂದರ್ಯ ದೃಷ್ಟಿಯಿಂದ ನೋಡುತ್ತಿದ್ದೇವೆಂಬ ಭಾವನೆಯನ್ನು ಮೂಡಿಸುವುದು''[32] ಎನ್ನುತ್ತಾನೆ ಡಿ. ಜಿ. ರೊಸೆಟ್ಟಿ. ಒಂದು ಕವಿತೆ ಇನ್ನೊಂದು ಭಾಷೆಗೆ ಹೋದಾಗ ಬೇರೊಂದು ಸೌಂದರ್ಯ ಕಾಣುತ್ತದೆ. ಒಂದು ಸುಂದರ ಹುಡುಗಿಗೆ ಬೇರೆಬೇರೆ ಸೀರೆಗಳನ್ನು ಉಡಿಸಿದಾಗ ಅವಳ ಸೌಂದರ್ಯ ಬೇರೆಬೇರೆಯಾಗಿ ಕಾಣುತ್ತದೆ. ಹಾಗೆ ಕವಿತೆ ಕೂಡ ಬೇರೆ ಭಾಷೆಗಳಲ್ಲಿ ಹೊಸ ಸೌಂದರ್ಯ ಪಡೆಯುತ್ತದೆ. ನೋಡುವವರ ದೃಷ್ಟಿಯೂ ಬೇರೆಯಾಗಿರುತ್ತದೆ.

23. ''ಭಾಷಾಂತರಿಸುವಾಗ ಕವಿತೆ ಕಳೆದುಹೋಗುತ್ತದೆ ಎಂದು ರಾಬರ್ಟ್ ಫ್ರಾಸ್ಟ್ ಹೇಳಿದ್ದರೆ ಟೈವೆಟುವ ಎಲ್ಲಾ ಕಲೆಗಳು ಕಳೆದುಹೋದ ವಸ್ತುಗಳನ್ನು ಹುಡುಕುವುದಾಗಿದೆ ಎಂದು ಹೇಳಿದ್ದಾನೆ''[33] ಎನ್ನುತ್ತಾರೆ ಕೆ. ಚಲ್ಲಪ್ಪನ್.

ಈ ವ್ಯಾಖ್ಯೆ ಬಹಳ ಗಹನವಾದ ವಿಚಾರದ ಮೇಲೆ ಬೆಳಕು ಚೆಲ್ಲುತ್ತದೆ. ಒಬ್ಬ ಕವಿ ಒಂದು ಸುಂದರವಾದ ಕಲ್ಪನೆಯನ್ನು ಮಾಡುತ್ತಾನೆ. ಈ ಕಲ್ಪನೆಯನ್ನು ಕವಿತಾ ರೂಪದಲ್ಲಿಡುವಾಗ ಅವನ ಕಲ್ಪನೆಯ ಅನೇಕ ಭಾಗ ಕೈಬಿಟ್ಟು ಹೋಗುತ್ತದೆ. ಅದೇ ರೀತಿ ಆ ಕವಿತೆಯನ್ನು ಇನ್ನೊಂದು ಭಾಷೆಯಲ್ಲಿಡುವಾಗ ಅಲ್ಲೂ ಕೂಡ ಅನೇಕ ಭಾಗ ಕೈಬಿಟ್ಟು ಹೋಗುತ್ತದೆ. ಹಾಗೆಯೇ ಯಾವುದೇ ಕಲೆಯಲ್ಲಿ ಈ ರೀತಿ ಸ್ವಲ್ಪ ಭಾಗ ಕೈಬಿಟ್ಟು ಹೋಗುವುದು ಸ್ವಾಭಾವಿಕ. ಅಲ್ಲದೆ

ಕವಿಯಾಗಲೀ, ಭಾಷಾಂತರಕಾರನಾಗಲೀ ಕಳೆದ ಭಾವನೆಗಳನ್ನು ಅಥವಾ ಸೌಂದರ್ಯವನ್ನು ಹುಡುಕಿ ಒಂದು ಮೂಸೆಯಲ್ಲಿ ಸಂಗ್ರಹಿಸಿಡುವ ಪ್ರಯತ್ನ ನಡೆಸುತ್ತಾನೆ. ಈ ಪ್ರಯತ್ನ ನಿರಂತರವಾಗಿ ನಡೆದುಕೊಂಡು ಬರುತ್ತದೆ. ಸಂಪೂರ್ಣವಾಗಿ ಕೈಗೆ ಸಿಗದ ವಸ್ತುವಿಗಾಗಿ ಹುಡುಕಾಟ ಸದಾ ನಡೆದಿದೆ.

24. ''ಒಂದು ದೃಷ್ಟಿಯಿಂದ ಎಲ್ಲಾ ಸಾಹಿತ್ಯ ಕೂಡ ಭಾಷಾಂತರವೇ. ಪ್ರತಿಯೊಬ್ಬ ಸೃಜನಶೀಲ ಕಲಾಕಾರ ಅರ್ಥ ತಿಳಿದ 'ಭಾವನೆ' ಹಾಗೂ 'ಕಲ್ಪನೆ'ಗಳಿಗೆ ಒಂದು ಸಾಂಕೇತಿಕ ಭಾಷೆಯನ್ನು ಕಂಡುಕೊಳ್ಳುತ್ತಾನೆ. ಈ ರೀತಿ ಸೃಷ್ಟಿಸುವಾಗ ಆಂತರಿಕ ಭಾಷೆಯಿಂದ ಬಾಹ್ಯಭಾಷೆಗೆ ಭಾಷಾಂತರವಾಗುತ್ತದೆ''[34] ಎನ್ನುತ್ತಾರೆ ಕೆ. ಚಲ್ಲಪ್ಪನ್.

ಭಾಷಾಂತರಕ್ಕೆ ಆಳವಾದ ಅರ್ಥವನ್ನು ಕೊಡುವ ಪ್ರಯತ್ನ ಈ ವ್ಯಾಖ್ಯೆಯಲ್ಲಿದೆ. ಇದರ ಪ್ರಕಾರ ಎಲ್ಲಾ ಸೃಜನಶೀಲ ಕಲೆಗಳೂ ಭಾಷಾಂತರದ ಸ್ವರೂಪಗಳೇ. ಸಾಹಿತ್ಯ ಸೃಷ್ಟಿಯಲ್ಲಿ ಅಂತರಂಗದ ಭಾವನೆಗಳು ಭಾಷೆಯ ಮೂಲಕ ಭಾಷಾಂತರಗೊಳ್ಳುವವು. ಹಾಗೆಯೇ ಒಂದು ಶಿಲ್ಪದಲ್ಲಾಗಲಿ, ಚಿತ್ರಕಲೆಯಲ್ಲಾಗಲಿ ಶಿಲ್ಪಿಯ ಹಾಗೂ ಚಿತ್ರಕಾರನ ಭಾವನೆಗಳು ಹೊಸ ಸ್ವರೂಪ ಪಡೆಯುವುದರ ಮೂಲಕ ಭಾವನೆಗಳು ಭಾಷಾಂತರಿಸಲ್ಪಡುತ್ತದೆ. ಹಾಗಾಗಿ ಭಾಷಾಂತರ ಕೇವಲ ಒಂದು ಭಾಷೆ ಮತ್ತೊಂದು ಭಾಷೆಯ ಮಧ್ಯೆ ನಡೆಯುವ ಕ್ರಿಯೆ ಮಾತ್ರವಲ್ಲ ಆಂತರಿಕ ಭಾವನೆಗಳನ್ನು ವ್ಯಕ್ತಪಡಿಸುವ ಪ್ರಕ್ರಿಯೆ ಕೂಡ. ಅದರಿಂದಾಗಿ ಭಾಷಾಂತರದ ವ್ಯಾಪ್ತಿ ವಿಸ್ತಾರಗೊಳ್ಳುತ್ತದೆ.

25. ''ನಾನೂ ಕೂಡ ಒಬ್ಬ ಕವಿಯನ್ನು ಭಾಷಾಂತರಕಾರನೆಂದು ತಿಳಿಯುತ್ತೇನೆ. ಕವಿ ಭಾಷಾಂತರಕಾರನಾಗಿ ಒಂದು ನಿಗೂಢ ಪ್ರಪಂಚಕ್ಕೆ ಒಂದು ಸುಸ್ಪಷ್ಟ ಸ್ವರೂಪವನ್ನು, ಸಹಜ ಸೂಕ್ಷ್ಮ ಅರ್ಥವನ್ನು ನೀಡುತ್ತಾನೆ. ಕವಿ ತನ್ನ ನಿಗೂಢ ಭಾವನೆಗಳನ್ನು ಹೆಚ್ಚುಕಡಿಮೆ ಭಾಷಾಂತರಿಸಿದರೆ ಅವನಿಂದ ಏನೂ ತಪ್ಪಾದಂತೆ ಕಾಣುವುದಿಲ್ಲ. ಅದೇ ರೀತಿ ಭಾಷಾಂತರಕಾರ ಕೂಡ ಕಲೆಯನ್ನು ಸೃಷ್ಟಿಸುವ ಕಲಾಕಾರನಾಗುತ್ತಾನೆ. ಕಲಾಕಾರ ನೈಜತೆಯ ಸಹ ಸೃಷ್ಟಿಕರ್ತ''[35] ಎಂಬುದು ಜೀನ್ ಪ್ಯಾರೀಸ್ ಅಭಿಪ್ರಾಯ.

ಇಲ್ಲಿ ಪ್ಯಾರೀಸ್ ವ್ಯಕ್ತಪಡಿಸಿರುವ ವಿಚಾರಕ್ಕೂ ಮೇಲೆ ಚೆಲ್ಲಪ್ಪನ್ ವ್ಯಕ್ತಪಡಿಸಿರುವ ವಿಚಾರಕ್ಕೂ ಸಾಮ್ಯತೆ ಇದೆ. ಕಲಾಕಾರನಾಗಲೀ, ಭಾಷಾಂತರಕಾರನಾಗಲೀ ಪುನಃಸೃಷ್ಟಿ ಮಾಡುವಾಗ ಸ್ವಲ್ಪಭಾಗ ಕಳೆದುಹೋಗುವುದು ಸಹಜ. ದೇವರು ಸೃಷ್ಟಿಕರ್ತ. ಕಲಾಕಾರ ಸಹಸೃಷ್ಟಿಕರ್ತ. ಪ್ರಾಯಶಃ ದೇವರೂ ಕೂಡ ಏನು ಸೃಷ್ಟಿ ಮಾಡಬೇಕೆಂದಿದ್ದನೋ, ಹೇಗೆ ತನ್ನ ಸೃಷ್ಟಿ ಇರಬೇಕೆಂದುಕೊಂಡಿದ್ದನೋ ಅದರಲ್ಲಿ ಸ್ವಲ್ಪ ಭಾಗ ಕೈಬಿಟ್ಟು ಹೋಗಿರಬೇಕು ಅಥವಾ ಸ್ವಲ್ಪ ವ್ಯತ್ಯಾಸಗಳು ಆಗಿರಬೇಕು. ಅದು ಸ್ಪಷ್ಟವಾಗಿ ಮೂಡಿ ಬಂದಿದ್ದಲ್ಲಿ ಈಗ ನಾವು ಪ್ರಪಂಚದಲ್ಲಿ ಕಾಣುವ ಅವ್ಯವಸ್ಥೆಗೆ ಅವಕಾಶವಿರಲಿಲ್ಲ. ಈ ವ್ಯತ್ಯಾಸಗಳೇ ಅನಾಹುತಗಳಿಗೆ ಕಾರಣವಾಗಿವೆ. ಆದ್ದರಿಂದ ದೇವರು ಒಬ್ಬ ಭಾಷಾಂತರಕಾರನೇ. ಅವನ ಭಾಷಾಂತರದಲ್ಲೂ ಸ್ವಲ್ಪ ಎಡವಟ್ಟಾಗಿದೆ. ನೈಜತೆ ಕೇವಲ ಕಲ್ಪನೆಯಲ್ಲಿ ಮಾತ್ರ ಮೂಡುವಂತಹದು. ಅದು ಮೂರ್ತ ಸ್ವರೂಪ ಪಡೆದಾಗ ಕಲೆಯಾಗುತ್ತದೆ. ಆ ಕಲೆಯಲ್ಲಿ ನೈಜ ಸುಂದರ ಕಲ್ಪನೆಯ ಸ್ವಲ್ಪಭಾಗ ಕಳೆದುಹೋಗಿರುತ್ತದೆ. ಇದು ಸಹಜ ಕ್ರಿಯೆ. ಆದ್ದರಿಂದ ಭಾಷಾಂತರದಲ್ಲಿ ಕಾಣುವ ಸ್ವಲ್ಪ ಲೋಪವೂ ಸಹಜವೇ. ಕವಿಹೃದಯ ಮತ್ತು ಸೃಷ್ಟಿ ಕ್ರಿಯೆಗಿರುವ

ಸಂಬಂಧ ಅಲೌಕಿಕವಾದುದು. ಕವಿಯ ಹೃದಯದಲ್ಲಾಗಲೀ, ವಿಚಾರವಂತನ ಮಿದುಳಿನಲ್ಲಾಗಲೀ ವಿಚಾರಗಳು ತಾಯಿಗರ್ಭದಲ್ಲಿ ಮಗು ರೂಪತಾಳಿದಂತೆ ಬೆಳೆದು ಹೊರಹೊಮ್ಮುತ್ತದೆ. ಈ ಬಗ್ಗೆ ತೀನಂಶ್ರೀಯವರು 'ಭಾರತೀಯ ಕಾವ್ಯಮೀಮಾಂಸೆ'ಯಲ್ಲಿ ವಿಶದವಾಗಿ ಚರ್ಚಿಸಿದ್ದಾರೆ.

26. ''ಭಾಷಾಂತರ ಅಲೌಕಿಕಕ್ಕೆ ಇನ್ನೊಂದು ದಾರಿಯಾಗಬಲ್ಲದು. ಅಂದರೆ ಅದು ಮೂಲವನ್ನು ಅದರ ಕರಾರಿನಂತೆ ಪುನಃಸೃಷ್ಟಿಸಿ ಮೂಲಪಠ್ಯದ ನಿಜವಾದ ತಂದೆಯ ಸ್ಥಾನಕ್ಕೆ ಏರುತ್ತದೆ. ಒಂದು ಶ್ರೀಮಂತ ಘಟ್ಟದಲ್ಲಿ ಅದು ಒಂದು ಪ್ರವಚನವೂ ಹೌದು, ಒಂದು ರೀತಿಯ ಅಂಗೀಕಾರವೂ ಹೌದು, ಮೇಲಿನಿಂದ ನೊರೆ, ಕೆಳಗಿನಿಂದ ದ್ರಾಕ್ಷಾರಸ''[36] ಎನ್ನುತ್ತಾರೆ ಕೆ. ಚೆಲ್ಲಪ್ಪನ್.

ಮನುಷ್ಯ ಅಲೌಕಿಕ ಜ್ಞಾನ ಪಡೆದಾಗ ಮಾನವತ್ವದಿಂದ ದೈವತ್ವಕ್ಕೆ ಏರುತ್ತಾನೆ. ಹಾಗೆಯೇ ಭಾಷಾಂತರಕಾರ ಮೂಲ ಸೃಷ್ಟಿಯಂತೆ ಪ್ರತಿಸೃಷ್ಟಿಯನ್ನು ಉದ್ದಿಷ್ಟ ಭಾಷೆಯಲ್ಲಿ ಮಾಡುವುದರಿಂದ ನಿಜವಾದ ತಂದೆ ಸ್ಥಾನಕ್ಕೆ ಏರುತ್ತಾನೆ. ಮತ್ತು ಆ ಅಲೌಕಿಕ ಮಟ್ಟ ಮುಟ್ಟುತ್ತಾನೆ. ಇದರಿಂದಾಗಿ ಭಾಷಾಂತರ ಒಂದು ರೀತಿಯ ಆಧ್ಯಾತ್ಮಿಕ ಕ್ರಿಯೆ ಎಂದು ಹೇಳಿದ ಹಾಗಾಯಿತು. ಮೂಲ ಲೇಖಕ ಒಂದು ಕೃತಿಯನ್ನು ಸೃಷ್ಟಿಸುವಾಗ ಏನೆಲ್ಲಾ ಅನುಭವ ಪಡೆಯುತ್ತಾನೋ ಆ ಎಲ್ಲಾ ಅನುಭವಗಳ ಮೂಲಕ ಭಾಷಾಂತರಕಾರ ಕೂಡ ಹಾದುಹೋಗುತ್ತಾನೆ. ಒಂದು ಹಂತದಲ್ಲಿ ಅದು ಆಧ್ಯಾತ್ಮಿಕ ಪ್ರವಚನದಂತೆ ಬಹಳ ಎತ್ತರದಲ್ಲಿ ಸಾಗುತ್ತದೆ. ಇನ್ನೊಮ್ಮೆ ವಾಸ್ತವ ಜಗತ್ತಿಗೆ ಬಂದು ಸ್ಪಷ್ಟವಾಗಿ ಗುರುತಿಸುವ ಮಟ್ಟಕ್ಕೆ ಇಳಿಯುತ್ತದೆ. ಮೇಲಕ್ಕೆ ನೊರೆ ಕಂಡರೂ ಕೆಳಗೆ ದ್ರಾಕ್ಷಾರಸ ಇರುತ್ತದೆ. ಹೀಗೆ ಮೂಲಕೃತಿ ಹಾಗೂ ಭಾಷಾಂತರಕ್ಕಿರುವ ಸಂಬಂಧವನ್ನು ಆಧ್ಯಾತ್ಮಿಕ ಪ್ರಕ್ರಿಯೆಗೆ ಈ ವ್ಯಾಖ್ಯೆಯಲ್ಲಿ ಹೋಲಿಸಿ ಇದನ್ನು ಒಂದು ವಿಶಿಷ್ಟ ದೃಷ್ಟಿಯಲ್ಲಿ ನೋಡಲಾಗಿದೆ.

27. ''ಭಾಷೆಯಿಂದ ಭಾಷೆಗೆ ಹರಿದಿರುವ ಒಂದು ಪ್ರಮುಖ ಸುದ್ದಿ ಮಾಧ್ಯಮವಾಗಿ ಭಾಷಾಂತರ ಕೆಲಸ ಮಾಡುತ್ತದೆ. ಪ್ರಾರಂಭದಲ್ಲಿ ಭಾಷಾಂತರ ಸ್ವರೂಪದಲ್ಲಿ ಸುದ್ದಿ ಸಂಪರ್ಕ ಏರ್ಪಟ್ಟರೂ ಕೊನೆಯಲ್ಲಿ ಉದ್ದಿಷ್ಟ ಭಾಷೆಯಲ್ಲಿ ಆ ಸುದ್ದಿ ಸ್ಥಿರಗೊಂಡು ಆ ಭಾಷೆಯ ನೈಜ ಸ್ವರೂಪ ಪಡೆಯುತ್ತದೆ''[37] ಎನ್ನುತ್ತಾರೆ ಕೆ. ಕರುಣಾಕರನ್.

ಭಾಷೆ, ಭಾಷಾಂತರಗಳ ಮೂಲ ಉದ್ದೇಶ ಸಂಪರ್ಕವೇರ್ಪಡಿಸುವುದು, ಸುದ್ದಿಯನ್ನು ಪಸರಿಸುವುದು. ಒಂದು ಸುದ್ದಿ ಇನ್ನೊಂದು ಭಾಷೆಗೆ ಹೋದಾಗ ಭಾಷಾಂತರವಾಗಿ ಪ್ರಾರಂಭದಲ್ಲಿ ಕಂಡರೂ ಕ್ರಮೇಣ ಆ ಭಾಷೆಯಲ್ಲಿ ಆಳವಾಗಿ ಇಳಿದು ಆ ಭಾಷೆಯ ಮೂಲಸ್ವರೂಪವನ್ನು ಹೊಂದಿ ಆ ಭಾಷೆಯ ಮೂಲಸೃಷ್ಟಿಯೇ ಎಂಬಂತೆ ಮಾರ್ಪಡುತ್ತದೆ. ಕ್ರಮೇಣ ಭಾಷಾಂತರದ ಪರದೆ ಹಿಂದಕ್ಕೆ ಸರಿದುಕೊಳ್ಳುತ್ತದೆ. ಈ ವ್ಯಾಖ್ಯೆ ವಾಸ್ತವಾಂಶವನ್ನು ಹೇಳುತ್ತದೆ.

28. ''ಎಲ್ಲಾ ಭಾಷಾಂತರ ಒಂದು ರೀತಿಯ ಹೊಂದಾಣಿಕೆ - ಪ್ರಯತ್ನಮಾಡುವುದು ಪದಶಃ ಭಾಷಾಂತರಿಸಲು, ವಾಕ್ಯಂಪ್ರವಾಯವನ್ನು ಉಳಿಸಿಕೊಳ್ಳಲು''[38] ಎನ್ನುತ್ತಾನೆ ಜೆಂಜಮಿನ್ ಜೋರೆಟ್.

ಭಾಷಾಂತರಕಾರನ ನಿಜವಾದ ಪ್ರಯತ್ನ ಮೂಲವನ್ನು ಯಥಾವತ್ತಾಗಿ ಇಡಲು ಪ್ರಯತ್ನಿಸುವುದು. ಆ ಭಾಷೆಯ ವಾಕ್ಸಂಪ್ರದಾಯವನ್ನು, ಪದಪದವನ್ನೂ ತರಲು ಪ್ರಯತ್ನಿಸುತ್ತಾನೆ. ಆದರೆ ಅದರಲ್ಲಿ ಪೂರ್ಣ ಸಫಲತೆ ಪಡೆಯಲು ಸಾಧ್ಯವಾಗದೆ ಒಂದು ರೀತಿಯ ಹೊಂದಾಣಿಕೆಗೆ ಬರುತ್ತಾನೆ. ಇದು ಸತ್ಯ ಸಂಗತಿ. ಭಾಷಾಂತರದಲ್ಲಿ ಇದು ಅನಿವಾರ್ಯ.

29. "ಮೂಲ ಕೃತಿಯನ್ನು ಓದಿದವರ ಮೇಲೆ ಏನು ಪರಿಣಾಮವಾಗುತ್ತದೋ ಅದೇ ಪರಿಣಾಮ ಭಾಷಾಂತರವನ್ನೋದಿದವರ ಮೇಲೂ ಆಗುವುದಾದರೆ ಅದು ಜಯಶಾಲಿಯಾದ ಭಾಷಾಂತರ"ವೆನ್ನುತ್ತಾರೆ ಮ್ಯಾಥ್ಯೂ ಆರ್ನಾಲ್ಡ್ ಮತ್ತು ಎ.ಎಫ್. ಟೈಟ್ಲರ್.

ಭಾಷಾಂತರದ ಜಯಾಪಜಯಗಳು ಅದು ಓದುಗರ ಮೇಲೆ ಬೀರುವ ಪ್ರಭಾವದ ಮೇಲೆ ಅವಲಂಬಿಸಿವೆ. ಮೂಲ ಪಠ್ಯದ ಓದುಗರ ಮೇಲೆ ಬೀರಿದ ಪ್ರಭಾವದಷ್ಟೇ ಭಾಷಾಂತರದ ಓದುಗರ ಮೇಲೂ ಪ್ರಭಾವ ಬಿದ್ದರೆ ಆ ಭಾಷಾಂತರ ಜಯಗಳಿಸಿದಂತೆ. ಭಾಷಾಂತರ ವಿಶ್ವಾಮಿತ್ರರ ಸೃಷ್ಟಿಯಾಗಬಾರದು, ಬ್ರಹ್ಮ ಸೃಷ್ಟಿಯಾಗಬೇಕು. ಮೂಲದ ಆಳಕ್ಕಿಳಿದು ಅದನ್ನು ಸಂಪೂರ್ಣವಾಗಿ ತನ್ನದಾಗಿಸಿಕೊಂಡು ನಂತರ ಉದ್ದಿಷ್ಟ ಭಾಷೆಯಲ್ಲಿ ಪಡಿಮೂಡಿಸಬೇಕು. ಆಗ ಭಾಷಾಂತರ ಪರಿಪೂರ್ಣವಾಗುತ್ತದೆ. ಆದರೆ ಮೂಲಕೃತಿಯಷ್ಟೇ ಪ್ರಭಾವ ಬೀರುಸುವುದು ಅಷ್ಟು ಸುಲಭವಲ್ಲ.

30. "ಒಂದು ಭಾಷೆಯಲ್ಲಿ ಅಭಿವ್ಯಕ್ತಗೊಂಡಿರುವ ಭಾವಾನುಭವ, ಜನಾಂಗೀಯ ಮನೋಧರ್ಮಗಳನ್ನು ಬೇರೊಂದು ಭಾಷೆಗೆ ತಟಾಯಿಸುವ ಅಂದರೆ ವರ್ಗಾಯಿಸುವ ಪ್ರಕ್ರಿಯೆಯೇ ಭಾಷಾಂತರ"[39] ಎನ್ನುತ್ತಾರೆ ದೇಜಗೌ.

ಭಾಷಾಂತರ ಕೇವಲ ಪದಶಃ ಅರ್ಥ ನೀಡುವುದಲ್ಲ. ಮೂಲಕೃತಿಯಲ್ಲಿ ವ್ಯಕ್ತವಾಗಿರುವ ಭಾವನೆಗಳನ್ನು, ಆ ಜನಾಂಗದ ಮನೋಧರ್ಮವನ್ನು ಯಥಾವತ್ತಾಗಿ ಇನ್ನೊಂದು ಭಾಷೆಗೆ ತರುವ ಕ್ರಿಯೆ ಭಾಷಾಂತರವಾಗುತ್ತದೆ. ಆ ಜನಾಂಗದ ಮನೋಭಾವನೆಯನ್ನು ಅರ್ಥಮಾಡಿಕೊಳ್ಳದೇ ಕೇವಲ ಶಬ್ದಾರ್ಥ ನೀಡಿದರೆ ಅದು ಭಾಷಾಂತರವಾಗುವುದಿಲ್ಲ. ಭಾಷಾಂತರ ಭಾವಾಂತರ ಕೂಡ. ಆದರೂ ಒಂದು ವಿಭಿನ್ನ ಜನಾಂಗದ ಮನೋಧರ್ಮವನ್ನು ಹೇಳುವಾಗ ಪರಭಾಷೆಯ ಅಪರಿಚಿತ ಓದುಗನಿಗೆ ಮೂಲಭಾಷೆಯ ಓದುಗನಷ್ಟೇ ಪರಿಣಾಮ ಬೀರಬೇಕು. ಎಷ್ಟು ಪರಿಣಾಮಕಾರಿಯಾಗಿ ಮೂಡಿಬರಬೇಕೆಂಬುದು ಮುಖ್ಯ. ಇದನ್ನು ಸಾಧಿಸಬೇಕಾದರೆ ಭಾಷಾಂತರ ಎಷ್ಟು ಕಷ್ಟವಾದ ಕ್ರಿಯೆ ಎಂಬುದು ಸ್ಪಷ್ಟವಾಗುತ್ತದೆ.

31. "ಭಾಷಾಂತರ ಮೂಲಭೂತವಾಗಿ ಒಂದು ಕಲೆ, ಒಂದು ಸೃಷ್ಟಿ, ಅವತರಣ ಕ್ರಿಯೆ ಎಂದರೂ ಸಲ್ಲುತ್ತದೆ. ಮೂಲದ ಭಾವವನ್ನು ನೋಡದೆ ಪದಕ್ಕೆ ಪದ ಹಾಕಿದರೆ ಭಾಷಾಂತರ ಸಿದ್ಧಿಸುವುದಿಲ್ಲ. ಭಾಷೆಯನ್ನು ಗಮನಿಸಿದರೆ ಬರಿಯ ಭಾವವನ್ನು ತಂದರೂ ಅದು ಭಾಷಾಂತರವಾಗುವುದಿಲ್ಲ. ಮೂಲದಲ್ಲಿರುವ ಭಾವ - ಭಾಷೆಗಳ ಸಾಮರಸ್ಯವನ್ನು ಉದ್ದಿಷ್ಟ ಭಾಷೆಯಲ್ಲಿ ಯಶಸ್ವಿಯಾಗಿ ಹಿಡಿದಿಡಬೇಕಾದರೆ ಭಾಷಾಂತರಕಾರ ಮೂಲದ ಆತ್ಮವನ್ನು "ಮೆಯ್ ಕೆಡಲೀಯದೆ" ತಂದು ಕೊಳ್ಳಬೇಕು"[40] ಎನ್ನುತ್ತಾರೆ ಸಿ. ಪಿ. ಕೃಷ್ಣಕುಮಾರ್.

ಭಾಷಾಂತರದಲ್ಲಿ ಭಾವ ಮತ್ತು ಭಾಷೆಗಳ ಸಾಮರಸ್ಯ ಮೂಡಿಬರಬೇಕು ಎಂದು ಸಿ. ಪಿ. ಕೆ. ಯವರು ಹೇಳುವುದರಲ್ಲಿ ಹೆಚ್ಚು ಅರ್ಥವಿದೆ. ಭಾಷಾಂತರದಲ್ಲಿ ಕೇವಲ ಭಾಷೆಯನ್ನಷ್ಟೇ ನೋಡಿದಲ್ಲಿ ಅದು ಅಸ್ಥಿಪಂಜರ, ಮಾಂಸ, ರಕ್ತ ತುಂಬಿದಂತಾಗುತ್ತದೆ. ಅದಕ್ಕೆ ಭಾವ ತುಂಬಿದರೆ ಆತ್ಮ ಇಟ್ಟಂತಾಗುತ್ತದೆ. ಶರೀರಕ್ಕೆ ಆತ್ಮವಿದ್ದಾಗಲೇ ಅದು ಜೀವ ವಸ್ತುವಾಗುವುದು. ಹಾಗಾಗಿ ಭಾಷಾಂತರ ಕ್ರಿಯೆ ಒಂದು ಸೃಷ್ಟಿ, ಕಲೆಯಾಗುತ್ತದೆ. ಇದೊಂದು ಪರಿಣಾಮಕಾರಿ ವ್ಯಾಖ್ಯಾನವೆನ್ನಬಹುದು.

32. ''ಭಾಷೆಯಲ್ಲಿ ಭಾವಾಭಿನಯ ಎಂದು ಯಾವುದನ್ನು ಕರೆಯುತ್ತೇವೆಯೋ ಅದು ಭಾಷಾಂತರದಲ್ಲಿ ಮೂಡಿಬರಬೇಕು. ಅಭಿನಯವಿಲ್ಲದ ಒಂದು ಭಾವ ಸಾಲದು. ಹೀಗೆ ಮೂಲದ ಭಾವದ ಜೊತೆಗೆ ಅದರ ಭಾಷಾ ವಿನ್ಯಾಸವನ್ನು ತರುವಾಗ ಭಾಷಾಂತರಕಾರ ಉದ್ದಿಷ್ಟ ಭಾಷೆಯ ಜೀವಾಳ, ಸ್ವಭಾವ ಜಾಯಮಾನಗಳನ್ನು ಮರೆಯುವಂತಿಲ್ಲ. ಎಂದರೆ ಅವನ ಭಾಷಾಂತರ ಒಂದು ಮೂಲಕೃತಿಯಂತೆ ಕಾಣಿಸಬೇಕೇ ಹೊರತು ಭಾಷಾಂತರದ ಭಾವನೆಯನ್ನುಂಟು ಮಾಡಬಾರದು''[41] ಎಂದು ಸಿ. ಪಿ. ಕೆ. ಯವರು ಭಾಷೆ ಮತ್ತು ಭಾವಕ್ಕಿರುವ ಸಂಬಂಧವನ್ನು ಇನ್ನಷ್ಟು ವಿಶದಪಡಿಸುತ್ತಾರೆ. ಭಾವವು ವ್ಯಕ್ತವಾಗುವುದು ಅಭಿನಯದಲ್ಲಿ. ಭಾಷಾಂತರದಲ್ಲಿ ಭಾವಾಭಿನಯ ಕಾಣಬೇಕೆಂದು ಭಾಷಾಂತರದಲ್ಲಿ ಭಾವಾಭಿನಯ ಮೂಡಿಸುವಾಗ ಉದ್ದಿಷ್ಟ ಭಾಷೆಯ ಆತ್ಮ, ಸ್ವಭಾವ, ಜಾಯಮಾನಕ್ಕೆ ಹೊಂದಿಕೊಳ್ಳುವಂತೆ ಮೂಡಿಬರಬೇಕು. ಕೇವಲ ಮೂಲಭಾಷೆಯ ಅಭಿನಯ ಮಾಡಿದರೆ ಸಾಲದು. ಇದು ಎಲ್ಲರೂ ಒಪ್ಪಬೇಕಾದ ವಿಷಯ.

33. ''ಭಾಷಾಂತರವೊಂದು ಯಾಂತ್ರಿಕ ಕರ್ಮವಲ್ಲ. ಮೂಲ ಲೇಖಕನದು ಸೃಷ್ಟಿಯಾದರೆ, ಭಾಷಾಂತರಕಾರನದು ಅನುಸೃಷ್ಟಿ - ಎರಡಕ್ಕೂ ಪ್ರೇರಕವಾದುದು ಪ್ರತಿಭಾದೃಷ್ಟಿ. ಮೂಲ ಲೇಖಕನದು ಕಾರಯತ್ರೀ ಪ್ರತಿಭೆಯಾದರೆ ಭಾಷಾಂತರಕಾರನದು ಭಾವಯತ್ರೀ ಪ್ರತಿಭೆ- ಎರಡೂ ಒಂದೇ ಶಕ್ತಿಯ ಎರಡು ಪಾರ್ಶ್ವಗಳು. ಮೂಲಕವಿಗೆ ಇರಬೇಕಾದ ಸಹಾನುಭೂತಿ, ಸಹೃದಯತೆ, ಸೂಕ್ಷ್ಮ ಸಂವೇದನೆ, ಕ್ರಾಂತದರ್ಶನ, ಪರಕಾಯ ಪ್ರವೇಶ ಸಾಮರ್ಥ್ಯ, ಜೀವಾನುಭವ, ಭಾಷಾಂತರಕಾರನಲ್ಲೂ ಇರಬೇಕಾಗುತ್ತದೆ. ಅವನು ಮೂಲದ ಎತ್ತರಕ್ಕೇರಿ ಆಳಕ್ಕಿಳಿದು ಆ ಕಾವ್ಯ ಸಂಸ್ಕಾರವನ್ನು ತನ್ನ ಹೃದಯಾಂಗಣದಲ್ಲಿ ಮನಸ್ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಅದನ್ನು ತನ್ನ ಭಾಷೆಯಲ್ಲಿ ಮತ್ತೆ ಕಟ್ಟುತ್ತಾನೆ''[42] ಎಂದು ಸಿಪಿಕೆ ವಿವರಣೆ ನೀಡುತ್ತಾರೆ. ಭಾಷಾಂತರಕಾರ ಮೂಲಲೇಖಕನ ಕಾಯಪ್ರವೇಶಮಾಡಿ ಅವನ ಪ್ರತಿಭೆ, ಅವನ ಜೀವಾನುಭವ ಅವನ ಭಾವನೆಗಳನ್ನು ತನ್ನದಾಗಿಸಿಕೊಳ್ಳಬೇಕು. ಅವರೀರ್ವರ ಸಂಬಂಧ ಸೃಷ್ಟಿ - ಅನುಸೃಷ್ಟಿ ಸಂಬಂಧ. ಪ್ರತಿಭೆಯಲ್ಲಿ ಒಬ್ಬರು ಕಾರಯತ್ರೀಯಾದರೆ ಇನ್ನೊಬ್ಬರು ಭಾವಯತ್ರೀ. ಆತ್ಮ ಸಾಕ್ಷಾತ್ಕಾರ ಮಾಡಿಕೊಂಡಂತೆ ಮೂಲಲೇಖಕನ ಭಾವ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಆಗ ಭಾಷಾಂತರ ಪರಿಪೂರ್ಣವಾಗುತ್ತದೆ ಎನ್ನುವ ಈ ವ್ಯಾಖ್ಯಾನ ಭಾಷಾಂತರ ಆತ್ಮಶೋಧದೆಡೆ ಬೆಳಕು ಚೆಲ್ಲುತ್ತದೆ.

34. ''ಭಾಷಾಂತರಕಾರ ವಿಮರ್ಶಕನೂ ಹೌದು. ಅವನು ಕವಿ ನಿರ್ಮಿತಿಯಲ್ಲಿ ಅಂತರ್ನಿರ್ಮಿತವಾಗಿರುವ, ನಿಗೂಢವಾಗಿರುವ ವಿಶೇಷಾರ್ಥ ರಸಧ್ವನಿ ದರ್ಶನಗಳನ್ನು ಗ್ರಹಿಸಿ ತನ್ನ ಭಾಷೆಗಿಳಿಸುತ್ತಾನೆ. ಮೂಲಕವಿಗಿಂತಲೂ ಹೆಚ್ಚಿನ

ಕೆಲವು ಅರ್ಹತೆಗಳು ಅವನಿಗಿರಬೇಕೆಂದು ತೋರುತ್ತದೆ. ಕವಿ ಪ್ರಪಂಚವನ್ನು ಕಾಣುವ ವ್ಯಕ್ತಿನಿಷ್ಠ ದೃಷ್ಟಿಯಿಂದ ತಾದಾತ್ಮ್ಯದ ಮನೋಭಾವದಿಂದ, ಕಾವ್ಯಪ್ರಪಂಚವನ್ನು ಅನುಭವಿಸುವಾಗ ಭಾಷಾಂತರಕಾರನಿಗೂ ವ್ಯಕ್ತಿನಿಷ್ಠತೆ, ತಲ್ಲೀನತೆ ಅಗತ್ಯ. ಆದರ ಕಾವ್ಯಾನುಭವ ನಿಮಗ್ನತೆಯಿಂದ ತನ್ನನ್ನು ಬಿಡಿಸಿಕೊಂಡು ದೂರ ನಿಲ್ಲಬಲ್ಲ ವೈಜ್ಞಾನಿಕ ವಸ್ತುನಿಷ್ಠ ಮನೋಧರ್ಮ ಕೂಡ ಅವನಿಗೆ ಸಿದ್ಧಿಸಿರಬೇಕು. ಕವಿಯಲ್ಲಿ ಭಾವಾವೇಶ ಪ್ರಧಾನವಾಗಿದ್ದರೆ ಭಾಷಾಂತರಕಾರನಲ್ಲಿ ಅದರ ಜೊತೆಗೆ ಬೌದ್ಧಿಕ ಜಾಗೃತಿ ಮುಖ್ಯವಾಗಿ ಬೇಕಾಗುತ್ತದೆ. ಋಷಿಯ ಅಖಂಡ ದರ್ಶನ, ವಿಜ್ಞಾನಿಯ ಖಂಡ ವಿಶ್ಲೇಷಣೆ-ಎರಡೂ ಸಮನ್ವಯ ಗೊಂಡಾಗಲೇ ಅತ್ಯುತ್ತಮ ಭಾಷಾಂತರ ಶಕ್ತಿಯ ಪ್ರಾದುರ್ಭಾವ. ಅದಕ್ಕೆ ನಿರಂತರ ವ್ಯವಸಾಯವೂ ಬೇಕು. ವ್ಯುತ್ಪತ್ತಿ ಕವಿಗೆ ಬೇಕೇ ಬೇಡವೇ ಎಂಬುದು ಚರ್ಚಾಸ್ಪದ. ಭಾಷಾಂತರಕಾರನಿಗಂತೂ ನಾನಾ ಮುಖವಾದ ವಿಶಾಲವಾದ ವ್ಯುತ್ಪತ್ತಿ ಅತ್ಯಾವಶ್ಯಕ. ಭಾಷಾಂತರ ತತ್ವಗಳ ಗಾಢ ಪರಿಜ್ಞಾನ, ತಾಂತ್ರಿಕ ಪರಿಣತಿ, ಮೂಲಭಾಷೆ ಹಾಗೂ ಉದ್ದಿಷ್ಟ ಭಾಷೆಯ ಮೇಲೆ ಪ್ರಭುತ್ವ, ಆಳವಾದ ಸಾಹಿತ್ಯೋಪಾಸನೆ, ಕವಿಹೃದಯಾಭಿಜ್ಞತೆ, ರಸಿಕತೆ, ಸದಭಿರುಚಿ ಮುಂತಾದ ಯೋಗ್ಯತೆಗಳ ಜೊತೆಗೆ ನಿರ್ಮಲವೂ ಪೂರ್ವಗ್ರಹ ಮುಕ್ತವೂ ಆದ ಮನೋಧರ್ಮ ಅವನಲ್ಲಿ ನೆಲೆಗೊಂಡಿರಬೇಕು. ಆದರ್ಶ ಭಾಷಾಂತರಕಾರ ಹೀಗೆ ಅಂತರಂಗ ಬಹಿರಂಗಗಳಲ್ಲಿ ಬಹು ಭೂಮಿಕೆಗಳಲ್ಲಿ ಸುಸಜ್ಜಿತನಾಗಿರುತ್ತಾನೆ. ಈ ಪರಿಕರಗಳು ಅವನಲ್ಲಿ ಎಷ್ಟರಮಟ್ಟಿಗೇರುತ್ತವೆಯೋ ಅಷ್ಟರಮಟ್ಟಿಗೆ ಅವನ ಭಾಷಾಂತರ ಯಶಸ್ವಿಯಾಗುತ್ತದ ಉಪಾದೇಯವಾಗುತ್ತದೆ.[43] ಎಂಬುದು ಸಿ. ಪಿ. ಕೆ. ಯವರ ಸ್ಪಷ್ಟ ಅಭಿಪ್ರಾಯ. ಅವರ ಪ್ರಕಾರ ಭಾಷಾಂತರಕಾರ ಮೂಲ ಲೇಖಕನ ಎಲ್ಲಾ ಗುಣಗಳನ್ನೂ ಹೊಂದಿ ಅವನಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಬೇಕೆಂಬುದು ಅವರ ವಾದ. ಭಾಷಾಂತರ ಮಾಡುವಾಗ ಮೂಲಲೇಖಕನ ವಿಮರ್ಶೆಯನ್ನು ಮಾಡುತ್ತಾ ವೈಜ್ಞಾನಿಕ ಹಾಗೂ ವಸ್ತುನಿಷ್ಠ ಮನೋಭಾವದಿಂದ ಅಲ್ಲಿರುವ ಭಾವಕ್ಕೆ ಬೆಲೆಕೊಟ್ಟು ಮೂಲಕ್ಕಿಂತಲೂ ಹೆಚ್ಚು ಸಹಜವಾಗಿ ಭಾಷಾಂತರವನ್ನು ರೂಪಿಸಬೇಕಾದುದು ಅವನ ಧರ್ಮ. ಋಷಿಯ ತಪೋನಿಷ್ಠೆ, ವಿಜ್ಞಾನಿಯ ವಿಮರ್ಶಾಬುದ್ಧಿ ಎರಡೂ ಅವನಲ್ಲಿರಬೇಕು. ಋಷಿಯ ಅಖಂಡ ದರ್ಶನ, ವಿಜ್ಞಾನಿಯ ಖಂಡ ವಿಶ್ಲೇಷಣೆ ಭಾಷಾಂತರಕಾರನಲ್ಲಿ ಮೇಳೈಸಿ ಬರಬೇಕು. ಸಿ. ಪಿ. ಕೆ ಪ್ರಕಾರ ಭಾಷಾಂತರಕಾರ ಮೂಲ ಲೇಖಕನಿಗಿಂತಲೂ ಒಂದು ತೂಕ ಹೆಚ್ಚು. ಅವನ ಪರಿಶ್ರಮವನ್ನು ಲೆಕ್ಕಹಾಕಿದಾಗ ಅವರ ಮಾತು ಹೆಚ್ಚು ಸತ್ಯವೆಂದು ತೋರುತ್ತದೆ.

35. ''ಭಾಷಾಂತರ ಕಾರ್ಯವೊಂದು ಪರಕಾಯ ಪ್ರವೇಶದಂತಿದೆ. ಅಸಿಧಾರಾವ್ರತದಂತಿದೆ''[44] ಎಂದಿದ್ದಾರೆ ಪ್ರೊ. ಎಂ. ಮರಿಯಪ್ಪಭಟ್ಟರು.

ಲೈಂಗಿಕ ಬದುಕಿನ ಅನುಭವ ತಿಳಿಯಲು ಶ್ರೀ ಶಂಕರಾಚಾರ್ಯರು ಪರಕಾಯ ಪ್ರವೇಶ ಮಾಡಿ ಅದನ್ನು ಅನುಭವಿಸಿ ನಂತರ ತಮ್ಮ ವಾದ ಮಂಡಿಸಿ ಗೆದ್ದಂತೆ, ಭಾಷಾಂತರಕಾರ ಮೂಲಲೇಖಕನ ಕಾಯಪ್ರವೇಶ ಮಾಡಿ ಅವನದೆಲ್ಲವನ್ನು ತನ್ನದಾಗಿಸಿಕೊಂಡು ನಂತರ ತನ್ನ ಭಾಷಾಂತರ ಕ್ರಿಯೆಯಲ್ಲಿ ತೊಡಗಬೇಕು. ಅಸಿಧಾರಾವ್ರತ ಕೂಡ ಏಕಾಗ್ರತೆಯನ್ನ ಹೆಚ್ಚಿಸಲು ಮಾಡುವ ವ್ರತ. ಭಾಷಾಂತರಕಾರನಿಗೂ ಇಂತಹ ಅಚಲವಾದ ಏಕಾಗ್ರತೆ ಬೇಕು. ಮೂಲಕೃತಿಯನ್ನು ಆಳವಾ ಅಭ್ಯಸಿಸಿ ತನ್ನಲ್ಲಿ ಸಾಕ್ಷಾತ್ಕರಿಸಿಕೊಳ್ಳಬೇಕು. ಮೂಲಲೇಖಕನ ಮತ್ತು ಭಾಷಾಂತರಕಾರನ ದೇಹ ಬೇರೆಬೇರೆಯಾದರೂ ಆತ್ಮ ಒಂದೇ ಆಗಿರಬೇಕು. ಮರಿಯಪ್ಪ ಭಟ್ಟರು ಕೇವಲ ಎರಡು ಶಬ್ದಗಳಲ್ಲಿ - 'ಪರಕಾಯ ಪ್ರವೇಶ', ಅಸಿಧಾರಾವ್ರತ - ಇಡೀ ಭಾಷಾಂತರ ಪ್ರಕ್ರಿಯೆ ವ್ಯಾಖ್ಯಾನಗಳನ್ನು ಬಟ್ಟಿ ಇಳಿಸಿ ನಮ್ಮ ಮುಂದೆ ಇಟ್ಟಿದ್ದಾರೆ.

ಹೀಗೆ ಭಾಷಾಂತರದ ಬಗ್ಗೆ ಭಾಷಾಂತರಕಾರನ ಅರ್ಹತೆಯ ಬಗ್ಗೆ ಅನೇಕ ಶ್ರೇಷ್ಠ ಸಾಹಿತಿಗಳೂ ವಿಮರ್ಶಕರೂ ತಮ್ಮದೇ ಆದ ವಿಶ್ಲೇಷಣೆ ವ್ಯಾಖ್ಯಾನ ನೀಡಿದ್ದಾರೆ. ಒಟ್ಟಿನಲ್ಲಿ ಭಾಷಾಂತರ ಒಂದು ರೀತಿಯಲ್ಲಿ ಭಾವಾಂತರ. ಇದು ಮೂಲ ಸೃಷ್ಟಿಯ ಅನುಸೃಷ್ಟಿ. ವಿಶ್ವಾಮಿತ್ರನದು ಪ್ರತಿಸೃಷ್ಟಿಯಾದರೆ ಅನುವಾದಕನವಾದು ಅನುಸೃಷ್ಟಿ. ಒಂದು ಭಾಷೆಯಲ್ಲಿ ಅಭಿವ್ಯಕ್ತಗೊಂಡಿರುವ ಭಾವ, ವಿಚಾರ, ಅನುಭವ, ಸಂಸ್ಕೃತಿ, ನಾಗರೀಕತೆ, ಕಲೆ, ಸಾಹಿತ್ಯ, ಮನೋಧರ್ಮಗಳನ್ನು ಇನ್ನೊಂದು ಭಾಷೆಯ ಓದುಗರನ್ನು ಹಾಗೂ ಅವರ ನೆಲೆ ಮತ್ತು ವಿಚಾರಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಉದ್ದಿಷ್ಟ ಭಾಷೆಯಲ್ಲಿ ಪಡಿಮೂಡಿಸುವುದೇ ಅನುವಾದ ಕ್ರಿಯೆ ಎಂದು ಸ್ಪಷ್ಟವಾಗಿ ಹೇಳಬಹುದು. ಈ ನಿಟ್ಟಿನಲ್ಲಿ ಇದೊಂದು ಕಲೆಯೂ ಹೌದು, ಶಾಸ್ತ್ರವೂ ಹೌದು. ಹಾಗಾದಾಗ ಅನುವಾದ ಒಂದು ಪ್ರಜ್ಞಾಪೂರ್ವಕ ಕಲೆಯಾಗಿ ಪರಿಣಮಿಸುತ್ತದೆ. ಆದ್ದರಿಂದ ಇದು ಎಲ್ಲರಿಗೂ ಎಟುಕುವ ಕಲೆಯಲ್ಲ. ಶ್ರೇಷ್ಠ ಭಾಷಾಂತರಕಾರನಾಗಬೇಕಾದರೆ ಬುದ್ಧಿ ಪ್ರತಿಭೆಗಳ ಜೊತೆಗೆ ಸಾಧನೆ ಅಗತ್ಯ. ಅವರ ಕೈಯಲ್ಲಿ ಮೂಲಕೃತಿ ತನ್ನ ಪರಿಮಿತಿಯನ್ನು ನೀಗಿಕೊಂಡು ಹೆಚ್ಚು ಕೀರ್ತಿಯನ್ನು, ಸಾರ್ಥಕತೆಯನ್ನು ಪಡೆಯುತ್ತದೆ. ಭಾಷಾಂತರಕಾರರು ಸಾಹಿತ್ಯಿಕ, ಸಾಂಸ್ಕೃತಿಕ ರಾಯಭಾರಿಗಳು. ಅವರು ಭಾಷೆಗಳ ಅಡ್ಡಗೋಡೆಯನ್ನು ಒಡೆದು ಸಾಹಿತ್ಯಗಳನ್ನೂ, ಜನಾಂಗಗಳನ್ನೂ ಒಂದುಗೂಡಿಸುವವರು. ಭಿನ್ನತೆಗಳ ನಡುವೆ ಏಕತೆ ಸ್ಥಾಪಿಸುವವರು. ಭಾಷಾಂತರಕಾರರು ಭಾಷಾಂತರವೆಂಬ ದೂರದರ್ಶಕದ ಮೂಲಕ ಹೊಸ ಹೊಸ ಸಾಹಿತ್ಯ ನಕ್ಷತ್ರಗಳನ್ನು ನಮ್ಮ ಮುಂದೆ ತರುವವರು. ಜಗತ್ತಿನ ವಿವಿಧ ಭಾಷೆ ಸಿರಿ ಸೌಂದರ್ಯಗಳ ವೃದ್ಧಿಗೆ ಕಾರಣಕರ್ತರು. ಚಂದ್ರ ಸೂರ್ಯನ ಬೆಳಕಿನಿಂದ ಬೆಳಗಿದರೂ ಬೆಳದಿಂಗಳು ತುಂಬಾ ಆಹ್ಲಾದಕರ, ತಂಪು ಹಾಗೂ ನಯನ ಮನೋಹರ. ಬೆಳದಿಂಗಳನ್ನು ಆನಂದಿಸಲು ಜನ ಹೆಚ್ಚು ಇಷ್ಟಪಡುತ್ತಾರೆಯೇ ಹೊರತು ಸೂರ್ಯನ ಬಿಸಿಲನ್ನಲ್ಲ. ಹಾಗೆಯೇ ಭಾಷಾಂತರ. ತನ್ನದೆ ಭಾಷೆಯಲ್ಲಿ ಓದಿಸಿಕೊಂಡು ಹೋದಂತೆ ಪರಭಾಷೆಯಲ್ಲಿ ಸಾಧ್ಯವಿಲ್ಲ. ಅದಕ್ಕಾಗಿ ಭಾಷಾಂತರ ಶ್ರೇಷ್ಠ ಕ್ರಿಯೆ.

## ಆ. ಅನುವಾದದ ತತ್ವಗಳು

ಪ್ರತಿಯೊಂದು ಅಧ್ಯಯನ ವಿಷಯವೂ ನಿರ್ದೇಶಿತ ತತ್ವಗಳಿಂದ ನಿರ್ಮಾಣಗೊಂಡಿರುತ್ತದೆ. ಈ ತತ್ವಗಳ ಹಿನ್ನೆಲೆಯಲ್ಲಿ ಆಯಾಯ ಅಧ್ಯಯನ ವಿಷಯವನ್ನು ಪರಿಶೀಲಿಸಬೇಕಾಗುತ್ತದೆ. ಅನುವಾದ ಅಥವಾ ಭಾಷಾಂತರ ವಿಷಯವೂ ಕೂಡ ತತ್ವಗಳನ್ನು ಆಧರಿಸಿರುವುದನ್ನು ಕಾಣಬಹುದು. ಅನುವಾದಕ ಪ್ರತಿಪಾದಿಸುವ ವಿಷಯ, ಅಭಿಪ್ರಾಯ ಹಾಗೂ ನಿರೂಪಣೆಗಳ ಹಿನ್ನೆಲೆಯಲ್ಲಿ ಆ ಅನುವಾದದ ಸಾಫಲ್ಯ ವೈಫಲ್ಯಗಳನ್ನು ಹೇಳಬಹುದು. ಜೊತೆಗೆ ಅನುವಾದಕ ಅನುವಾದ ತತ್ವಗಳನ್ನು ಹೇಗೆ ಬಳಸಿದ್ದಾನೆಂಬುದರ ಮೇಲೆ ಅವನ ಪರಿಶ್ರಮ ಫಲ ನೀಡುತ್ತದೆ.

ಭಾಷಾಂತರದ ಮೂಲ ತತ್ವ ಒಂದೇ-ಮೂಲಕೃತಿಯನ್ನು ಉದ್ದಿಷ್ಟ ಭಾಷೆಗೆ ಯಥಾವತ್ತಾಗಿ ವರ್ಗಾಯಿಸುವುದು ಪ್ರತಿಕೃತಿಸುವುದು. ''ಸರಿಯಾದ ಅನುವಾದದಲ್ಲಿ ಮೂಲದಲ್ಲಿನ ಒಂದು ತುಣುಕನ್ನು ತೆಗೆದುಹಾಕಲೂಬಾರದು, ಹಾಗೆಯೇ ಹೆಚ್ಚಿಗೆ ಸೇರಿಸಲೂಬಾರದು''.[45] ಅನುವಾದದ ತತ್ವದ ಪ್ರಕಾರ ಇದು ಸರಿ. ಆದರೆ ವಿವಿಧ ಕಾರಣಗಳಿಗಾಗಿ ಹಾಗೂ ಪ್ರಯೋಜನಗಳಿಗಾಗಿ ಅನುವಾದಕ ತನ್ನ ಕೃತಿಯಲ್ಲಿ ಲೋಪ, ಆಗಮ, ಆದೇಶಗಳನ್ನು ಮಾಡುವುದುಂಟು. ಆದರಿಂದ ಕೃತಿಗೆ

ಒಮ್ಮೊಮ್ಮೆ ಲಾಭ ಇಲ್ಲವೆ ನಷ್ಟ ಸಂಭವಿಸುತ್ತದೆ. ನಷ್ಟವಾದರೆ ಅದು ಖಂಡಿತವಾಗಿಯೂ ದೋಷ. ಲಾಭವಾದರೆ ಮೂಲಕ್ಕೆ ಅಪಚಾರ(ಉಪಚಾರ)ವೆಸಗಿದಂತಾಗುತ್ತದೆ. ಇದನ್ನೇ ಜಾನ್ಸನ್ ಒತ್ತಿ ಹೇಳುವುದು "ಭಾಷಾಂತರಕಾರನು ಮೂಲ ಲೇಖಕನಂತಿರಬೇಕು. ಅವನನ್ನು ಮೀರಿಸುವುದು ಇವನ ಕೆಲಸವಲ್ಲ" ಆದರೆ ಈ ಬಗ್ಗೆ ಕಠಿಣ ನಿಯಮ ಮಾಡುವುದು ಅಸಾಧ್ಯ. ಒಮ್ಮೊಮ್ಮೆ ಭಾಷಾಂತರಕಾರನು ಯಾವ ಉದ್ದೇಶವೂ ಇಲ್ಲದೆ ಅಪ್ರಯತ್ನಪೂರ್ವಕವಾಗಿ, ಅನಿವಾರ್ಯವಾಗಿ ಮೂಲಕ್ಕಿಂತ ಉತ್ತಮ ಕೃತಿ ಹೊರತರಬಹುದು. ಉದಾಹರಣೆಗೆ ಶ್ರೀಯವರ "ಇಂಗ್ಲಿಷ್ ಗೀತಗಳು"ವಿನ "ದುಃಖ ಸೇತು" ಕವನದಲ್ಲಿ ಈ ಮುಂದಿನ ಸಾಲುಗಳು :

ನಿರಿಹಿಡಿದು ನಡುವೇರಿ
ತೊದಲು ಮಾತನು ಬೀರಿ
ಕೊರಗನನಿಸಲು ಬಲ್ಲ
ಮಗುವಿಲ್ಲವೇನೋ?

ಈ ಸಾಲುಗಳು ಮೂಲ ಕವನದಲ್ಲಿಲ್ಲ. ಆದರೂ ಭಾಷಾಂತರಕಾರರು ಮೂಲಕ್ಕೆ ಹೆಚ್ಚು ಮೆರಗು ನೀಡಲು ಇದನ್ನು ಸೇರಿಸಿದ್ದಾರೆ. ಸತ್ತ ಹೆಣ್ಣಿಗೆ ಯಾರೂ ದಿಕ್ಕಿಲ್ಲವೇ ಎಂದು ಹೇಳುತ್ತಾ ಒಂದು ವೇಳೆ ಮಗು ಇದ್ದಿದ್ದರೆ ಅವಳು ಆತ್ಮಹತ್ಯೆ ಮಾಡಿಕೊಳ್ಳುತ್ತಿರಲಿಲ್ಲವೇನೋ ಎಂದು ಹೇಳಿ ಕವಿತೆಯ ತೂಕವನ್ನು ಇನ್ನೂ ಹೆಚ್ಚಿಸಿದ್ದಾರೆ. ಆದ್ದರಿಂದ ಭಾಷಾಂತರದಲ್ಲಿ ಇಂತಹ "ಆಗಮ" ಸ್ವಾಗತಾರ್ಹ. ಅದು ವಂದ್ಯವೇ ಹೊರತು ನಿಂದ್ಯವಲ್ಲ. "ಮೂಲದ ದೋಷಗಳನ್ನು ಅನೌಚಿತ್ಯಗಳನ್ನು ಭಾಷಾಂತರಕಾರ ಕಿತ್ತು ಹಾಕಬಹುದೆಂದು ಎ. ಎಫ್. ಟೆಟ್ಲರ್ ಮುಂತಾದವರು ಹೇಳುತ್ತಾರೆ"[46] ಭಾಷಾಂತರ ಮೂಲ ಲೇಖನಕ್ಕಿಂತ ಉತ್ತಮವಾಗಿರಬಹುದು - ಅದೂ ಕವಿತೆಯಲ್ಲಿ - ಎಂದೂ ಕೂಡ ಪ್ರತಿಪಾದಿಸಿದ್ದಾರೆ.

ಮೂಲ ಲೇಖಕನೇ ಈ ಭಾಷೆಯಲ್ಲಿ ಬರೆದಿದ್ದರೆ ಹೇಗಿರುತ್ತಿತ್ತೋ ಹಾಗಿರಬೇಕೆಂಬುದು ಭಾಷಾಂತರದ ಇನ್ನೊಂದು ತತ್ವ. ಒಳ್ಳೆಯ ಅನುವಾದಗಳಲ್ಲಿ ಈ ಆದರ್ಶವಿರುತ್ತದೆ. ಆದರೆ ಎಂತಹ ಅತ್ಯುತ್ತಮ ಅನುವಾದವೂ ಮೂಲದ 'ಅಂಶಾವತಾರ'ವಾಗಬಲ್ಲದೇ ವಿನಾ 'ಪೂರ್ಣಾವತಾರ'ವಾಗಿರಲು ಸಾಧ್ಯವಿಲ್ಲ. ಉದಾಹರಣೆಗೆ ಹೋಮರನ ಕಾವ್ಯದ ಅನೇಕ ಇಂಗ್ಲಿಷ್ ಅನುವಾದಗಳಲ್ಲಿ ಯಾವುದೂ ಕೂಡ ಮೂಲದ ಸರ್ವ ಗುಣಗಳನ್ನು ಯಶಸ್ವಿಯಾಗಿ ಪ್ರತಿಬಿಂಬಿಸಿಲ್ಲವೆಂದು ಮ್ಯಾಥ್ಯೂ ಆರ್ನಾಲ್ಡ್ ಹೇಳಿದ್ದಾನೆ[47]. ಈ ಕಾರಣಕ್ಕಾಗಿಯೇ ಒಂದು ಶ್ರೇಷ್ಠ ಕೃತಿ ಮತ್ತೆ ಮತ್ತೆ ಭಾಷಾಂತರಗೊಳ್ಳುತ್ತಲೇ ಇರಬೇಕಾಗುತ್ತದೆ. ಅದಕ್ಕಾಗಿಯೇ Every classical poem worth translating should be translated afresh every fifty years ಎನ್ನುತ್ತಾನೆ ಸಿ. ಡೇ. ಲೂಯಿ. ಇದರಿಂದ ಪ್ರತಿ ಅರ್ಧ ಶತಮಾನಕ್ಕೆ ಭಾಷೆಯಲ್ಲಿ, ಜನರ ತಿಳುವಳಿಕೆಯಲ್ಲಿ ನಾಗರೀಕತೆಯಲ್ಲಿ ಆದ ಬದಲಾವಣೆಯ ಹಿನ್ನೆಲೆಯಲ್ಲಿ ಪರಿಷ್ಕೃತ ಅನುವಾದ ಹೊರ ಬಂದು ಮೂಲ ಕೃತಿಯ ಮೆರಗು ಪಡೆಯಲು ಸಾಧ್ಯವಾಗುತ್ತದೆ. ಉದಾಹರಣೆಗೆ ಚಾಸರನ Canterburry Tales ಮೂಲದಂತೆಯೇ ಅನುವಾದಗೊಂಡಲ್ಲಿ ಈಗಿನವರಿಗೆ ಅದು ಅರ್ಥವಾಗುವುದಿಲ್ಲ. ಆದ್ದರಿಂದ ಪ್ರಚಲಿತ ರೂಪಕ್ಕೆ ಅನುವಾದಗೊಂಡು ಕೃತಿ ಎಲ್ಲರನ್ನು ಮುಟ್ಟಲು ಅನುಕೂಲವಾಯಿತು.

ಹಂಬೋಲ್ಟನ ಪ್ರಕಾರ "ಎಲ್ಲಾ ಭಾಷಾಂತರವೂ ಅಪರಿಹಾರ್ಯವಾದ ಸಮಸ್ಯೆಯೊಂದನ್ನು ಪರಿಹರಿಸುವ ಪ್ರಯತ್ನ ಮಾತ್ರವಾಗಿ ತೋರುತ್ತದೆ"[48]. ಇದು ಭಾಷಾಂತರದ ಒಂದು ಮುಖವಾದರೆ ಕೆಲವೊಮ್ಮೆ ಭಾಷಾಂತರ ಮೂಲಕ್ಕಿಂತ ಕೆಲವಂಶದಲ್ಲಿ ಉತ್ತಮವಾಗಿರುವುದೂ ಉಂಟು. ಭಾಷಾಂತರದ ಈ ಕುಂದುಗಳು, ಭಾಷಾಂತರಕಾರನ ಶಕ್ತಿ ದೌರ್ಬಲ್ಯಗಳಿಗಿಂತ ಮಿಗಿಲಾಗಿ, ಭಾಷಾ ಭಿನ್ನತೆಗಳಿಗೆ ಸಂಬಂಧಿಸಿವೆ ಎನ್ನಬೇಕು. ಉದಾಹರಣೆಗೆ ಸಂಸ್ಕೃತದಿಂದ ಕನ್ನಡಕ್ಕೆ ಬಂದಾಗ ಆ ಕೃತಿ ಮೂಲಕ್ಕಿಂತಲೂ ಸುಂದರವಾಗುವ ಸಾಧ್ಯತೆಯಿದೆ. ಸಂಸ್ಕೃತದಲ್ಲಿಲ್ಲದ ದೇಶೀಯ ವಿಲಾಸ, ಭಂಗಿಗಳ ಕನ್ನಡದಲ್ಲಿರುವುದನ್ನು ಕಾಣಬಹುದು. ಆದಕಾರಣ "ಭಾಷಾಂತರಕಾರ ಮೂಲವನ್ನು ಎಷ್ಟು ಚೆನ್ನಾಗಿ ಅರಿತಿರಲಿ, ತನ್ನ ಸ್ವಂತ ಭಾಷೆಯ ಒತ್ತಡಗಳಿಗೆ ಅವನು ಮಣಿಯಲೇಬೇಕು. ಅವನಿಗೆ ಇಷ್ಟವಿರಲಿ, ಇಲ್ಲದಿರಲಿ, ಅವು ಕೆಲಸ ಮಾಡಿಯೇ ಮಾಡುತ್ತವೆ."[49]

ಭಾಷಾಂತರದಲ್ಲಿ ಮೂಲ ಕರ್ತೃವಿನ ಭಾವನೆಗಳನ್ನು ಅರಿತು ಉದ್ದಿಷ್ಟ ಭಾಷೆಯ ಜಾಯಮಾನಕ್ಕೆ ಹೊಂದಿಕೊಳ್ಳುವಂತೆ ಪಡಿಮೂಡಿಸಬೇಕಾಗಿರುವುದರಿಂದ ಮೂಲಕರ್ತೃವಿಗೂ ಅನುವಾದಕನಿಗೂ ನಡುವೆ ಸಾಮರಸ್ಯ ಬೆಳೆಯಬೇಕು. ಅದಕ್ಕಾಗಿ ಗಯಟೆ ಹೇಳುತ್ತಾನೆ "There are two great maxims of translations - either turn the foreign author into a native author or induce reader to go out to the author's foreigness" (ಭಾಷಾಂತರದ ಬಗ್ಗೆ ಎರಡು ಪ್ರಮುಖ ಸೂಕ್ತಿಗಳಿವೆ - ವಿದೇಶೀಯ ಲೇಖಕನನ್ನು ಸ್ಥಳೀಯ ಲೇಖಕನನ್ನಾಗಿ ಪರಿವರ್ತಿಸುವುದು. ಇಲ್ಲಾ ಓದುಗನನ್ನೇ ಹೊರಬರುವಂತೆ ಮಾಡಿ ಲೇಖಕನ ವಿದೇಶೀಯತೆಯ ಒಳಹೋಗುವಂತೆ ಮಾಡುವುದು) ಗಯಟೆ ತಂದ ಮೂಲಕೃತಿಗಿಂತ ಇಂಗ್ಲಿಷ್ ಭಾಷಾಂತರ ಹೆಚ್ಚು ಜನಪ್ರಿಯವಾದುದನ್ನು ನಾವು ಗಮನಿಸಬೇಕು. ಗಯಟೆಯು ತನ್ನ ಮೂಲಕೃತಿಯನ್ನು ಬದಿಗಿರಿಸಿ ಆಗಾಗ್ಗೆ ಫ್ರಾಸ್ಟ್ ಅನುವಾದವನ್ನು ಓದುತ್ತಿದ್ದನಂತೆ. ಹೀಗಾದಾಗ ಓದುಗ ವಿದೇಶೀಯತೆಯನ್ನು ತನ್ನದಾಗಿಸಿಕೊಳ್ಳಬೇಕಾಗುತ್ತದೆ. ತಾತ್ವಿಕ ಹಾಗೂ ಧಾರ್ಮಿಕ ಶಬ್ದಗಳನ್ನು ಹಾಗೆಯೇ ಉಳಿಸಿಕೊಂಡು ವಿದೇಶೀಯತೆಗೆ ಕೊಂಡೊಯ್ಯಬೇಕು. ಭಾಷಾಂತರೀಯತೆ (Translatability) ಎಲ್ಲಾ ಕೃತಿಗಳಿಗೂ ಇರುತ್ತದೆಯಾದರೂ ಕೆಲವೊಂದು ಪೂರ್ಣ ಭಾಷಾಂತರಕ್ಕೂ, ಕೆಲವೊಂದು ಆಂಶಿಕ ಭಾಷಾಂತರಕ್ಕೂ ಅರ್ಹವಾಗುತ್ತವೆ. ಥಿಯೋಡೋರ್ ಸಾವೇರಿ (Theodore savory) ಭಾಷಾಂತರಕ್ಕೆ ಕೆಲವೊಂದು ನಿರ್ದೇಶಿತ ತತ್ವಗಳನ್ನು ನೀಡಿದ್ದಾನೆ. ಅದರಂತೆ "ಅನುವಾದ ಮೂಲ ವಿಚಾರ ಹಾಗೂ ಭಾವನೆಗಳನ್ನು ಅಭಿವ್ಯಕ್ತಗೊಳಿಸಬೇಕು. ಅದು ಮೂಲಕೃತಿಯಂತೆ ಓದಿಸಿಕೊಂಡು ಹೋಗಬೇಕು. ಹಾಗೆಯೇ ಅನುವಾದವೆಂದು ಗೋಚರವಾಗುವಂತೆಯೂ ಇರಬೇಕು. ಅದರಲ್ಲಿ ಮೂಲಶೈಲಿ ಹಾಗೂ ಅನುವಾದದ ಶೈಲಿ ಎರಡೂ ಮಿಳಿತವಾಗಿರಬೇಕು. ಅದು ಮೂಲಕೃತಿಯ ಹಾಗೂ ಅನುವಾದ ಕೃತಿಯ ಸಮಕಾಲೀನ ಚಿತ್ರ ನೀಡಬೇಕು. ಅನುವಾದದಲ್ಲಿ ಕೆಲವೊಮ್ಮೆ ಮೂಲವನ್ನು ಅನಗತ್ಯವಾಗಿ ಮಾರ್ಪಡಿಸಬಹುದು. ಕೆಲವೊಮ್ಮೆ ಮಾರ್ಪಡಿಸಬಾರದು. ಸಾಮಾನ್ಯವಾಗಿ ಪದ್ಯವನ್ನು ಪದ್ಯದಲ್ಲೇ ಇಡಬೇಕು. ಆದರೆ ಕೆಲವೊಮ್ಮೆ ಅಗತ್ಯ ಕಂಡುಬಂದಲ್ಲಿ ಪದ್ಯದ ಅನುವಾದ ಗದ್ಯದಲ್ಲಿ ಆಗಬೇಕು. ಉದಾಹರಣೆಗೆ ಹರಿಹರ ಕವಿ ಪೆರಿಯಪುರಾಣದ ಅರವತ್ತ್ಮೂರು ಪುರಾತನ ಕಥೆಗಳನ್ನು ಕಾವ್ಯವಾಗಿಸಿ ರಗಳೆಯ ಪ್ರಕಾರದಲ್ಲಿ ಕಥನ ಕಲೆಯ ದಾಟಿಯಲ್ಲಿ ರಚಿಸಿದ್ದಾನೆ. ಅದೇ ರೀತಿ ನಾಗವರ್ಮ ಬಾಣಭಟ್ಟನ ಕೃತಿ 'ಕಾದಂಬರಿ'ಯನ್ನು, ಅದು ಗದ್ಯರೂಪದಲ್ಲಿದ್ದರೂ ಒಂದು ಸುಂದರ ಚಂಪೂಕಾವ್ಯವನ್ನಾಗಿ ರೂಪಿಸಿದ್ದಾನೆ.

'ಪದ್ಯವನ್ನು ಕವಿಯ ಹೊರತು ಮತ್ತಾರೂ ಭಾಷಾಂತರಿಸಬಾರದು' ಎಂಬುದು ಹುಕ್‌ಹೌಸಲಿಯ ಅಭಿಪ್ರಾಯ. ಇದು ಶ್ರೀಯವರ 'ಇಂಗ್ಲಿಷ್ ಗೀತಗಳು' ಅನುವಾದದಲ್ಲಿ ಸಾಕಾರಗೊಂಡಿದೆ. ಹಾಗೆಯೇ ಪದ್ಯವನ್ನು ಸೊಗಸಾದ ಗದ್ಯವನ್ನಾಗಿ ಅನುವಾದಿಸಬಹುದು ಎಂಬುದು ಹಿಲ್ಲೆರೆ ಬೆಲ್ಲಾಕ್ ಅಭಿಪ್ರಾಯ. ದೇಜಗೌರವರ 'ಶ್ರೀ ರಾಮಾಯಣ ದರ್ಶನಂ ವಚನ ಚಂದ್ರಿಕೆ'ಯನ್ನು ಇದಕ್ಕೆ ಉದಾಹರಣೆ ಕೊಡಬಹುದು. ಗದ್ಯಾನುವಾದವೂ ಪದ್ಯದಂತಿರಬೇಕೆಂಬುದು ಮ್ಯಾಥ್ಯೂ ಆರ್ನಾಲ್ಡ್‌ನ ಅಭಿಪ್ರಾಯ. ಹರಿಹರನ ಗದ್ಯ, ಮುದ್ದಣನ ಗದ್ಯಗಳು ಪದ್ಯದಂತೆ ಕಾವ್ಯಾತ್ಮಕವಾಗಿರುವುದನ್ನು ನಾವು ಕಾಣಬಹುದು.

ಯಾವಾಗಲೂ ಭಾಷೆ ಮೊದಲು; ಆನಂತರ ಭಾಷಾ ತತ್ವಗಳು. ಹಾಗೆಯೇ ಅನುವಾದ ಮೊದಲು; ಆನಂತರ ಅನುವಾದ ತತ್ವಗಳು. ಹಾಗೆಂದಾಗ ಅನುವಾದಕ ಮೂಲವನ್ನು ಮರೆಸುವಷ್ಟು ಸ್ವಂತಿಕೆ ತೋರಬಾರದು. ಅನುವಾದಕನ ಶೈಲಿಯೂ ಕೂಡ ಆಯಾ ಭಾಷೆಯ ಜಾಯಮಾನಕ್ಕೆ, ಭಾವನೆಗೆ ವಿಷಯಕ್ಕೆ ತಕ್ಕದಾಗಿರಬೇಕು. ಅನುವಾದವು ಒಂದು ರೀತಿಯಲ್ಲಿ ಮತಾಂತರ ಕ್ರಿಯೆಯಾದುದರಿಂದ ಪೂರ್ವಾಶ್ರಮದ ಕೆಲವೊಂದು ಆಚರಣೆಗಳನ್ನು ತ್ಯಜಿಸಿ, ಹೊಸದನ್ನು ಸ್ವೀಕರಿಸಬೇಕಾಗುತ್ತದೆ. ಸಹೃದಯದ ಸ್ಥಾಯೀಭಾವಗಳನ್ನು ಉದ್ದೀಪನಗೊಳಿಸಬೇಕಾದರೆ ಆಲಂಕಾರಿಕ ಮಾತು, ಮಾತಿನಲ್ಲಿ ಮೋಡಿ, ಲಯ, ಗೇಯತೆ, ಛಂದಸ್ಸು, ಪ್ರಾಸ, ಧ್ವನಿ, ಮುಂತಾದ ಶಾಸ್ತ್ರ ಪರಿಕರಗಳನ್ನು ಅನುವಾದಕ ತಿಳಿದಿರಬೇಕು. ಮೂಲಕವಿಯ ಸಂವೇದನೆ ಅನುವಾದಕನಿಗಿರಬೇಕು. ಪೋಸ್ಟ್‌ಗೇಟ್ ಕಾವ್ಯವನ್ನು ಕವಿ ಹೃದಯ ಉಳ್ಳವನೇ ಅನುವಾದಿಸಬೇಕು ಎಂದು ಹೇಳಿದ್ದರ ಹಿನ್ನೆಲೆಯಲ್ಲಿ ಅನುವಾದಕ ವಸ್ತು (matter), ·ಶೈಲಿ (manner) ಹಾಗೂ ಪರಿಣಾಮ (effect)ಗಳ ಕಡೆ ಹೆಚ್ಚು ಗಮನ ನೀಡಬೇಕಾಗುತ್ತದೆ.

''ಅನುವಾದವು ಪೂರ್ಣಾವತಾರವಾಗಿರಬೇಕು. ಅದು ಮೂಲದ ಭಾವನೆ ರೀತಿ, ಶೈಲಿ, ವಾಚನೀಯತೆಗಳನ್ನು ಪ್ರತಿಬಿಂಬಿಸಬೇಕು ಹಾಗೂ ಮೂಲದ ಸರಳತೆಯನ್ನು ಮೈಗೂಡಿಸಿಕೊಂಡಿರಬೇಕು'' ಎಂದು ಪ್ರತಿಪಾದಿಸುತ್ತಾನೆ ಅಲೆಕ್ಸಾಂಡರ್ ಫ್ರೀಸರ್ ಟೈಟ್ಲರ್. ಈ ಲಕ್ಷಣಗಳಿದ್ದರೆ ಅದನ್ನು ಅನುವಾದದ ವಿಧೇಯತಾ ತತ್ವವೆನ್ನುತ್ತಾರೆ. ಹಾಗೆಯೇ ಸವೋರಿ ಭಾಷಾಂತರವು ಉದ್ದಿಷ್ಟ ಭಾಷೆಯಲ್ಲಿ ಸ್ವತಂತ್ರವಾಗಿ ಮೌಲಿಕನಾಗಿ ರಚಿತವಾದ ಕೃತಿಯಂತೆ ಓದಿಸಿಕೊಂಡು ಹೋಗಬೇಕು ಎಂದು ಹೇಳಿದಾಗ ಅದನ್ನು ಮೂಲಭಾಸತಾ ತತ್ವವೆನ್ನುತ್ತಾರೆ. "The origional reads like the original and hence the translation of it should do so too" ಪೋಸ್ಟ್‌ಗೇಟ್ ಇದನ್ನು ಬಹಳ ಮಾರ್ಮಿಕವಾಗಿ ಹೇಳಿದ್ದಾನೆ.

ಈಗ ಇನ್ನೊಂದು ಪ್ರಶ್ನೆ. ಅನುವಾದವು ಶಬ್ದಶಃ ಅನುವಾದವಾಗಿರಬೇಕೇ ಅಥವಾ ಮುಕ್ತ ಅನುವಾದವಾಗಿರಬೇಕೇ? ಶಬ್ದಶಃ ಅನುವಾದ ಕಠಿಣ ಹಾಗೂ ಅನಪೇಕ್ಷಣೀಯ. ವಿಜ್ಞಾನ ಸಾಹಿತ್ಯದಲ್ಲಿ ಶಬ್ದಶಃ ಅನುವಾದ ಸಾಧ್ಯ. ಸಾಮಾಜಿಕ ಸಾಹಿತ್ಯದಲ್ಲಿ ಕೆಲಮಟ್ಟಿಗೆ ಶಬ್ದಶಃ ಅನುವಾದ ಸಾಧ್ಯ. ಸೃಜನಶೀಲ ಸಾಹಿತ್ಯದಲ್ಲಿ ವಿಶಿಷ್ಟ ಸಂಸ್ಕೃತಿಯ ಹಿನ್ನೆಲೆಯಿರುವುದರಿಂದ ಆ ಸಂಸ್ಕೃತಿಯ ಅರ್ಥಾಭಿವ್ಯಕ್ತಿ ಅನುವಾದದಲ್ಲಿ ಪೂರ್ಣವಾಗಿ ಪ್ರತಿಬಿಂಬಿತವಾಗುವುದು ಕಠಿಣ. ಕಾಲದಿಂದ ಕಾಲಕ್ಕೆ, ಭಾಷೆ, ಪರಿಸರ, ಸಾಮಾಜಿಕ ಜೀವನ ಬದಲಾಗುವುದರಿಂದ ಅನುವಾದಿತ ಕಾಲಕ್ಕನುಗುಣವಾಗಿ ಮೂಲ

ಸನ್ನಿವೇಶವನ್ನು ಪ್ರತಿಬಿಂಬಿಸಬೇಕೇ ಎನ್ನುವುದು ಮಹತ್ವದ ಪ್ರಶ್ನೆ. ಉದಾಹರಣೆಗೆ ಶೇಕ್ಸ್‌ಪಿಯರ್‌ನ Merchant of Venice ಕನ್ನಡದಲ್ಲಿ ಕೇರೂರು ವಾಸುದೇವಾಚಾರ್ಯರಿಂದ ಭಾರತೀಯ ಆವರಣಕ್ಕೆ ಹೊಂದಿಕೊಳ್ಳುವಂತೆ 'ಸುರತ ನಗರದ ಶ್ರೇಷ್ಠಿ' ಎಂದು ಅನುವಾದವಾಗಿದೆ. ಹಾಗೆಯೇ ಅವನ 'Tempest' ಮತ್ತು 'Hamlet' ಗಳನ್ನು ಕುವೆಂಪುರವರು ಕ್ರಮವಾಗಿ 'ಬಿರುಗಾಳಿ' ಹಾಗೂ 'ರಕ್ತಾಕ್ಷಿ'ಗಳಾಗಿ ನಮ್ಮ ಆವರಣಕ್ಕೆ ಹೊಂದಿಕೊಳ್ಳುವಂತೆ ಕನ್ನಡಕ್ಕೆ ತಂದಿದ್ದಾರೆ. ಶ್ರೀಯವರ 'ಇಂಗ್ಲಿಷ್ ಗೀತೆಗಳು' ನಮ್ಮ ವಾತಾವರಣಕ್ಕೆ ತಕ್ಕಂತೆ ಭಾಷಾಂತರಗೊಂಡಿದೆ. ಮಂದಾಕ್ರಾಂತದಲ್ಲಿದ್ದ ಕಾಳಿದಾಸನ 'ಮೇಘದೂತ'ವನ್ನು ಕನ್ನಡದಲ್ಲಿ ಬೇಂದ್ರೆಯವರು ಭಿನ್ನವಾದ ಹೊಸ ರಗಳೆ, ಜಾತಿ, ಛಂದಸ್ಸಿನಲ್ಲಿ ಉತ್ತಮವಾಗಿ ಅನುವಾದಿಸಿದ್ದಾರೆ. ಇದರಿಂದಾಗಿ ಓದುಗರ ಮೇಲೆ ಆಗುವ ಪರಿಣಾಮ ಹೆಚ್ಚು.

ಅನುವಾದಕನು ಮೂಲಕೃತಿ ಮತ್ತು ಓದುಗನ ಮಧ್ಯೆ ಒಂದು ಕೊಂಡಿ ಇದ್ದಂತೆ. ಅವನು ಮೂಲಕೃತಿಯೊಂದಿಗೆ ತಾದಾತ್ಮ್ಯ ಹೊಂದಿ ಅದನ್ನು ಪ್ರತಿಬಿಂಬಿಸಬೇಕು. ಅನುವಾದಿತ ಭಾಷೆಯ ಜನರು ಅದರ ಸೌಂದರ್ಯ ಆಸ್ವಾದಿಸಬೇಕು. ವಿಚಾರಗಳ ಮೇಲೆ ಅವಧಾರಣೆ ಕೊಟ್ಟು ಅವುಗಳ ಸ್ಪಷ್ಟ ಅಭಿವ್ಯಕ್ತಿ ಅನುವಾದದಲ್ಲಿರಬೇಕು. ಮ್ಯಾಥ್ಯೂ ಆರ್ನಾಲ್ಡ್ ಅನುವಾದವನ್ನು ಓದುವಾಗ ಸಾಧ್ಯವಾದಷ್ಟು ಅದು ಅನುವಾದವೆಂಬುದನ್ನು ಮರೆಸುವಂತಿರಬೇಕು ಅಂದಾಗ ಓದುಗ ಅನುವಾದವನ್ನು ಓದುವಾಗ ಮೂಲಕೃತಿಯನ್ನೇ ಓದುತ್ತಿದ್ದೇನೆಂಬ ಭಾವನೆ ಬರಬೇಕು ಎಂದು ಹೇಳಿದ ಹಾಗಾಯ್ತು. ಅನುವಾದವು ಒಂದು ಸ್ವೋಪಜ್ಞಕೃತಿ .ಬೀರುವ ಪರಿಣಾಮವನ್ನೇ ಓದುಗನ ಮೇಲೆ ಬಿರುವಂತಿರಬೇಕು ಎಂಬುದು ಸ್ಪಷ್ಟ. ಈ ಅಭಿಪ್ರಾಯಕ್ಕೆ ಬದಲಾಗಿ ತನ್ನದೇ ವ್ಯಾಖ್ಯಾನ ನೀಡುತ್ತಾನೆ ನ್ಯೂಮನ್. ಅನುವಾದಕನು ಮೂಲದ ವೈಶಿಷ್ಟ್ಯವನ್ನು ಉಳಿಸಿಕೊಂಡು ತನ್ನೆಲ್ಲಾ ಸಾಮರ್ಥ್ಯದಿಂದ ಇನ್ನೊಂದು ವಸ್ತುವನ್ನು ಅನುಕರಣ ಮಾಡುತ್ತಿದ್ದೇನೆಂಬುದನ್ನು ನೆನಪಿನಲ್ಲಿಟ್ಟುಕೊಂಡು ಹೆಚ್ಚು ಹೆಚ್ಚು ಪರಕೀಯವಾಗಿಸಬೇಕು ಎಂಬುದು ಅವನ ಅಭಿಪ್ರಾಯ. ಅನುವಾದಕ ಕೂಡ ಸೃಜನಶೀಲ ಬರಹಗಾರನಷ್ಟೇ ಪ್ರಮುಖನೆಂಬುದು ನ್ಯೂಮನ್‌ನ ಪ್ರತಿಪಾದನೆ. ಇದಕ್ಕೆ ಉದಾಹರಣೆಯಾಗಿ ಕನ್ನಡದ ಆದಿಕವಿ ಪಂಪನ 'ವಿಕ್ರಮಾರ್ಜುನ ವಿಜಯಂ' ಕಾವ್ಯವನ್ನು ಪರಿಶೀಲಿಸಬಹುದು. ಕಥೆ, ವಿಷಯ ಹಾಗೂ ವಸ್ತುವಿಗೆ ಪಂಪ ವ್ಯಾಸ ಮಹರ್ಷಿಗಳನ್ನು ಆಶ್ರಯಿಸಿದ್ದಾನೆ. ಆದರೆ ನ್ಯೂಮನ್ ಅಭಿಪ್ರಾಯದಂತೆ ಮೂಲವನ್ನು ಸಾಕಷ್ಟು ಪರಿಷ್ಕರಣೆಗೆ ಒಳಪಡಿಸಿದ್ದಾನೆ. ಅಲ್ಲಿನ ಧರ್ಮ ಹಾಗೂ ಅಸಾಮಾನ್ಯ ಘಟನೆಗಳನ್ನು ತನ್ನ ವಿಚಾರವಂತಿಕೆಗೆ ನಿಲುಕಿಸಿದ್ದಾನೆ. ಅಗತ್ಯವಿರುವಲ್ಲಿ ಮೂಲವನ್ನು ಸಂಗ್ರಹಿಸಿದ್ದಾನೆ. ಕೆಲವೆಡೆ ಹೊಸದನ್ನು ಸೇರಿಸಿದ್ದಾನೆ. 'ಭಗವದ್ಗೀತೆ'ಗೆ ಹೆಚ್ಚು ಮಹತ್ವ ನೀಡದೆ, ಬನವಾಸಿ ಪ್ರಾಂತ್ಯದ ವರ್ಣನೆಗೆ, ಯುದ್ಧ ವರ್ಣನೆಗೆ ಸಾಕಷ್ಟು ಆದ್ಯತೆ ನೀಡಿದ್ದಾನೆ. ಹಿತ-ಮಿತವನ್ನು ಎಲ್ಲೂ ಆತ ಮೀರಿ ಹೋಗಿಲ್ಲ. ಹೀಗಾಗಿ ಮೂಲಕೃತಿಗೆ ದೊರೆಯಬೇಕಾದಷ್ಟು ಗೌರವ ದೊರೆತು, ಪಂಪನ ಕೃತಿಗೂ ಸೃಜನಶೀಲ ಕೃತಿಯೆಂಬ ಹೆಗ್ಗಳಿಕೆ ದೊರೆತಿದೆ.

ಅನುವಾದವು ಸಾಧ್ಯವಾದಷ್ಟು ಮೂಲಾನುವರ್ತಿಯಾಗಿರಬೇಕೆಂದು ಹೇಳಿದರೂ ಅನಿವಾರ್ಯ ಸಂದರ್ಭದಲ್ಲಿ ಮಾರ್ಪಾಡಿಗೆ ಸಾಕಷ್ಟು ಅವಕಾಶವಿರಬೇಕು. ಮೂಲವಸ್ತುವಿನ ಸನ್ನಿವೇಶವೊಂದು ಅಷ್ಟು ಮಹತ್ವದ್ದಲ್ಲವಾದರೆ ಅದನ್ನು ಕೈಬಿಡಬಹುದು. ಸನ್ನಿವೇಶವೊಂದನ್ನು ಇನ್ನಷ್ಟು ಪರಿಣಾಮಕಾರಿಯಾಗಿ ಮಾಡಬೇಕಾದಲ್ಲಿ ಹೊಸದನ್ನು ಸೇರಿಸಬಹುದು.

ಮೂಲವಸ್ತು ಸುದೀರ್ಘವಾದರೆ ಅದನ್ನು ಕುಗ್ಗಿಸಬಹುದು. ಅಗತ್ಯವಿದ್ದರೆ ಹಿಗ್ಗಿಸಬಹುದು. ಕೆಲವೊಮ್ಮೆ ಒಂದೇ ಕೃತಿಯ ಅನುವಾದ ಭಿನ್ನ ಭಾಷಾಂತರಕಾರರಲ್ಲಿ ವಿಭಿನ್ನವಾಗಿರುತ್ತದೆ. ಉದಾಹರಣೆಗೆ ಕಾಳಿದಾಸನ ಶಾಕುಂತಲದ ನಾಲ್ಕನೆಯ ಅಂಕದಲ್ಲಿರುವ ಪದ್ಯವನ್ನು ನೋಡಬಹುದು.

ಶುಶ್ರೂಷಸತಿ ಗುರೂನ್ ಕುರುಪ್ರಿಯ ಸಖೀ ವೃತ್ತಿಂ ಸಪತ್ನೀಜನೇ
ಭರ್ತುರ್ವಿನ್ ಪ್ರಕೃತಾಪಿ ರೋಷಣತಯಾ ಮಾಸ್ಮ ಪ್ರತೀಪಂಗಮಃ।
ಭೂಯಿಷ್ಠಂಭವ ದಕ್ಷಿಣಾ ಪರಿಜನೇ ಭಾಗ್ಯೇಷನುತ್ಸೇಕಿನೀ
ಯಾಂತ್ಯೇವಂ ಗೃಹಿಣೀಪದಂ ಯುವತಯೋ ವಾಮಾಃ ಕುಲಸ್ಯಾಧಯಃ॥

ಇದರ ಕನ್ನಡ ಅನುವಾದಗಳು ಕೆಳಗಿನಂತಿವೆ:

"ಹಿರಿಯರು ಹೇಳಿದ ಹಾಗೆ ಕೇಳು, ಸವತಿಯರಲ್ಲಿ ಪ್ರಿಯ ಸ್ನೇಹಿತೆಯಂತೆ ನಡೆದುಕೋ, ಗಂಡನು ನಿನಗೆ ವಿರೋಧವಾದರೂ ರೋಷದಿಂದ ಅವನ ಮೇಲೆ ತಿರುಗಿ ಬೀಳಬೇಡ, ಪರಿಜನರಲ್ಲಿ ತುಂಬಾ ಧಾರಾಳ ಬುದ್ಧಿ ಇರಲಿ. ಭಾಗ್ಯ ಬಂದಾಗ ಬೀಗಬೇಡ, ಹೀಗಾದರೆ ಹುಡುಗಿಯವರು ಗೃಹಿಣಿಯರೆನಿಸಿಕೊಳ್ಳುತ್ತಾರೆ. ಇಲ್ಲದಿದ್ದರೆ ಮನೆಯವರ ಮನಸ್ಸಿಗೆ ಕೊರಗು ತರುತ್ತಾರೆ"- ಎ. ಆರ್. ಕೃಷ್ಣಶಾಸ್ತ್ರಿ.

ಪಿರಿಯರ್ ಸೇವೆಗೆಯ್ ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂ
ದಿರುಪತಿಯೊರ್ಮೆ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್
ಪರಿಜನವಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಗಳಿಂತಿರಲ್
ಗರತಿಯರಪ್ಪರಿಂತಿರದರನ್ವಯಕಾಧಿಯನುಂಟುಮಾಳ್ಪರೌ - ಬಸವಪ್ಪಶಾಸ್ತ್ರಿ

"ಗುರು ಹಿರಿಯರನ್ನು ಶ್ರದ್ಧೆಯಿಂದ ಉಪಚರಿಸು. ಸವತಿಯರೆನ್ನೆಲ್ಲಾ ಪ್ರಿಯ ಸಖಿಯರೆಂಬ ಭಾವನೆಯನ್ನು ಇರಿಸಿಕೋ. ಕಾಡಿದರೂ ಸಹ ಕೋಪದಿಂದ ಗಂಡನಿಗೆ ತಿರುಗಿ ಬೀಳಬೇಡ. ಪರಿಜನರಲ್ಲಿ ಹೆಚ್ಚಾಗಿ ಅನುಕಂಪವಿರಲಿ. ಭಾಗ್ಯ ಬಂದಾಗ ಗರ್ವದಿಂದ ಬೀಗಬೇಡ. ಹೀಗಿರುವ ಸತಿಯರು ಉತ್ತಮ ಗೃಹಿಣಿಯರೆನಿಸಿಕೊಳ್ಳುತ್ತಾರೆ. ಇದಕ್ಕೆ ವಿರುದ್ಧವಾಗಿರುವವರು ಕುಲಕ್ಕೆ ಪೀಡೆಗಳು" - ಡಾ: ಕೆ. ಕೃಷ್ಣಮೂರ್ತಿ

ಹಿರಿಯರ ಸೇವೆಯೊಳೆ ತತ್ಪರಳಾಗು
ಕಿರಿಯರಿಗೆಲ್ಲಾ ಕರುಣವ ತೋರು
ಸರಿಯ ಸವತಿಯರೊಳೆ ಸ್ನೇಹಗೊಡುವರು ಮ
ತ್ಸರವ ಮಾಡಲು ಮನದೊಳು ತಾಳು ॥ 1 ॥

ನಿನ್ನೊಳು ರಮಣನು ಅನ್ಯಾಯ ಮಾಡಲು
ತನ್ನ ಕೋಪಿಸಬ್ಯಾಡ ನಡತೆಯೊಳು
ಇನ್ನಷ್ಟುಬಾಗಿ ನಮಸ್ಕರಿಸು ಪತಿ
ಯನ್ನ ಸೇವಕರೊಳು ದಯೆದೋರು ॥ 2 ॥

ನಾನು ಸಾರುವುದೆಲ್ಲಾ ಲಕ್ಷ್ಯದೊಳಿಡು ಭಾಗ್ಯ
ವಾಗಳೆಂಬುವ ಗರುವಿಕೆದೂಡು
ಈ ನಡತೆಯ ಯುವತಿಯರೆಲ್ಲಾ ಜನರೊಳು
ಲೀನ ಪ್ರೀಯರೆಂದೆನಿಸುತಿಹರು ॥ 3 ॥ - ಚುರುಮುರಿ ಶೇಷಗಿರಿರಾಯರು

ಮೇಲೆ ನೀಡಿದ ಅನುವಾದಗಳಲ್ಲಿ ಎರಡು ಗದ್ಯ ಎರಡು ಪದ್ಯಗಳಿದ್ದು, ಮೂಲಪಾಠವನ್ನು ಆಧಾರವಾಗಿಟ್ಟುಕೊಂಡು ಆಯಾ ಲೇಖಕರು, ತಮ್ಮದೇ ಶೈಲಿಯಲ್ಲಿ ಅನುವಾದಿಸಿದ್ದಾರೆ. ಅಲ್ಲಿ ಇಲ್ಲಿ ಸ್ವಲ್ಪ ಮಾರ್ಪಾಟು ಮಾಡಿರುವುದನ್ನು ನಾವು ಗಮನಿಸಬಹುದು. ಆದರೆ ಎಲ್ಲೂ ಕೂಡ ಮೂಲದಿಂದ ದೂರ ಸರಿದಿಲ್ಲ ಮೂಲಕ್ಕೆ ಹೆಚ್ಚು ಮೆರುಗು ನೀಡುವ ಪ್ರಯತ್ನ ಇಲ್ಲಿ ನಡೆದಿದೆ.

ಮೇಲೆ ಹೇಳಿದ ಎಲ್ಲಾ ಸಂಗತಿಗಳ ಆಧಾರದ ಮೇಲೆ ಅನುವಾದದ ಐದು ತತ್ವಗಳನ್ನು ಕಾಣಬಹುದು.

1) ವಿಧೇಯತಾ ತತ್ವ (Principle of Fidelity)

2) ಅನುರೂಪತಾ ತತ್ವ (Principle of Commensurateness)

3) ಆನಂದ ತತ್ವ (Principle of Pleasure of the reader)

4) ಪರಿಹಾರ ತತ್ವ (Principle of Compensation)

5) ಮೂಲಭಾಸತಾ ತತ್ವ (Principle of Original)

ಅವುಗಳ ವಿವರಗಳನ್ನಿಲ್ಲಿ ಪರಿಶೀಲಿಸೋಣ :

### 1. ವಿಧೇಯತಾ ತತ್ವ

ಭಾಷಾಂತರದ ಮೌಲ್ಯ ಮತ್ತು ಮಹತ್ವಗಳು ಅದು ಮೂಲಕ್ಕೆ ಎಷ್ಟರಮಟ್ಟಿಗೆ ವಿಧೇಯವಾಗಿದೆ ಎಂಬುದೇ ವಿಧೇಯತಾ ತತ್ವ. ಅನುವಾದಕ ಮೂಲಕೃತಿಗೆ ವಿಧೇಯವಾಗಿರುವುದರ ಜೊತೆಗೆ ಉದ್ದಿಷ್ಟ ಭಾಷೆಗೂ ವಿಧೇಯನಾಗಿರಬೇಕು. ಈ ಕಾರಣಕ್ಕಾಗಿಯೇ ಪ್ರೊ. ವಿಲಿಮೋ ವಿಟ್ಜ್ 'Every correct translation is travesty' (of truth) (ಪ್ರತಿಯೊಂದು ಸರಿಯಾದ ಭಾಷಾಂತರವೂ ಮೂರ್ಖ ಅನುಕರಣೆ) ಎಂದಿದ್ದಾನೆ. ಅವರ ಮಾತಿನ ಅರ್ಥವೇನೆಂದರೆ ಭಾಷಾಂತರಕಾರ ಒಂದು ಭಾಷೆಯಲ್ಲಿ ಇದ್ದುದನ್ನು ಇನ್ನೊಂದು ಭಾಷೆಗೆ ಯಾವುದೇ ಸ್ವಂತ ವಿಚಾರವನ್ನು ಮಾಡದೇ ಯಥಾವತ್ ತಂದು ಇಡುವ ಸಾಮಾನ್ಯ ಅನುಕರಣೆ ಕ್ರಿಯೆ ನಡೆಸುತ್ತಾರೆ. ಇದೊಂದು ಯಾಂತ್ರಿಕ ಕ್ರಿಯೆ ಎಂಬುದು, ಯಾವುದೇ ಸ್ವಾತಂತ್ರ್ಯಕ್ಕೆ ಅವಕಾಶವಿಲ್ಲವೆಂಬುದು. ಅಲ್ಲದೇ ಅನುವಾದಕ ಮೂಲದ ವಸ್ತು ಮತ್ತು ಪ್ರಕಾರಗಳಿಗೂ ವಿಧೇಯನಾಗಿರಬೇಕು. ಅನುವಾದ ಎಷ್ಟು ಸಾಧ್ಯವೋ ಅಷ್ಟು ವಿಧೇಯವಾಗಿರಬೇಕೆಂಬುದು ಮತ್ತು ಎಷ್ಟು ಅಗತ್ಯವೋ ಅಷ್ಟು ಸ್ವತಂತ್ರವಾಗಿರಬೇಕೆಂದು ಪಿ.ಕೌಲ್ ಹೇಳಿದ್ದಾರೆ. ಲಾರ್ಡ್ ಕರ್ಜನ್ ಪ್ರಕಾರ ತಾನು ಮೂಲಲೇಖಕನ ಅಭಿಪ್ರಾಯವನ್ನು ತೆಗೆದುಕೊಂಡು ಹೋಗಿ

ಅರ್ಥೈಸುವನೆಂಬುದನ್ನು ಅನುವಾದಕ ನೆನಪಿಟ್ಟುಕೊಳ್ಳಬೇಕು. ಇದನ್ನು ಸ್ವಾನ್‌ವಿಕ್ ಇನ್ನೂ ಕಠಿಣವಾಗಿ ಹೇಳಿದ್ದಾನೆ. ''ಅನುವಾದ ಮೂಲಕೃತಿಯನ್ನು ಮಾತ್ರ ಪ್ರತಿಬಿಂಬಿಸಬೇಕು. ಅನಗತ್ಯ ಬದಲಾವಣೆ ಮಾಡಿದ್ದಲ್ಲಿ ನಂಬಿಕೆ ದ್ರೋಹವಾಗುತ್ತದೆ.'' ನ್ಯೂಮನ್ ಈ ಬಗ್ಗೆ'' "The translator's first duty is a historical one - to be faithfull" ಎಂದಿದ್ದಾನೆ. ಈ ಎಲ್ಲಾ ನುಡಿಗಳು ಅನುವಾದಕ ಮೂಲಕೃತಿಗೆ ವಿಧೇಯನಾಗಿರಬೇಕೆಂಬುದನ್ನು ಪ್ರತಿಪಾದಿಸುತ್ತವೆ. ಒಂದು ವೇಳೆ ಬದಲಾವಣೆ ಅನಿವಾರ್ಯವಾಗಿದ್ದಲ್ಲಿ ಅದಕ್ಕೆ ಸರಿಯಾದ ಸಮರ್ಥನೆ ಇರಬೇಕಾಗುತ್ತದೆ. ಈ ಸಂದರ್ಭದಲ್ಲಿ ಎ. ಆರ್. ಕೃಷ್ಣಶಾಸ್ತ್ರಿಗಳ ವಚನ ಭಾರತ ಹಾಗೂ ಕುವೆಂಪುರವರ 'ಜನಪ್ರಿಯ ವಾಲ್ಮೀಕಿ ರಾಮಾಯಣ'ವನ್ನು ನೆನಪಿಸಿಕೊಳ್ಳಬಹುದು. ಈ ಎರಡೂ ಕೃತಿಗಳಲ್ಲಿ ಮೂಲಲೇಖಕನ ಜಾಡು ಅನುಸರಿಸಿ ತಮ್ಮ ಭಾಷೆಯ ಓದುಗ ಮೆಚ್ಚುವಂತೆ ತಮ್ಮ ಅನುವಾದ ಕೆಲಸ ಮಾಡಿದ್ದಾರೆ. ಮೂಲಕೃತಿಗೆ 'ವಿಧೇಯತೆ' ಯನ್ನು ತೋರಿಸುತ್ತಾ ತಮ್ಮ ಭಾಷೆಯ ಓದುಗರನ್ನು ಆಕರ್ಷಿಸಿರುವುದು ಇವರ ಕೃತಿಗಳ ವೈಶಿಷ್ಟ್ಯವಾಗಿದೆ.

**2. ಅನುರೂಪತಾ ತತ್ವ**

ಅನುವಾದದಲ್ಲಿ ಮೂಲದ ಭಾವಾಂಶ, ಚೇತನಾಂಶ, ರೂಪಾಂಶಗಳು ಮೈತಳೆದು ಬಂದರೆ ಅದನ್ನು ಅನುರೂಪತಾ ತತ್ವವೆನ್ನುತ್ತಾರೆ. ಅನುವಾದವು ಅತಿಯಾಗಿ ಹಿಗ್ಗುವುದಾಗಲೀ ಕುಗ್ಗುವುದಾಗಲೀ ಆಗದೆ ಗಾತ್ರ ಅನುರೂಪತೆ ಸಾಧಿತವಾಗಬೇಕು. ಮೂಲದ ಸರಳತೆ, ಲಾಲಿತ್ಯ, ಸೌಂದರ್ಯ, ಸೌಕುಮಾರ್ಯ ಮುಂತಾದ ಸಮಸ್ತ ಭಾವ ಶ್ರೀಮಂತಿಕೆ ಹಾಗೂ ಛಂದೋಬಂಧ ಅನುವಾದದಲ್ಲಿ ರೂಪಿತವಾದಲ್ಲಿ ಅದು ಮೂಲ ಅನುರೂಪತೆ ಉಳಿಸಿಕೊಂಡಂತಾಗುತ್ತದೆ. ಮೂಲದಲ್ಲಿನ ಅಷ್ಟೇ ಶಬ್ದಗಳ ಸಂಖ್ಯೆಯನ್ನು ಅನುಸರಿಸಿ ಅನುವಾದಕ ತನ್ನ ಕಾರ್ಯವನ್ನು ಶ್ರದ್ಧೆಯಿಂದ ಮಾಡಿರುತ್ತಾನೆ. ಕೊ. ಚನ್ನಬಸಪ್ಪನವರ ಅರವಿಂದರ 'ಸಾಹಿತ್ರಿ' ಮಹಾಕಾವ್ಯದ ಅನುವಾದದಲ್ಲಿ ಈ ನಿಷ್ಠೆಯನ್ನು ಕಾಣಬಹುದು.

**3. ಆನಂದ ತತ್ವ**

ಮೂಲಕೃತಿಯ ಓದುಗನಿಗೆ ಸಿಗುವ ಆನಂದ ಅನುವಾದ ಕೃತಿಯ ಓದುಗನಿಗೂ ದೊರೆಯಬೇಕು ಎಂಬುದೇ ಆನಂದ ತತ್ವ. ಮೂಲಕೃತಿ ತೆವಳುತ್ತಿದ್ದರೆ ಅನುವಾದಕ ನೆಗೆಯುವಂತಿರಬಾರದೆಂದು ಟಾಲ್‌ಮನ್ ಹೇಳಿದ್ದಾನೆ. ಆತ್ಮವಿಲಯ ಅನುವಾದಕನ ಅರ್ಹತೆಗಳಲ್ಲೊಂದು. ಆನಂದ ತತ್ವ ನಿರಪೇಕ್ಷವಾದುದಲ್ಲ. ಸಾಪೇಕ್ಷವಾದುದು. ಮೂಲಪಠ್ಯಕ್ಕೆ ದಾಸನಾಗದೇ ಮೂಲ ಭಾವನೆಗೆ ದಾಸನಾಗಿದ್ದುಕೊಂಡು ಅನುವಾದಿಸಿದಲ್ಲಿ ಅನುವಾದ ಓದುಗನಿಗೆ ಆನಂದ ನೀಡುತ್ತದೆ. ಬಸವಪ್ಪ ಶಾಸ್ತ್ರಿಗಳ 'ಅಭಿಜ್ಞಾನ ಶಾಕುಂತಳ' ನಾಟಕ ಓದುತ್ತಿದ್ದರೆ ಮೂಲ ಕಾಳಿದಾಸನ ಕೃತಿಯನ್ನು ಓದುತ್ತಿರುವ ಅನುಭವವಾಗುತ್ತದೆ. ಹಾಗೆಯೇ ಹೆಚ್.ಎಲ್. ನಾಗೇಗೌಡರ 'ಪ್ರವಾಸಿ ಕಂಡ ಇಂಡಿಯಾ' ಸಂಪುಟವನ್ನು ಓದುತ್ತಿದ್ದರೆ ಹ್ಯೂಯ್ಯನ್‌ತ್ಸಾಂಗ್ ಮುಂತಾದ ವಿದೇಶಿ ಲೇಖಕರ ಲೋಕಕ್ಕೆ ನಮ್ಮನ್ನು ಕೊಂಡೊಯ್ದಂತೆ ಭಾಸವಾಗುತ್ತದೆ.

**4. ಪರಿಹಾರ ತತ್ವ**

ಉದ್ದಿಷ್ಟ ಭಾಷೆಯ ಜಾಯಮಾನಕ್ಕೆ ಹೊಂದಿಕೊಳ್ಳುವ ರೀತಿಯಲ್ಲಿ ಮೂಲದ ಎಲ್ಲಾ ನಷ್ಟಗಳಿಗೆ ಅನುವಾದಕ ಪರಿಹಾರ ಕಂಡುಕೊಳ್ಳಬೇಕೆಂಬುದು ಪರಿಹಾರ ತತ್ವ. ಮೂಲಕೃತಿ ಬೀರುವ ಪರಿಣಾಮ ಉದ್ದಿಷ್ಟ ಭಾಷೆಗೆ ಸಹಜವಾದ ಪ್ರಾಸ, ಲಯ, ಛಂದಸ್ಸುಗಳನ್ನು ಅಳವಡಿಸಿಕೊಂಡು ಮೂಲದ ಪರಿಣಾಮವನ್ನೇ ಬೀರುವಂತೆ ನೋಡಿಕೊಳ್ಳಬೇಕು. ಕಾವ್ಯವನ್ನು ಭಾಷಾಂತರಿಸುವಾಗ ಮೂಲದ ಸೂಕ್ಷ್ಮ ಚೈತನ್ಯ ಮಾಯವಾಗುವ ಸಾಧ್ಯತೆ ಇದೆ. ಇದಕ್ಕಾಗಿ ಹೊಸ ಚೈತನ್ಯ ತುಂಬುವುದು ಅನುವಾದಕನ ಕರ್ತವ್ಯ. ಅಪವ್ಯಯಕ್ಕೆ ಪರಿಹಾರ ಕಂಡುಕೊಳ್ಳುವುದೂ ಅನುವಾದಕನಿಗೇ ಸೇರಿದ್ದು. ಯೂರಿಪಿಡಿಸ್‌ನ 'ಅಂತಿಗೊನೆ' ನಾಟಕವನ್ನು ಡಿ.ವಿ.ಜಿ., ಪ್ರೊ॥ ಕಾ.ವೆಂ. ರಾಘವಾಚಾರ್ ಹಾಗೂ ಪಿ. ಲಂಕೇಶ್ ಅನುವಾದಿಸಿದ್ದಾರೆ. ಆ ಕೃತಿಯನ್ನು ಪ್ರಸ್ತುತ ಕಾಲಕ್ಕೆ ತಕ್ಕಂತೆ ಅನುವಾದ ಮಾಡುವಾಗ ಹೊಸ ಭಾಷೆಯ ಲಯ ಹಾಗೂ ಗತಿಯನ್ನು ಬಳಸಿದ್ದಾರೆ.

**5. ಮೂಲಭಾಸತಾ ತತ್ವ**

ಅನುವಾದವನ್ನು ಓದುವ ಸಹೃದಯನಿಗೆ ತಾನು ಮೂಲಕೃತಿಯನ್ನೇ ಓದುತ್ತಿದ್ದೇನೆಂದು ಅನಿಸಬೇಕೆಂಬುದು ಮೂಲ ಭಾಸತಾ ತತ್ವ. ಇದನ್ನು ಪಾಲೆನ್ ಬಹಳ ಮಾರ್ಮಿಕವಾಗಿ ಹೇಳಿದ್ದಾನೆ. 'A good translation should read like an original. Why ? because the original reads like an original."

ಮೂಲವಸ್ತು ಉದ್ದಿಷ್ಟ ಭಾಷೆಗಳೆರಡರ ಮೇಲೂ ಅನುವಾದಕ ಪ್ರಭುತ್ವ ಹೊಂದಿದ್ದಲ್ಲಿ ಮಾತ್ರ ಮೂಲದ ನುಡಿಗಟ್ಟುಗಳನ್ನೂ ಒಳಹೊರಗನ್ನೂ ಬಾಗುಬಳಕುಗಳನ್ನೂ ಸಹಜವಾಗಿ ಸೃಷ್ಟಿಸಬಲ್ಲ. ಉದ್ದಿಷ್ಟ ಭಾಷೆಯಲ್ಲಿ ಸ್ವತಂತ್ರ ಕೃತಿ ರಚಿತವಾಗಿದ್ದರೆ ಹೇಗೆಯೋ ಹಾಗೆ ಭಾಷೆ ಮತ್ತು ಅಭಿವ್ಯಕ್ತಿಯನ್ನು ಅಳವಡಿಸಿಕೊಳ್ಳಬೇಕು. ಉದಾಹರಣೆಗೆ ರವೀಂದ್ರನಾಥ ಠಾಗೂರ್‌ರ ಬಂಗಾಳಿ ಕೃತಿ 'ಗೋರಾ' ಕಾದಂಬರಿಯನ್ನು ಹೆಚ್. ವಿ. ಸಾವಿತ್ರಮ್ಮನವರು ಕನ್ನಡದಲ್ಲಿ 'ಗೋರಾ' ಕಾದಂಬರಿಯಾಗಿ ಅನುವಾದಿಸಿದ್ದು ಇದನ್ನು ಓದುವಾಗ ಮೂಲ ಕಾದಂಬರಿಯನ್ನೇ ಓದುತ್ತಿದ್ದೇವೆ ಎಂಬ ಭಾವನೆ ಓದುಗನಿಗೆ ಉಂಟಾಗುತ್ತದೆ. ಈ ಗುಣ ಅನುವಾದ ಕೃತಿಯಲ್ಲಿ ಮೂಡುವುದು ಮುಖ್ಯವಾದುದು.

## ೯. ಅನುವಾದದ ಪ್ರಕಾರಗಳು

ಓದುಗರ ಅವಶ್ಯಕತೆಗಳನ್ನವಲಂಬಿಸಿ, ಉದ್ದೇಶ, ಭಿನ್ನತೆಗಳಿಗನುಸಾರವಾಗಿ ವಿಭಿನ್ನ ಪ್ರಕಾರಗಳು ಅನುವಾದದಲ್ಲಿ ರೂಪುಗೊಂಡಿವೆ. ವಿದ್ಯಾರ್ಥಿಗಳ, ವಿದ್ವಾಂಸರ, ಶ್ರೀ ಸಾಮಾನ್ಯರ, ಆಸಕರ, ಪುರಾಣಿಕರ, ವಿದೇಶಿಯರ ಅಗತ್ಯಗಳು ಭಿನ್ನವಾಗಿದ್ದು, ಅನುವಾದವೂ ಕೂಡ ಅವರವರ ಅಗತ್ಯಗಳಿಗನುಗುಣವಾಗಿ ಸ್ವರೂಪ ಪಡೆಯುತ್ತದೆ. ಅನುವಾದಕನ ಉದ್ದೇಶ, ಓದುಗನ ಅಗತ್ಯ ಇವುಗಳ ಮೇಲೆ ಭಾಷಾಂತರದ ಪ್ರಕಾರಗಳು ಅವಲಂಬಿತವಾಗಿವೆ. ವೈಜ್ಞಾನಿಕ ಸಂಗತಿಗಳನ್ನು ಅನುವಾದಿಸುವಾಗ ಮೂಲನಿಷ್ಠವಾಗಿರಬೇಕು. ಸೃಜನಶೀಲ ಸಾಹಿತ್ಯ ಹಲವು ರೀತಿಯಲ್ಲಿ ಅನುವಾದಿತಗೊಳ್ಳಬಹುದು. ಇಲ್ಲಿ ಓದುಗನ ಅಭಿರುಚಿ ಮುಖ್ಯ. ಈ ಹಿನ್ನೆಲೆಯಲ್ಲಿ ಭಾಷಾಂತರದಲ್ಲಿ ಈ ಕೆಳಕಂಡ 11 ಪ್ರಕಾರಗಳನ್ನು ಗುರುತಿಸಬಹುದು.

1. ಶಬ್ದಾನುವಾದ ಅಥವಾ ಪದಶಃ ಭಾಷಾಂತರ

2. ವಿಸ್ತಾರಾನುವಾದ ಅಥವಾ ಉನ್ನತೀಕರಣಾನುವಾದ

3. ರೂಪಾಂತರ ಅಥವಾ ರೂಪಸದೃಶ್ಯಾನುವಾದ

4. ಅನುವಾದ

5. ನಿಕಟಾನುವಾದ

6. ಸಂಗ್ರಹಾನುವಾದ

7. ಸರಳಾನುವಾದ

8. ಅರ್ಥಾನುವಾದ

9. ಅನುಕರಣಾ ಛಾಯಾನುವಾದ

10. ಪರೋಕ್ಷಾನುವಾದ

11. ಪುನಃ ಲೇಖನ

**1. ಶಬ್ದಾನುವಾದ ಅಥವಾ ಪದಶಃ ಭಾಷಾಂತರ**

ಇಂಗ್ಲಿಷ್‌ನಲ್ಲಿ ಇದನ್ನು Literal translation or Metaphrase ಎಂದು ಕರೆಯುತ್ತಾರೆ. ಪದಶಃ ಅನುವಾದಿಸುವ. ಪದಕ್ಕೆ ಪದ ಜೋಡಿಸುವ ಕ್ರಿಯೆ ಇಲ್ಲಿ ನಡೆಯುತ್ತದೆ. ಶಬ್ದವನ್ನು ಭಾಷಾಂತರಿಸುವಾಗ ಮೂಲ ಭಾವನೆಗೆ ಧಕ್ಕೆ ಬಾರದಂತೆ ಶಬ್ದ ಮತ್ತು ಭಾವನೆಗಳ ನಡುವೆ ಸಾಮರಸ್ಯ ಸಾಧಿಸಲಾಗುತ್ತದೆ. ಮೂಲಶಬ್ದಕ್ಕೆ ಸಂವಾದಿ ಶಬ್ದ ಹೊಂದಿಸಿ ಭಾವನೆಗಳನ್ನು ವ್ಯಕ್ತಪಡಿಸುವ ಪ್ರಯತ್ನವಿದು. ವೈಜ್ಞಾನಿಕ ಅನುವಾದದಲ್ಲಿ ಈ ಬಗೆಯ ಭಾಷಾಂತರ ಹೆಚ್ಚು ಪ್ರಸ್ತುತವಾಗುತ್ತದೆ. ಇಲ್ಲಿ ಸಣ್ಣ ಸಂಗತಿಗೂ ಮಹತ್ವವಿದೆ. ಆದ್ದರಿಂದ ಸಮಗ್ರಭಾವ ಗ್ರಹಿಸಿಕೊಂಡು ಅನುವಾದಿಸುವುದು ಸೂಕ್ತವಲ್ಲ. ಸೃಜನಶೀಲ ಕೃತಿಗಳ ಭಾಷಾಂತರದಲ್ಲಿ ಶಬ್ದಾನುವಾದವು ಕೃತಕತೆಯನ್ನು ಉಂಟುಮಾಡುತ್ತದೆ. ಪೋಸ್ಟ್‌ಗೇಟ್ ಶಬ್ದಾನುವಾದಕ್ಕೆ ಒತ್ತು ನೀಡುತ್ತಾ "The Principle of faithfullness is the merit of true translation" ಎಂದಿದ್ದಾನೆ. ಈ ಹೇಳಿಕೆಯು ವಿಜ್ಞಾನ ಭಾಷಾಂತರಕ್ಕೆ ಹೆಚ್ಚು ಹೊಂದಿಕೆಯಾಗುತ್ತದೆ. ಶಬ್ದಾನುವಾದ ಕೆಲವೊಮ್ಮೆ ನೀರಸವಾಗಿ ಓದುಗರಲ್ಲಿ ಆಸಕ್ತಿ ಹುಟ್ಟಿಸದೇ ಹೋಗಬಹುದು. ಏಕೆಂದರೆ ಕೆಲವೊಂದು ಶಬ್ದಗಳು. ಶಬ್ದಪುಂಜಗಳು, ನುಡಿಗಟ್ಟುಗಳು, ಗಾದೆಗಳು. ವಿಶಿಷ್ಟ ಭಾವಗಳು ಹಾಗೂ ಧಾರ್ಮಿಕ, ಸಾಮಾಜಿಕ ಅಂಶಗಳು ವ್ಯಾಕರಣ ಪ್ರಕ್ರಿಯೆಗಳು ಶಬ್ದಾನುವಾದಕ್ಕೆ ಅಳವಡದ ಹೋಗಬಹುದು.

ಟಿ. ಸವ್ಹೋರಿ "Leteral or word by word trnaslation is a premitive type. It is only fit for prosiac matters"[50] ಎಂದಿದ್ದಾನೆ. ಇದರಲ್ಲಿ ಸತ್ಯಾಂಶವಿದೆ. ಈ ಪ್ರಕಾರದಲ್ಲಿ ಅನುವಾದಕನು ಮೂಲಭಾಷೆ ಹಾಗೂ ಅನುವಾದ ಮಾಡುವ ಭಾಷೆಯಲ್ಲಿ ಹೊಂದಿರುವ ಪರಿಮಿತಿ ವ್ಯಕ್ತವಾಗುತ್ತದೆ. ಅದನ್ನು ಮತ್ತೆ ಮೂಲಕ್ಕೆ ಪರಿವರ್ತಿಸುವಲ್ಲಿ ಮೂಲಕ್ಕೆ ಸಮೀಪವಾಗಿರುತ್ತದೆ. ಶಬ್ದಾನುವಾದ ಭಾಷೆಗಳ ತೌಲನಿಕ ಅಧ್ಯಯನಕ್ಕೆ ಸಹಕಾರಿಯಾಗಿರುತ್ತದೆ. ಭಾಷಾಂತರ ಒಂದು

ವಿಜ್ಞಾನ ಎನಿಸಿಕೊಳ್ಳಲು ಈ ಪರಿಕ್ರಮ ಅತ್ಯಗತ್ಯ. ಇಲ್ಲಿ ಮೂಲಕೃತಿ ಪದಲೋಪವಿಲ್ಲದ ವಾಕ್ಯರಚನೆ ಅನುಸರಿಸಿ ವಾಕ್ಯಗಳ ಅಥವಾ ಪಂಕ್ತಿಗಳ ಲಯಬದ್ಧತೆಗಳ ಸಮತೋಲನ ಕಾಪಾಡಬೇಕಾಗುತ್ತದೆ. ಇಂಗ್ಲಿಷ್‌ನಿಂದ ಕನ್ನಡಕ್ಕೆ ಬಂದ ಅನೇಕ ವಿಜ್ಞಾನ ಗ್ರಂಥಗಳು ಈ ಶಬ್ದಾನುವಾದಕ್ಕೆ ಉದಾಹರಣೆಯಾಗಿ ನಿಲ್ಲುತ್ತವೆ. ವಿಶೇಷವಾಗಿ ಕಾನೂನನ್ನು ಅನುವಾದ ಮಾಡುವಾಗ ಈ ಪದ್ಧತಿಯನ್ನು ಅನುಸರಿಸಲಾಗುತ್ತದೆ. ನ್ಯಾಯಾಲಯಗಳು ಕೊಟ್ಟ ತೀರ್ಪುಗಳನ್ನು ಅನುವಾದಿಸುವಾಗ ಹಾಗೂ ಸಂವಿಧಾನವನ್ನು ಅನುವಾದಿಸುವಾಗ ಈ ಪದ್ಧತಿಯನ್ನು ಅನುಸರಿಸಲಾಗುತ್ತದೆ. ಅದೇ ರೀತಿ ಸರ್ಕಾರದ ಅಧಿಕೃತ ವ್ಯವಹಾರದ ಭಾಷಾಂತರ ಕೂಡ 'ಶಬ್ದಾನುವಾದ'ದ ಮೂಲಕವೇ ನಡೆಯುತ್ತದೆ.

**2. ವಿಸ್ತರಾನುವಾದ ಅಥವಾ ಉನ್ನತೀಕರಣಾನುವಾದ**

ಮೂಲದಲ್ಲಿ ಗೂಢವಾಗಿರುವ ಸಂಗತಿಗಳನ್ನು ಹಿತಮಿತವಾಗಿ ಹಿಗ್ಗಿಸಿ, ಓರೆಕೋರೆಗಳನ್ನು ತಿದ್ದಿ, ಭಾವಾರ್ಥಗಳನ್ನು ಉನ್ನತಗೊಳಿಸಿ, ಸೊಗಸು ತುಂಬಿ, ಉದ್ದಿಷ್ಟ ಭಾಷೆಯ ಜಾಯಮಾನಕ್ಕೆ ತಕ್ಕಂತೆ ಅನುವಾದಿಸುವುದೇ ವಿಸ್ತರಾನುವಾದ. ಅಲ್ಲಿನ ಉದ್ದೇಶ ವಿಪರೀತವಾಗಲೀ ವಿರೋಧವಾಗಲೀ ಆಗಬಾರದು. ಅದರಲ್ಲಿ ಶಬ್ದವಿಸ್ತಾರ, ಭಾವವಿಸ್ತಾರ, ವ್ಯಾಖ್ಯಾನ, ಪ್ರಕ್ಷೇಪಗಳಿಗೆ ಅವಕಾಶವಿದೆ. ಇಷ್ಟೆಲ್ಲಾ ಇದ್ದರೂ ವಿಸ್ತರಾನುವಾದಕ್ಕೆ ಒಂದು ಲಕ್ಷ್ಮಣರೇಖೆ ಹಾಕದಿದ್ದರೆ ಅಲ್ಲಿಂದ ಹೊರಬಿದ್ದು 'ಅಪಾಯ ವಲಯ'ಕ್ಕೆ ಹೆಜ್ಜೆ ಇಡುವ ಸಂಭವವಿದೆ. ಆದ್ದರಿಂದ ಮೂಲದ ಭಾವ ಸಮರ್ಪಕವಾಗಿ ಅನುವಾದದಲ್ಲಿ ಅವತರಿಸಿಲ್ಲವೆಂಬ ಅಸಮಧಾನ, ಅತೃಪ್ತಿ, ಅನುವಾದಕನಲ್ಲಿ ಬಂದಲ್ಲಿ ಅದನ್ನು ಸ್ಪಷ್ಟಪಡಿಸಲಷ್ಟೇ ಒಂದು ಶಬ್ದವನ್ನೋ, ಒಂದು ವಾಕ್ಯವನ್ನೋ ಸೇರಿಸಿ ಅದಕ್ಕೆ ಮೆರಗು ನೀಡುವುದಷ್ಟೇ ಅವನ ಕೆಲಸ. ಅದಕ್ಕೆ ಹೋಮರನ ಇಲಿಯಡ್ ಕಾವ್ಯದ ಪೋಪ್ ಮಾಡಿರುವ ಭಾಷಾಂತರವನ್ನು ಉದಾಹರಣೆಯಾಗಿ ನೀಡಬಹುದು. ಹಾಗೆಯೇ ಶ್ರೀಯವರ ಥಾಮಸ್ ಹುಡ್‌ನ 'ದಿ ಬ್ರಿಡ್ಜ್ ಆಫ್ ಸೈಸ್'ನ ಕನ್ನಡ ಅನುವಾದ 'ದುಃಖಸೇತು'ವನ್ನೂ ಉದಾಹರಿಸಬಹುದು. ಇಲ್ಲಿ ವಿಸ್ತಾರಾನುವಾದವು ಉನ್ನತೀಕರಣಗೊಂಡಿರುವುದನ್ನು ನಾವು ಕಾಣುತ್ತೇವೆ.

**3. ರೂಪಾಂತರ ಅಥವಾ ರೂಪ ಸದೃಶಾನುವಾದ**

ಇಂಗ್ಲಿಷ್‌ನ Adaptation ಪದಕ್ಕೆ ಸಂವಾದಿಯಾದ ಪದ ರೂಪಾಂತರ. Adapt ಎಂದರೆ ಅಳವಡಿಸು, ಹೊಂದಿಸು, ಮಾರ್ಪಡಿಸು ಎಂಬಿತ್ಯಾದಿ ಅರ್ಥಗಳಿವೆ. ಅನುವಾದಕ ಮೂಲ ಆಶಯಗಳಿಗೆ ಚ್ಯುತಿಬಾರದಂತೆ, ಮೂಲ ಸ್ವರೂಪದಲ್ಲಿ ಬದಲಾವಣೆ ಮಾಡಿಕೊಳ್ಳಬಹುದು. ಒಂದು ಸಂಸ್ಕೃತಿಯ ಕೃತಿಗಳನ್ನು ಇನ್ನೊಂದು ಸಂಸ್ಕೃತಿಯ ಸನ್ನಿವೇಶಕ್ಕೆ ಹೊಂದಿಸಿಕೊಳ್ಳುವಾಗ ಅಲ್ಲಿಯ ಆಶಯವನ್ನು ಹೊರತುಪಡಿಸಿ ಉಳಿದೆಲ್ಲವುಗಳನ್ನು ಬದಲಾಯಿಸಬೇಕಾಗುತ್ತದೆ. ಆಗ ಅದೊಂದು ಸ್ವತಂತ್ರ ಕೃತಿಯೇ ಆಗುತ್ತದೆ. ಕನ್ನಡದಲ್ಲಿ ಮೊದಲು ಷೇಕ್ಸ್‌ಪಿಯರ್‌ನ ನಾಟಕಗಳು ಅನುವಾದಗೊಂಡಾಗ ಅವು ರೂಪಾಂತರಗಳಾಗಿ ಬೆಳಕಿಗೆ ಬಂದವು. ಒಥೆಲೋ- 'ಶೂರಸೇನನ ಚರಿತ್ರೆ'ಯಾಗಿ (ಬಸವಪ್ಪಶಾಸ್ತ್ರಿಗಳು), ಮ್ಯಾಕ್‌ಬೆತ್-'ಪ್ರತಾಪರುದ್ರದೇವ'ನಾಗಿ (ಎಂ. ಎಲ್. ಶ್ರೀಕಂಠೇಶಗೌಡ), ಮರ್ಚೆಂಟ್ ಆಫ್ ವೆನಿಸ್-'ಸುರತ ನಗರದ ಶ್ರೇಷ್ಠಿ' (ಕೆರೂರು ವಾಸುದೇವಾಚಾರ್ಯ) ಆಗಿ ರೂಪಗೊಂಡಿದೆ. ಅದೇ ರೀತಿ ಸೋಫೋಕ್ಲೀಸನ 'ಏಜಾಕ್ಸ್' ನಾಟಕ ಶ್ರೀಯವರ 'ಅಶ್ವತ್ಥಾಮನ್' ಆಗಿ ರೂಪಾಂತರಗೊಂಡಿದೆ.

ಯಾವುದೇ ಒಂದು ಕೃತಿಯನ್ನು ದೇಶಾತೀತ, ಕಾಲಾತೀತ ಆಶಯದೊಂದಿಗೆ ವಿಭಿನ್ನ ಸಂಸ್ಕೃತಿಯ ಜನತೆಗೆ ನೀಡಬೇಕಾದಾಗ ಈ ಪದ್ಧತಿಯನ್ನು ಅಳವಡಿಸಿಕೊಳ್ಳುವುದು ಅವಶ್ಯಕ. ಈ ರೂಪಾಂತರವು ಪ್ರತಿಭಾವಂತ ಅನುವಾದಕರ ಕೈಯಲ್ಲಿ ಶ್ರೇಷ್ಠ ಕೃತಿಗಳಾಗಿ ಹೊರಹೊಮ್ಮಬಲ್ಲವು. ಸಾಮಾನ್ಯರ ಕೈಯಲ್ಲಿ ನೀರಸ, ನಿರರ್ಥಕ ಶ್ರಮವಾಗಿ ಉಳಿಯುವುವು.

ರೂಪಾಂತರ ಅಥವಾ ರೂಪ ಸದೃಶಾನುವಾದ ಒಂದು ರೀತಿಯಲ್ಲಿ ಪ್ರತಿಸೃಷ್ಟಿ. ಮೂಲದ ಚೌಕಟ್ಟನ್ನು ಉಳಿಸಿಕೊಂಡು ಭಾವಾರ್ಥಗಳನ್ನು ಉಳಿಸಿಕೊಂಡೋ ಬದಲಾಯಿಸಿಯೋ ಪರಿಸರ ಧರ್ಮಗಳಿಗನುಗುಣವಾಗಿ ಮೂಲದ ಆಭಾಸವೆನ್ನುವಂತ ಕೃತಿ ರಚಿಸುವ ಕ್ರಿಯೆ ಇದು. ಮೂಲದ ಸ್ವರೂಪವನ್ನು ತನ್ನ ಅನುಕೂಲಕ್ಕೆ ತಕ್ಕ ಹಾಗೆ ಹಿಗ್ಗಿಸುವ, ಕುಗ್ಗಿಸುವ, ಬಗ್ಗಿಸುವ ಸ್ವಾತಂತ್ರ್ಯ ಅನುವಾದಕನಿಗೆ ಇಲ್ಲಿ ಉಂಟು. ಮೂಲ ವಾಲ್ಮೀಕಿ ರಾಮಾಯಣ ಹಾಗೂ ವ್ಯಾಸ ಭಾರತಗಳು ವಿವಿಧ ಭಾಷೆಗಳಲ್ಲಿ ರೂಪಾಂತರಗೊಂಡ ಕ್ರಮವನ್ನು ಇಲ್ಲಿ ಉದಾಹರಿಸಬಹುದು. ಫ್ರಾನ್ಸಿಸ್ ಥಾಮ್ಸನ್‌ನ 'Hound of Heavan' ಅನ್ನು ಕುವೆಂಪುರವರು 'ದೇವಕೇತು' ಎಂಬ ಹೆಸರಿನಲ್ಲಿ ರೂಪಾಂತರಿಸಿದ್ದಾರೆ. ಎರಡೂ ಕೃತಿಗಳು ಸಮಾನಾಂತರವಾಗಿ ಸಾಗುವುದು ಇದರ ವಿಶೇಷ. ಇದರಲ್ಲಿ ಮೂಲ ಕವಿಯ ಸಾಮಗ್ರಿಯ ಜೊತೆಗೆ ಅನುವಾದಕನ ಸ್ವಂತ ಪ್ರತಿಭಾ ಸಂಪತ್ತಿನ ಅಂಶವೂ ಸೇರಿದೆ. ಇದರಿಂದಾಗಿ ಮೂಲದಲ್ಲಿ ಕಾಣದ ಒಂದು ನವೀನ ಸೌಂದರ್ಯ ಇಲ್ಲಿ ಶೋಭಿಸುತ್ತದೆ. ಈ ಬಗೆಯ ಪ್ರತಿಭಾಪೂರ್ಣ ಅನುವಾದವನ್ನು ರೂಪಾಂತರ ಅಥವಾ ರೂಪಸದೃಶಾನುವಾದವೆಂದಲ್ಲದೆ ಇದನ್ನು ವಿಕಾಸಾನುವಾದವೆಂದು ಕರೆಯಬಹುದು.

4. ಭಾವಾನುವಾದ

ಇದು ಇಂಗ್ಲಿಷ್‌ನ Free translation ಅಥವಾ paraphrase ಎಂಬುದಕ್ಕೆ ಸಂವಾದಿಯಾದ ಪದ. ಇದು ಪದಶಃ ಅನುವಾದಕ್ಕೆ ಪೂರ್ಣವಾಗಿ ಹೊರತಾಗಿ ಮೂಲಭಾವದ ಮೇಲೆ ಆಧಾರಿತವಾದುದು. ಇದನ್ನು ತಾತ್ಪರ್ಯವೆಂತಲೂ ಕರೆಯಬಹುದು. ಭಾವ ಮೂರ್ತೀಕರಣವು ಸ್ವಂತ ಭಾಷೆಯಲ್ಲಾಗಲೀ ಪರಭಾಷೆಯಲ್ಲಾಗಲೀ ಗದ್ಯವು ಪದ್ಯದ ರೂಪದಲ್ಲಿ ಪದ್ಯವು ಗದ್ಯದ ರೂಪದಲ್ಲಿಯಾಗಲೀ ಹೊರಹೊಮ್ಮಬಹುದು. ಇದರ ಮುಖ್ಯ ಉದ್ದೇಶ ಮೂಲಕೃತಿಯ ಭಾವಾರ್ಥ ಓದುಗನಿಗೆ ಸುಲಭವಾಗಿ ಗ್ರಾಹ್ಯವಾಗಬೇಕೆಂಬುದು. ಇಲ್ಲಿ ವಿವರಣೆಗಳಿಗೆ ಅವಕಾಶವಿಲ್ಲವಾದರೂ ಗಾದೆ ನುಡಿಗಟ್ಟು ಪೂರ್ವಕಥಾ ಸೂಚನೆಗಳನ್ನು ಹಿತಮಿತವಾಗಿ ವಿಶದೀಕರಿಸಬಹುದು. ಭಾವಾನುವಾದದಲ್ಲಿ ಮೂಲಕೃತಿಯ ಭಾವ ಅರ್ಥ ಸಂಪತ್ತಿಗೆ ಹೆಚ್ಚು ಗಮನಕೊಡುವುದರಿಂದ ಅನುವಾದಿತ ಕೃತಿ ಮೂಲಕೃತಿಯಷ್ಟೇ ಸಹಜವಾಗಿರುತ್ತದೆ. ಕನ್ನಡದಲ್ಲಿ ಭಾವಾನುವಾದಕ್ಕೆ ಉತ್ತಮ ಉದಾಹರಣೆ - ಎ. ಆರ್. ಕೃಷ್ಣಶಾಸ್ತ್ರೀಗಳ 'ವಚನ ಭಾರತ', ತೀ.ನಂ. ಶ್ರೀ.ಯವರ 'ಮುದ್ರಾರಾಕಸ' ಪ್ರೊ. ದೇಜಗೌರವರ 'ಶ್ರೀ ರಾಮಾಯಣ ದರ್ಶನಂ ವಚನಚಂದ್ರಿಕೆ'. ಭಾವಾನುವಾದದಲ್ಲಿ ಶಬ್ದ, ವಾಕ್ಯಾಂಗ, ವಾಕ್ಯಗಳ ಬದಲಾಗಿ ಭಾವ ಅರ್ಥ ವಿಚಾರಗಳ ಕಡೆ ಲಕ್ಷ್ಯ ಕೊಡಲಾಗುವುದು. ಈ ರೀತಿಯ ಅನುವಾದಕ್ಕೆ ಮುಖ್ಯ ಕಾರಣಗಳು:

1. ಅನುವಾದಕ ಮೂಲ ಸುದೀರ್ಘ ಕೃತಿಯನ್ನು ಅಷ್ಟೇ ವಿವರವಾಗಿ ಅನುವಾದಿಸುವುದು ಅನಾವಶ್ಯಕವೆಂದು ಭಾವಿಸುವುದು (ಉದಾ : ಶ್ರೀ ರಾಮಾಯಣದರ್ಶನಂ ವಚನಚಂದ್ರಿಕೆ, ಮುದ್ರಾರಾಕ್ಷಸ, ವಚನಭಾರತ)

2. ಮೂಲಕೃತಿ ಅನುವಾದಕ್ಕೆ ನಿಲುಕದಿರುವುದು (ಉದಾ : ಬಾಣನ 'ಕಾದಂಬರಿ' -ಶ್ರೀ ಗ. ಮ. ತುರಮರಿಯವರ 'ಕರ್ನಾಟಕ ಕಾದಂಬರಿ', ರಾಜಾಜಿಯವರ ಇಂಗ್ಲಿಷಿನ 'ರಾಮಾಯಣ', 'ಮಹಾಭಾರತ') ಹಾಗೂ

3. ಮೂಲಕೃತಿಯ ಭಾಷೆ ಕ್ಲಿಷ್ಟವಾಗಿದ್ದಲ್ಲಿ ಆ ಭಾಷೆಯಲ್ಲಿಯೇ ಸರಳೀಕರಣಗೊಳಿಸುವುದು (ಉದಾ: ಚಾರ್ಲ್ಸ್ ಲ್ಯಾಂಬ್‌ನ Tales from Shakespeares, ದೇಜಗೌರವರ ಶ್ರೀ ರಾಮಾಯಣದರ್ಶನಂ ವಚನಚಂದ್ರಿಕೆ)

ಇಷ್ಟಾದರೂ ಈ ಪ್ರಕಾರದ ಭಾಷಾಂತರವನ್ನು ಮೂಲಕ್ಕೆ ದ್ರೋಹ ಬಗೆದಂತೆ ಎಂದು ಟೀಕಿಸುವವರಿದ್ದಾರೆ. ಓದುಗರ ಅಭಿಲಾಷೆಯಂತೆ ಸಂಗ್ರಹಿಸಿ ಹೇಳುವುದರಲ್ಲಿ ಯಾವ ತಪ್ಪೂ ಇಲ್ಲ. ಅಲ್ಲಿ ವ್ಯಕ್ತವಾಗುವ ಸಮಸ್ತಭಾವವನ್ನು ಸಂಪೂರ್ಣವಾಗಿ ಹಿಡಿದಿಟ್ಟು ಪ್ರತಿಬಿಂಬಿಸಿ ಮೂಲಕೃತಿಯ ಹೃದಯವನ್ನು ತೆರೆದಿಟ್ಟಾಗ ಭಾಷಾಂತರಕಾರನ ಶ್ರಮ ಸಾರ್ಥಕವಾಗುತ್ತದೆ.

**5. ನಿಕಟಾನುವಾದ**

ಶೈಲಿ, ವಸ್ತು, ರೀತಿಯಲ್ಲಿ ಅನುವಾದ ಮೂಲಕ್ಕೆ ಆದಷ್ಟು ನಿಕಟವಾಗಿದ್ದಲ್ಲಿ ಅದು ನಿಕಟಾನುವಾದವೆನಿಸುತ್ತದೆ. ಅದು ಶಬ್ದಾನುವಾದ ಹಾಗೂ ವಿಸ್ತಾರಾನುವಾದದ ಮಾಧ್ಯಮ ಮಾರ್ಗ. ಶಬ್ದಾನುವಾದ ಮೂಲದ ಹೆಜ್ಜೆಯ ಮೇಲೆ ನಡೆದರೆ, ವಿಸ್ತಾರಾನುವಾದ ಬಹುದೂರಕ್ಕೆ ನಡೆಯುತ್ತದೆ. ಆದರೆ ನಿಕಟಾನುವಾದ ಅದರ ಬೆನ್ನಹಿಂದೆಯೇ ಸಾಗುತ್ತದೆ. ಅನುವಾದವು ಮೂಲದ ಪೂರ್ಣ ಪ್ರತಿಬಿಂಬವಾದಲ್ಲಿ ಮಾತ್ರ ನಿಕಟಾನುವಾದವೆಂದೆನಿಸಿಕೊಳ್ಳುತ್ತದೆ. ಲೀಲಾ ಶಕುನ 'ಶ್ರೀ ಕೃಷ್ಣ ಕರ್ಣಾಮೃತ'ದ ರುದ್ರಭಟ್ಟನ ಕನ್ನಡ ಅನುವಾದಕ್ಕೂ, ಮಾಸ್ತಿಯವರ ಗದ್ಯಾನುವಾದಕ್ಕೂ ಹೋಲಿಸಿದರೆ ಮಾಸ್ತಿಯವರ ಅನುವಾದ ನಿಕಟಾನುವಾದವಾಗುತ್ತದೆ. ಕೆಲವೊಮ್ಮೆ ಎಷ್ಟೇ ನಿಕಟವಾಗಿ ಮೂಲವನ್ನು ಅನುಸರಿಸಿದರೂ ಭಾವವನ್ನು ಸೆರೆಹಿಡಿಯಲು ಅನುವಾದಕನ ಸ್ವಂತ ಪ್ರತಿಭೆ ಕೆಲಸ ಮಾಡಬೇಕಾಗುತ್ತದೆ.

**6. ಸಂಗ್ರಹಾನುವಾದ**

ಇಂಗ್ಲಿಷ್‌ನಲ್ಲಿ ಇದನ್ನು Epitomy, Precis, Synopsis, Summary, Condensation, Abridgement ಎಂದು ಕರೆಯುತ್ತಾರೆ. ಇಲ್ಲಿ ಸಂಗ್ರಹವೇ ಪ್ರಧಾನ. ಮೂಲದ ಸಮಸ್ತ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಅದರ ತಿರುಳನ್ನು ಮಾತ್ರ ಸಂಗ್ರಹಿಸುವುದು. "ಮೂಲ ಕೃತಿಯ ಕಥೆಯು ಒಟ್ಟಂದಕ್ಕೆ ಕೊರತೆಯಾಗದಂತೆ, ಪಾತ್ರಗಳ ವ್ಯಕ್ತಿತ್ವಕ್ಕೆ ಭಂಗ ಬರದಂತೆ ಸಮಗ್ರತೆಗೆ ಲೋಪವಾಗದಂತೆ ಅನವಶ್ಯವೆಂದು ತೋರಬಹುದಾದ ಅಥವಾ ಕಾವ್ಯಕ್ಕೆ ಭಾರವಾಗುವಂತಹ ವರ್ಣನೆ ಸನ್ನಿವೇಶಗಳನ್ನು ಅಲಂಕಾರಗಳನ್ನು ಉಪಕಥೆಗಳನ್ನು ತ್ಯಜಿಸಿ,[51] ಉಪಯುಕ್ತ ಭಾಗಗಳನ್ನು ಸಂಗ್ರಹಿಸಿ ಮಾಡುವ ಅನುವಾದವೇ ಸಂಗ್ರಹಾನುವಾದ. ಉದಾ : ಎ. ಆರ್. ಕೃಷ್ಣಶಾಸ್ತ್ರೀಗಳ 'ಕಥಾಮೃತ' ಡಾ: ಎಲ್. ಗುಂಡಪ್ಪನವರ ಕುಮಾರವ್ಯಾಸ ಭಾರತ, ರಂ. ಶ್ರೀ ಮುಗಳಿಯವರು ಭಾಷಾಂತರಿಸಿದ ಅರವಿಂದರ 'ಸಾವಿತ್ರಿ.'

ಸಂಗ್ರಹಾನುವಾದದಲ್ಲಿ ಮುಖ್ಯವಾದುದು ಶಬ್ದಗಳ ಹಾಗೂ ಅಗತ್ಯ ಅಂಶಗಳ ಔಚಿತ್ಯಪೂರ್ಣ ಆಯ್ಕೆ. ಸಂಗ್ರಹಾನುವಾದ ಸುಸಂಬಂದ್ಧವೂ ಸಂಪೂರ್ಣವೂ ಸ್ವಯಂಪೂರ್ಣವೂ ಆದ ಘಟಕವಾಗಬೇಕು. ಇಲ್ಲಿ ಸುತ್ತು ಬಳಸಿದ ಹೇಳಿಕೆಗಾಗಲೀ, ಭಾವವಿಸ್ತರಕ್ಕಾಗಲೀ, ಆಲಂಕಾರಿಕ ವಿಭವಗಳಿಗಾಗಲೀ, ಪುನರುಕ್ತಿಗಾಗಲೀ, ನಿರ್ವಾಯೋಕ್ತಿಗಾಗಲೀ ಎಡೆ ಇಲ್ಲ[52] ಈ ಅನುವಾದದ ಪ್ರಕಾರ ಕಲಿಯದವರಿಗೆ ಕಾಮಧೇನು (ದೇಜಗೌ) ಇದು ಶ್ರದ್ಧೆಯಿಂದ, ವ್ಯವಸ್ಥಿತವಾಗಿ, ವೈಜ್ಞಾನಿಕವಾಗಿ ನಿರ್ವಹಿಸಬೇಕಾದ ಕಾರ್ಯ Charles Lambನ Tales from Shakeshpere ಇದಕ್ಕೊಂದು ಉದಾಹರಣೆ. ಸಂಗ್ರಹಾನುವಾದ ಭಾವಾನುವಾದಕ್ಕಿಂತ ಭಿನ್ನವಾದ ಭಾಷಾಂತರ ಕ್ರಿಯೆ. ಭಾವಾನುವಾದದಲ್ಲಿ ಯಾವುದೇ ವಿವರಣೆಯನ್ನು ಕೈಬಿಡುವಂತಿಲ್ಲ. ಇಲ್ಲಿ ಮೂಲವನ್ನು ಸಾರವತ್ತಾಗಿ ಸಂಗ್ರಹಿಸುವುದೇ ಮುಖ್ಯ ಕ್ರಿಯೆ. ಆಧುನಿಕ ಜಗತ್ತಿನಲ್ಲಿ ಸಮಯಾಭಾವ ಎದುರಿಸುತ್ತಿರುವ ಓದುಗನಿಗೆ ಸಂಗ್ರಹಾನುವಾದ ಒಂದು ವರವೇ ಸರಿ.

**7. ಸರಳಾನುವಾದ**

ಇಂಗ್ಲಿಷಿನಲ್ಲಿ ಇದನ್ನು Basic Translation ಎನ್ನುತ್ತಾರೆ. ಮೂಲವಸ್ತು ರೀತಿ ಶೈಲಿಗಳನ್ನು ಆದಷ್ಟು ಸರಳವಾಗಿ, ಸಾಮಾನ್ಯರಿಗೂ ಅರ್ಥವಾಗುವಂತೆ ಹೇಳುವ ಪರಿ. ಭಾವಾರ್ಥ ಸಂಗ್ರಹಕ್ಕೆ ಅಡ್ಡಿಯಾಗುವ ಶಬ್ದಗಳನ್ನು ಕೈಬಿಟ್ಟು ತತ್ಸಮವಾದ ಸರಳ ಪದಗಳ ಬಳಕೆ ಇಲ್ಲಿ ನಡೆಯುತ್ತದೆ. ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು ಶೇಕ್ಸ್‌ಪಿಯರ್‌ನ 'ಕಿಂಗ್ ಲಿಯರ್' ನಾಟಕವನ್ನು 'ಲಿಯರ್ ಮಹಾಶಯ'ವೆಂದು ಸರಳಾನುವಾದ ಮಾಡಿದ್ದಾರೆ. ತುಂಬಾ ಸಣ್ಣ ವಾಕ್ಯ ಹಾಗೂ ಸರಳವಾದ ಪದ ಪ್ರಯೋಗದಿಂದ ಈ ನಾಟಕ ಓದುಗರ ಮೇಲೆ ಪರಿಣಾಮಕಾರಿಯಾದ ಪ್ರಭಾವ ಬೀರುತ್ತದೆ.

ವರ್ಗದಿಂದ ವರ್ಗಕ್ಕೆ, ವಯೋಮಾನದಿಂದ ವಯೋಮಾನಕ್ಕೆ, ಸ್ತರದಿಂದ ಸ್ತರಕ್ಕೆ ಶಿಷ್ಟ ಸಾಹಿತ್ಯವನ್ನು ಪರಿವರ್ತಿಸುವ ಕಾರ್ಯವೇ ಸರಳಾನುವಾದ. ಮೇಧಾವಿಯಿಂದ ಸಾಮಾನ್ಯನಿಗೆ ಜ್ಞಾನ ಹರಿದು ಬರಲು ಸರಳಾನುವಾದ ಸಹಾಯ ಮಾಡುತ್ತದೆ. ಅಬ್ರಹಾಂ ಲಿಂಕನ್ನನ 'ಗೆಟ್ಟಿಸ್ ಬರ್ಗ್' ಭಾಷಣದ ಸರಳಾನುವಾದವನ್ನು ಸಿ.ಕೆ. ಓಗ್ಡನ್ ಮಾಡಿದ್ದಾನೆ. ಸರಳಾನುವಾದವು ಪರಿಣಾಮದ ದೃಷ್ಟಿಯಿಂದ ಮೂಲಕ್ಕೆ ಸದೃಶವಾಗಿ ಪರಿಣಮಿಸುವುದು. ಇಲ್ಲಿ ಸರಳತೆಗೆ ಅವಕಾಶವೇ ಹೊರತು ಸ್ವೇಚ್ಛೆಗೆ ಅವಕಾಶವಿಲ್ಲ. ಇಂಗ್ಲಿಷ್‌ನಲ್ಲಿ ಶೇಕ್ಸ್‌ಪಿಯರ್, ಡಾಂಟೆ, ಹೋಮರ್ ಮುಂತಾದ ಮಹಾಕವಿಗಳ ಕೃತಿಗಳು ಸರಳಾನುವಾದಗೊಂಡಿವೆ. ಕನ್ನಡದಲ್ಲೂ ಇಂತಹ ಕೃತಿಗಳು ಸಾಕಷ್ಟಿವೆ.

**8. ಅರ್ಥಾನುವಾದ**

ಈ ಪ್ರಕಾರವನ್ನು ಇಂಗ್ಲಿಷಿನಲ್ಲಿ vertical translation ಅಥವಾ sense translation ಎಂದು ಕರೆಯುತ್ತಾರೆ. ಇಲ್ಲಿ ಅರ್ಥದ ಕಡೆ ಹೆಚ್ಚು ಗಮನವೀಡಲಾಗುತ್ತದೆ. ಶಬ್ದ ಶರೀರವಾದರೆ ಅರ್ಥ ಅದರ ಆತ್ಮ. ಒಂದು ಶಬ್ದಕ್ಕೆ ಅನೇಕಾರ್ಥಗಳು ಇರುವ ಸಂಭವ ಇರುವುದರಿಂದ ಯಾವ ಅರ್ಥದಲ್ಲಿ ಮೂಲದಲ್ಲಿ ಹೇಳಲಾಗಿದೆ ಎಂದು ನೋಡಿಕೊಳ್ಳಬೇಕಾಗುತ್ತದೆ. ಸ್ವಲ್ಪ ತಪ್ಪಿದಲ್ಲಿ ಅಪಾರ್ಥವಾಗುವ ಸಂಭವ ಇದೆ.

ಎಸ್.ಪಿ. ವೈನ್‌ಬರ್ಗ್ ಇದರ ಕುರಿತು ಹೀಗೆ ಹೇಳಿದ್ದಾನೆ. 'Translation of Sense without referenc to fooling tone, purpose is vertical translation' ಅಂದರೆ ಭಾವ, ಧ್ವನಿ, ಆಶಯಗಳತ್ತ ಗಮನ ಕೊಡದ ಮಾಡುವ ಭಾಷಾಂತರವೇ ಅರ್ಥಾನುವಾದವೆನ್ನಲಾಗಿದೆ. ಐ.ಎ. ರಿಚರ್ಡ್ಸ್ ಹೇಳಿರುವಂತೆ ''ಯಾವುದೇ ಶಬ್ದದ ಸಮಷ್ಟ್ಯರ್ಥ (Meaning) ನಾಲ್ಕು ಅಂಶಗಳನ್ನು ಆಧರಿಸಿರುತ್ತದೆ. ಅರ್ಥ (sence) ಭಾವ (feeling) ಕಾಕು ಅಥವಾ ಧ್ವನಿ (tone ಮತ್ತು ಆಶಯ (Intention) ಇವುಗಳಿದ್ದಾಗ ಮಾತ್ರ ಅರ್ಥಾನುವಾದಕ್ಕೆ ಬೆಲೆ ಬರುತ್ತದೆ. ಅರ್ಥಾನುವಾದ ಸರಳಾನುವಾದವಲ್ಲ. ಇಲ್ಲಿ ಅಭಿವ್ಯಕ್ತಿಯ ಹಿನ್ನೆಲೆ ಮತ್ತು ಆಶಯಗಳನ್ನು ಅರ್ಥ ಮಾಡಿಕೊಳ್ಳದೇ ಅನುವಾದ ಸಾಧ್ಯವಿಲ್ಲ. ಒಂದು ಶಬ್ದಕ್ಕೆ ಇರುವ ಅನೇಕಾರ್ಥಗಳಲ್ಲಿ ಸೂಕ್ತ ಅರ್ಥ ಗ್ರಹಿಕೆಯಾಗಬೇಕು. ಕುವೆಂಪುರವರ ಶ್ರೀ ರಾಮಾಯಣ ದರ್ಶನಂನಲ್ಲಿ 'ಕವಿಕೃತದರ್ಶನ'ದ ಕೊನೆಯಿಂದ ಎರಡನೇ ಸಾಲಿನಲ್ಲಿ 'ಸುಟ್ಟುರೆ' ಎಂಬ ಶಬ್ದ ಬರುತ್ತದೆ. ಇದರರ್ಥ 'ಸುಂಟರಗಾಳಿ'. ಇದನ್ನು ಹಿಂದಿ ಅನುವಾದದಲ್ಲಿ ಸುಟ್ಟ (ತಪ್ತ) 'ಉರೆ' (ಭೂಮಿ) ಸುಟ್ಟುರೆ ಎಂದರೆ 'ತಪ್ತಭೂಮಿ' ಎಂದು ಅರ್ಥೈಸಲಾಗಿದೆ. ಇದು ಅನರ್ಥಕ್ಕೆ ದಾರಿ ಮಾಡಿಕೊಟ್ಟಿದೆ. ಆದ್ದರಿಂದ ಅನುವಾದಕ ಸರಿಯಾದ ಅರ್ಥವನ್ನು ಗ್ರಹಿಸುವುದು ಅಗತ್ಯ.

**9. ಅನುಕರಣ ಛಾಯಾನುವಾದ**

ಪ್ರಕೃತಿ ಸೌಂದರ್ಯ ಒಬ್ಬ ಕಲಾವಿದನಿಗೆ ಕುಂಚ ಹಿಡಿಯಲು ಸ್ಫೂರ್ತಿ ನೀಡಿದ ಹಾಗೆ, ಸೃಷ್ಟಿಯ ವಿವಿಧ ಪ್ರಕಾರಗಳು ಕವಿಗೆ ಸ್ಫೂರ್ತಿ ನೀಡಿ ಕೃತಿರಚನೆಗೆ ಸಹಾಯ ಮಾಡುತ್ತವೆ. ಹಾಗೆಯೇ ಒಬ್ಬ ಕವಿ ಇನ್ನೊಬ್ಬ ಕವಿಗೆ ಸ್ಫೂರ್ತಿ ನೀಡಬಹುದು. ಒಂದು ಗುಲಾಬಿ ಹೂವಿನ ಬಗ್ಗೆ ಒಬ್ಬೊಬ್ಬ ಕವಿ ಒಂದೊಂದು ರೀತಿಯಲ್ಲಿ ವಿವರಿಸಬಹುದು. ಉದಾ: ಬ್ರೌನಿಂಗ್ ಕವಿಯ 'The Pied Piper of Hamelin', ಕುವೆಂಪುರವರಿಗೆ 'ಬೊಮ್ಮನಹಳ್ಳಿಯ ಕಿಂದರಜೋಗಿ' ಬರೆಯಲು ಸ್ಫೂರ್ತಿ ನೀಡಿತು. ಇದು ಅನುಕರಣ ಛಾಯಾನುವಾದ. ಸೃಜನಶೀಲ ಕಲಾಕಾರನಿಗಾಗಲೀ, ಶಿಲ್ಪಿಗಾಗಲೀ ಇರುವ ಸ್ವಾತಂತ್ರ್ಯ ಛಾಯಾಗ್ರಾಹಕನಿಗಿಲ್ಲ. ಛಾಯಾಗ್ರಾಹಕ ಇದ್ದುದನ್ನು ಇದ್ದ ಹಾಗೆ ಸಾದರಪಡಿಸಬೇಕು. ಶಿಲ್ಪಿ ತನ್ನತನವನ್ನು ತನ್ನ ಕೃತಿಯಲ್ಲಿ ತೊಡಗಿಸಬಹುದು. ಕುವೆಂಪುರವರ 'ರಕ್ತಾಕ್ಷಿ' ಶೇಕ್ಸ್‌ಪಿಯರ್‌ನ 'ಹ್ಯಾಮ್ಲೆಟ್' ನಾಟಕದಿಂದ ಸ್ಫೂರ್ತಿ ಪಡೆದು ಬರೆದದ್ದು. ಇದು ಅನುಕರಣ ಛಾಯಾನುವಾದಕ್ಕೆ ಉತ್ತಮ ಉದಾಹರಣೆ.

**10. ಪರೋಕ್ಷಾನುವಾದ**

ಮೂಲಕೃತಿಯ ಗೊಡವೆಗೆ ಹೋಗದೆ ಅನುವಾದಿತ ಕೃತಿಗಳನ್ನು ಆಧಾರವಾಗಿಟ್ಟುಕೊಂಡು ಮತ್ತೊಂದು ಭಾಷೆಗೆ ಅನುವಾದ ಮಾಡುವ ಕ್ರಮವನ್ನು ಪರೋಕ್ಷಾನುವಾದವೆಂದು ಹೆಸರಿಸಬಹುದು. ಇಲ್ಲಿ ಮಧ್ಯವರ್ತಿ ಭಾಷೆ ಮುಖ್ಯ. ಅದರ ವಸ್ತು, ರೀತಿ, ಶೈಲಿ, ಅನುವಾದಕನ ದೃಷ್ಟಿಯಲ್ಲಿರುತ್ತದೆ. ಅವನು ಮೂಲವನ್ನು ಓದಿರಲೇಬೇಕೆಂದಿಲ್ಲ. ಉಮರ ಖಯ್ಯಾಮನು ಪರ್ಶಿಯನ್ ಭಾಷೆಯಲ್ಲಿ ರಚಿಸಿದ 'ರುಬಾಯತ್' ಫಿಟ್‌ಜೆರಾಲ್ಡ್‌ರಿಂದ ಇಂಗ್ಲಿಷಿಗೆ ತರ್ಜುಮೆಗೊಂಡು ಅದರ ಆಧಾರದ ಮೇಲೆ ಡಿವಿಜಿಯವರು 'ಉಮರನ ಒಸಗೆ'ಯಾಗಿ ಕನ್ನಡೀಕರಿಸಿದ್ದಾರೆ. ಹಾಗೆಯೇ ಬೇಂದ್ರೆಯವರ

'ಮೇಘದೂತ' ಕೂಡ ಒಂದು ರೀತಿಯಲ್ಲಿ ಪರೋಕ್ಷಾನುವಾದವೇ. ಕೆಲವೊಮ್ಮೆ ಈ ಪರೋಕ್ಷಾನುವಾದ ಮೂಲಕ್ಕಿಂತಲ ಹೆಚ್ಚು ಸೊಗಸಾಗಿರುವ ಸಾಧ್ಯತೆ ಇದೆ. ಲ್ಯಾಟಿನ್ ಅಮೆರಿಕೆಯ ಕವಿ ಪ್ಯಾಬ್ಲೊನೆರುಡರವರ ಕವಿತೆ Religion in th East ಆಗಿ ಇಂಗ್ಲಿಷಿಗೆ ಅನುವಾದಗೊಂಡಿದ್ದು ಇದನ್ನು ಕವಿ ನಿಸಾರ್ ಅಹಮದ್‌ರವರು 'ಎಷ್ಟೊಂದು ದೇವರುಗಳ ಎಂದು ಕನ್ನಡದಲ್ಲಿ ಅನುವಾದಿಸಿದ್ದಾರೆ. ಗಯಟೆ ಮಹಾಕವಿಯ 'ಫಾಸ್ಟ್' ಮೂಲ ಜರ್ಮನ್‌ನಲ್ಲಿ ರಚಿತವಾಗಿದ್ದು ಜೆರಾಲ್ಡ್‌ಡ ನರ್ವಾಲ್ ಫ್ರೆಂಚ್ ಭಾಷೆಗೂ ನಂತರ ಇಂಗ್ಲಿಷಿಗೂ ಭಾಷಾಂತರಗೊಂಡಿವೆ. ಕೆಲವೊಮ್ಮೆ ಒಬ್ಬನೇ ಕವಿಯ ಪದ್ಯ ಹಲವು ಭಾಷೆಗಳ ಮೂಲಕ ಮೂಲಭಾಷೆಗೆ ಮರಳಿ ಬರುವುದುಂಟು. ಆಗ ಅದರ ಸ್ವರೂಪವೇ ಬದಲಾಗಿರುತ್ತದೆ ಕವಿ ರವೀಂದ್ರರ 'ಮಾನಸ ಪ್ರತಿಮಾ' ಎಂಬ ಬಂಗಾಳಿ ಕವಿತೆಯನ್ನು ಕವಿಯೇ ಆಂಗ್ಲೀಕರಿಸಿದ್ದಾರೆ. ಇದನ್ನು ಪ್ಯಾಬ್ಲೋನೆರುಡ ಸ್ಪಾನಿಷ್ ಭಾಷೆಗೂ ಮರಿವನ್ ಎನ್ನುವವನು ಇದನ್ನು ಪುನಃ ಇಂಗ್ಲಿಷಿಗೂ ಭಾಷಾಂತರಿಸಿದ್ದಾನೆ. ಇವುಗಳನ್ನು ಸೂಕ್ಷ್ಮವಾ ನೋಡಿದಾಗ ಭಾಷಾಂತರ ಎಷ್ಟಾದರೂ ಉತ್ಸವ ಮೂರ್ತಿ, ಮೂಲ ವಿಗ್ರಹವಾಗಲಾರದು ಎಂದು ಮನವರಿ ಯಾಗುತ್ತದೆ.

**11. ಪುನರ್‌ಲೇಖನ**

ಒಮ್ಮೆ ಬರೆದುದನ್ನು ಮತ್ತೊಮ್ಮೆ ಬರೆದು ತೆಗೆಯುವುದೇ ಪುನರ್ಲೇಖನ. ಕನ್ನಡದ ಅನೇಕ ಕೃತಿಗಳು ಪುನರ್ಲೇಖನದ ಫಲ. ಸಂಸ್ಕೃತದಲ್ಲಿದ್ದ ಮಹಾಭಾರತ ಕನ್ನಡಿಗರಿಗೂ ತಿಳಿಯಲಿ ಎಂದು ಪಂಪನಂಥವರು ಕನ್ನಡಿಸಿದರು. ಪುನರ್ಲೇಖನದಿಂದ ಒಂದು ಕೃತಿಯ ಮೌಲ್ಯ ವ್ಯವಸ್ಥೆಯಲ್ಲಿ ಆಗುವ ಬದಲಾವಣೆಯನ್ನು ಹಾಗೂ ಭಿನ್ನತೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಪುನರ್ಲೇಖನವನ್ನು ಸೃಷ್ಟಿಶಕ್ತಿಯುಳ್ಳ ಪ್ರತಿಭೆ (Creative Imagination) ಎನ್ನುವುದಕ್ಕಿಂತ ಸೃಷ್ಟಿ ಶಕ್ತಿಗೆ ಪ್ರತಿಸ್ಪಂದನ ಕೊಡಬಲ್ಲ ಪ್ರತಿಭೆ (Responsive Imagination) ಎನ್ನಬಹುದು. ಕನ್ನಡದಲ್ಲಿ ಪುನರ್ಲೇಖನದ ಹಿಂದಿರುವ ಉದ್ದೇಶಗಳು ಎರಡು. ಮೊದಲನೆಯದು ಹೊಸಗನ್ನಡ ಸಾಹಿತ್ಯದಲ್ಲಿ ಅಭಿಜಾತತೆ ಮತ್ತು ಔನ್ನತ್ಯ- ಈ ಗುಣಗಳು ಬರಬೇಕೆಂಬುದು. ಎರಡನೆಯದಾಗಿ ಪರದೇಶಗಳ ಸಾಹಿತ್ಯದ ತತ್ವವನ್ನು ತೆಗೆದುಕೊಂಡು ಕನ್ನಡ ಸಾಹಿತ್ಯವನ್ನು ಉದ್ದೀಪನಗೊಳಿಸುವುದು. ಇದಕ್ಕಾಗಿ ಶ್ರೀಯವರು ಪಂಪ, ರನ್ನರಿಬ್ಬರ ಪ್ರೇರಣೆ ಪಡೆದು ಇಂಗ್ಲಿಷ್ ಹಾಗೂ ಗ್ರೀಕ್ ಸಾಹಿತ್ಯಗಳ ನೆರವನ್ನು ಪಡೆದು ಈ ಕಾರ್ಯವನ್ನು ಸಾಧಿಸಿದರು. ಅವರ 'ಗದಾಯುದ್ಧಂ' ನಾಟಕ ಪುನರ್ಲೇಖನಕ್ಕೆ ಒಂದು ಉದಾಹರಣೆ. ಅವರ 'ಅಶ್ವತ್ಥಾಮನ್' ಗ್ರೀಕ್ ನಾಟಕ 'ಅಯಾಸ್'ನ ಭಾಷಾಂತರವಾಗಿದ್ದರೂ ನಮ್ಮ ಉಳಿದ ಸಾಮಾನ್ಯ ಭಾಷಾಂತರಗಳಂತೆ ಇದನ್ನು ನೋಡಲು ಸಾಧ್ಯವಿಲ್ಲ. ಮಹಾಭಾರತದ ಕತೆಗೆ ಒಗ್ಗುವಂತೆ ಗ್ರೀಕ್ ನಾಟಕದಲ್ಲಿನ ಅಂಶವನ್ನು ಕನ್ನಡಕ್ಕೆ ತಂದರು.

## ಈ. ವ್ಯಾಪ್ತಿ

ಅನುವಾದದ ವ್ಯಾಪ್ತಿ ವಿಶಾಲವಾದುದು. "ಸರ್ವಭಾಷಾಭ್ಯುದಯವನ್ನು ಸಾಧಿಸಿ ಭಾಷೆಗಳ ಸಮನ್ವಯ ಸಂಬಂಧವನ್ನು ಕುದುರಿಸಿ ಭಾವೈಕ್ಯ ರಾಷ್ಟ್ರೈಕ್ಯಗಳನ್ನು ಸಂಘಟಿಸುವ ಸಮೀಚೀನ ತಂತ್ರವೆಂದರೆ ಭಾಷಾಂತರ ಕಲೆ. ಬೇರೆ ಬೇರೆ

ಭಾಷೆಗಳನ್ನಾಡುವ ವಿವಿಧಾಚಾರ ಸಂಸ್ಕೃತಿಗಳನ್ನು ಬಯಸುವ ಭಿನ್ನಭಿನ್ನ ಸಂಸ್ಕೃತಿ ನಾಗರೀಕತೆಗಳಲ್ಲಿ ವ್ಯವಹರಿಸುವ ಜನ ಭಾವ ಸಾಮರಸ್ಯವನ್ನು ಸಾಧಿಸಿ ವಿಚಾರ ಸ್ವರೂಪವನ್ನು ಸಂಘಟಿಸಿ, ಅದರ ಹೃದಯಗಳಿಗೊಂದು ಸೇತುವೆಯಾಗಿ 'ಮನುಷ್ಯಜಾತಿ ತಾನೊಂದೆ ವಲಂ' ಎಂಬ ಆರ್ಷೇಯ ತತ್ವವನ್ನು ಸಂಸ್ಥಾಪಿಸುವ ವಿಶಿಷ್ಟ ಶಕ್ತಿಸಂಪನ್ನವಾದ ಅಪೂರ್ವ ಕಲೆ ಇದು''[53]. ಅನುವಾದ ಕ್ರಿಯೆ ಸೃಜನಶೀಲ ಕ್ರಿಯೆಗಿಂತ ಕಠಿಣ. ಸೃಜನಶೀಲ ಸಾಹಿತಿಯಲ್ಲಿ ಸ್ಫೂರ್ತಿ ಮೂಡಿದಾಗ ಭಾವಾನುಭವಗಳು ಶಬ್ದಗಳ ರೂಪದಲ್ಲಿ ಅಭಿವ್ಯಕ್ತಗೊಂಡು ಭಾಷಾಶರೀರ ಹೊಂದಿ ಹೊರಬರುತ್ತದೆ. ಆದರೆ ಅನುವಾದಕ ತನ್ನದಲ್ಲದ ಭಾಷೆ ಕಲಿತು ಅದರ ಹೃದಯವರಿತು ಆ ಕವಿಯ ಅಂತರಂಗ ಪ್ರವೇಶಿಸಿ, ಭಾಷಾ ಜಾಯಮಾನವನ್ನು ತನ್ನದಾಗಿಸಿ , ರಚನೆ- ಲಯ ಗ್ರಹಿಸಿ, ಅಲ್ಲಿನ ಭಾವಾನುಭವಗಳಿಗೆ ಮೂರ್ತಿ ಸ್ವರೂಪ ನೀಡಬೇಕು. ಇದಕ್ಕಾಗಿ ಅವನ ಗ್ರಹಣ ಸಾಮರ್ಥ್ಯ, ಬುದ್ಧಿ ಚುರುಕಾಗಿ ಕೆಲಸ ಮಾಡಬೇಕು. ಭಾವ, ಬುದ್ಧಿ, ಪ್ರತಿಭೆ, ಪಾಂಡಿತ್ಯ ಸ್ಫೂರ್ತಿಗಳ ರಸಕ್ರಿಯೆ ನಡೆದು ಅನುಸೃಷ್ಟಿಯಾಗಬೇಕು. ಇಷ್ಟಾದರೂ ಮೂಲಧ್ವನಿಗೂ ಉದ್ದಿಷ್ಟ ಧ್ವನಿಗೂ ಸಮನ್ವಯ ಸಾಧ್ಯವಾಗುವುದಿಲ್ಲ. ಹೀಗಾಗಿ ಇದೊಂದು ಶ್ರಮದಾಯಕ ಕ್ರಿಯೆ.

ಇಂದಿನ ಈ ಆಧುನಿಕ ಯುಗದಲ್ಲಿ ಅನುವಾದದ ಅಗತ್ಯ ಹಾಗೂ ಮಹತ್ವ ಹೆಚ್ಚಾಗಿದೆ. ಅನುವಾದದ ಸಹಾಯವಿಲ್ಲದೇ ವಿಭಿನ್ನ ಜ್ಞಾನ ಶಾಖೆಗಳ ಅರಿವು ಅಸಾಧ್ಯ. ಜ್ಞಾನ ಸಂಗ್ರಹವಿಲ್ಲದೆ ಪ್ರಗತಿ ಇಲ್ಲ. ವಿಜ್ಞಾನದಿಂದ ವಿಶ್ವ ಹತ್ತಿರ ಬಂದಿದೆ. ವಿಶ್ವದ ಮುಂದುವರಿದ ರಾಷ್ಟ್ರಗಳೆನಿಸಿರುವ ರಷ್ಯಾ, ಜಪಾನ್, ಜರ್ಮನಿ, ಹಾಗೂ ಚೀನಾ ದೇಶಗಳು ತಮ್ಮ ದೇಶಿಯನಿಗೆ ಆಧುನಿಕ ವಿಜ್ಞಾನವನ್ನು ಒದಗಿಸುತ್ತಿರುವುದು ಹೇಗೆ? ಈ ಭಾಷಾಂತರ ಮಾಧ್ಯಮ ಇಲ್ಲದಿದ್ದರೆ ಇವರೆಲ್ಲಾ ಬೇರೆ ಬೇರೆ ಭಾಷೆಗಳನ್ನು ಕಲಿಯುವುದರಲ್ಲೇ ತಮ್ಮ ಶ್ರಮ ಅಪವ್ಯಯ ಮಾಡುತ್ತಿದ್ದರು. ಆದರೆ ಆ ದೇಶಗಳ ಆಳುವ ಸರ್ಕಾರಗಳು ಮುಂದಾಲೋಚನೆಯಿಂದ 'ಭಾಷಾಂತರ ಕ್ಷೇತ್ರ' ಬಲಪಡಿಸಿವೆ. ಇದರಿಂದಾಗಿ ಇಡೀ ವಿಶ್ವದ ಜ್ಞಾನವು ಈ ದೇಶಗಳ ಜನರ ಪಾಲಿಗೆ ದೊರೆತಿದೆ. ವಿಶ್ವ ಮಾನವನಾಗಲು ಮನುಷ್ಯ ಸಾಂಸ್ಕೃತಿಕವಾಗಿ, ವೈಜ್ಞಾನಿಕವಾಗಿ, ರಾಜಕೀಯವಾಗಿ ಹತ್ತಿರ ಬರಬೇಕು. ಈ ಭಾವೈಕ್ಯ ಸಾಧಿಸಲು ಅನುವಾದ ಒಂದು ಮುಖ್ಯ ಸಾಧನ. ಹೊಸ ಆಲೋಚನೆಗಳು ಅಭಿವೃದ್ಧಿಗೆ ಇಂಬು ನೀಡುತ್ತವೆ. ವಿಭಿನ್ನ ದೇಶ ಭಾಷೆಗಳ ಮಧ್ಯೆ ಅರಿವು ಮೂಡಿಸಲು ಭಾಷಾಂತರ ಹೆಚ್ಚು ಸಹಕಾರಿ. ಇ.ಎಸ್. ಬೇಟ್ಸ್ ಭಾಷಾಂತರದ ಅಗತ್ಯ ಮತ್ತು ಮಹತ್ವದ ಬಗ್ಗೆ ಹೀಗೆ ಹೇಳುತ್ತಾನೆ: ''ಭಾಷಾಂತರವಿಲ್ಲದೇ ಏನೂ ನಡೆಯುವುದಿಲ್ಲ. ಮಾನವ ಅನುಭವವು ಮೂರು ವಿಚಾರಗಳಲ್ಲಿ ವ್ಯಾಪಿಸಿದೆ. ಭಾವನೆಗಳು, ತಂತ್ರಗಳು ಹಾಗೂ ವಿಚಾರ. ಭಾವನೆಗಳು (ಭಯ ಇತ್ಯಾದಿ) ತಮ್ಮ ಸ್ವರೂಪದಲ್ಲಿ ಬದಲಾಗುವುದಿಲ್ಲ. ಆದರೆ ತಂತ್ರಗಳು ಹಾಗೂ ವಿಚಾರಗಳು ಬದಲಾಗುತ್ತವೆ. ವಿಚಾರ ಹಾಗೂ ತಂತ್ರಗಳಲ್ಲಾದ ಬದಲಾವಣೆಗಳು ಪಸರಿಸಲು ಭಾಷಾಂತರ ಸಹಾಯ ಅವಶ್ಯಕ. ಏಕೆಂದರೆ ಅದು ಪಸರಿಸಬೇಕಾದರೆ ಜನರಿಂದ ಜನರಿಗೆ ಪಸರಿಸಬೇಕಾಗುತ್ತದೆ. ಅಂದರೆ ಭಾಷೆಯಿಂದ ಭಾಷೆಗೆ ಪಸರಿಸ ಬೇಕಾಗುತ್ತದೆ.''[54]

''ಪ್ರಕೃತಿ, ಭಾಷೆ ಸಾಹಿತ್ಯಗಳ ಬೆಳವಣಿಗೆಯಲ್ಲಿ ಭಾಷಾಂತರ ವಹಿಸುವ ಪಾತ್ರ ಬಹಳ ಮುಖ್ಯವಾದುದು. ಅವುಗಳನ್ನು ಸಂಪದ್ಯುಕ್ತಗೊಳಿಸುವ ವಿಧಾನಗಳಲ್ಲಿ ಅದೂ ಒಂದು. ಉಳಿದೆರಡು ವಿಧಾನಗಳೆಂದರೆ ಸ್ವಂತ ಸೃಷ್ಟಿ ಮತ್ತು ಅನುಕರಣ.''[55] ಯಾವುದೇ ಒಂದು ಸಾಹಿತ್ಯ ವಿಶ್ವ ಸಾಹಿತ್ಯವಾಗಿ ಪರಿಗಣಿಸಲ್ಪಡುವುದು ಭಾಷಾಂತರದಿಂದ. ''ಭಾಷಾಂತರ ಎಂತಹ

ಉಪಕರಣವೆಂದರೆ, ಅದಿಲ್ಲದಿದ್ದ ಪಕ್ಷದಲ್ಲಿ ಲೋಕಸಾಹಿತ್ಯದ ವಿಸ್ತಾರವಾದ ಪ್ರಾಂತಗಳು ನಮ್ಮ ಪಾಲಿಗೆ ನಷ್ಟವಾಗಿರುತ್ತಿದ್ದವು''[56].

ದೇಶದೇಶಗಳ ಮಧ್ಯೆ ಮೇಲೇಳುವ ಗೋಡೆಗಳನ್ನು ಅನುವಾದ ಕೆಡವಲು ಸಹಾಯ ಮಾಡುತ್ತದೆ. ಭಾಷೆ, ಸಂಸ್ಕೃತಿ ಆಚಾರ, ವಿಚಾರಗಳು ಬದಲಾದರೂ ಮೂಲಸೆಲೆ ಒಂದೇ ಎಂಬರಿವು ಭಾಷಾಂತರದಿಂದ ಬರುತ್ತದೆ. ಭಿನ್ನ ಭಾಷೆಗಳ ಕೃತಿಗಳ ಅನುವಾದದಿಂದ ನಮ್ಮ ಸಾಹಿತ್ಯ ಸಮೃದ್ಧಿಯಾಗುತ್ತದೆ. ಇಂದು ಇಂಗ್ಲಿಷ್ ಸಾಹಿತ್ಯ ವಿಶ್ವಮಾನ್ಯವಾಗಲು ಇತರ ಭಾಷೆಗಳಲ್ಲಿ ಬಂದ ಅದರ ಭಾಷಾಂತರ ಕೃತಿಗಳೇ ಕಾರಣ. ಕನ್ನಡ ಸಾಹಿತ್ಯದ ಅಭಿವೃದ್ಧಿಗೆ ಇತರ ಭಾಷೆಗಳಿಂದ ಪಡೆದ ಭಾವಾನುಭವಗಳು ಹಾಗೂ ಅನುವಾದ ಹೆಚ್ಚು ಸಹಕಾರ ನೀಡಿವೆ. ಅನುವಾದಿತ ಕೃತಿಗಳ ಪಠಣದಿಂದ ಭಾಷಾ ದುರಭಿಮಾನ ಕೂಡ ಕಡಿಮೆಯಾಗುತ್ತದೆ. ಶ್ರೇಷ್ಠ ಚಿಂತಕನಾದ ದಂಡಿಯು ''ಭಾಷೆ ಎಂಬ ಜ್ಯೋತಿ ಬೆಳಗದಿದ್ದರೆ ಜಗತ್ತೆಲ್ಲಾ ಅಂಧಕಾರದಲ್ಲಿ ಮುಳುಗುತ್ತಿತ್ತು'' ಎಂದು ಭಾಷೆಯ ಶ್ರೇಷ್ಠತೆ ಬಗ್ಗೆ ಹೇಳಿದ್ದಾನೆ. ಇದು ಭಾಷಾಂತರಕ್ಕೂ ಅನ್ವಯಿಸುತ್ತದೆ. ಭಾಷಾಂತರವಿಲ್ಲದಿದ್ದರೆ ಮಾನವ ಸಮಾಜ, ಸಾಂಸ್ಕೃತಿಕ ಬದುಕು, ಬೌದ್ಧಿಕ ಮಟ್ಟ ಬಹಳ ಕೆಳಮಟ್ಟಕ್ಕಿರುತ್ತಿತ್ತು. ಬೈಬಲ್‌ನ ಭಾಷಾಂತರದಿಂದಾಗಿ ಇಡೀ ಯುರೋಪ್‌ನಲ್ಲಿ ಧಾರ್ಮಿಕ ವೈಚಾರಿಕ ಕ್ರಾಂತಿ ಮೊಳಗಿತು. ರವೀಂದ್ರನಾಥ ಠಾಗೂರರಿಗೆ ನೋಬಲ್ ಪ್ರಶಸ್ತಿ ದೊರಕಲು ಅವರ ಶ್ರೇಷ್ಠ ಕೃತಿ 'ಗೀತಾಂಜಲಿ' ಉತ್ತಮವಾಗಿ ಭಾಷಾಂತರಗೊಂಡಿರುವುದೇ ಕಾರಣ.

ಸಾಹಿತ್ಯದಲ್ಲಿ ಹೊಸ ಪರಿವರ್ತನೆಗೆ ಕ್ರತು ಶಕ್ತಿಯಾಗಿ ಕೆಲಸ ಮಾಡಬಲ್ಲದು ಭಾಷಾಂತರ. ಒಂದು ಸಾಹಿತ್ಯ ಯಾವುದೇ ಕಾರಣದಿಂದ ಜಡವಾಗಿ ಮಡುಗಟ್ಟಿ ನಿಂತಾಗ ಭಾಷಾಂತರ ಅದಕ್ಕೊಂದು ಹೊಸ ಪಾತ್ರವನ್ನು ಕಲ್ಪಿಸಿ, ಅದು ಜೀವಂತವಾಹಿನಿಯಾಗಿ ಹರಿಯಲು ಅವಕಾಶ ಮಾಡಿಕೊಡುತ್ತದೆ. ಬರಡಾದ ಸಾಹಿತ್ಯ ವೃಕ್ಷಕ್ಕೆ ಅದು ಚೇತನವನ್ನು ತುಂಬಿ ಚಿಗುರು-ಎಲೆ-ಹೂವು ಹಣ್ಣುಗಳನ್ನು ಹೊಮ್ಮಿಸುತ್ತದೆ. ನವೀನ ಪ್ರಕಾರಗಳನ್ನು ತಂದುಕೊಟ್ಟು ಹೊಸ ಸಾಧ್ಯತೆಗಳನ್ನು ಪ್ರದರ್ಶಿಸಿ ರಕ್ತಪೂರಣ ಮಾಡಿ ಒಂದು ಸಾಹಿತ್ಯದ ಸರ್ವಾಂಗೀಣವಾದ ಆರೋಗ್ಯಕರ ವಿಕಾಸಕ್ಕೆ ನೆರವಾಗುತ್ತದೆ. ಜಗತ್ತಿನ ಎಲ್ಲಾ ಸಾಹಿತ್ಯಗಳ ಚರಿತ್ರೆಯಲ್ಲೂ ಇದಕ್ಕೆ ವಿಪುಲ ನಿದರ್ಶನಗಳಿವೆ.

ಶೇಕ್ಸ್‌ಪಿಯರ್, ಹೋಮರ್, ಟಾಲ್‌ಸ್ಟಾಯ್, ವಾಲ್ಮೀಕಿ, ವ್ಯಾಸ, ಕಾಳಿದಾಸ, ವರ್ಜಿಲ್‌ರಂತಹ ಮಹಾ ಸಾಹಿತಿಗಳು ಇಂದು ವಿಶ್ವಮಾನ್ಯರಾಗಲು ಅನುವಾದ ಪ್ರಮುಖ ಕಾರಣ. ಭಾಷಾಂತರ ವಿಭಿನ್ನ ಜನರಲ್ಲಿ ಪರಸ್ಪರ ತಿಳುವಳಿಕೆ, ಹೃದಯ ವೈಶಾಲ್ಯ ಬೆಳೆಸುತ್ತದೆ. ಬೌದ್ಧಿಕ ಮಟ್ಟವನ್ನು ಶ್ರೀಮಂತಗೊಳಿಸುವುದಲ್ಲದೇ ಸದಭಿರುಚಿಯನ್ನು ವೈವಿಧ್ಯತೆಯನ್ನು ನೀಡುತ್ತದೆ. ಇಂದು ಪ್ರಪಂಚದ ದೊಡ್ಡ ದೊಡ್ಡ ವಿಚಾರವಂತರ ಮಧ್ಯೆ, ದೊಡ್ಡ ದೊಡ್ಡ ವಿಜ್ಞಾನಿಗಳ ಮಧ್ಯೆ ಸಂಪರ್ಕ ಸೇತುವೆ ಏರ್ಪಟ್ಟು ವಿಶ್ವದ ಜನರು ಪರಸ್ಪರ ವಿಚಾರ ವಿನಿಮಯ ನಡೆಸಲು ಹಾಗೂ ಸಮೀಪ ಬರಲು, ಇಷ್ಟೊಂದು ಪ್ರಗತಿ ಸಾಧಿಸಲು ಮೂಲ ಸಾಧನ ಭಾಷಾಂತರ.

ಕನ್ನಡದಲ್ಲಿ ಹೊಸಗನ್ನಡ ಸಾಹಿತ್ಯದ ಉದಯಕ್ಕೆ ಶ್ರೀಯವರ 'ಇಂಗ್ಲೀಷ್ ಗೀತಗಳು' ಮುಖ್ಯ ಕಾರಣವಾಯಿತು. ಇದೇ ರೀತಿ ಸಂಸ್ಕೃತ, ಮರಾಠಿ, ಬಂಗಾಳಿ ಭಾಷೆಗಳ ಕೊಡುಗೆ ಏನೂ ಕಡಿಮೆ ಇಲ್ಲ. ಕನ್ನಡ ಕಾದಂಬರಿ ಪ್ರಪಂಚದ ಮೇಲೆ ಈ ಭಾಷೆಗಳ ಪ್ರಭಾವ ಪ್ರಮುಖವಾಗಿದೆ. ಭಾಷೆಯ ದೃಷ್ಟಿಯಿಂದಲೂ ಭಾಷಾಂತರದ ಮಹತ್ವ ಹೆಚ್ಚಿದೆ. ಇದು ಒಂದು ಭಾಷೆಯ ಶಕ್ತಿ ಸಾಮರ್ಥ್ಯಗಳನ್ನು ಒರೆಗೆ ಹಚ್ಚುತ್ತದೆ. ಭಾಷೆ ಹೊಸ ಹೊಸ ಆಯಾಮ ಪಡೆಯಲು ಸಹಕರಿಸುತ್ತದೆ. ಭಾಷೆನಿಂತ ನೀರಾಗಲು ಬಿಡದೆ ನದಿಯನ್ನಾಗಿಸುತ್ತದೆ. ಎಲ್ಲಾ ರೀತಿಯ ಸಾಧ್ಯತೆಗಳಲ್ಲಿ ದುಡಿದ ಭಾಷೆ ಹರಿತವಾಗುತ್ತದೆ.

"ಯಾವುದೇ ಸಾಹಿತ್ಯ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗಲೂ ಭಾಷಾಂತರ ಬೇಕು. ಅದು ಅನುಭವಗಳಿಗಾಗಿ ಕಾತರ ರಸಾನುಭಾವತೆಯ ಅಭೀಪ್ಸೆ ಜ್ಞಾನತೃಷೆ - ಇವುಗಳಿಂದಾಗಿ ಒಂದು ಸಾಹಿತ್ಯ ತನ್ನ ಪ್ರಬುದ್ಧ ದೆಶೆಯಲ್ಲೂ ಭಾಷಾಂತರಗಳನ್ನು ಉತ್ಸಾಹದಿಂದ ಬರಮಾಡಿಕೊಳ್ಳುತ್ತದೆ. ಇದುವರೆಗೂ ನಮಗೆ ಗೊತ್ತೇ ಇರದಿದ್ದ ವೈಭವಗಳು ವಿಸ್ಮಯಗಳು ಅದರಿಂದ ತೆರೆದುಕೊಳ್ಳಬಹುದು. ಹೊಸ ಜಗತ್ತಿಗೆ ಅದು ನಮ್ಮನ್ನು ಪ್ರವೇಶಗೊಳಿಸಬಹುದು."[57]

ಇತ್ತೀಚೆಗೆ ಅನ್ಯಭಾಷೆ ಕಲಿಯುವಾಗ ಅದರಲ್ಲೂ ಮುಖ್ಯವಾಗಿ ಇಂಗ್ಲಿಷ್ ಭಾಷೆ ಕಲಿಸುವಾಗ ಮಾತೃಭಾಷೆಯಲ್ಲಿ ಭಾಷಾಂತರಿಸಿ ಕಲಿಸುವ ಕ್ರಮ ಸೂಕ್ತವೆಂದು ಶಿಕ್ಷಣ ತಜ್ಞರು ಅಭಿಪ್ರಾಯಿಸಿದ್ದಾರೆ. ಹಿಂದಿನ ಕಾಲದಲ್ಲಿ ಈ ಕ್ರಮದ ಜಾರಿಯಲ್ಲಿದ್ದು ಇತ್ತೀಚಿನವರೆಗೂ ಅನ್ಯ ಭಾಷೆಯಲ್ಲೇ ಕಲಿಸುವ ಪ್ರಯತ್ನ ಮಾಡಲಾಗುತ್ತಿತ್ತು. ಈಗ ಈ ದೃಷ್ಟಿಕೋನ ಬದಲಾಗಿದೆ. ಇದರಿಂದಾಗಿ ಭಾಷಾಂತರ ಮಹತ್ವ ಹೆಚ್ಚಿದೆ. ಇದಕ್ಕೆ ಚೀನಾ, ಜಪಾನ್ ಮತ್ತು ರಷ್ಯಾದಂತಹ ದೇಶಗಳಲ್ಲಾದ ಬದಲಾವಣೆಯು ಮುಖ್ಯ ಕಾರಣವಾಗಬಹುದು. ಇತ್ತೀಚೆಗೆ ಭಾಷಾಂತರ ಕೃತಿಗಳ ಸಂಖ್ಯೆ ಹೆಚ್ಚುತ್ತಿರುವುದು ಒಂದು ಆರೋಗ್ಯಕರ ಬೆಳವಣಿಗೆ.

ಭಾಷಾಂತರದ ಮಹತ್ವ ಅದರ ವ್ಯಾಪ್ತಿಯನ್ನು ವಿಸ್ತರಿಸಿದೆ. ಇದರಿಂದಾಗಿ ಅನುವಾದ ವಿಶ್ವಂಭರವಾಗಿ ಬೆಳೆಯುತ್ತಿದೆ. ಹೀಗೆ ಬೆಳೆಯುತ್ತಿರುವಾಗ ಒಂದು ಮುಖ್ಯ ಪ್ರಶ್ನೆ ಉದ್ಭವವಾಗುತ್ತದೆ. ಭಾಷಾಂತರ ಕ್ರಿಯೆ ಅನಿವಾರ್ಯವಾಗಿದ್ದರೆ ಅದು ಸೃಜನಶೀಲ ಏಕಾಗಬಾರದು. ಭಾಷಾಂತರ ಕಾರ್ಯವನ್ನು ತುಂಬಾ ಲಘುವಾಗಿ ಪರಿಗಣಿಸಬೇಕಾಗಿಲ್ಲ. ಸೃಜನಶೀಲ ಬರವಣಿಗೆಗೆ ದೊರೆಯುವ ಮಹತ್ವ ಅದಕ್ಕೆ ದೊರೆಯಬೇಕು. ಎಲ್ಲರೂ ಮೂಲಕೃತಿಯನ್ನು ಓದಲು ಸಾಧ್ಯವಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ತನ್ನ ಭಾಷೆಯ ಜನರಿಗೆ ಮೂಲಕೃತಿಯನ್ನು ಚೊಕ್ಕಟವಾಗಿ ತಂದುಕೊಟ್ಟರೆ, ಅದೊಂದು ಸೃಜನಶೀಲ ಕ್ರಿಯೆಯಲ್ಲವೆ? ಅನುವಾದಕನಿಗೆ ಮೂಲ ಕೃತಿಕಾರನಷ್ಟೇ ಪ್ರತಿಭೆ ಇರಬೇಕು. ಅಷ್ಟೇ ಅಲ್ಲ. ಒಮ್ಮೊಮ್ಮೆ ಎರಡು ಭಾಷೆಗಳಲ್ಲೂ ಆತನಿಗೆ ಅಸಾಧಾರಣ ಸಾಮಾರ್ಥ್ಯವಿರಬೇಕು. ಮೂಲಲೇಖಕನ ಕಲ್ಪನಾ ಸಾಮ್ರಾಜ್ಯದಲ್ಲಿ ಮುಳುಗಿ ಈ ಮೇಲೇಳುವ ಅನುವಾದಕ ತನ್ನ ಕೃತಿಯಲ್ಲಿ ಓದುಗನನ್ನು ಹಾಗೆಯೇ ತಲ್ಲೀನಗೊಳಿಸುತ್ತಾನೆ. ಆದರೆ ಮೂಲ ಲೇಖಕನಿಗೆ ಒಂದು ಭಾಷೆಯಲ್ಲಿ ಪ್ರಭುತ್ವ ಹಾಗೂ ಆ ಪರಿಸರ ಪರಿಚಯವಿರುತ್ತದೆ. ಆದರೆ ಅನುವಾದಕನಿಗೆ ಎರಡೂ ಅರ್ಹತೆಗಳ ಜೊತೆಗೆ ವಿವೇಚನಾಶಕ್ತಿಯೂ ಬೇಕು. ಕೆಲವೊಮ್ಮೆ ಆತನ ಸಾಮರ್ಥ್ಯ ಹೆಚ್ಚು ಎನಿಸುತ್ತದೆ. ಹೀಗಾಗಿ ಉತ್ತಮ ಅನುವಾದ ಕೃತಿ 'ಸೃಜನಶೀಲ ಸಾಹಿತ್ಯ'ವಷ್ಟೇ ಅಲ್ಲ; ಅದಕ್ಕಿಂತಲೂ ಹೆಚ್ಚಿನ ಗೌರವಕ್ಕೆ ಅರ್ಹವಾಗುತ್ತದೆ. ಅನುವಾದ ಕಾವ್ಯ ಸಾಹಿತ್ಯದಲ್ಲಿ 'ಸೃಷ್ಟಿಕಾವ್ಯ'ದಷ್ಟೇ ಮಹತ್ವ ಪಡೆದಿದೆ.

ಭಾಷಾಂತರದ ಪರಿಕಲ್ಪನೆ - ಮೂಲ ಕೃತಿಗೆ ನಿಷ್ಠನಾಗಿರಬೇಕು ಎಂಬ ನಂಬಿಕೆ - ಭಾಷಾಂತರ ಸೃಜನಶೀಲತೆಯನ್ನು ಕೊಲ್ಲುತ್ತದೆ. ಭಾಷಾಂತರ ಎಷ್ಟೇ ಬುದ್ಧಿಪೂರ್ವಕವಾಗಿ ನಡೆಯಲಿ, ಭಾಷಾಂತರ ನಡೆಯುತ್ತಿರುವಾಗಲೇ ಅರ್ಥಾಂತರ ನಮಗೆ ಗೊತ್ತಿಲ್ಲದಂತೆ ನಡೆಯುತ್ತಿರುತ್ತದೆ. ಒಂದೇ ಭಾಷೆಯು ಸಹಚರ್ಯ ಅಷ್ಟೇ ಸಮರ್ಥವಾಗಿ ಅಥವಾ ಅದಕ್ಕಿಂತ ಹೆಚ್ಚು ಸಮರ್ಥವಾಗಿ ಹೊಸ ಅರ್ಥಗಳನ್ನು ಹುಟ್ಟಿಸಬಹುದು. ಆದ್ದರಿಂದ ಭಾಷಾಂತರವನ್ನು ಕೇವಲ 'ಪ್ರತಿಸೃಷ್ಟಿ' ಎಂದಾಗಲಿ 'ಅನುಸೃಷ್ಟಿ' ಎಂದಾಗಲಿ ಕರೆಯುವುದು ಅಷ್ಟು ಸಮಂಜಸವಾಗಲಾರದು. ಅದೂ ಕೂಡ ಸೃಷ್ಟಿಯೇ ಆಗುತ್ತದೆ.

''ಭಾಷೆ ತನ್ನ ಅರ್ಥವ್ಯಾಪ್ತಿಯನ್ನು ಕಳೆದುಕೊಳ್ಳುವ ಪ್ರಸಂಗ ಇತಿಹಾಸದಲ್ಲಿ ಆಗಾಗ ಬರುತ್ತದೆ. ಅಂಥ ಪ್ರಸಂಗಗಳಲ್ಲಿ ಕಾವ್ಯನೀತಿ ಜಡವಾಗುತ್ತದೆ. ನೈತಿಕತೆ ಯಾವಾಗ ಧ್ವನಿಪೂರ್ವಕವಾಗುವುದಿಲ್ಲವೋ ಆಗ ಭಾಷಾಂತರವು ಯಾಂತ್ರಿಕವಾಗುತ್ತದೆ. ಮೂಲಕೃತಿಗೆ ನಿಷ್ಠವಾಗಿ ಬಿಟ್ಟರೆ ಭಾಷಾಂತರ ಕ್ರಿಯೆಯು ನೈತಿಕತೆ ಸಾರ್ಥಕವಾಗುತ್ತದೆ. ಬಹುಶಃ ಇಂತಹ ವಾತಾವರಣ ಸಾಮಾಜಿಕ ಇತಿಹಾಸದಲ್ಲಿ ಕೂಡ ಒಂದು ಬಗೆಯ ಹಿಂಜರಿಕೆ ಕಾಲವಾಗಿರುತ್ತದೆ. ಒಂದು ದೇಶದ ಸಂಸ್ಕೃತಿ ಯಾವುಯಾವುದೋ ಕಾರಣಗಳಿಂದಾಗಿ ತನ್ನ ಅಂತಃಸತ್ವವನ್ನು ಕಳೆದುಕೊಂಡಿರುವಾಗ ಅದರ ಎದುರು ಇನ್ನೊಂದು ಸಂಸ್ಕೃತಿ ಇನ್ನೊಂದು ಭಾಷೆ ನಿಂತುಕೊಂಡು ಅಣಕಿಸುತ್ತದೆ. ಮತ್ತೊಂದು ಇಂತಹ ಬಿಕ್ಕಟ್ಟಿನ ಪ್ರಸಂಗಗಳಲ್ಲೇ ಭಾಷಾಂತರಗಳ ಅಗತ್ಯ ಹೆಚ್ಚಾಗುತ್ತದೆ.''[58]

ಪ್ರಾಯಶಃ 19ನೆಯ ಶತಮಾನದ ಆದಿಭಾಗದಲ್ಲಿ ಕನ್ನಡ ಸಾಹಿತ್ಯ ಹೀಗೆ ಜಡತ್ವಕ್ಕೆ ಶರಣಾಗಿತ್ತು. ಚಂಪೂ, ಷಟ್ಪದಿ, ಸಾಂಗತ್ಯ, ತ್ರಿಪದಿಗಳಲ್ಲದೆ ಸೃಜನಶೀಲ ಮಹಾಕಾವ್ಯಗಳು ಹೊರಬರಲಾರವೆಂದೂ ಕೆಲವರು ನಂಬಿದ್ದರು. ರಾಮಾಯಣ-ಮಹಾಭಾರತದ ವಸ್ತುಗಳನ್ನೇ ಆಯ್ದುಕೊಳ್ಳಬೇಕಾದ ಅನಿವಾರ್ಯ ಸ್ಥಿತಿ ಕವಿಗಳಿಗಿತ್ತು. ಅಷ್ಟಾದಶವರ್ಣನೆ, ತಮ್ಮ ಹೊಗಳಿಕೆ, ಪರಮತ ಹಾಗೂ ಅನ್ಯಕವಿಗಳ ತೆಗಳುವಿಕೆ ಅನಿವಾರ್ಯವಾಗಿತ್ತು. ನಂಜುಂಡ ಕವಿಯಂತಹ ಕೆಲವೊಬ್ಬ ಕವಿಗಳು ವಸ್ತುವಿನ ಆಯ್ಕೆಯಲ್ಲಿ ಸ್ವಾತಂತ್ರ್ಯ ವಹಿಸಿದರು. ಆದರೆ ಕಾವ್ಯ ಮಾಧ್ಯಮದಲ್ಲಿ ಹಳೆಯ ಪದ್ಧತಿಯನ್ನು ಅನುಸರಿಸಬೇಕಾಯಿತು. ಆಧುನಿಕ ಕಾಲದಲ್ಲೂ ಮುದ್ದಣ್ಣ ಕಾವ್ಯ ಮಾಧ್ಯಮದಲ್ಲಿ ಶ್ರೀಸಾಮಾನ್ಯನ ಆಶಯಕ್ಕೆ ಧ್ವನಿಗೂಡಿಸಿದ. ಆದರೆ ವಸ್ತುವಿನ ಆಯ್ಕೆಯಲ್ಲಿ ಆತನೂ ಸ್ವಾತಂತ್ರ್ಯವಹಿಸಲಿಲ್ಲ. ಇಂತಹ ಜಡ್ಡುಗಟ್ಟಿದ ಪರಿಸರದಲ್ಲಿ ಭಾಷೆ ತನ್ನ ಅರ್ಥವ್ಯಾಪ್ತಿಯನ್ನು ಕಳೆದುಕೊಳ್ಳಬಹುದು. ಆಗ ಭಾಷಾಂತರ ಜಡ್ಡುಗಟ್ಟಿದ ಪರಿಸರಕ್ಕೆ ಚೈತನ್ಯದ ಗಾಳಿಯನ್ನು ಬೀಸಬಹುದು. ಮತ್ತೊಂದು ಸಂಸ್ಕೃತಿಯಲ್ಲಿದ್ದ 'ಜೀವಂತಿಕೆ'ಯನ್ನು ಈ ಪರಿಸರಕ್ಕೂ ತರಬಹುದು. ಅದರ ಪ್ರಯತ್ನವೇ ಕನ್ನಡ ಸಾಹಿತ್ಯದಲ್ಲಿ ಆದ 'ನವೋದಯ ಸಾಹಿತ್ಯ ಚಳುವಳಿ' ಎನ್ನಬಹುದು.

ಒಟ್ಟಿನಲ್ಲಿ ಹೇಳುವುದಾದರೆ ಭಾಷೆ ಒಂದು ದೇಹವಾದರೆ ಆತ್ಮವೇ ಅದರ ವಸ್ತು. ಆತ್ಮಕ್ಕೆ ಭಂಗಬರದಂತೆ ಭಾಷೆಯನ್ನು ದುಡಿಸಿಕೊಳ್ಳಬೇಕು. ಭಾಷಾಂತರ ದೇಹಾಂತವಾಗಬಾರದು. ವ್ಯತ್ಯಾಸ ದೇಹಕ್ಕೆ ಹೊರತು ಆತ್ಮಕ್ಕಲ್ಲ. ಮೂಲ ಲೇಖಕನದು ಸೃಷ್ಟಿಯಾದರೆ ಅನುವಾದಕನದು ಅನುಸೃಷ್ಟಿ. ಉತ್ತಮ ಭಾಷಾಂತರವು ಓದುಗನಿಗೆ ಸ್ವಾಭಾವಿಕವಾಗಿ ತೋರಿ ಓದಿಸಿಕೊಂಡು ಹೋಗಬೇಕು. ಅನುವಾದಿತ ಭಾಷೆಯ ಜಾಯಮಾನಕ್ಕೆ ಹೊಂದಿಕೊಳ್ಳಬೇಕು. ಅನುವಾದಕ [illegible]

ಭಾಷೆಯಲ್ಲೂ ಪರಿಣಿತನಾಗಿರಬೇಕು, ಸಹೃದಯನಾಗಿರಬೇಕು. ಅನುವಾದ ಕ್ರಿಯೆ ಜನಾಂಗದ ಮುನ್ನಡೆಗೆ, ಜಗತ್ತಿನ ಜ್ಞಾನಾಭಿವೃದ್ಧಿಗೆ ಸಹಕಾರಿಯಾಗುತ್ತದೆ. ವೈವಿಧ್ಯಮಯ ಅನುಭವ, ಸಂವೇದನೆಗಳ ಪರಿಚಯ ಮಾಡಿಕೊಡುತ್ತದೆ. ರಾಷ್ಟ್ರಕವಿ ಕುವೆಂಪು ಹೇಳಿದಂತೆ: ''ಭಾಷಾಂತರ ಕಾರ್ಯ ಲಘುವಾದುದಲ್ಲ. ಅದೂ ಕೂಡ ಸ್ವತಂತ್ರ ಕೃತಿಯಂತೆ ಪ್ರತಿಭಾಮೂಲವಾದುದು. ಉತ್ತಮ ಭಾಷಾಂತರ ಎಲ್ಲೋ ಕೆಲವು ಅಧಿಕಾರಿ ಚೇತನಗಳಿಗೆ ಮಾತ್ರ ಸಾಧ್ಯ......... ಮೂಲ ಗ್ರಂಥದ ಶಕ್ತಿ ಸೌಂದರ್ಯಗಳಿಗೆ ಹಾನಿಗ್ಲಾನಿ ಒದಗದಂತೆ ಅದರಲ್ಲಿ ವ್ಯಪತ್ತಿರುವ ಭಾವಾನುಭವಗಳಿಗೆ ಧಕ್ಕೆ ತಟ್ಟದಂತೆ. ಅದರ ಸೂಕ್ಷ್ಮತೆ, ಮಾರ್ಮಿಕತೆಗಳಿಗೆ ಅಪೋಹ ಉಂಟಾಗದಂತೆ (ಮಾಡಿದ ಭಾಷಾಂತರ ಯಶಸ್ವಿಯಾಗುತ್ತದೆ).... ಅಕ್ಷಮರಾದ ಭಾಷಾಂತರಕಾರರ ಕೈಯಲ್ಲಿ ಮೂಲ ಅನಗತ್ಯವಾಗಿ ವಿಸ್ತೃತವಾಗುತ್ತದೆ ಜಾಳಾಗುತ್ತದೆ.''[59]

ಒಟ್ಟಿನಲ್ಲಿ ಯಾವುದೇ ಸಾಹಿತ್ಯ ಭಾಷಾಂತರದಿಂದ ಶ್ರೀಮಂತವಾಗುತ್ತದೆ, ಮಹೋನ್ನತವಾಗುತ್ತದೆ. ಅದು ಕ್ಷೀಣದೆಸೆ ಆರಂಭದ ಹಂತದಲ್ಲೇ ಇದ್ದರೆ ಭಾಷಾಂತರದಿಂದ ಉತ್ಕರ್ಷಗೊಳ್ಳುತ್ತದೆ. ಎಂತಲೇ ಎಜ್ರಪೌಂಡ್ ಹೀಗೆ ಹೇಳಿದ್ದು: ''ಒಂದು ಸಾಹಿತ್ಯದ ಸುವರ್ಣಕಾಲ ಕೂಡ ಪ್ರಾಯಶಃ ಒಂದು ಭಾಷಾಂತರದ ಅಥವಾ ಅದನ್ನು ಅನುಸರಿಸಿಕೊಂಡು ಹೋಗುವ ಸುವರ್ಣ ಕಾಲವಾಗಿರುತ್ತದೆ''(A great age of literature is perhaps a great age of translation or follows it).

ಇಂದು ವಿಶ್ವದ ಇತರ ರಾಷ್ಟ್ರಗಳ ಕಲೆ, ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಭೌಗೋಳಿಕ ಪರಿಸರ, ಸಾಮಾಜಿಕ ರೀತಿ ನೀತಿ, ಆಚಾರ ವಿಚಾರಗಳನ್ನು ತಿಳಿದುಕೊಳ್ಳಲು, ವಿಶ್ವ ಭಾವೈಕ್ಯತೆ ಸಾಧಿಸಲು ವಿಶ್ವಮಟ್ಟದಲ್ಲಿ ಭಾಷಾಂತರಕಾರರ ಅಂತರರಾಷ್ಟ್ರೀಯ ಒಕ್ಕೂಟ (Federation of International Translators) ಸ್ಥಾಪನೆಯಾಗಿದ್ದು, ಇದು ಅನುವಾದದ ವ್ಯಾಪ್ತಿ ಮತ್ತು ಮಹತ್ವವನ್ನು ಎತ್ತಿ ತೋರಿಸುತ್ತದೆ.

■

## ಅಡಿ ಟಿಪ್ಪಣಿ

1. ಬಿ.ಎಂ.ಶ್ರೀ - "ಕಾಣಿಕೆ", ಶ್ರೀಸಾಹಿತ್ಯ, ಪುಟ 59
2. ದೇಜಗೌ - ತೌಲನಿಕ ಸಾಹಿತ್ಯ, ಪುಟ 27
3. ಎಚ್ಚೆಸ್ಕೆ - ಆಡಳಿತ ಕನ್ನಡ, ಪುಟ 48
4. New Universal Encyclopaedia
5. Random House Dictionary
6. A. L. Smith 'Translation and Translating'
8. Nida Eugene A. "Principles of Translation on enanyplified by Bible Translating", page 33
9. J.C. Catford "A Linguistic Theory of Translation"
10. J. C. Postgate 'Translation and Translation'

    "Translation in Literature is the art of rendering the writing of one language into another lanugage. The art of translating lies not merely in translating the literal sense of one language into another but of translating also the feeling, thought and character of the work, so that the finished translation is equal in quality to the original". "By translation we mean such a version as shall before all things make it plain that (i) the translation has grasped the sense of each individual word as used in the original (ii) has selected to render it in the nearest equivalent with the genius of his language permits (iii) and has so arranged and welded together those equivalents that the whole becomes an exact counterpart of the passage equally careful in diction and equally elegant in style."
11. Tymczko T.: 'Translation and Meaning'

    Guenthuor and Hentter (Ed) Duckworth London 1978. Page 43

    "Knowing Semantic Structure of language depends upon knowing about the speakers, their environments, their society, and their beliefs."
12. J. C. Catford, 1965, A Linguistic theory of Translation

    Oxford University Press, London

    " Translation as a process is always unidirectional (it is always performed in a given direction from a source language (SL) into to a target language (TL) ..... translation may be defined as follows : The replacement of textual material in one language (SL) by equivalent textual material in another language (TL) the central problem of translation practice is that of finding TL translation equivalents."
13. Wilfram Wilss 'Translation Equivalaum'

    " Translation is primarily not a linguistic, but a psycholinguistic operation, which presupposes a semantic interpretation of the source language text". He further eloborates, "Functional equivalence (Jager) equivalence in difference (Jakobson) maintainance (retention) of translation invariance on the context level (Kade), quality of textual effect (Kollar) illusionist or anti-illusionist translation (Ley) closest natural equivalent (Nida) formal correspondance versas dynamic equivalence (Nida) stylistic equivalence (Poponic) Functional invariance (Reganova) Communicative equivalence (Reiss) programatic equivalence (Wilss).
14. Nida E. A., 1975, 'Language Structure and Translation'

    Standford University Press, Sanford, California

    " Translating consists in producing in the receptors language the closest natural equivalent of the SL message first in terms of meaning, and secondly in terms of style."
15. Nida E. A., 1975, 'Language Structure and Translation"

    Essentially the translation process in use in which a person who knows both the source and the receptor language decodes the message of the source and encodes into an appropriate equivalent from the receptor language."
16. Leon Burnett, 1985 "The Survival of Myth : Mandel Shtam's 'word' and 'translation' manipulation of literature : Studies in Literary Translation. Ed. Theo Harmans Croom Helm : London.

    "Translation and mythopoeia share a common intrest Apxai, the difference is that the source of a Translation is textual (the point where work, image, and tone coverage) where as the source for the myth-maker is non textual (at the cross roads of man and nature".
17. Frawley William, 1984, Translation, Lliterary,Llinguistic and Philosophical Perfected. London Associated University Press Inc.

" A good translation requires the epircal rigour of the empirical rigour of the linguist, the Perspicuity of the literary critic and the voraciousness of the philosopher all in combination, in any single proposed solution to the problem of translation".

18. Nida E.A. & Charles T.R., 1982, The Theory and Practice of Translation, W.C.A. United Bible Society. "the best traslation does not sound like a translation".

19. "The translator's craft lies in his command of an exceptionally large vocabulary as well as all synatactic resources- his ability to use them elegantly, flexibily, succinctly. All translation problems finally resolve themselves into problems of how to write well in the target language." - Newmark.

20. Geohery Sanncleson - Brown - "A practical Guide for translators"

"Translation is also creative and not just and automatic process. By this I mean that you will need to exercise your interpreting and editing skills since, in many cases, the person who has written the source text may not have been entirely clear in what he has written. It is then your job as a translator to endevour to understand what the writer wishes to say and then express that clearly in target language."

21. A.P. Andrew Kutty, University of Kerala, Trivandrum, Correlatives in Translatability

"Translation as Synthesis - a Search for a New Gestalt" Ed. Karunakaran, M. Jayakumar

"Translation is a 'complex use' of the complex phenomenon- language- ........ translation in generally belived to be a semantic affair, meaning assignment in semantic interpretation has been correlated with the process of translation. ' The theory of indeterminocy' of quine deals directly with translation. According to Tymczko while his own proposals an relativty in meaning assignments deal immediately with the semantic structure for language."

22. K. Raghunatha Rao: 'The Art of Translation' p-8

"Translation is an art by which the ideas of an anothor are transferred vividly from one language into another so as to effect the mind of the reader in the way in which the original itself affects him."

23. K. Balasubramaniam, Annamalai University, Annamalai

(Problems of lexical equilence in translation) p.16

"Apart from the complexity of lexical meaning contributed by the different comparents, anisomerphism between languages contributes to the difficulty of finding equivalents in the target language in translation. Anisomorphism of language refers to the difference between the language, expecially in lexical meaning. These include the differences in the organisation of designata, absence of denotata, difference in culture etc."

24. K. Challappan, Bharathidasan University, Trichirapally. Translation as Synthesis A Search for a New Gestalt p. 27

"A good translation which achieves functional pragmatic equivalence through exploiting the rhetorical roots related to the deep semantic structure. What is achieved is a new gestalt synthesising from the context, syntax, and semantics in a more complex and creative way than is done in a translations aiming at single formal or lexical equivalence in topicalisation focus too, though not syntactically."

25. Burton Reffel: The Forked Tongue (Page 14)

"A Translator must be by turns 'literal' and 'free' depending on the poet, the poem, the language, the particular point of linguistic pressure in short, depending on a largely adhoc evaluation of what concrete solution will best solve and that makes him a craftman - He must guess, he must experiment and he must eneluctabily make mistakes."

26. Dryden "To be a thorough translator he must be a thorough poet", ibid.

27. Herbert Reed - "Very rarely a poem in one language may inspire a poem of comparable poetic value in another language.", ibid

28. Burton Reffel : The Forked Tongue (page 22)

"Poetic translation is an art, not a science and much of the art is concerned with choosing - choosing what to put in, what to leave at, and what shape to give the work as a whole, what tone".

29. M.N. Williams : "Translation of poetry must, at the best resemble the process of pouring a highly volatile and evanescent spirit from one reacceptable into another. The original fluid will always suffer a certain ammount of waste and evaporation."

30. Burton Reffel : The Forked Tongue (Page 11)

" a translator's task is to recreative for someone without the linguistic ability to do the job for himself, a pre-existing poetic experience."

31. Burton Reffel : The Forked Tongue (Page 12)

"Both the 'literalist' and 'free' translator emphasizes the idioms and construction the sounds and the rhythm of the language into which they are bringing the poem, the difference between them are about they reli as those arising between two mothers with thirsty children, one of whom prefers to bring the child to th water, other of whom prefers to bring the water to the child."

32. D.G. Rossetti- Preface to Early Italian Poetry, in Poems and Translations. 1850-1870 (London, Oxford U.P. 1949 page 176)

"The only true motive for putting poetry into a fresh language must endow a fresh notion, as for as possib with one more possession of beauty."

33. K. Challapan ' Transalation as Synthesis A Search for a New Gestalt, page 21.

"If Robert Frost said that poetry is that which is lost in translation, "What is all art if not the finding lest things' says Tsvetaeva".

34. K. Challapan ' Translation as Synthesis- A Search for a New Gestalt, Page 21.

"In one sense all literature is translation because every creative artist is seeking a symbolic language fo a half known 'idea' or 'vision' and in creation language for there is translation from the inner to the oute language."

35. K. Challapan ' Translation As Synthesis- A Search for a New Gestalt - page 21

"Jean paris" says And I do think that a poet is at first a translator, the translator of an unknown world t which he gives tangible form of sensitive expression. But it is clear that if he cause no mistake the poem for the secret order if more or less translate successfully. The translator finds himself in a simila position and becomes the creator of the work of art, as the artist is the co-creator of reality."

36. K. Challappan ' Translation As Synthesis- A Search for New Gestalt, Page 33.

"Translation can be another road to transidental but real father of the original text, by recreating the forr of the original in its own term. In a rich moment it is both a revelation and recognition, a whisper fron above and a wink from below".

37. K. Karunakaran Ed. 'Translation As Synthesis A Search for a New Gestalt, Page 44.

" Translation acts as a prime medium of information flows across languages. The initial communicatior between different languages starts by the process of translation and later the translated information is nativizec according to principles that operate in the target language."

38. "All translation is a compromise - the effort to be literal and the effort to be idiomatic - Benjamin Jorett Quoted by T. Savory "The Art of Translation' page 25.

39. ದೇಜಗೌ "ತೌಲನಿಕ ಸಾಹಿತ್ಯ" ಪುಟ-1

40. ಡಾ || ಸಿ. ಪಿ. ಕೃಷ್ಣಕುಮಾರ್ 'ಕನ್ನಡ ಭಾಷಾಂತರ ಪರಂಪರೆ' (ನಾಗವರ್ಮನ ಕರ್ನಾಟಕ ಕಾದಂಬರಿ)

41. ಅದೇ ಪುಟ 170

42. ಅದೇ ಪುಟ 171

43. ಅದೇ ಪುಟ 172

44. ಅದೇ ಪುಟ 172

45. Quoted by T Savory "The art of Transalation" p - 158

46. ದೇಜಗೌ : ಮುನ್ನುಡಿಗಳು ಪುಟ 59

47. Mathew Arnold 'On Translating Homer'.

48. Quoted B. T. Savory 'The Art of Translation' P - 75

49. Henry Gifford : 'Comparative Literature' P. 45-46

50. T. Savory 'The Art of Translation'

51. ದೇಜಗೌ : ತೌಲನಿಕ ಸಾಹಿತ್ಯ ಪುಟ 43

52. ಡಾ. ಪ್ರಧಾನ ಗುರುದತ್ತ : ಭಾಷಾಂತರ ಕಲೆ ಪುಟ 101

53. ದೇಜಗೌ : ಮುನ್ನುಡಿಗಳು : ಪುಟ 51

54. E. S. Bates : " Inter Traffic Studies in Translation"

"Nothing moves without translation. Human expenence is covered by three terms : emotions techniques thought. Emotions (fear etc) do not change in character, thoughts and techniques do No change in thoug or technique speads without the help of translation, because if it is to spread from people to people an therefore from language to language".

55. ಎಂ. ಮರಿಯಪ್ಪ ಭಟ್ಟ 'ಕನ್ನಡ ಸಂಸ್ಕೃತಿ' ಪುಟ 231

56. Henry Gifford : Comparative Literature p-55

57. ಡಾ. ಸಿ. ಪಿ. ಕೆ. : ಕನ್ನಡ ಭಾಷಾಂತರ ಪರಂಪರೆ (ನಾಗವರ್ಮನ ಕರ್ನಾಟಕ ಕಾದಂಬರಿ - ಪುಟ 169)

58. ಕೀರ್ತಿನಾಥ ಕುರ್ತಕೋಟಿ - ಭಾಷಾಂತರ, ಸಮ್ಮುಖ (ಪ್ರಜಾವಾಣಿ ಸಾಪ್ತಾಹಿಕ ಪುರವಣಿ)

59. ದೇಜಗೌ, ಮುನ್ನುಡಿ ತೋರಣ 'ಮಹಾತ್ಮಾಗಾಂಧಿ - ಅಂತಿಮ ಹಂತ' ಪುಟ 59-60.

# ಭಾಷಾಂತರ ತಂತ್ರ

ಭಾಷಾಂತರಕಾರನಿಗೆ ತನ್ನ ಭಾಷೆಯಲ್ಲಿನ ಒಳ್ಳೆಯದನ್ನು ಆಯ್ದುಕೊಳ್ಳುವ ಹಾಗೆ ಅನುಭವಿಸುವ ಸಾಮರ್ಥ್ಯ ಇರಬೇಕು. ಈ ಆರನೇ ಇಂದ್ರಿಯವೇನೂ ಅಲೌಕಿಕವಾದುದೇನೂ ಅಲ್ಲ. ಇದು ಬುದ್ಧಿವಂತಿಕೆ, ಸೂಕ್ಷ್ಮತೆ ತುಡಿತ ಹಾಗೂ ಜ್ಞಾನಗಳ ಒಂದು ಸಮಿಶ್ರಣವಷ್ಟೆ. ಈ ಆರನೇ ಇಂದ್ರಿಯ ಕೆಲವು ಸಾರಿ ಭಾಷಾಂತರವನ್ನು ಪರಿಷ್ಕರಿಸುವ ಸಮಯದಲ್ಲಿ ಕೆಲಸ ಮಾಡಬಹುದು. ಕೆಲವೊಮ್ಮೆ ಶಬ್ದಶಃ ಭಾಷಾಂತರಿಸುವಂತೆಯೂ ಕೆಲವೊಮ್ಮೆ ಭಾಷಾಂತರದ ಎಲ್ಲಾ ಕಟ್ಟುಪಾಡುಗಳನ್ನು ಮುರಿಯುವಂತೆಯೂ ಸೂಚಿಸಬಹುದು. ಇದೇ ಅದರ ವಿಶೇಷತೆ.

ಭಾಷಾಂತರದಲ್ಲಿ ಮುಖ್ಯವಾಗಿ ಪಠ್ಯ, ವಾಕ್ಯಗಳು ಮತ್ತು ಘಟಕಗಳನ್ನು ಅರ್ಥಮಾಡಿಕೊಳ್ಳಬೇಕು. ಅರ್ಥ, ಭಾಷೆ, ಸಂಸ್ಕೃತಿ ಮತ್ತು ಭಾಷಾಂತರಗಳ ನಡುವಿನ ಸಂಬಂಧದ ತಿಳುವಳಿಕೆ ಕೂಡ ಅಷ್ಟೇ ಅಗತ್ಯ.




ಮೇಲ್ಕಂಡ ಚಿತ್ರದಲ್ಲಿ ಭಾಷಾಂತರ ಪ್ರಕ್ರಿಯೆಯನ್ನು ಹೇಗೆ ವಿರುದ್ಧ ಶಕ್ತಿಗಳು ವಿರುದ್ಧ ದಿಕ್ಕಿನೆಡೆ ಎಳೆಯುತ್ತವೆ ಎಂದು ತೋರಿಸುತ್ತದೆ. ಕೆಲವೊಮ್ಮೆ ಅಂತರಾರ್ಥಕ್ಕೂ ವ್ಯಕ್ತ ಅರ್ಥಕ್ಕೂ ಹಾಗೂ ಶಬ್ದಾರ್ಥಕ್ಕೂ ನೈಜ ಅರ್ಥಕ್ಕೂ ಮಧ್ಯೆ ಸಮಸ್ಯೆ ಉದ್ಭವಿಸುತ್ತವೆ.

ಸಾಮಾನ್ಯ ಅರ್ಥದಲ್ಲಿ ಭಾಷಾಂತರವೆಂದರೆ ಮೂಲಭಾಷೆಯ ಪಠ್ಯದ ಅರ್ಥವನ್ನು ಇನ್ನೊಂದು ಭಾಷೆಯಲ್ಲಿ ಹೇಳುವುದು. ಹೀಗೆ ಹೇಳುವಾಗ ಮೂಲಭಾಷೆಯಲ್ಲಿ ಎಷ್ಟು ಸಹಜವಾಗಿ ಸರಳವಾಗಿ ಹೇಳಿದ್ದಾರೋ ಅಷ್ಟೇ ಸಹಜ, ಸರಳವಾಗಿ ಅನುವಾದಿತ ಭಾಷೆಯಲ್ಲೂ ಹೇಳಬೇಕು. ಆದರೆ ಅನೇಕ ಸಾರಿ ಹೀಗೆ ಆಗುವುದಿಲ್ಲ. ಉದಾಹರಣೆಗೆ ಕಾನೂನು, ಆಡಳಿತ, ಉಪ ಭಾಷೆ, ಸಂಸ್ಕೃತಿ, ಗ್ರಾಮ್ಯ ಪಠ್ಯಗಳನ್ನು ಭಾಷಾಂತರಿಸುವಾಗ ಮೂಲಭಾಷೆಯ ಅನೇಕ ಶಬ್ದಗಳನ್ನು ಅನುವಾದಿತ ಭಾಷೆಗೆ ಹಾಗೆಯೇ ತರುವುದನ್ನು ನಾವು ಕಾಣುತ್ತೇವೆ. ಆದ್ದರಿಂದ ಹೌನಿಯನ್ ಹೇಳಿದ ಹಾಗೆ ಅನುವಾದಕನ ಕೆಲಸ ಮೂಲವನ್ನು ಕೇವಲ ಪುನಃಸೃಷ್ಟಿ ಮಾಡುವುದಲ್ಲ, ಅವನ ಪ್ರಮುಖ ಕೆಲಸ ಭಾಷಾಂತರಿಸುವುದು.

ಅನುವಾದಿಸುವಾಗ ಮೂಲ ಪಠ್ಯ 10 ವಿವಿಧ ದಿಕ್ಕಿನ ಕಡೆ ಎಳೆಯಬಹುದು.

1. ಮೂಲಭಾಷೆಯ ಲೇಖಕನ ವೈಯಕ್ತಿಕ ಶೈಲಿ ಮತ್ತು ನುಡಿಕಟ್ಟುಗಳು - ಇವುಗಳನ್ನು ಯಾವಾಗ (ಅ) ಉಳಿಸಿಕೊಳ್ಳಬೇಕು. (ಆ) ಸಹಜ ಸ್ಥಿತಿಯಲ್ಲಿಡಬೇಕು?
2. ವಿಷಯ ಮತ್ತು ಸನ್ನಿವೇಶಗಳಿಗೆ ಅನುಗುಣವಾಗಿ ಈ ರೀತಿಯ ಪಠ್ಯಗಳ ಪರಂಪರಾಗತ ವ್ಯಾಕರಣ ಹಾಗೂ ಶಬ್ದ ಪ್ರಯೋಗ.
3. ಮೂಲಭಾಷೆ ಮತ್ತು ಅನುವಾದಿತ ಭಾಷೆಗಳನ್ನು ಬಿಟ್ಟು ಮೂರನೇ ಭಾಷೆಯ ವಿಚಾರಗಳನ್ನು ಪಠ್ಯದಲ್ಲಿ ಉಲ್ಲೇಖಿಸುವುದು.
4. ಆ ಕಾಲದ ಪದ್ಧತಿಯಂತೆ ಪುಸ್ತಕವನ್ನು ಒಂದು ನಿರ್ದಿಷ್ಟ ಕ್ರಮದಲ್ಲಿ ಬರೆದಿಡುವುದು.
5. ಓದುಗನ ವಿಷಯ ಹಾಗೂ ಅವನ ಬಳಸುವ ಜ್ಞಾನ ಹಾಗೂ ಅವನ ಬಳಸುವ ಭಾಷೆಯ ಶೈಲಿಯ ತಿಳುವಳಿಕೆ - ಏಕೆಂದರೆ ಭಾಷಾಂತರ ಓದುಗನ ಮೇಲೆ ಅಥವಾ ಕೆಳಗೆ ಹಾಯ್ದು ಹೋಗಬಾರದು.

   ಅವನ ನೇರಕ್ಕೆ ಇರಬೇಕು.
6. 7. 8.- ಅನುಕ್ರಮವಾಗಿ 2. 3. 4. ರಲ್ಲಿದ್ದಂತೆ, ಆದರೆ ಅನುವಾದಿತನ ಭಾಷೆಗೆ ಸಂಬಂಧಿಸಿದಂತೆ.
9. ಮೂಲಭಾಷೆಯಲ್ಲಿನ ವಿಷಯಕ್ಕೆ ಹೊರತಾಗಿ ಸ್ವತಂತ್ರವಾಗಿ ವಿವರಿಸಿದ ವಿಷಯ ಮತ್ತು ಓದುಗನ ಅಪೇಕ್ಷೆ.
10. ಅನುವಾದಕನ ವೈಯಕ್ತಿಕ, ಸಾಂಸ್ಕೃತಿಕ, ಸಾಮಾಜಿಕ, ವಿಚಾರಗಳು ಹಾಗೂ ಸ್ವಂತ ಅಭಿಪ್ರಾಯಗಳು

ಭಾಷಾಂತರದಲ್ಲಿ ಬೇರೆ ಕೆಲವು ಒತ್ತಡಗಳೂ ಇರುತ್ತವೆ. ಶಬ್ದ ಮತ್ತು ಅರ್ಥಗಳ ನಡುವೆ. ಶಬ್ದ ಜೋಡಣೆಯ ಸಮಯದಲ್ಲಿ ಒತ್ತು ನೀಡುವುದು, ವ್ಯಾಕರಣದಲ್ಲಿ ಸಹಜತೆ, ಅರ್ಥಾರ್ಥ ನಿರ್ಬಂಧ, ಹೊಂದಾಣಿಕೆ, ನಿಖರತೆ ಮುಂತಾದವುಗಳ ಕಡೆ ಗಮನ ಹರಿಸಬೇಕಾಗುತ್ತದೆ.

ಅಂತರರಾಷ್ಟ್ರೀಯ ಮಟ್ಟದಲ್ಲಿ ಭಾಷಾಂತರ ಒಂದು ಉದ್ಯೋಗವಾಗಿ ಪ್ರಾರಂಭವಾಗಿರುವುದು ಇತ್ತೀಚೆಗೆ. ಭಾಷಾಂತರ ಸಂಸ್ಥೆಗಳು ಕೇವಲ 30 ವರ್ಷಗಳ ಹಿಂದೆ ಪ್ರಾರಂಭವಾದವು. ಪ್ರಪಂಚದಲ್ಲಿರುವ ಸುಮಾರು 4000 ಭಾಷೆಗಳಲ್ಲಿ ಎಲ್ಲದಕ್ಕೂ

ಸಮಾನ ಸ್ಥಾನಮಾನಗಳಿವೆ. ಎಲ್ಲರಿಗೂ ಅವರದೇ ಆದ ಭಾಷೆ ಹೊಂದುವ ಹಕ್ಕಿದೆ. ಹಾಗೆಯೇ ಬೇರೆ ಭಾಷೆಯಲ್ಲಿರುವ ವಿಷಯವನ್ನು ತಿಳಿಯುವ ಹಕ್ಕು ಇದೆ. ಆದ್ದರಿಂದ ಭಾಷಾಂತರಕಾರರ ಕೆಲಸ ಬಹಳ ಪ್ರಮುಖವಾದುದು. ಪ್ರತಿಯೊಂದು ಭಾಷೆಯನ್ನು ಭಾಷಾಂತರಿಸಬಹುದು ಮತ್ತು ಭಾಷಾಂತರಕಾರ ಯಾವುದನ್ನು ಭಾಷಾಂತರಿಸಲು ಸಾಧ್ಯವಿಲ್ಲ ಎಂದು ಹೇಳುವುದು ಅನುಚಿತವಾಗುತ್ತದೆ.

''ಎರಡು ಭಾಷೆಗಳ ಸಂಸ್ಕೃತಿಗಳು ತುಲನೆ ಮಾಡಬಹುದಾದ ಎತ್ತರಕ್ಕೆ ಮುಟ್ಟಿದಲ್ಲಿ ಮಾತ್ರ ಒಂದು ಭಾಷೆಯಲ್ಲಿ ಹೇಳಿದ ಎಲ್ಲಾ ವಿಚಾರಗಳನ್ನು ಇನ್ನೊಂದು ಭಾಷೆಯಲ್ಲಿ ಭಾಷಾಂತರಿಸಬಹುದು'' ಎಂದು ಡ್ಯಾನಿಲ ಸೆಲಿಸ್ಕೊವಿಚ್ ಎಂಬ ಶ್ರೇಷ್ಠ ಲೇಖಕಿ ಹೇಳುತ್ತಾಳೆ. ಈ ಹೇಳಿಕೆ ಅಷ್ಟು ಸರಿಯಲ್ಲ. ಭಾಷಾಂತರ ಸತ್ಯಾನ್ವೇಷಣೆಗೆ ಮಾತ್ರವಲ್ಲ ಶಿಕ್ಷಣ ನೀಡುವ ಸಾಧನವೂ ಹೌದು. ಏಕೆಂದರೆ ಕೆಲವೊಮ್ಮೆ ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಹಿಂದುಳಿದ ಓದುಗರನ್ನು ಮುಟ್ಟುವುದು ಭಾಷಾಂತರದ ಉದ್ದೇಶವಾಗಿರುತ್ತದೆ. ವಿದೇಶೀಯನ ಸಂಸ್ಕೃತಿ, ಭಾಷೆ, ವಿಚಾರ, ಆಚಾರ ಎಲ್ಲಾ ಬೇರೆ ಇದ್ದರೂ ಇದನ್ನು ವಿವರಿಸಿ ಹೇಳಬಹುದಾಗಿದೆ. ಪ್ರಪಂಚದ ಯಾವುದೇ ಭಾಷೆ ಈಗ ಹಿಂದುಳಿದಿಲ್ಲ. ಅದು ಇನ್ನೊಂದು ಭಾಷೆಯ ವಿಚಾರಗಳನ್ನು ತೆಗೆದುಕೊಳ್ಳಬಲ್ಲದು. ಆದರೆ ಈ ಪ್ರಕ್ರಿಯೆಯಿಂದಾಗಿ ಕೆಲವೊಮ್ಮೆ ಮೂಲಭಾಷೆ ಮಾಡುವ ಪರಿಣಾಮ ಅನುವಾದಿತ ಭಾಷೆ ಮಾಡದೇ ಹೋಗಬಹುದು ಅಷ್ಟೆ.

ಭಾಷಾಂತರ ಪ್ರಕ್ರಿಯೆಗೆ ಅದರದೇ ಆದ ಪ್ರಕೋಪನ ಮತ್ತು ಆಸಕ್ತಿ ಇರುತ್ತದೆ. ಸಮಾಧಾನಕರವಾದ ಭಾಷಾಂತರ ಯಾವತ್ತೂ ಸಾಧ್ಯ. ಆದರೆ ಒಳ್ಳೆಯ ಭಾಷಾಂತರಕಾರ ಯಾವತ್ತೂ ಸಮಾಧಾನ ಪಡೆಯಬಾರದು, ತನ್ನ ಅನುವಾದವನ್ನು ಉತ್ತಮಪಡಿಸಲು ಪ್ರಯತ್ನಿಸಬೇಕು. ನಿಖರವಾದ, ಆದರ್ಶವಾದ ಅಥವಾ ಪರಿಪೂರ್ಣವಾದ ಅನುವಾದ ಎಂದು ಯಾವುದನ್ನೂ ಹೇಳಲು ಬರುವುದಿಲ್ಲ. ಒಬ್ಬ ಅನುವಾದಕ ತನ್ನ ಜ್ಞಾನದ ಪರಿಮಿತಿ ವಿಸ್ತಾರಗೊಂಡಂತೆಲ್ಲಾ ತನ್ನ ಅಭಿವ್ಯಕ್ತಿಯನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ. ಅವನೊಬ್ಬ ನಿರಂತರ ಸತ್ಯಾನ್ವೇಷಕ ಅವನು ನಾಲ್ಕು ಹಂತದಲ್ಲಿ ಕೆಲಸ ಮಾಡುತ್ತಾನೆ. ಮೊದಲನೆಯದು, ವೈಜ್ಞಾನ. ಇಲ್ಲಿ ಅನುವಾದಕ ವಾಸ್ತವಾಂಶಗಳ ಬಗ್ಗೆ ತಿಳಿದುಕೊಂಡು ತಪ್ಪು ಒಪ್ಪುಗಳ ಬಗ್ಗೆ ವಿಮರ್ಶೆ ಮಾಡುತ್ತಾನೆ. ಎರಡನೆಯದು ನೈಪುಣ್ಯತೆ. ಇಲ್ಲಿ ಅನುವಾದಕ ಸರಿಯಾದ ಭಾಷೆ ಮತ್ತು ಸೂಕ್ತ ನುಡಿಕಟ್ಟುಗಳನ್ನು ಉಪಯೋಗ ಮಾಡುತ್ತಾನೆ. ಮೂರನೆಯದು ಕಲೆ. ಇಲ್ಲಿ ಅನುವಾದಕ ಒಬ್ಬ ಸೃಜನಶೀಲ ಬರಹಗಾರನಾಗಿ ಅನುವಾದದ ಸೃಷ್ಟಿ ಮಾಡುತ್ತಾನೆ. ನಾಲ್ಕನೆಯದು ರುಚಿ. ಓದುಗನ ರುಚಿ ಏನು ಎಂದು ತಿಳಿದುಕೊಂಡು ಅದಕ್ಕೆ ತಕ್ಕ ಹಾಗೆ ಅನುವಾದವನ್ನು ರೂಪಿಸುವುದು.

ಭಾಷಾಂತರ ಪ್ರಕ್ರಿಯೆ ಕೂಡ ಒಂದು ರೀತಿಯಲ್ಲಿ ಅಭಿನಯ ಕಲೆ ಇದ್ದ ಹಾಗೆ. ನೈಜ ನಟರು ಹೇಗೆ ಅಭಿನಯದ ಸಿದ್ಧಿ ಪಡೆದಿರುತ್ತಾರೆಯೋ ಹಾಗೆಯೇ ನೈಜ ಅನುವಾದಕ ಭಾಷಾಂತರದ ಸಿದ್ಧಿ ಪಡೆದಿರುತ್ತಾನೆ. ಆಧುನಿಕ ಯುಗದಲ್ಲಿ ಪ್ರಸಾರ ಮಾಧ್ಯಮವಾಗಿ ಭಾಷಾಂತರದ ಮಹತ್ವ ಹೆಚ್ಚಾಗಿದೆ. ರಫ್ತು ಮಾಡುವ ಕಂಪನಿಗಳಲ್ಲಿ, ಪ್ರವಾಸೀ ಕೇಂದ್ರಗಳ ಪ್ರಚಾರದಲ್ಲಿ, ಅಧಿಕೃತ ಸರ್ಕಾರಿ ದಾಖಲೆಗಳಲ್ಲಿ, ರಾಷ್ಟ್ರರಾಷ್ಟ್ರಗಳ ನಡುವೆ ನಡೆಯುವ ಒಪ್ಪಂದಗಳಲ್ಲಿ ಮುಂತಾದ ಎಲ್ಲಾ

ಮಹತ್ವದ ಕಾರ್ಯಕ್ರಮಗಳಲ್ಲಿ ಭಾಷಾಂತರದ ಪಾತ್ರ ಹೆಚ್ಚಿದೆ. ಇದರ ಮಹತ್ವ ಎಷ್ಟಿದೆ ಎಂದರೆ ಎರಡನೇ ಮಹಾಯುದ್ಧದಲ್ಲಿ ಜಪಾನ್‌ನಿಂದ ವಾಷಿಂಗ್‌ಟನ್‌ಗೆ ಕಳುಹಿಸಿದ ತಂತಿ ಸಂದೇಶದಲ್ಲಿದ್ದ ಮೊಕಸುಟು (Mokasutu)ವನ್ನು ಪರಿಗಣಿಸಿದೆ (Considered) ಅನ್ನುವುದರ ಬದಲಾಗಿ ತಿರಸ್ಕರಿಸಿದೆ (ignored) ಎಂದು ತಪ್ಪಾಗಿ ಅನುವಾದಿಸಿದ್ದರಿಂದ ಹಿರೋಷಿಮಾದ ಮೇಲೆ ಬಾಂಬ್ ಹಾಕುವ ಘಟನೆ ನಡೆದುಹೋಯಿತು. ಹಾಗೆಯೇ ಸಂಯುಕ್ತ ರಾಷ್ಟ್ರದ 242ನೇ ತೀರ್ಮಾನದಲ್ಲಿದ್ದ "The withdrawal from occupied territoriesನ್ನು ತಪ್ಪಾಗಿ ' le, retrait de s territories occupes' ಎಂದು ಅನುವಾದಿಸಿದ್ದರ ಪರಿಣಾಮವಾಗಿ'' ಆಕ್ರಮಿಸಿಕೊಂಡ ಗಡಿಭಾಗದ ಬದಲಾಗಿ ಆಕ್ರಮಿಸಿಕೊಂಡ ಎಲ್ಲಾ ಗಡಿಭಾಗ''ವನ್ನು ಇಸ್ರೇಲ್ ಬಿಟ್ಟು ಕೊಡಬೇಕಾಯಿತು.

ದೇಶಗಳ ಮತ್ತು ಭಾಷೆಗಳ ನಡುವೆ ಸಂಪರ್ಕ ಏರ್ಪಟ್ಟ ಮೇಲೆ ಭಾಷಾಂತರವು ಸಂಸ್ಕೃತಿಯನ್ನು ಪ್ರಸಾರ ಮಾಡುವ ಸಾಧನವಾಗಿ ಮಾರ್ಪಟ್ಟಿದೆ. ಹಾಗಾಗಿ ರೋಮನರು ಗ್ರೀಕ್ ಸಂಸ್ಕೃತಿಯನ್ನು ಪಡಿಸಿಕೊಂಡರು ಟೊಲಿಡೊ ಸ್ಕೂಲ್ ಆಫ್ ಅರೇಬಿಕ್ ಮತ್ತು ಗ್ರೀಕ್ ಜ್ಞಾನವನ್ನು ಯೋರೋಪ್‌ಗೆ ವರ್ಗಾಯಿಸಿತು. ಹಾಗೂ 19ನೇ ಶತಮಾನದವರೆಗೆ ಯುರೋಪಿನ ಸಂಸ್ಕೃತಿ, ಲ್ಯಾಟಿನ್ ಮತ್ತು ಗ್ರೀಕ್ ಭಾಷಾಂತರದಿಂದ ಹೆಚ್ಚು ವಿಷಯಗಳನ್ನು ಪಡೆಯುತ್ತಿತ್ತು. 19ನೇ ಶತಮಾನದಲ್ಲಿ ಜರ್ಮನ್ ಸಂಸ್ಕೃತಿ ಶೇಕ್ಸ್‌ಪಿಯರ್‌ನನ್ನು ಹೀರಿಕೊಳ್ಳುತ್ತಿತ್ತು. ಈ ಶತಮಾನದಲ್ಲಿ ಎಲ್ಲ ಸಂಸ್ಕೃತಿಗಳ ಸಮ್ಮಿಶ್ರಣದ ವಿಶ್ವಸಂಸ್ಕೃತಿ ಗೋಚರವಾಗುತ್ತಿದೆ. ಇದರಲ್ಲಿ ಕೆಲವು ಅಂತರರಾಷ್ಟ್ರೀಯ ಲೇಖಕರ (ಗ್ರೀನ್, ಬೆಲ್ಲೊ, ಸೋಲ್ಜೆನಿತ್ಸನ್, ಬೋಲ್, ಗ್ರಾಸ್, ಮೊರೋವಿಯಾ, ಮುರ್‌ಡೋಜ್, ಲೆಸ್ಸಿಂಗ್, ಮಾನ್, ಬ್ರೆಚ್, ಕಾಫ್ಕ, ಮೌರಿಕ್, ವಲೇರಿ ಮುಂತಾದವರ) ಕೃತಿಗಳು ಅನೇಕ ರಾಷ್ಟ್ರೀಯ ಹಾಗೂ ಪ್ರಾಂತೀಯ ಭಾಷೆಗಳಿಗೆ ಭಾಷಾಂತರಗೊಂಡಿವೆ. ದುರದೃಷ್ಟದಿಂದ ಇದೇ ರೀತಿಯಲ್ಲಿ ಪ್ರಾಂತೀಯ ಹಾಗೂ ದೇಶೀಯ ಲೇಖಕರಿಂದ ವಿಶ್ವಸಂಸ್ಕೃತಿಯ ಚಳುವಳಿ ಆಗಲಿಲ್ಲ.

ಭಾಷಾಂತರ ಕೇವಲ ಸಂಸ್ಕೃತಿ ವಾಹಕ ಮಾತ್ರವಾಗದೆ ಸತ್ಯ ಮತ್ತು ಪ್ರಗತಿಯ ದ್ಯೋತಕ ಕೂಡ ಆಗಿದೆ. ಬೈಬಲಿನ ಭಾಷಾಂತರಕ್ಕೆ ಬಂದ ತಡೆ, ಲ್ಯಾಟೀನ್‌ನನ್ನು ಮೇಲ್ ವರ್ಗದವರ ಭಾಷೆಯನ್ನಾಗಿ ಉಳಿಸಿಕೊಂಡಿದ್ದು, ಇದರಿಂದಾಗಿ ಬೇರೆ ಬೇರೆ ಭಾಷೆಗಳ ನಡುವೆ ಭಾಷಾಂತರಕ್ಕೆ ಉತ್ತೇಜನ ದೊರೆಯದುದು ಇವುಗಳನ್ನು ಉದಾಹರಿಸಬಹುದಾಗಿದೆ.

ವಿದೇಶಿ ಭಾಷೆಗಳನ್ನು ಕಲಿಯುವ ತಂತ್ರಕ್ಕೆ ಭಾಷಾಂತರ ಎರಡೂ ಕಡೆ ಹರಿತವಾದ ಕತ್ತಿಯಂತೆ ಕೆಲಸ ಮಾಡುತ್ತದೆ. ಅದು ಭಾಷಾಂತರಕಾರನ ಸ್ವಂತ ಭಾಷೆಯ ಮೇಲಿನ ಹಿಡಿತವನ್ನು ಮಾತ್ರ ತೋರಿಸುವುದಲ್ಲದೆ ಅವನ ಪರಭಾಷಾ ಜ್ಞಾನವನ್ನು ಪ್ರದರ್ಶಿಸುತ್ತದೆ. ಅನುವಾದಕನಿಗೆ ಬೇರೆ ಯಾವುದೇ ವ್ಯಕ್ತಿಯವರಿಗಿಂತ ಮುಖ್ಯವಾದ ಸಮಸ್ಯೆ ಎಂದರೆ ಆಯ್ಕೆಯದು. ಆಯ್ಕೆಯಲ್ಲೂ ಗುಣಾತ್ಮಕ ಶಬ್ದಗಳ ಹಾಗೂ ಮಾನಸಿಕ ಪ್ರಪಂಚದ ಶಬ್ದಗಳ ಆಯ್ಕೆ (ಉದಾ : ಒಳ್ಳೆಯ, ಚೆನ್ನಾಗಿ, ಒಳ್ಳೆತನ) ವಸ್ತು ಮತ್ತು ಘಟನೆಗಳ ಆಯ್ಕೆಗಿಂತ ಕಷ್ಟಕರವಾದುದು. ಹೀಗೆ ಆಯ್ಕೆ ಮಾಡುವಾಗ ಅನುವಾದಕ ಸ್ವಾಭಾವಿಕವಾಗಿ ಭಾಷಾಂತರ ತತ್ವಗಳನ್ನು ಅನುಸರಿಸುತ್ತಾನೆ. ವ್ಯಾಕರಣದ ಅಧ್ಯಾಪಕ ಭಾಷಾಶಾಸ್ತ್ರದ ತತ್ವಗಳನ್ನು ಅನುಸರಿಸಿದಂತೆ, ಭಾಷಾಂತರದಲ್ಲಿ ಅನುಸರಿಸಬೇಕಾದುದು ಕ್ರಿಯಾತ್ಮಕ ತತ್ವ. ಅನುವಾದಕ ತಾನು ಆಯ್ಕೆ ಮಾಡುವ

ಮೊದಲು ಬೇರೆಬೇರೆ ಸಾಧ್ಯತೆಗಳನ್ನು ಪರಿಶೀಲಿಸುತ್ತಾನೆ. ಇದು ಭಾಷಾಂತರ ಕ್ರಿಯೆಯ ಪ್ರಮುಖ ಭಾಗ. ಹೀಗ ಸತತವಾಗಿ ಎದುರಾಗುವ ಸಮಸ್ಯೆಗಳನ್ನು ಸಿಕ್ಕುಗಳನ್ನು ಬಿಡಿಸುತ್ತಾ ಹೋದಂತೆಲ್ಲಾ ಅನುವಾದಕ ಒಂದು ರೀತಿಯ ಅಂತರೀ ಆನಂದವನ್ನು ಪಡೆಯುತ್ತಾನೆ. ಶಬ್ದಾರ್ಥಗಳನ್ನು ಹುಡುಕುವುದೇ ಇಲ್ಲಿರುವ 'ಆಟ'ದ ಭಾಗ. ಬೇರೆಯವರೆಲ್ಲಾ ಸರಿಯಾದ ಶಬ್ದಕ್ಕೆ ಪರದಾಟ ಮಾಡುತ್ತಿರುವಾಗ ತಾನು ಕಂಡು ಹಿಡಿದೆ ಎಂಬ ಸಂತಸ. ಶಬ್ದ ಮತ್ತು ವಾಕ್ಯರಚನೆಗಳ ನಡುವಿನ ಮಾನಸಿಕ ಒತ್ತಡ ಸರಿಯಾದ ಶಬ್ದ ಸಿಕ್ಕಿದಾಗ ಕಡಿಮೆಯಾಗಿ ಸಹಜ ಸಂತೋಷ ದೊರೆಯುತ್ತದೆ. ಇದು ಭಾಷಾಂತರ ಪ್ರಕ್ರಿಯೆಯಲ್ಲಿನ ವಿಶೇಷತೆ. ಭಾಷಾಂತರ ತತ್ವದ ಬಗ್ಗೆ ಈಗ ವಿಶ್ವವಿದ್ಯಾಲಯಗಳಲ್ಲಿ ಒಂದು ಹೊಸ ವಿಷಯ ಪ್ರಾರಂಭವಾಗಿದೆ. - ಕೆನಡಾದಲ್ಲಿ Translatology, ಸ್ಪೈನ್‌ನಲ್ಲಿ Traduotolegia, ಜರ್ಮನ್ ಭಾಷೆಯನ್ನಾಡುವ ದೇಶಗಳಲ್ಲಿ Ubersety imgswissensehaft, ನೆದರ್ಲ್ಯಾಂಡ್ ಮತ್ತು ಬೆಲ್ಜಿಯಂನಲ್ಲಿ Translation studies.

ಕಿರಿದಾದ ದೃಷ್ಟಿಯಿಂದ ನೋಡಿದಾಗ ಭಾಷಾಂತರ ತತ್ವವು ಒಂದು ರೀತಿಯ ಪಠ್ಯವನ್ನು ಭಾಷಾಂತರಿಸಲು ಬಳಸುವ ಭಾಷಾಂತರ ಪದ್ಧತಿಗೆ ಸಂಬಂಧಿಸಿದ್ದು ಎನ್ನಬಹುದು. ಆದ್ದರಿಂದ ಅದು ಭಾಷೆಯ ಕಾರ್ಯಾರ್ಥಕ ತತ್ವವನ್ನು ಹೊಂದಿಕೊಂಡಿದೆ. ವಿಶಾಲದೃಷ್ಟಿಯಿಂದ ನೋಡಿದಾಗ ಭಾಷಾಂತರ ತತ್ವವು ಸಾಮಾನ್ಯ ನಿಯಮಗಳಿಂದ ಮಾರ್ಗದರ್ಶನಗಳು, ಅಭಿಪ್ರಾಯಗಳು, ಸುಳಿವುಗಳನ್ನು ಕೊಡುವ ಜ್ಞಾನದ ಅಂಗ. ಇದರಲ್ಲಿ ಒಂದೇ ಒಂದು ನಿಯಮವೆಂದರೆ ಆವರ್ತನ ನಿಯಮ. ಅದರಂತೆ ಸಮಾನಾಂತರ ಶಬ್ದಗಳ ಬಳಕೆಯಾಗಬೇಕು. ಉದಾಹರಣೆಗೆ ಗಾದೆಗಳು, ಪದಗುಚ್ಛಗಳು ಮುಂತಾದವುಗಳನ್ನು ಉದ್ದಿಷ್ಟ ಭಾಷೆಗಳೆರಡಲ್ಲೂ ಆದಷ್ಟುಮಟ್ಟಿಗೂ ಸಮಾನ ಆವರ್ತನದಲ್ಲಿಡಲು ಪ್ರಯತ್ನಿಸಬೇಕು. ಭಾಷಾಂತರ ತತ್ವವು ಅಲ್ಪ ವಿರಾಮ ಚಿಹ್ನೆ, ಇಟ್ಯಾಲಿಕ್ ಮುಂತಾದ ಸೂಕ್ಷ್ಮ ವಿಷಯಗಳ ಬಗ್ಗೆ ಹಾಗೂ ವಿಷಯವನ್ನು ಹೇಳುವ ವಿಧಾನ, ಅಂತರಾರ್ಥ ಮುಂತಾದ ಸಾಮಾನ್ಯ ವಿಷಯಗಳ ಬಗ್ಗೆಯೂ ಗಮನಹರಿಸುತ್ತದೆ.

ಭಾಷಾಂತರ ತತ್ವವು ಏನು ಮಾಡುತ್ತದೆ ಎಂದರೆ ಮೊದಲಿಗೆ ಒಂದು ಭಾಷಾಂತರ ಸಮಸ್ಯೆಯನ್ನು ಗುರುತಿಸಿ ವಿವರಿಸುತ್ತದೆ. ಎರಡನೆಯದಾಗಿ ಸಮಸ್ಯೆಯ ಪರಿಹಾರಕ್ಕೆ ಅಗತ್ಯವಾದ ಎಲ್ಲಾ ವಿಚಾರಗಳನ್ನು ಗಣನೆಗೆ ತೆಗೆದುಕೊಳ್ಳುತ್ತದೆ.ಮೂರನೆಯದಾಗಿ ಎಲ್ಲಾ ಸಾಧ್ಯವಿರುವ ಭಾಷಾಂತರ ವಿಧಾನಗಳನ್ನು ಶಿಫಾರಸ್ಸು ಮಾಡುತ್ತದೆ.

ಭಾಷಾಂತರದಲ್ಲಿ ಈ ಶತಮಾನದ ಪ್ರಾರಂಭದಲ್ಲಿದ್ದುದಕ್ಕಿಂತ ಭಿನ್ನವಾಗಿ ಈಗ ಇರುವ ಮುಖ್ಯ ವಸ್ತುಗಳು ಇಂತಿವೆ:

1. ಭಾಷಾಂತರದಲ್ಲಿ ಈಗಿನ ಒತ್ತು ಓದುಗ ಮತ್ತು ಸನ್ನಿವೇಶದ ಮೇಲೆ ಅಂದರೆ ಅದು ಸಹಜವಾಗಿದ್ದು ಸುಲಭವಾಗಿ ಅರ್ಥವಾಗುವಂತಿರಬೇಕು.
2. ಧರ್ಮ, ಸಾಹಿತ್ಯ, ವಿಜ್ಞಾನ, ತಂತ್ರಜ್ಞಾನ, ವ್ಯಾಪಾರ, ಪ್ರಸ್ತುತ ಘಟನಾವಳಿ, ಪ್ರಚಾರ, ಮುಂತಾದ ಬರವಣಿಗೆಯ ಎಲ್ಲಾ ವಸ್ತುಗಳನ್ನು ಭಾಷಾಂತರದ ವ್ಯಾಪ್ತಿಗೆ ಅಳವಡಿಸಿಕೊಳ್ಳುವುದು.
3. ಪುಸ್ತಕಗಳನ್ನು (ನಾಟಕಗಳು ಮತ್ತು ಕವಿತೆಗಳು ಸೇರಿದಂತೆ) ಮಾತ್ರವಲ್ಲದೆ ಲೇಖನಗಳು, ಒಪ್ಪಂದಗಳು, ಸಂಧಿಗಳು, ಕಾನೂನುಗಳು, ನೋಟೀಸುಗಳು, ಜಾಹೀರಾತು, ತಿಳುವಳಿಕೆ, ಪತ್ರಗಳು, ಪ್ರಚಾರ ವಸ್ತುಗಳು, ಪತ್ರಗಳು, ವರದಿಗಳು,

ವ್ಯವಹಾರ ಪತ್ರಗಳು ಮುಂತಾದವುಗಳ ಭಾಷಾಂತರ ಈಗ ಹೆಚ್ಚಾಗಿದ್ದು ಭಾಷಾಂತರದ ವಿಷಯಗಳ ಸಂಖ್ಯೆಯನ್ನು ಪಟ್ಟಿ ಮಾಡುವುದೇ ಕಷ್ಟವಾಗಿದೆ. ಪುಸ್ತಕಗಳಿಗಿಂತ ಹೆಚ್ಚಾಗಿ ಇಂತಹ ವಿಷಯಗಳೇ ಇಂದು ಹೆಚ್ಚು ಭಾಷಾಂತರಗೊಳ್ಳುತ್ತವೆ.

4. ಪರಿಭಾಷೆಗಳನ್ನು ಮಾನಬದ್ಧಗೊಳಿಸುವುದು.

5. ಭಾಷಾಂತರ ಶಬ್ದಗಳನ್ನು ರೂಪಿಸುವುದು ಮತ್ತು ಸ್ವೀಕಾರ ಮಾಡುವವರ ಪಾತ್ರವನ್ನು ಗುರುತಿಸುವುದು.

6. ಭಾಷಾಂತರಕಾರರು ತಾಂತ್ರಿಕ ಹಾಗೂ ವಿಶ್ವವಿದ್ಯಾಲಯಗಳ ಮೂಲಕ ಹಾಯ್ದುಹೋಗುವಾಗ ಭಾಷಾಶಾಸ್ತ್ರ, ಸಾಮಾಜಿಕ ಭಾಷಾಶಾಸ್ತ್ರ ಮತ್ತು ಭಾಷಾಂತರ ತತ್ವಗಳ ಮೇಲೆ ಆಗುವ ಪ್ರಭಾವ.

7. ಭಾಷಾಂತರವು ಇಂದು ಜ್ಞಾನವಾಹಕವಾಗಿ ಹಾಗೂ ಪಂಗಡಗಳ ನಡುವೆ, ದೇಶಗಳ ನಡುವೆ ಸಾಂಸ್ಕೃತಿಕ ಬಾಂಧವ್ಯವನ್ನು ರೂಪಿಸುವ ಮಾಧ್ಯಮವಾಗಿ ಉಪಯೋಗಿಸಲ್ಪಡುತ್ತಿದೆ.

ಒಟ್ಟಿನಲ್ಲಿಇವೆಲ್ಲವೂ ಸೇರಿ ಒಂದು ಹೊಸ ವಿಭಾಗ, ಒಂದು ಹೊಸ ಉದ್ಯೋಗ ಹಾಗೂ ಬೇರೆ ಬೇರೆ ಉದ್ದೇಶಕ್ಕೆ ಉಪಯೋಗವಾಗುತ್ತಿರುವ ಅನಾದಿಕಾಲದ ಅನ್ವೇಷಣೆಯಾದ ಭಾಷಾಂತರವಾಗುತ್ತದೆ.

## 2. ಪಠ್ಯ ವಿಂಗಡಣೆ

### 1. ಪಠ್ಯವನ್ನು ಓದುವುದು

ಮೂಲಪಠ್ಯವನ್ನು ನಾವು ಎರಡು ಉದ್ದೇಶದಿಂದ ಓದಲು ಪ್ರಾರಂಭಿಸುತ್ತೇವೆ. ಮೊದಲನೆಯದು, ಅದು ಯಾವುದರ ಬಗ್ಗೆ ಹೇಳಿದೆ ಎಂದು ನೋಡಲು, ಎರಡನೆಯದು. ಅದನ್ನು ಒಬ್ಬ ಭಾಷಾಂತರಕಾರನ ದೃಷ್ಟಿಯಿಂದ ವಿಂಗಡಿಸುವುದು. ಭಾಷಾಂತರಕಾರನ ದೃಷ್ಟಿ ಒಬ್ಬ ಭಾಷಾಶಾಸ್ತ್ರಜ್ಞನ ದೃಷ್ಟಿಯಿಂದ ಅಥವಾ ಒಬ್ಬ ಸಾಹಿತ್ಯ ವಿಮರ್ಶಕನ ದೃಷ್ಟಿಯಿಂದ ಬೇರೆಯಾಗಿರುತ್ತದೆ. ಅದರ ಉದ್ದೇಶವನ್ನು ಅರ್ಥಮಾಡಿಕೊಂಡು ಅದು ಹೇಗೆ ಬರೆಯಲ್ಪಟ್ಟಿದೆ ಎಂದು ತಿಳಿದುಕೊಂಡು. ಅದಕ್ಕೆ ಮುಂಬರುವ ಸಮಸ್ಯೆಗಳನ್ನು ವಿಚಾರ ಮಾಡಿ ಸರಿಯಾದ ಭಾಷಾಂತರ ವಿಧಾನವನ್ನು ಹುಡುಕಬೇಕಾಗುತ್ತದೆ.

ಪಠ್ಯವನ್ನು ಅರ್ಥಮಾಡಿಕೊಳ್ಳಲು ಸಾಮಾನ್ಯ ಪಠಣ ಹಾಗೂ ತೀಕ್ಷ್ಣ ಪಠಣದ ಅವಶ್ಯಕತೆ ಇದೆ. ಸಾಮಾನ್ಯ ಪಠಣದ ಉದ್ದೇಶ ಮುಖ್ಯಾಂಶಗಳನ್ನು ಗ್ರಹಿಸುವುದು. ಇಲ್ಲಿ ಪಠ್ಯವಿಷಯವನ್ನು ಅರ್ಥಮಾಡಿಕೊಳ್ಳುವುದು ಮುಖ್ಯ. ತೀಕ್ಷ್ಣಪಠಣದಲ್ಲಿ ಆ ಸಂದರ್ಭದಲ್ಲಿ ಶಬ್ದಗಳ ಅರ್ಥವೇನಾಗುತ್ತದೆ, ಸಂದರ್ಭದ ಹೊರತಾಗಿ ಶಬ್ದಗಳ ಅರ್ಥವೇನಾಗುತ್ತದೆ ಎಂದು ನೋಡಬೇಕಾಗುತ್ತದೆ. 'ವಿಶ್ವಕೋಶ'ದ ಅರ್ಥಗಳು ಕೂಡ 'ಅರ್ಥಕೋಶ'ದ ಅರ್ಥದಷ್ಟೇ ಮುಖ್ಯವಾದುವು. ಭಾಷಾಂತರ ಸಮುದ್ರದಲ್ಲಿರುವ ಮಂಜುಗಡ್ಡೆಯ ಮೊನೆ ಇದ್ದಂತೆ ಹೊರಗೆ ಕಾಣುವುದು ಅತ್ಯಲ್ಪ. ನೀರಿನಲ್ಲಿ ಮುಚ್ಚಿಕೊಂಡಿರುವುದೇ ಹೆಚ್ಚು. ಭಾಷಾಂತರದಲ್ಲಿ ಗೋಚರಿಸುವುದು ಸ್ವಲ್ಪ. ಮೂಲವು ಮುಚ್ಚಿಕೊಂಡಿರುವುದೇ ಹೆಚ್ಚು.

## 2. ಪಠ್ಯದ ಉದ್ದೇಶ

ಪಠ್ಯದ ಉದ್ದೇಶವನ್ನು ತಿಳಿಯದೆ ಅದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಅವೆರಡೂ ಜೊತೆಜೊತೆಯಾಗಿ ಸಾಗುತ್ತವೆ. ಕೆಲವೊಮ್ಮೆ ಪಠ್ಯದ ತಲೆಬರಹ ಅದರ ಅರ್ಥ ಮತ್ತು ಉದ್ದೇಶದಿಂದ ದೂರವಿರುವುದು ನಮಗೆ ಕಾಣುತ್ತದೆ. ಉದಾಹರಣೆಗೆ ಒಂದು ಯುದ್ಧವನ್ನು ಎರಡು ಪಠ್ಯಗಳು ಒಂದೇ ಅಂಕಿಅಂಶಗಳನ್ನು ಕೊಟ್ಟು ವಿವರಿಸಬಹುದು. ಅದರ ಅವರು ಯಾವ ರೀತಿಯ ಭಾಷೆ ಹಾಗೂ ವ್ಯಾಕರಣ ಪರಿಕರಗಳನ್ನು ಬಳಸಿದ್ದಾರೆ ಎನ್ನುವುದರ ಮೇಲೆ ಅವರ ದೃಷ್ಟಿಕೋನ ಬದಲಾಗುತ್ತದೆ. ಮೂಲ ಪಠ್ಯ ವಸ್ತುವಿನ ಬಗ್ಗೆ ಲೇಖಕದ ದೃಷ್ಟಿಕೋನದ ಮೇಲೆ ಅದರ ಉದ್ದೇಶ ಹೊಂದಿಕೊಂಡಿದೆ.

## 3. ಅನುವಾದಕನ ಉದ್ದೇಶ

ಸಾಮಾನ್ಯವಾಗಿ ಅನುವಾದಕನ ಉದ್ದೇಶ ಹಾಗೂ ಮೂಲಲೇಖಕರ ಉದ್ದೇಶ ದೃಷ್ಟಿಯಲ್ಲಿಟ್ಟುಕೊಂಡು ಅನುವಾದ ಮಾಡುತ್ತಾನೆ. ಹಾಗೆ ಮಾಡಿದಾಗ ಅನುವಾದದ ವ್ಯಾಪ್ತಿ ಪುನಃಸೃಷ್ಟಿಗಿಂತ ಹೆಚ್ಚು ವಿಸ್ತಾರವಾಗುತ್ತದೆ.

## 4. ಪಠ್ಯ ಶೈಲಿ

'ನಿಡಾ' ಪ್ರಕಾರ ಪಠ್ಯದಲ್ಲಿ 4 ರೀತಿಯ ಶೈಲಿ ಇರುತ್ತದೆ:

(ಅ) ವೃತ್ತಾಂತ (Narration) ಒಂದರ ನಂತರ ಒಂದು ಚಲನಶೀಲ ಘಟನಾವಳಿಗಳನ್ನು ಹೆಣೆಯುವುದು ಹಾಗೂ ಕ್ರಿಯಾಪದಗಳಿಗೆ ಅದರಲ್ಲೂ ಹೆಚ್ಚಾಗಿ ಕ್ರಿಯಾವಾಚಕ ನಾಮಪದಗಳಿಗೆ ಅಥವಾ ಕ್ರಿಯಾಪುಂಜಗಳಿಗೆ ಒತ್ತುಕೊಡುವುದು ('ಅವನು ತಕ್ಷಣ ಪ್ರತ್ಯಕ್ಷವಾದ' 'ಅವನು ಒಳನುಗ್ಗಿದ'.)

(ಆ) ವಿವರಣೆ (Description) ಚಲನಶೀಲವಲ್ಲದ ಸ್ಥಿರವಾದ ವಿವರಣೆ ನೀಡುವುದು- ಹಾಗೆ ಮಾಡುವಾಗ ಜೋಡಿಸುವ ಕ್ರಿಯಾಪದಗಳಿಗೆ, ಗುಣವಾಚಕಗಳಿಗೆ ಹಾಗೂ ಗುಣವಾಚಕ ನಾಮಪದಗಳಿಗೆ ಹೆಚ್ಚು ಒತ್ತು ನೀಡುವುದು.

(ಇ) ಚರ್ಚೆ (Discussion) ವಿಚಾರಗಳನ್ನು ಬಳಸಿಕೊಳ್ಳುವುದು - ಕಲ್ಪನೆಗಳಿಗೆ ಒತ್ತುಕೊಡುವುದು, ಯೋಚನೆಗಳಿಗೆ ಸಂಬಂಧಿಸಿದ ಕ್ರಿಯಾಪದಗಳ ಬಳಕೆ, ಮಾನಸಿಕ ಚಟುವಟಿಕೆಗಳು (ಪರಿಗಣಿಸು, ವಾದಿಸು ಇತ್ಯಾದಿ) ತಾರ್ಕಿಕ ಚರ್ಚೆ, ಹಾಗೂ ಜೋಡಣೆ ಶಬ್ದಗಳ ಬಳಕೆ.

(ಈ) ಸಂವಾದ (Dialogue) ಗ್ರಾಮ್ಯ ಹಾಗೂ ಸಾಮಾಜಿಕ ಸಂಬಂಧಗಳನ್ನು ಸೂಚಿಸುವ ಶಬ್ದಗಳ ಬಳಕೆ.

## 5. ಓದುಗರು

ಮೂಲಪಠ್ಯದಲ್ಲಿನ ವೈವಿಧ್ಯಮಯ ಭಾಷಾ ಬಳಕೆಯ ಆಧಾರದ ಮೇಲೆ ಮೂಲಪಠ್ಯದ ಓದುಗರ ಮನೋಭಾವನೆಯನ್ನು ಅರ್ಥಮಾಡಿಕೊಳ್ಳಬೇಕು. ಅನಂತರ ಅನುವಾದಿತ ಭಾಷೆಯ ಓದುಗರ ಬಗ್ಗೆ ಎಷ್ಟು ಗಮನ ಕೊಡಬೇಕು ಎಂದು ತೀರ್ಮಾನಿಸಬೇಕು. ಹೀಗೆ ಮಾಡುವಾಗ ಅವರ ವಿದ್ಯಾಭ್ಯಾಸ ಮಟ್ಟ, ಅವರ ಸ್ಥಾನ-ಮಾನ, ವಯಸ್ಸು, ಲಿಂಗಗಳ ಬಗ್ಗೆ ಗಮನಕೊಡಬೇಕು.

ಸಾಮಾನ್ಯವಾಗಿ ವಿದ್ಯಾವಂತ ಮಧ್ಯಮ ವರ್ಗದ ಜನರಿಗೆ ಗ್ರಾಮ್ಯವಲ್ಲದ ಸಹಜ ಭಾಷೆ. ಶೈಲಿಯಲ್ಲಿ ಭಾಷಾಂತರ ಪ್ರಿಯವಾಗುತ್ತದೆ. ಇಲ್ಲಿ ಓದುಗ ಮುಖ್ಯ. ಆದರೆ ತಮ್ಮ ಜ್ಞಾನ ಪ್ರದರ್ಶನ ಮಾಡಬಯಸುವವರು ಹೆಚ್ಚಾಗಿ ದೊಡ್ಡ ದೊಡ್ಡ ಶಬ್ದಗಳ ಪ್ರಯೋಗ ಮಾಡುವಲ್ಲಿ ಆಸಕ್ತಿ ವಹಿಸುತ್ತಾರೆ. ಓದುಗನನ್ನು ದೃಷ್ಟಿಯಲ್ಲಿಟ್ಟುಕೊಂಡು ಭಾಷಾಂತರದಲ್ಲಿ ಬಳಸುವ ಭಾಷೆಯಲ್ಲಿ ಸಹಜತೆ, ನಿರ್ದಿಷ್ಟತೆ ಹಾಗೂ ಭಾವೋದ್ರೇಕ ಇಷ್ಟಿರಬೇಕೆಂದು ನಿಶ್ಚಯಿಸಬೇಕಾಗುತ್ತದೆ.

## 6. ಶೈಲಿ



ಶೈಲಿಯಲ್ಲಿರುವ ವೈವಿಧ್ಯತೆಯನ್ನು ಈ ಕೆಳಕಂಡಂತೆ ಗುರುತಿಸಬಹುದು:

| | | |
|---|---|---|
| 1. | ಕಾನೂನು ಶೈಲಿ (Officialene) | "ಈ ಆವರಣದೊಳಗೆ ಯಾವುದೇ ರೀತಿ ಗಲೀಜು ಮಾಡುವುದನ್ನು ಪ್ರತಿಬಂಧಿಸಲಾಗಿದೆ." |
| 2. | ಆಡಳಿತ ಶೈಲಿ (Official) | "ಇಲ್ಲಿ ಗಲೀಜು ಮಾಡುವುದನ್ನು ಪ್ರತಿಬಂಧಿಸಿದೆ." |
| 3. | ವಿಧ್ಯುಕ್ತ ಶೈಲಿ (Formal) | "ಈ ಆವರಣದಲ್ಲಿ ಗಲೀಜು ಮಾಡಬಾರದಾಗಿ ತಮ್ಮನ್ನು ವಿನಂತಿಸಲಾಗಿದೆ.ಲಲ |
| 4. | ಅಸಾಂಪ್ರತ ಶೈಲಿ (Informal) | "ದಯವಿಟ್ಟು ಇಲ್ಲಿ ಗಲೀಜು ಮಾಡಬೇಡಿ." |
| 5. | ತಟಸ್ಥ ಶೈಲಿ (Neutral) | "ಇಲ್ಲಿ ಗಲೀಜು ಮಾಡಬಾರದು." |
| 6. | ಗ್ರಾಮ್ಯ (Colloquial) | "ಲೇ ಕೊಳಕು ಮಾಡಬ್ಯಾಡ." |
| 7. | ಆಡುನುಡಿ (Slang) | "ಏ ಯಾರೋ ಅವು ಗಲೀಜ್ ಮಾಡೋದು?" |
| 8. | ಬಹಿಷ್ಕೃತನುಡಿ (Taboo) | "ಲೇ ಕೊಳಕ ನನ್ನ ಮಗನೇ, ಹೋಗೋ ಆ ಕಡೆ." |

## 7. ದೃಷ್ಟಿಕೋನ



ಭಾಷಾಂತರ ವಸ್ತುವನ್ನು ಮೌಲ್ಯಮಾಪನ ಮಾಡಿ ಶಿಫಾರಸ್ಸು ಮಾಡುವಾಗ ಲೇಖಕನ ಮಟ್ಟವನ್ನು ಗುರುತಿಸಬೇಕು. ಅವನು 'ಉತ್ತಮ' 'ಪರವಾಗಿಲ್ಲ' 'ಸಾಧಾರಣ' 'ಸಮರ್ಥ' 'ಸಾಮಾನ್ಯ' 'ತೃಪ್ತಿಕರ' 'ಮಧ್ಯಮ' 'ಕೆಟ್ಟ' 'ಅತ್ಯುತ್ತಮ' - ಮಟ್ಟದ ಲೇಖಕನೇ ಎಂದು ನೋಡಬೇಕು.ಅವನ ಸಂಸ್ಕೃತಿಯಲ್ಲಿ ಅವನನ್ನು ಪೂರ್ಣವಾಗಿ ಅಥವಾ ಸಾಮಾನ್ಯವಾಗಿ ಒಪ್ಪಿಕೊಂಡಿದ್ದಾರೆಯೇ ಎಂದು ಕೂಡ ನೋಡಬೇಕು. ಕೆಲವೊಮ್ಮೆ ಅವನ ಬಗ್ಗೆ ಇರುವ ಒಳ್ಳೆಯ ಮತ್ತು ಕೆಟ್ಟ ಅಭಿಪ್ರಾಯಗಳ ಬಗ್ಗೆ ಬಹಳ ತೆಳುವಾದ ರೇಖೆ ಇರುತ್ತದೆ. ಇದನ್ನು ಗ್ರಹಿಸಬೇಕು. ಕೆಲವು ಶಬ್ದಗಳನ್ನು ಒಳ್ಳೆಯ, ಕೆಟ್ಟ ಹಾಗೂ ಸಾಮಾನ್ಯ ಅರ್ಥದಲ್ಲಿ ಸಂದರ್ಭಕ್ಕನುಸಾರವಾಗಿ ಬಳಸಲಾಗುತ್ತದೆ. ಉದಾ : ದಪ್ಪ। ದುಮ್ಮ। ಬೆಳ್ಳನೆ। ಬಳಕುವ। ಸೊಣಕಲ। ಹೀಗೆ ಯಾವ ಅರ್ಥದಲ್ಲಿ ಯಾವ ದೃಷ್ಟಿಕೋನದಲ್ಲಿ ಶಬ್ದ ಬಳಕೆಯಾಗಿದೆ ಎಂದು ನೋಡಬೇಕು.

## 8. ಸೆಟ್ಟಿಂಗ್

ಭಾಷಾಂತರಿಸುವಾಗ ಉದ್ದಿಷ್ಟ ಭಾಷೆಯ ಸೆಟ್ಟಿಂಗ್ ಕೂಡ ಮುಖ್ಯ. ಯಾರಿಗಾಗಿ ನಾವು ಬರೆಯುತ್ತಿದ್ದೇವೆ? ಅವರ

ಅಗತ್ಯವೇನು? ಅಲ್ಲಿಯ ವಾತಾವರಣವೇನು? ಇವುಗಳನ್ನು ಗಮನಿಸಬೇಕಾಗುತ್ತದೆ. ಮೂಲಭಾಷೆಯ ಸೆಟ್ಟಿಂಗ್ ಹೇಗಿತ್ತು? ಅದನ್ನು ಯಾರಿಗಾಗಿ ಬರೆಯಲ್ಪಟ್ಟಿತ್ತು? ಅವರ ಸಾಂಸ್ಕೃತಿಕ ಹಾಗೂ ವಿದ್ಯಾಭ್ಯಾಸದ ಹಿನ್ನೆಲೆ ಏನು? ಇದನ್ನೂ ವಿಚಾರ ಮಾಡಬೇಕಾಗುತ್ತದೆ. ಮುಖ್ಯವಾಗಿ ಮೂರು ರೀತಿಯ ಓದುಗರಿರುತ್ತಾರೆ. ತಜ್ಞರು, ವಿದ್ಯಾವಂತ ಮುಗ್ಧರು, ಮಾಹಿತಿರಹಿತರು. ಆದ್ದರಿಂದ ಭಾಷಾಂತರಿಸುವಾಗ ಉದ್ದಿಷ್ಟ ಭಾಷಾ ಓದುಗರು ವಿಷಯಜ್ಞಾನ ಹೊಂದಿದ್ದಾರೆಯೇ, ಅವರ ಶಿಕ್ಷಣ ಮಟ್ಟವೇನು, ಅವರ ಭಾಷಾ ಪರಿಣಿತಿ ಏನು ಎಂದು ತಿಳಿದುಕೊಂಡು ಅದಕ್ಕನುಗುಣವಾಗಿ ಭಾಷಾಂತರಿಸಬೇಕಾಗುತ್ತದೆ. ಕೊನೆಯದಾಗಿ, ನೀವು ಒಂದು ಕವಿತೆಯನ್ನೋ ಅಥವಾ ಮುಖ್ಯವಾದ ಹೇಳಿಕೆಯನ್ನೋ ಭಾಷಾಂತರಿಸುವಾಗ ಪ್ರಾಯಶಃ ಸೆಟ್ಟಿಂಗ್ ಬಗ್ಗೆ ವಿಚಾರ ಮಾಡುವುದು ಸರಿಯಾಗಲಾರದು. ಹಾಗೆ ಮಾಡಿದಲ್ಲಿ ಆ ಭಾಷಾಂತರ ಸರಿಯಾಗಿ ಮೂಡಿಬರಲು ಸಾಧ್ಯವಿಲ್ಲ.

**9. ಬರವಣಿಗೆಯ ಗುಣಮಟ್ಟ**

ಭಾಷಾಂತರ ಕ್ರಮವನ್ನು ಅನುಸರಿಸುವಾಗ ಬರವಣಿಗೆಯ ಗುಣಮಟ್ಟ ಹಾಗೂ ಪಠ್ಯದ ಪ್ರಾಧಿಕಾರಗಳಿರವನ್ನು ಗಮನಿಸಬೇಕಾಗುತ್ತದೆ. ವಿಷಯಕ್ಕೆ ನೀಡುವಷ್ಟೇ ಮಹತ್ವವನ್ನು ಬರವಣಿಗೆಯ ಕ್ರಮಕ್ಕೆ ನೀಡಿ ಸರಿಯಾದ ಸ್ಥಳದಲ್ಲಿ ಸರಿಯಾದ ಶಬ್ದವನ್ನು ಹಾಕಿ, ಲೇಖಕನು ಯಾವ ಅರ್ಥದಲ್ಲಿ ಬಳಸಿದ್ದಾನೆಯೋ ಅದೇ ಅರ್ಥ ಬರುವಂತೆ ನೋಡಿಕೊಂಡು. ಓದುಗರ ಪ್ರತಿಕ್ರಿಯೆ ಏನಿರಬಹುದೆಂದು ಊಹಿಸಿದಲ್ಲಿ ಬರವಣಿಗೆಯ ಗುಣಮಟ್ಟ ಕಾಯ್ದುಕೊಳ್ಳಬಹುದು. ಒಳ್ಳೆಯ ಅರ್ಥವಂತಿಕೆ ಇರುವ ಲೇಖನದಲ್ಲಿ ಲೇಖಕನ ವ್ಯಕ್ತಿತ್ವ ಪ್ರತಿಬಿಂಬಿತವಾಗಿರುತ್ತದೆ. ಭಾಷಾ ಸೂತ್ರ, ನೀತಿ, ಕ್ರಮಗಳನ್ನು ಅನುಸರಿಸಿದ ಮಟ್ಟಿಗೆ ಅದು ಒಳ್ಳೆಯ ಲೇಖನವಾಗಲು ಸಾಧ್ಯವಿಲ್ಲ. ಲೇಖಕನ ಮನಸ್ಸು, ಭಾಷೆಯನ್ನು ಹೊರತುಪಡಿಸಿದ ವಾಸ್ತವಾಂಶ ಉತ್ತಮ ಲೇಖನವೆನಿಸುತ್ತದೆ.

**10. ಮೇಲಾರ್ಥ ಹಾಗೂ ಒಳಾರ್ಥ**

ಪ್ರತಿಯೊಂದು ಪಠ್ಯದಲ್ಲೂ ಮೇಲ್ನೋಟಕ್ಕೆ ಇರುವ ಅರ್ಥ ಒಂದಾದರೆ ಒಳಾರ್ಥ ಬೇರೆಯೇ ಇರುತ್ತದೆ. ಉದಾಹರಣೆಗೆ 'ಅವನು ಓಟಕಿತ್ತ' ಅಂದರೆ ''ಅವನು ಜಾಗ ಖಾಲಿ ಮಾಡಿದ'' ಎನ್ನುವ ಅರ್ಥ ಬರುತ್ತದೆ. ಹಾಗೆಯೇ 'ಅವನು ಖುರ್ಚಿ ಗಟ್ಟಿ ಮಾಡಿಕೊಂಡ', ಎಂದರೆ ಅವನು ''ಸ್ಥಾನ ಭದ್ರಪಡಿಸಿಕೊಂಡ'' ಅನ್ನುವ ಅರ್ಥಬರುತ್ತದೆ. ಪ್ರತಿಯೊಂದು ಪಠ್ಯದ ಹಿನ್ನೆಲೆಯಲ್ಲಿ ಲೇಖಕನ ಬದುಕು, ವಿಚಾರಧಾರೆಗಳನ್ನೊಳಗೊಂಡಂತೆ ಒಂದು 'ಒಳಬದುಕು' ಇರುತ್ತದೆ. ಸಾಹಿತ್ಯದಲ್ಲಿ ಮೇಲಾರ್ಥಕ್ಕಿಂತ ಒಳಾರ್ಥಕ್ಕೆ ಹೆಚ್ಚು ಪ್ರಾಶಸ್ತ್ಯ. ಸಾಹಿತ್ಯವಲ್ಲದ ಪಠ್ಯಗಳಲ್ಲಿ ಮೇಲಾರ್ಥಕ್ಕೆ ಪ್ರಾಮುಖ್ಯತೆ. ಭಾಷೆಯ ಸಂಪನ್ಮೂಲ ಜಾಸ್ತಿ ಇದ್ದಷ್ಟು ಭಾಷಾಂತರ ಕಠಿಣ. ಆದರೂ ಈ ಪರಿಶ್ರಮ ಸಾರ್ಥಕವಾದುದು. ಎಂತಹ ಕವಿತೆಯೇ ಆಗಿರಲಿ ಸಮಾಧಾನಕರವಾದ ಭಾಷಾಂತರ ಮಾಡಲು ಸಾಧ್ಯ. ಅಂತಹ ಭಾಷಾಂತರ ಕವಿತೆಯ ಮರುಸೃಷ್ಟಿ ಆಗಿರದೇ ಇರಬಹುದು. ಆದರೆ ಈ ಕವಿತೆಗೆ ಒಂದು ಪರಿಚಯ ಅಥವಾ ವ್ಯಾಖ್ಯಾನವಾಗಿ ಅದು ಸಹಕರಿಸಬಹುದು.

**11. ಕೊನೆಯ ಹಂತ**

ಕೊನೆಯದಾಗಿ ಯಾವುದೇ ಪಠ್ಯದ ಸಾಮಾಜಿಕ ಹಿನ್ನೆಲೆಯನ್ನು ನಾವು ಗಮನಿಸಬೇಕು. ಅನೇಕ ಶಬ್ದಗಳು, ಹೆಸರುಗಳು, ಮೂಲಪಠ್ಯದ ಸನ್ನಿವೇಶದಲ್ಲಿ ಮಾತ್ರ ನಾವು ಕಾಣಬಹುದಾಗಿರುತ್ತದೆ. ಅಂತಹ ಸಂದರ್ಭಗಳಲ್ಲಿ ಅವುಗಳನ್ನು ಭಾಷಾಂತರಗಳಲ್ಲಿ ಹಾಗೆಯೇ ಉಳಿಸಿಕೊಳ್ಳುವುದು ಉತ್ತಮ. ಇಲ್ಲದಿದ್ದಲ್ಲಿ ಮುಖ್ಯ ಅರ್ಥ ಬರುವಂತಹ ಶಬ್ದಗಳ ಪ್ರಯೋಗ ಮಾಡಬಹುದು.ಒಂದು ಶಬ್ದವನ್ನು ಸಂದರ್ಭಕ್ಕೆ ತಕ್ಕಂತೆ ಅರ್ಥೈಸುವುದು, ತದನಂತರ ಪುನಃ ಪಠ್ಯದ ಹಿನ್ನಲೆಯಲ್ಲಿ ಅರ್ಥೈಸುವುದರಿಂದ ಅಗತ್ಯ ಶಬ್ದ ಕೊನೆಯಲ್ಲಿ ದೊರೆಯಬಹುದು.

ಒಟ್ಟಿನಲ್ಲಿ ಮೂಲಪಠ್ಯವನ್ನು ಗ್ರಹಿಸುವುದಕ್ಕಾಗಿ ಮಾಡುವ ಭಾಷಾಂತರ ವಿಂಗಡಣೆ ಭಾಷಾಂತರ ಪ್ರಕ್ರಿಯೆಯ ಮೊದಲ ಹಂತ. ಇದು ಭಾಷಾಂತರ ವಿಮರ್ಶೆಯ ತಳಹದಿ ಕೂಡ.ಇದು ಭಾಷಾಂತರಕಾರರಿಗೆ ಒಂದು ರೀತಿಯ ಅಗತ್ಯ ತರಬೇತಿ ಕೂಡ. ಸರಿಯಾದ ಶಬ್ದಗಳನ್ನು ಗುರುತಿಸುವುದರ ಮೂಲಕ ಭಾಷಾಂತರ ಸಿದ್ಧಾಂತವನ್ನು ಬಳಕೆಗೆ ತಂದಂತಾಗುತ್ತದೆ. ಒಬ್ಬ ಸಮರ್ಥ ಭಾಷಾಂತರಕಾರ ಪಠ್ಯದ ವಿಂಗಡಣೆ ಮಾಡಿಯೇ ಭಾಷಾಂತರ ಪ್ರಕ್ರಿಯೆಗೆ ಕೈ ಹಾಕುತ್ತಾನೆ. ಹಾಗೆಯೇ ಒಬ್ಬ ಭಾಷಾಂತರ ವಿಮರ್ಶಕನಿಗೆ ಮೂಲಪಠ್ಯದ ಹಾಗೂ ಭಾಷಾಂತರಿತ ಪಠ್ಯದ ಎರಡರ ವಿಂಗಡಣೆ ಅಗತ್ಯ. ಪಠ್ಯವನ್ನು ಕೇವಲ ಪಠ್ಯವಾಗಿ ಓದದೆ ಅದರ ಓದುಗರ ಸಾಮಾಜಿಕ, ಸಾಂಸ್ಕೃತಿಕ ಹಿನ್ನಲೆಯಲ್ಲಿ ಅಭ್ಯಸಿಸಬೇಕಾಗುತ್ತದೆ.

**3. ಭಾಷಾಂತರ ವಿಧಾನ**

ಭಾಷಾಂತರ ಕ್ರಮದ ಬಗ್ಗೆ ವಿಚಾರ ಮಾಡುವಾಗ ಅನುಸರಿಸಲು ಅನುಕೂಲವಾಗುವ ಕ್ರಮದ ಬಗ್ಗೆ ವಿಚಾರಮಾಡಬೇಕು. ಅದು ನಾವು ಅನುಸರಿಸುವ ವಿಧಾನದಿಂದ ಪ್ರಾರಂಭವಾಗುತ್ತದೆ. ಎರಡನೆಯದಾಗಿ ಭಾಷಾಂತರಿಸುವಾಗ ನಮ್ಮ ಮನಸ್ಸಿನಲ್ಲಿ 4 ಮಟ್ಟದಲ್ಲಿ ಭಾಷಾಂತರಿಸಲು ಪ್ರಾರಂಭಿಸುತ್ತೇವೆ.

1. ಮೂಲಪಠ್ಯದ ಮಟ್ಟದಲ್ಲಿ - ಭಾಷಾಂತರ ಪ್ರಕ್ರಿಯೆ ಉದ್ದಕ್ಕೂ ಆಗಾಗ ಆ ಮಟ್ಟಕ್ಕೆ ಹೋಗುತ್ತಲೇ ಇರುತ್ತೇವೆ.
2. ಅನುಸಂಧಾನ ಮಟ್ಟದಲ್ಲಿ - ವಸ್ತು ಮತ್ತು ಘಟನೆ ಮಟ್ಟದಲ್ಲಿ - ಸತ್ಯ ಅಥವಾ ಕಾಲ್ಪನಿಕವಿರಬಹುದು. ಇವುಗಳನ್ನು ಗ್ರಹಿಸುವಾಗ ಹಾಗೂ ಪುನಃಸೃಷ್ಟಿ ಮಾಡುವಾಗ ಕಲ್ಪಿಸಿಕೊಳ್ಳುತ್ತಾ ಕಟ್ಟುತ್ತಾ ಸಾಗುತ್ತೇವೆ.
3. ಐಕ್ಯತೆಯ ಮಟ್ಟದಲ್ಲಿ - ವ್ಯಾಕರಣೀಯವಾಗಿ -ವಿಚಾರಧಾರೆ ಹಾಗೂ ಸ್ವರದ ಭಾವನೆಗಳು (ಸಕಾರಾತ್ಮಕ, ನಕಾರಾತ್ಮಕ) ಮತ್ತು ಮೂಲಪಠ್ಯದ ಪೂರ್ವ ಊಹೆಗಳು. ಈ ಮಟ್ಟ ಗ್ರಹಿಕೆ ಮತ್ತು ಪುನಃಸೃಷ್ಟಿ ಎರಡನ್ನು ಆವರಿಸಿಕೊಂಡಿರುತ್ತದೆ. ಮತ್ತು ಸಂಪೂರ್ಣ ಚಿತ್ರಣ ನೀಡುತ್ತದೆ ಹಾಗೂ ಇದಕ್ಕೆ ಅನುಗುಣವಾಗಿ ನಾವು ಭಾಷಾಮಟ್ಟವನ್ನು ಹೊಂದಿಸಿಕೊಳ್ಳಬೇಕಾಗುವುದು.
4. ಸಹಜತೆಯ ಮಟ್ಟ - ಒಂದು ಸನ್ನಿವೇಶದಲ್ಲಿ ಬರಹಗಾರರಿಗೆ ಸೂಕ್ತವೆನಿಸುವ ಸಾಮಾನ್ಯ ಭಾಷೆಯಲ್ಲಿರುವ ಸಹಜತೆ ಇಲ್ಲಿ ಲೇಖಕನ ಮಟ್ಟ ಮತ್ತು ಸಾಮಾನ್ಯರ ಮಟ್ಟಗಳನ್ನು ಪರಿಗಣಿಸಿ ಸೂಕ್ತವಾದುದನ್ನು ಅನುಸರಿಸಬೇಕಾಗುತ್ತದೆ. ಕೊನೆಯದಾಗಿ ಪರಿಷ್ಕರಣ ಪದ್ಧತಿ - ಇದು ಪರಿಸ್ಥಿತಿಗೆ ಹೊಂದಿಕೊಂಡಿದೆ. ಈ ಪದ್ಧತಿ ಇಡೀ ವಿಧಾನದ ಅರ್ಧಭಾಗವನ್ನು ಆವರಿಸಿದೆ.

## ಭಾಷಾಂತರ ಸಿದ್ಧಾಂತಕ್ಕೂ ಭಾಷಾಂತರಣಕ್ಕೂ ಇರುವ ಸಂಬಂಧ

ಭಾಷಾಂತರಣದ ಸಿದ್ಧಾಂತ ಭಾಷಾಂತರಕಾರನಿಗೆ ಸಹಾಯ ಮಾಡಲು ಇರುವ ಸಾಧನ. ಇದನ್ನು ಭಾಷಾಂತರ ಸಿದ್ಧಾಂತ ಮತ್ತು ಕ್ರಮಗಳ ಮಧ್ಯೆ ಸದಾ ಸಂಬಂಧವಿರುವಂತೆ ರೂಪಿಸಲಾಗಿದೆ. ಮೂಲಪಠ್ಯದ ಉದ್ದೇಶ ಕೇವಲ ಮಾಹಿತಿಯನ್ನು ಮುಟ್ಟಿಸುವುದಾದಲ್ಲಿ ಭಾಷಾಂತರ ವಿಧಾನ ಸ್ವಾಭಾವಿಕವಿರಬೇಕು. ಮೂಲಪಠ್ಯವು ಒಂದು ಹೊಸ ಮಾದರಿಯಾಗಿದ್ದು ಲೇಖಕನ ವಿಶೇಷತೆಯನ್ನು ವ್ಯಕ್ತಪಡಿಸುತ್ತಿದ್ದರೆ (ಉದಾ : ಒಂದು ಭಾವಗೀತ ಅಥವಾ ಕಾನೂನು ಸಂಹಿತೆ) ಭಾಷಾಂತರವೂ ಅಷ್ಟೇ ವಿಶೇಷತೆಯಿಂದ ಕೂಡಿರಬೇಕಾಗುತ್ತದೆ.

ಸ್ವಾಭಾವಿಕತೆಯ ಮಟ್ಟ ಭಾಷಾಂತರ ಸಿದ್ಧಾಂತ ಮತ್ತು ಭಾಷಾಂತರಣದ ಸಿದ್ಧಾಂತಗಳನ್ನು ಹಾಗೆಯೇ ಭಾಷಾಂತರಣದ ಸಿದ್ಧಾಂತ ಮತ್ತು ಕ್ರಮಗಳನ್ನು ಒಟ್ಟಾಗಿ ಕಟ್ಟುತ್ತದೆ. ಭಾಷಾಂತರಣದ ಸಿದ್ಧಾಂತವು ಭಾಷೆ ಮತ್ತು ಮನಸ್ಸಿನಲ್ಲಿ ಮೂಡುವ ಸ್ವರೂಪಗಳ ಸಂಬಂಧಗಳ ಬಗ್ಗೆ ತಿಳಿಸುವುದಲ್ಲದೆ ಅದು ಹೆಚ್ಚು ಸಮಂಜಸ ದಾರಿಯನ್ನು ತೋರಿಸುತ್ತದೆ. ಭಾಷಾಂತರಣದ ಸಿದ್ಧಾಂತವನ್ನು ಒಪ್ಪಿಕೊಂಡಲ್ಲಿ ಭಾಷಾಂತರ ಸಿದ್ಧಾಂತ ಮತ್ತು ಕ್ರಮಗಳ ಮಧ್ಯೆ ಯಾವುದೇ ಅಂತರ ಗೋಚರಿಸುವುದಿಲ್ಲ. ಅದನ್ನು ಈ ಕೆಳಕಂಡಂತೆ ವಿವರಿಸಬಹುದು:

| | **ಭಾಷೆಯ 3 ಕೃತ್ಯಗಳು** | |
|---|---|---|
| ವ್ಯಕ್ತಪಡಿಸುವಿಕೆ | ಸುದ್ದಿಪ್ರಸರಣ | ಸಂಬೋಧನೆ (ನಿರ್ದೇಶಿಸುವುದು ಅಥವಾ ಒತ್ತಾಯಿಸುವುದು) |
| ಶಬ್ದಾರ್ಥ | ಭಾಷಾಂತರ ಸಿದ್ಧಾಂತ | ಸಂಪರ್ಕಾರ್ಥ |
| ಸಮಸ್ಯೆ | ಆಧಾರದ ಚೌಕಟ್ಟು<br>ಸಾಂಧರ್ಭಿಕ ವಿಚಾರಗಳು | ಭಾಷಾಂತರ ಕ್ರಮ |




ಭಾಷಾಂತರ ಕ್ರಮ

ಚಿತ್ರ : ಭಾಷಾಯ ಕಾರ್ಯ ಸಿದ್ಧಾಂತ

## ವಿಧಾನ

ಭಾಷಾಂತರ ಹೀಗೆಯೇ ಆಗಬೇಕು ಎಂದು ಹೇಳಲು ಸಾಧ್ಯವಿಲ್ಲ. ಅಗತ್ಯತೆಯನ್ನು ಹಾಗೂ ಸಂದರ್ಭಕ್ಕೆ ಹೊಂದಿಕೊಂಡು, ವ್ಯಕ್ತಿ ಹಾಗೂ ಪರಿಸರಕ್ಕೆ ತಕ್ಕಂತೆ ಭಾಷಾಂತರ ಕ್ರಿಯೆ ನಡೆಯಬೇಕಾಗುತ್ತದೆ. ಪ್ರತಿಯೊಂದು ಪದ್ಧತಿಯನ್ನು ಅಳವಡಿಸುವಾಗ 'ಸಾಮಾನ್ಯವಾಗಿ' 'ಸಾಧಾರಣವಾಗಿ' 'ಸಹಜವಾಗಿ' ಎಂದು ಹೇಳಬಹುದೇ ಹೊರತು 'ಯಾವಾಗಲೂ' 'ಕೂಡದು', 'ಅಗತ್ಯವಾಗಿ' ಎಂದು ಹೇಳಲು ಸಾಧ್ಯವಿಲ್ಲ. ಭಾಷಾಂತರ ವಿಧಾನದಲ್ಲಿ 'ಇದಮಿತ್ಥಂ' ಎನ್ನುವುದು ಇಲ್ಲ.

ಭಾಷಾಂತರಣದಲ್ಲಿ ಎರಡು ವಿಧಾನಗಳಿವೆ. 1) ವಾಕ್ಯವಾಕ್ಯವನ್ನು ಭಾಷಾಂತರಿಸುತ್ತಾ ಹೋಗಿ ಒಂದು ಪರಿಚ್ಛೇದವಾದ ನಂತರ ಪುನಃ ಪಠ್ಯವನ್ನು ಓದಿ ವಿಮರ್ಶಿಸಿ ಸರಿಪಡಿಸುವುದು, 2) ಪಠ್ಯವನ್ನು ಪೂರ್ಣವಾಗಿ ಓದಿ ಅರ್ಥಮಾಡಿಕೊಂಡು ಉದ್ದೇಶ, ಸ್ವರ, ಕಠಿಣ ಪದಗಳ ಅರ್ಥ ಎಲ್ಲವನ್ನು ಅರಿತುಕೊಂಡು ನಂತರ ಭಾಷಾಂತರಣಕ್ಕೆ ಇಳಿಯುವುದು. ಈ ಎರಡು ವಿಧಾನಗಳಲ್ಲಿ ಯಾವುದು ನಿಮಗೆ ಸೂಕ್ತವೋ ಅದನ್ನು ಅನುಸರಿಸಬಹುದು. ಪಠ್ಯ ಸಾಹಿತ್ಯಿಕವಾಗಿದ್ದಲ್ಲಿ ಮೊದಲನೇ ಪದ್ಧತಿ ಅನುಸರಿಸುವುದು ಉತ್ತಮ. ಪಠ್ಯ ತಾಂತ್ರಿಕ ಹಾಗೂ ಸಾಂಸ್ಥಿಕವಾಗಿದ್ದಲ್ಲಿ ಎರಡನೆಯ ಪದ್ಧತಿ ಹೆಚ್ಚು ಅನುಕೂಲಕರ. ಮೊದಲನೆಯದರಲ್ಲಿನ ದೋಷವೆಂದರೆ ಬಹಳಷ್ಟು ಪರಿಷ್ಕರಣ ಮಾಡಬೇಕಾಗುವುದರಿಂದ ಹೆಚ್ಚು ಸಮಯವನ್ನು ತೆಗೆದುಕೊಳ್ಳುತ್ತದೆ. ಎರಡನೆಯ ವಿಧಾನ ಹೆಚ್ಚು ಅನುಕೂಲಕರ ಆದರೆ ಮನಸ್ಸಿಗೆ ತೋಚಿದಂತೆ ಮಾಡಬಾರದು. ಮೊದಲನೆಯದನ್ನು ಸುಲಭವಾದ ಪಠ್ಯದ ಭಾಷಾಂತರಕ್ಕೆ ಉಪಯೋಗಿಸಬಹುದು. ಎರಡನೆಯದನ್ನು ಕಠಿಣ ಪಠ್ಯದ ಭಾಷಾಂತರಕ್ಕೆ ಬಳಸಬಹುದು.

ಭಾಷಾಂತರಕಾರನ ದೃಷ್ಟಿಯಿಂದ ಯಾವುದೇ ವೈಜ್ಞಾನಿಕ ಸಂಶೋಧನೆ ನಡೆಸಿದಾಗ ಭಾಷಾಂತರದ ಸಮಯದಲ್ಲಿ ಮೆದುಳಿನಲ್ಲಿ ಏನು ನಡೆಯುತ್ತಿದೆ ಎಂಬುದು ಕೇವಲ ಒಂದು ಊಹಾಪೋಹ. ಭಾಷಾ ಮನೋವಿಜ್ಞಾನಿಗಳ ಜ್ಞಾನ ಕೂಡ ಒಂದು ಶಬ್ದದ ಸಕಾರಾತ್ಮಕ, ನಕಾರಾತ್ಮಕ ಅಥವಾ ವಾಸ್ತವಿಕ ಪ್ರಭಾವವನ್ನು ತಿಳಿಸುವುದಕ್ಕೆ ಮಾತ್ರ ಸೀಮಿತಗೊಂಡಿದೆ. ಭಾಷಾಂತರದ ಸಿದ್ಧಾಂತದ ಹೃದಯ ಭಾಷಾಂತರ ಸಮಸ್ಯೆ. ಒಬ್ಬ ಭಾಷಾಂತರಕಾರನ ಮೆದುಳಿನಲ್ಲಿ ಏನೇನು ಪ್ರಕ್ರಿಯೆ ನಡೆಯುತ್ತದೆ ಎಂದು ಇನ್ನೊಬ್ಬ ಭಾಷಾಂತರಕಾರ ತಿಳಿದುಕೊಳ್ಳುವುದರಿಂದ ಹೆಚ್ಚು ಉಪಯೋಗವೇನೂ ಇಲ್ಲ. ಭಾಷಾಂತರಕಾರ ದ್ವಿಭಾಷಾ ಅರ್ಥಕೋಶವನ್ನು ಉಪಯೋಗಿಸಿ ಶಬ್ದಾರ್ಥವನ್ನು ಬರೆಯಬಹುದು ಅಥವಾ ವಿಶ್ವಕೋಶವನ್ನು ಉಪಯೋಗಿಸಿ ಹೆಚ್ಚು ಸೂಕ್ತವೆನಿಸುವ ವಿವರಣಾರ್ಥವನ್ನು ನೀಡಬಹುದು. ಅಷ್ಟು ಬಿಟ್ಟರೆ ಹೀಗೇ ಭಾಷಾಂತರ ಆಗಬೇಕೆಂದು ಹೇಳುವುದು ಕಷ್ಟ.

## ಪಠ್ಯದ ಮಟ್ಟ

ಪಠ್ಯಮಟ್ಟದಲ್ಲಿ ನಾವು ತಾನಾಗಿ ಕೆಲವು ಬದಲಾವಣೆ ಮಾಡುತ್ತಾ ಹೋಗುತ್ತೇವೆ. ಮೂಲಪಠ್ಯದಲ್ಲಿನ ವ್ಯಾಕರಣಗಳನ್ನು (ವಾಕ್ಯಾಂಗಗಳು ಹಾಗೂ ಗುಂಪುಗಳು) ಉದ್ದಿಷ್ಟ ಭಾಷೆಯ ಸಮಾನಾಂತರ ಅರ್ಥ ಬರುವ ವ್ಯಾಕ್ಯಾಂಗ ಹಾಗೂ ಗುಂಪುಗಳಿಗೆ ಸಂದರ್ಭೋಚಿತವಾಗಿ ಬದಲಾವಣೆ ಮಾಡುತ್ತೇವೆ. ಭಾಷಾಂತರಿಸುವಾಗ ನಮ್ಮ ನಮ್ಮ ತಳಪಾಯ ಪಠ್ಯ.

ಪಠ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಪದಪದವನ್ನು ಭಾಷಾಂತರಿಸುತ್ತಾ ಹೋಗಿ ನಂತರ ಅದನ್ನು ಸರಿಹೊಂದಿಸಿ ಒಂದು ಸ್ವರೂಪ ನೀಡುವುದು ಒಂದು ಕ್ರಮ. ಹೀಗೆ ಮಾಡುವಾಗ ನಮ್ಮ ಮನಸ್ಸಿನ ಒಂದು ಭಾಗ ಪಠ್ಯದ ಮಟ್ಟವಲ್ಲಿದ್ದು ಇನ್ನೊಂದು ಭಾಗ ಬೇರೆಡೆ ಇರುತ್ತದೆ. ಭಾಷಾಂತರಿಸುವಾಗ ಒಂದೇ ಕಾಲದಲ್ಲಿ ಬಹುಮುಖವಾಗಿ ವಿಚಾರ ಮಾಡಬೇಕಾಗುತ್ತದೆ.

## ಅನ್ವಯ ಮಟ್ಟ

ಒಂದು ವಾಕ್ಯವನ್ನು ಓದುವಾಗ ಅದರ ವಸ್ತುಸ್ಥಿತಿ ಅನ್ವಯ ಮಟ್ಟವನ್ನು ತಿಳಿಯದೆ ಓದಬಾರದು. ಪಠ್ಯ ಸಾಹಿತ್ಯಿಕ ಅಥವಾ ತಾಂತ್ರಿಕವಾಗಿರಬಹುದು. ಇದು ಏನನ್ನು ಹೇಳಹೊರಟಿದೆ ಎಂದು ತಿಳಿದುಕೊಳ್ಳಬೇಕು. ಉದಾಹರಣೆಗೆ ಅದು ಒಂದು ಉತ್ತಮ ಶೈಕ್ಷಣಿಕ ವ್ಯವಸ್ಥೆ ನೀಡುವುದರ ಬಗ್ಗೆ ಇರಬಹುದು. ಜನರ ಜೀವನ ಪದ್ಧತಿಯನ್ನು ಬದಲಿಸುವ ಸಾಹಿತ್ಯದ ಕುರಿತಾಗಿರಬಹುದು. ಇತ್ತೀಚಿನ ವೈಜ್ಞಾನಿಕ ಪ್ರಗತಿ ಬಗ್ಗೆ ಇರಬಹುದು. ಈ ವಸ್ತುಸ್ಥಿತಿ ಬಗ್ಗೆ ಸ್ಪಷ್ಟ ಚಿತ್ರಣ ಮೂಡಿಸಿಕೊಂಡು ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ಯಾರಿಗೆ ಇದು ಹೇಳಲ್ಪಟ್ಟಿದೆ ಎಂದು ತಿಳಿದು ನಂತರ ಭಾಷಾಂತರಕ್ಕಿಳಿಯಬೇಕು. ಲೇಖನ ವಿದ್ಯಾರ್ಥಿಗಳಿಗಿದೆಯೇ, ವಿಮರ್ಶಕರಿಗಾಗಿ ಇದೆಯೇ, ವಿಜ್ಞಾನಿಗಳಿಗಾಗಿ ಇದೆಯೇ ಎಂದು ನೋಡಿ ಆ ಮಟ್ಟವನ್ನು ತಿಳಿದು ಭಾಷಾಂತರಿಸಬೇಕು. ವಿವರಣೆ ಸ್ಪಷ್ಟವಾಗಿಲ್ಲದಿದ್ದರೆ, ಅದನ್ನು ಸ್ಪಷ್ಟಪಡಿಸಬೇಕಾಗುತ್ತದೆ.

ಪಠ್ಯಮಟ್ಟ ಮತ್ತು ವಸ್ತುಸ್ಥಿತಿ ಅನ್ವಯ ಮಟ್ಟ ಜೊತೆಯಲ್ಲೇ ಸಾಗುತ್ತದೆ. ಪ್ರತಿಯೊಂದು ಭಾಷೆಯಲ್ಲಿ ಸಮಾನಾರ್ಥಕ ಶಬ್ದ ಇದ್ದೇ ಇರುತ್ತದೆ. ಇಲ್ಲದಿದ್ದರೂ ಅದರ ಸಮೀಪ ಅರ್ಥ ನೀಡುವ ಶಬ್ದಗಳಿರುತ್ತವೆ. ಪಠ್ಯ ಯಾರಿಗೆ ಅನ್ವಯಿಸುತ್ತದೆ ಎಂದು ತಿಳಿದೇ ಅನುವಾದಕ್ಕಿಳಿಯುವುದರಿಂದ  ಅದಕ್ಕೆ ಬೇಕಾದ ಶಬ್ದಗಳನ್ನು ಹುಡುಕಬೇಕು.  ಪಠ್ಯಮಟ್ಟದಲ್ಲಿ ಎಷ್ಟೇ ತೊಡಕಿದ್ದರೂ ಅದನ್ನು ಅನುವಾದಕ ನಿವಾರಿಸಿ ಉದ್ದೇಶವನ್ನು ಸಾರ್ಥಕಗೊಳಿಸಬೇಕು.

## ಜೋಡಣೆಯ ಮಟ್ಟ

ಪಠ್ಯಮಟ್ಟ ಮತ್ತು ವಸ್ತುಸ್ಥಿತಿ ಅನ್ವಯ ಮಟ್ಟವನ್ನು ಸೇರಿಸುವ ಒಂದು ಮಟ್ಟವಿದ್ದು ಅದನ್ನು ಜೊತೆಯಲ್ಲಿ ಅಂಟಿಕೊಳ್ಳುವ ಅಥವಾ ಜೋಡಣೆಯ ಮಟ್ಟವೆಂದು  ಗುರುತಿಸಬಹುದಾಗಿದೆ. ಇದು ಪಠ್ಯದ ರಚನೆ ಮತ್ತು ಉದ್ದೇಶವನ್ನು ಅನುಸರಿಸುತ್ತದೆ. ಶಬ್ದ ಶಬ್ದಗಳನ್ನು, ವಾಕ್ಯವಾಕ್ಯಗಳನ್ನು ಜೋಡಿಸುವುದಲ್ಲದೆ ಗೊತ್ತಿರುವ ವಿಷಯದ ಜೊತೆ ಗೊತ್ತಿಲ್ಲದ ವಿಷಯವನ್ನು ಜೋಡಿಸುತ್ತದೆ. ಈ ಜೋಡಣೆಯಲ್ಲಿ ತಾತ್ವಿಕ ಸಂಬಂಧ ಕೆಲಸ ಮಾಡುತ್ತದೆ. ವಾಕ್ಯರಚನೆಯನ್ನು ನೋಡುವಾಗ ಅದರಲ್ಲಿರುವ ನಾಮಪದ, ಕ್ರಿಯಾಪದ ಮುಂತಾದ ವ್ಯಾಕರಣ ವಿಭಾಗಗಳ ಜೊತೆಗೆ ಅರ್ಧವಿರಾಮ, ಪೂರ್ಣ ವಿರಾಮಗಳನ್ನು ಹಾಗೂ ಅದರಲ್ಲಿರುವ ವಿಚಾರಧಾರೆಯನ್ನು ಗಮನಿಸಬೇಕು. ಅಲ್ಲದೆ ಕಾಲ, ಅವಕಾಶ ಹಾಗೂ ತರ್ಕದ ಕಡೆಗೂ ನಿಗಾ ಇಡಬೇಕು.

ಜೋಡಣೆಯ ಮಟ್ಟದಲ್ಲಿರುವ ಎರಡನೆಯ ಮುಖ್ಯವಸ್ತು  ಭಾವ. ಈ ಭಾವ ನಿಶ್ಚಿತದಿಂದ ಅನಿಶ್ಚಿತಗಳ ನಡುವೆ, ರಾಗಭಾವ ಮತ್ತು ಸಮಸ್ಥಿತಿಯ ನಡುವೆ ಹರಿಯುತ್ತಿರುತ್ತದೆ. ಸಂದರ್ಭಕ್ಕೆ ಸರಿಯಾದ ಶಬ್ದದ ಆಯ್ಕೆ ಆಗಬೇಕಾಗುತ್ತದೆ. ಜೋಡಣೆಯ ಮಟ್ಟದಲ್ಲಿರುವ ಮೂರನೆಯ ಮುಖ್ಯವಸ್ತು ಜೋಡಣಾ ಶಬ್ದಗಳು ಮತ್ತು ಭಾವನೆಯ ಧ್ವನಿಗಳ ಮೂಲಕ

ವಿಚಾರವನ್ನು ಅನುಸರಿಸಿಕೊಂಡು ಹೋಗುವುದು. ಜೋಡಣಾ ಮಟ್ಟ ನಿಯಂತ್ರಿಸುವ ಸಂಬಂಧ, ಏರ್ಪಡಿಸುವ, ಒತ್ತು ನೀಡುವ ಮಟ್ಟ, ಈ ಹಂತದಲ್ಲಿ ನಾವು ವಾಕ್ಯವನ್ನು ಅಥವಾ ಲೇಖ ಪರಿಶ್ಚೇಧವನ್ನು ಪರಿಷ್ಕರಣೆಗೊಳಿಸುವುದರ ಜೊತೆ ಶಿರೋನಾಮೆ, ಮುಕ್ತಾಯದ ಧ್ವನಿಗಳ ಕಡೆ ಗಮನಹರಿಸುತ್ತೇವೆ.

### ಸಹಜತೆಯ ಮಟ್ಟ

ಭಾಷಾಂತರಿಸುವಾಗ ನಾವು 1) ಭಾಷಾಂತರ ಅರ್ಥವತ್ತಾಗಿದೆಯೇ 2) ಸ್ವಾಭಾವಿಕವಾಗಿ ಅಥವಾ ಸಹಜತೆಯಲ್ಲಿ ಓದಿಸಿಕೊಂಡು ಹೋಗುತ್ತಿದೆಯೇ ಎಂಬುದನ್ನು ಗಮನಿಸಬೇಕು. ವಿಷಯವನ್ನು ಓದಿ ಇದಕ್ಕೆ ಬೇರೆ ಭಾಷಾಂತರವಿಲ್ಲವೆಂದು ತಿಳಿದು ನಿಮ್ಮದೇ ಆದ ಭಾಷಾಂತರ ಮಾಡಬೇಕು. ನಂತರ ಬೇರೆ ಭಾಷಾಂತರಗಳನ್ನು ಗಮನಿಸಬೇಕು. ತದನಂತರ ಅದನ್ನು ಸಹಜತೆಯ ಮಟ್ಟದಲ್ಲಿ ಇಡಬೇಕು. ಶೇಕ್ಸ್‌ಪಿಯರ್‌ನಂತರ ಒಬ್ಬ ಗಂಭೀರ ಲೇಖಕನ ಭಾಷಾಂತರದಲ್ಲಿ ನಿಮಗೆ ಪ್ರಾರಂಭದಲ್ಲಿ ಸಹಜತೆ ಕಾಣದೇ ಹೋಗಬಹುದು. ಅದನ್ನು ಪದೇ ಪದೇ ಓದುವುದರಿಂದ ಸಹಜತೆ ತಾನಾಗಿಯೇ ಕಾಣುತ್ತದೆ.

### ನಾಲ್ಕು ಮಟ್ಟಗಳ ಜೋಡಣೆ

ಮೇಲ್ಕಂಡ ನಾಲ್ಕು ಮಟ್ಟಗಳಿಗಿಂತ ಮುಖ್ಯವಾಗಿ ಅನುವಾದಕ ನಿಜವಾಗಿಯೂ ಗಮನಿಸಬೇಕಾದ ಮಟ್ಟ ಪಠ್ಯ. ತದನಂತರ ಮನಸ್ಸಿನಲ್ಲಿಟ್ಟುಕೊಳ್ಳಬೇಕಾದುದು ನೈಜತೆ. ಅಂದರೆ ಅನುವಾದ ಓದುಗನನ್ನು ಆಕರ್ಷಿಸಿ ಅವನಿಂದ ಸಹಜವಾಗಿ ಓದಿಸಿಕೊಂಡು ಹೋಗಬೇಕಾದ ಗುಣವನ್ನು ಹೊಂದಿರುವುದು. ಮೇಲ್ಕಂಡ ನಾಲ್ಕು ಮಟ್ಟಗಳನ್ನು ಜೋಡಿಸಿದಾಗ ಇಂತಹ ವ್ಯವಸ್ಥೆ ಹೊರಬರುತ್ತದೆ.

### ಭಾಷಾಂತರದ ಘಟಕ

ಸಾಮಾನ್ಯವಾಗಿ ಭಾಷಾಂತರಿಸುವಾಗ ವಾಕ್ಯದಿಂದ ವಾಕ್ಯಕ್ಕೆ ಭಾಷಾಂತರಿಸುವುದು ನಡೆದು ಬಂದಿದೆ. ಹೀಗೆ ಮಾಡುವಾಗ ವಾಕ್ಯ ಜೋಡಣೆಯ ಶಬ್ದಗಳನ್ನು ಕೈಬಿಡುವ ಸಾಧ್ಯತೆ ಇದೆ. ಇದಾಗಬಾರದು. ವಾಕ್ಯಗಳಿಗಿಂತ ಕೆಳಕ್ಕೆ ಇಳಿದಾಗ ಪದಪುಂಜಗಳು, ತುಂಡು ವಾಕ್ಯಗಳು ಗೋಚರಿಸುತ್ತವೆ. ಹಾಗೆಯೇ ವ್ಯಾಕರಣ ಸಮಸ್ಯೆಯೂ ಮುಂದೆಬರುತ್ತದೆ. ಇವುಗಳನ್ನೆಲ್ಲಾ ಮನಸ್ಸಿನಲ್ಲಿಟ್ಟುಕೊಂಡು ಮೂಲಪಠ್ಯಕ್ಕೆ ಕೊರತೆ ಬರದಂತೆ ಅಷ್ಟೇ ಸಹಜವಾಗಿ ಭಾಷಾಂತರ ರೂಪಗೊಳ್ಳಬೇಕು. ಆದ್ದರಿಂದ ಭಾಷಾಂತರದ ಘಟಕ ಕೇವಲ ವಾಕ್ಯ ಮಾತ್ರವಲ್ಲ. ಒಂದು ಪರಿಚ್ಛೇದ ಮಾತ್ರವಲ್ಲ. ಇಡೀ ಲೇಖನವೇ ಒಂದು ಘಟಕವಾಗಿರುತ್ತದೆ. ವ್ಯಾಕರಣ ಸಮಸ್ಯೆ ಭಾಷಾಂತರದಲ್ಲಿ ಬಹು ಮುಖ್ಯವಾದುದು. ಇದರ ಜೊತೆಗೆ ಪುರಾತನ, ವಾಡಿಕೆಯಲ್ಲಿಲ್ಲದ ಶಬ್ದಗಳನ್ನು ಹಾಗೂ ಅವ್ಯವಸ್ಥಿತ ವಾಕ್ಯಗಳನ್ನು ಭಾಷಾಂತರಿಸುವುದು ಇನ್ನೂ ಕಷ್ಟ. ಕೆಲವೊಮ್ಮೆ ಭಾಷೆಗಿಂತ ಮುಖ್ಯವಾಗಿ ಒಬ್ಬ ಲೇಖಕನದ್ದೇ ಒಂದು ರೀತಿಯ ಶೈಲಿ, ಕ್ರಮ ಇರುತ್ತದೆ.ಭಾಷಾಂತರಿಸುವಾಗ ಅದರ ದಾಟಿಯನ್ನು ಉಳಿಸಿಕೊಳ್ಳಬೇಕಾಗುತ್ತದೆ.

## ಶಬ್ದಗಳ ಭಾಷಾಂತರದ ಸಮಸ್ಯೆ

ಭಾಷಾಂತರದ ಮುಖ್ಯವಾದ ಸಮಸ್ಯೆ ವ್ಯಾಕರಣದ್ದಲ್ಲ ಶಬ್ದಗಳದ್ದು. ಶಬ್ದಗಳು, ಶಬ್ದಪುಂಜಗಳು, ವಾಡಿಕೆಯಲ್ಲಿಲ್ಲದ ಶಬ್ದಗಳು- ಇವುಗಳಿಗೆ ಸಮಾನಾರ್ಥ ಹುಡುಕುವುದು ಅಷ್ಟು ಸುಲಭವಲ್ಲ. ಒಂದು ಅವು ನಮಗೆ ಅರ್ಥವಾಗುವುದಿಲ್ಲ ಅಥವಾ ಅರ್ಥವಾದರೂ ಭಾಷಾಂತರಿಸಲು ಬರಲಾರದಷ್ಟು ಕಷ್ಟಕರವಾಗಿರುತ್ತವೆ. ಕೆಲವೊಮ್ಮೆ ಆ ಶಬ್ದದ ವಿವಿಧ ಅರ್ಥಗಳು ತಿಳಿಯದೆಯೋ ಅಥವಾ ಪಠ್ಯದ ಬೇರೆಲ್ಲೋ ಒಂದು ಕಡೆ ಸಂಬಂಧ ಸೂಚಿಸಿದ್ದಲ್ಲಿ ಅರ್ಥವನ್ನು ಹುಡುಕುವುದು ಕಷ್ಟವಾಗುತ್ತದೆ. ಅರ್ಥಗಳಲ್ಲಿ ನಾಲ್ಕು ವಿಧವಿರುತ್ತದೆ. 1) ಮೂಲಾರ್ಥ, 2) ಆಲಂಕಾರಿಕ ಅರ್ಥ, 3) ತಾಂತ್ರಿಕ ಅರ್ಥ. 4) ಗ್ರಾಮ್ಯ ಅರ್ಥ. ಉದಾಹರಣೆಗೆ 'ಗೃಹ' ಶಬ್ದ. ಇದರ ಮೂಲಾರ್ಥ- 'ಮನೆ' ಇದರ ಆಲಂಕಾರಿಕ ಅರ್ಥ 'ಸಾಂಸಾರಿಕ ಮನೆ' ಇದರ ತಾಂತ್ರಿಕ ಅರ್ಥ - ನಾಲ್ಕು ಗೋಡೆಗಳಿಂದ ನಿರ್ಮಿತವಾದ ಒಂದು ವಾಸಸ್ಥಳ. ಇದರ ಗ್ರಾಮ್ಯ ಅರ್ಥ- ಹೆಂಡತಿ ಮಕ್ಕಳು ಇರುವುದು. ಇದೇ ರೀತಿ ಅನೇಕ ನಾಮಪದಗಳು, ಕ್ರಿಯಾಪದಗಳು ಗುಣವಾಚಕಗಳನ್ನು ಅಲಂಕಾರಿಕವಾಗಿ ಉಪಯೋಗಿಸುವುದರಿಂದ ಸೂಕ್ತ ಅರ್ಥವನ್ನು ಭಾಷಾಂತರಿಸುವಾಗ ಹುಡುಕುವುದು ಕಷ್ಟವಾಗುತ್ತದೆ. ಉದಾಹರಣೆಗೆ 'ಅವನಿಗೇನು ಮನೆಯೋ ಮಠವೋ?'- ಅಂದರೆ ಅವನಿಗೆ ಹೆಂಡತಿ ಮಕ್ಕಳ ಜವಾಬ್ದಾರಿ ಇಲ್ಲ, ಸಾಮಾಜಿಕ ಹೊಣೆ ಇಲ್ಲ ಎನ್ನುವ ಅರ್ಥ. ಇಲ್ಲಿ ಕೇವಲ 'ಮನೆ' ಮತ್ತು 'ಮಠ' ಶಬ್ದಗಳನ್ನು ಭಾಷಾಂತರಿಸಿದರೆ ನಿಜವಾದ ಭಾಷಾಂತರವಾಗುವುದಿಲ್ಲ.

## ನಾಮಪದದ ಭಾಷಾಂತರ

ಏನೇನೋ ಕಾರಣಕ್ಕೆ ನಾಮಪದಗಳೂ ಬದಲಾಗುತ್ತಿರುತ್ತವೆ. ಉದಾಹರಣೆಗೆ ಪೀಕಿಂಗ್ ಈಗ ಬೀಜಿಂಗ್ ಆಗಿದೆ. ಮದ್ರಾಸ್ ಈಗ ಚೆನ್ನೈ ಆಗಿದೆ. ಬೊಂಬಾಯಿ ಈಗ ಮುಂಬಯಿ ಆಗಿದೆ. ಹಾಂಕಾಂಗ್ ಜಿಯಾಂಗ್‌ಗಾಂಗ್ ಆಗಲಿದೆ. ಮೈಸೂರು ರಾಜ್ಯ ಕರ್ನಾಟಕವಾಗಿದೆ. ಮದ್ರಾಸ್ ರಾಜ್ಯ ತಮಿಳುನಾಡು ಆಗಿದೆ. ರೊಡೇಷಿಯಾ- ಜಿಂಬಾಬ್ವೆ ಆಗಿದೆ. ಹೀಗೆ ಜಗತ್ತಿನಲ್ಲಾದ ಬದಲಾವಣೆ ಬಗೆಗೆ ನಮಗೆ ತಿಳುವಳಿಕೆ ಭಾಷಾಂತರಿಸುವಾಗ ಇರಬೇಕಾಗುತ್ತದೆ.

## ಪರಿಷ್ಕರಣೆ

ಭಾಷಾಂತರವನ್ನು ಪರಿಷ್ಕರಿಸುವಾಗ ಭಾಷಾಂತರಕಾರ ತನ್ನದೇ ಆದ ಛಾಪನ್ನು ಒತ್ತಲು ಸ್ವಾಭಾವಿಕವಾಗಿ ಪ್ರಯತ್ನಿಸುತ್ತಾನೆ. ತನ್ನ ಲೇಖನ ಉತ್ತಮ ಮಟ್ಟದಲ್ಲಿ ಮೂಡಿ ಬಂದು ಓದುಗರನ್ನು ಆಕರ್ಷಿಸಬೇಕೆನ್ನುವುದು ಅವನ ಬಯಕೆಯಾಗಿರುತ್ತದೆ. ಅನಾವಶ್ಯಕವಾದುದನ್ನು ಕೈಬಿಡುವಾಗ ಅತಿ ಮುಖ್ಯವಾದ ಅಂಶ ಜಾರಿ ಹೋಗದಂತೆ ನೋಡಿಕೊಳ್ಳಬೇಕಾದ್ದು ಅವನ ಕರ್ತವ್ಯ. ಭಾಷಾಂತರ ಒಂದು ಉತ್ತಮ ಕಲಾಕೃತಿ. ಪರಿಷ್ಕರಿಸುವ ಸಮಯದಲ್ಲಿ ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಕೃತಿ ರಚಿಸಬೇಕು. ಆದಾಗ್ಯೂ ಗಮನದಲ್ಲಿರಬೇಕಾದ್ದು ಭಾಷಾಂತರ ಮೂಲಪಠ್ಯದ ಸರಿಯಾದ ಅವತರಣಿಕೆಯಾಗಿರಬೇಕೆನ್ನುವುದು. ಮೂಲಪಠ್ಯದ ಶಬ್ದಗಳನ್ನು ಕೈಬಿಡಬಾರದು. ನಿಮ್ಮ ಮನಸ್ಸಿಗೆ ಸಮ್ಮತಿ ಆಗುವವರೆಗೂ ಪರಿಷ್ಕರಿಸುತ್ತಾ ಹೋಗಬೇಕು. ಅಂದಾಗ ಮಾತ್ರ ಭಾಷಾಂತರ ಪರಿಪೂರ್ಣವಾಗುತ್ತದೆ.

## ಮುಕ್ತಾಯ

ಭಾಷಾಂತರ ಒಂದು ಸವಾಲು. ಈ ಸವಾಲನ್ನು ಸ್ವೀಕರಿಸುವ ಶಕ್ತಿಯಿದ್ದವನು ಮಾತ್ರ ಅಖಾಡಕ್ಕೆ ಇಳಿಯಬೇಕು. ಈ ಪರಿಶ್ರಮದಲ್ಲಿ ಮೈ ಹಣ್ಣಾಗಬಹುದು. ಮಣ್ಣಾಗಬಹುದು. ಆದರೆ ಕೊನೆಯಲ್ಲಿ ಸಾಧಿಸಿದಾಗ ಶ್ರಮ ಸಾರ್ಥಕವೆನಿಸುತ್ತದೆ. ವಸ್ತು ಕಠಿಣವಾದಷ್ಟು ಶ್ರಮ ಹೆಚ್ಚಾಗುತ್ತದೆ. ಪರಿಣಾಮ ಅಷ್ಟೇ ದೊಡ್ಡದಿರುತ್ತದೆ. ಭಾಷಾಂತರ ಒಂದು 'ಪಾಂಡಿತ್ಯ'ವೆಂದು ಯಾವಾಗ ಪರಿಗಣಿಸಲಾಗುತ್ತದೆ ಎಂದರೆ-

1. ಮೂಲಪಠ್ಯ ಕಠಿಣವಾಗಿದ್ದು ಒಂದು ಸವಾಲಾದಾಗ. ವಿಜ್ಞಾನ, ತಾಂತ್ರಿಕ, ಸಾಮಾಜಿಕ, ವಿಜ್ಞಾನ, ಸಾಹಿತ್ಯ, ತತ್ವಜ್ಞಾನಗಳಂಥ ಗಹನವಾದ ವಿಷಯವಾಗಿದ್ದಲ್ಲಿ ಹಾಗೂ ಪುರಾತನ ಭಾಷೆಯಲ್ಲಿದ್ದಲ್ಲಿ.
2. ಮೂಲಪಠ್ಯದ ವಿಷಯದ ಬಗ್ಗೆ ವಿವರಣೆ ನೀಡಬೇಕಾದಾಗ, ಅದನ್ನು ಭಾಷಾಂತರಕಾರ ಮುನ್ನುಡಿಯಲ್ಲೇ ಸ್ಪಷ್ಟಪಡಿಸಬೇಕಾಗುತ್ತದೆ.
3. ಮೂಲಪಠ್ಯದಲ್ಲಿನ ವಿಷಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ''ಅಡಿ ಟಿಪ್ಪಣಿ'' ನೀಡುವುದರ ಮೂಲಕ.

ಅದೇ ರೀತಿ ಭಾಷಾಂತರ ಕ್ರಿಯೆ ಒಂದು 'ಸಂಶೋಧನೆ' ಯಾವಾಗ ಆಗುತ್ತದೆ ಎಂದರೆ-

1. ಅದುಪಾಂಡಿತ್ಯ ಪೂರ್ಣ ಸಂಶೋಧನೆಯಾದಾಗ.
2. ಅದಕ್ಕೆ ಒಂದು ದೀರ್ಘ ಮುನ್ನುಡಿ ಇದ್ದಾಗ. ಈ ಮುನ್ನುಡಿಯಲ್ಲಿ ಭಾಷಾಂತರಕಾರ ಯಾಕಾಗಿ ಈ ಸಂಶೋಧನೆ ಕೈಗೆತ್ತಿಕೊಂಡಿದ್ದನೆಂಬುದರ ಬಗ್ಗೆ ವಿವರಣೆ ನೀಡುವುದಲ್ಲದೆ ಭಾಷಾಂತರಕಾರ ಮೂಲಪಠ್ಯವನ್ನು ಯಾವ ದೃಷ್ಟಿಯಿಂದ ನೋಡಿದ್ದೇನೆ ಎಂಬುದರ ಬಗ್ಗೆ ಸ್ಪಷ್ಟವಾಗಿ ತಿಳಿಸಬೇಕು.
3. ಭಾಷಾಂತರವಾದ ಪಠ್ಯದ ಜೊತೆಗೆ ಟಿಪ್ಪಣಿಗಳು, ಪಾರಿಭಾಷಿಕ ಕೋಶ, ಗ್ರಂಥಸೂಚಿಯನ್ನು ಒಳಗೊಂಡಿರಬೇಕು.

ಕೊನೆಯದಾಗಿ ಒಂದು ಮಾತು. ಭಾಷಾಂತರ ತಂತ್ರ ಯಾವುದೇ ವಿಧವಾಗಿರಬಹುದು. ಯಾವುದೇ ಸಾಧನವನ್ನು ನೀವು ಉಪಯೋಗಿಸಬಹುದು. ಎಷ್ಟೇ ಸಮಯ ನೀವು ತೆಗೆದುಕೊಳ್ಳಬಹುದು. ಅದೊಂದು ಸುಂದರ ಕಲಾಕೃತಿಯಾಗಿ ಹೊರಬರಬೇಕು. ಈ ಕಲಾಕೃತಿ ಮೂಲ ಕಲಾಕೃತಿಯನ್ನು ಛಾಯಾಚಿತ್ರದಂತೆ ಹೋಲಬೇಕು. ಹಾಗೂ ಒಂದು ಸ್ವತಂತ್ರ ಕೃತಿಯಂತಿರಬೇಕು. ಈ ಸೂಕ್ಷ್ಮವನ್ನು ಗ್ರಹಿಸಿ ಕುಂಚವನ್ನು ಆಡಿಸುವವನು ಉತ್ತಮ ಭಾಷಾಂತರಕಾರನಾಗಬಲ್ಲ.

■

# ಭಾಷಾಂತರ ಮೀಮಾಂಸೆ

ಭಾಷಾಂತರ ಕ್ಲಿಷ್ಟ, ಪರಿಶ್ರಮದಾಯಕ ಕ್ರಿಯೆ. ಆದರೂ ಇದಕ್ಕೆ ಸಾಮಾನ್ಯ ಸಾಹಿತ್ಯರಚನೆಗೆ ಇರುವಷ್ಟು ಮಹತ್ವ ಇಲ್ಲ. ಭಾಷಾಂತರ ಸಾಹಿತ್ಯಕ್ಕೇ ಮಹತ್ವವಿಲ್ಲವೆಂದ ಮೇಲೆ ಇದರ ಬಗೆಗಿನ ಚರ್ಚೆಗೆ ಮಹತ್ವ ಇನ್ನೂ ಕಡಿಮೆ. ಈ ಕ್ಷೇತ್ರದ ಸಮಸ್ಯೆ ಭಾಷಾಂತರಕಾರರಿಗೆ ಮಾತ್ರ ಗೊತ್ತು. ಭಾಷಾಂತರ ಅಧ್ಯಯನಕ್ಕೆ ಯಾವುದೇ ಶಾಸ್ತ್ರೀಯ ಚೌಕಟ್ಟು ಇಲ್ಲದಿರುವುದು ಈ ಮೀಮಾಂಸೆ ಹೆಚ್ಚು ಪ್ರಗತಿ ಹೊಂದದೇ ಇರಲು ಕಾರಣವಾಗಿದೆ. ಭಾಷಾಂತರ ಸಮೀಕ್ಷೆ ದ್ವಿ-ಭಾಷಿಕ, ದ್ವಿ-ಸಾಂಸ್ಕೃತಿಕ ವಾಙ್ಮಯವಾಗಿರುವುದರಿಂದ ಎರಡರ ಅಧ್ಯಯನ ಅವಶ್ಯಕ. ಇದು ಪ್ರಯಾಸಕರ ಕೆಲಸ. ಅಲ್ಲದೆ ಅನುವಾದದಲ್ಲಿ ನಿರಂಕುಶ ಅನುವಾದದಿಂದ ಕೃತಿಚೌರ್ಯದವರೆಗೆ ಅನೇಕ ವ್ಯಕ್ತಿನಿಷ್ಠ ರೂಪಗಳನ್ನು ನಾವು ಕಾಣುತ್ತೇವೆ. ಹೀಗಿರುವಾಗ ಇದನ್ನು ಒಂದು ನಿಗದಿತ ಕೇಂದ್ರಕ್ಕೆ ಹೊಂದಿಸುವುದು ಕಷ್ಟವಾಗುತ್ತದೆ. ಆದರೂ ಜ್ಞಾನೇಶ್ವರ, ತುಕಾರಾಮ, ವಾಮನ ಪಂಡಿತ, ದಾಸೋಪಂತ, ಜೇಮ್ಸ್ ಹ್ಯಾವೆಲ್, ಡ್ರಾಯ್ಡನ್, ಜಾನ್‌ಸನ್, ಕಾಲರಿಡ್ಜ್ ಮುಂತಾದವರು ಈ ಬಗ್ಗೆ ತಮ್ಮ ಪ್ರಸ್ತಾವನೆ, ಟಿಪ್ಪಣಿಗಳು, ಸಮೀಕ್ಷೆ, ಲೇಖನ, ಸಂವಾದ ಇತ್ಯಾದಿಗಳ ಮೂಲಕ ಚರ್ಚೆ ನಡೆಸಿದ್ದಾರೆ. ಆದರೆ ಭಾಷಾಂತರ ಮೀಮಾಂಸೆಯ ಸ್ವರೂಪವನ್ನು ಯಾರೂ ರಚಿಸುವ ಪ್ರಯತ್ನಕ್ಕೆ ಹೋಗಿಲ್ಲ. ಮ್ಯಾಕ್ಸ್‌ಮ್ಯುಲರ್, ಮ್ಯಾಥ್ಯೂ ಆರ್ನಾಲ್ಡ್, ಇ.ವಿ. ರೀವ್ಸ್, ಎಜ್ರಾಪೌಂಡ್‌ನಂತಹವರು ಭಾಷಾಂತರದ ಬಗ್ಗೆ ಮಹತ್ವದ ಚರ್ಚೆ ಮಾಡಿದ್ದಾರೆ. ಆದರೆ ಅದಕ್ಕೊಂದು ಸ್ವರೂಪ ನೀಡದೆ ಕೇವಲ ಟಿಪ್ಪಣಿಗಳಾಗಿ ಉಪಯೋಗಿಸಿದ್ದಾರೆ. ಕನ್ನಡದ ಶ್ರೇಷ್ಠ ಭಾಷಾಂತರಕಾರರು ಈ ಬಗ್ಗೆ ತಾತ್ವಿಕ ಚರ್ಚೆ ಮಾಡದೆ ಕೈಬಿಟ್ಟಿರುವುದು ದುರ್ದೈವ.

ಒಟ್ಟಿನಲ್ಲಿ ಭಾಷಾಂತರ ಸಿದ್ಧಾಂತವನ್ನು ಮಂಡಿಸುವುದಕ್ಕೆ ತೌಲನಿಕ ದೃಷ್ಟಿ ಮತ್ತು ಶಾಸ್ತ್ರೀಯ ಚೌಕಟ್ಟು ಇದ್ದಂತೆ ಕಂಡು ಬರುವುದಿಲ್ಲ. ಇಪ್ಪತ್ತನೇ ಶತಮಾನದ ಮಧ್ಯ ಭಾಗದಲ್ಲಿ ಭಾಷಾಂತರ ಅಡಚಣೆ ಬಗ್ಗೆ ಎತ್ತಿದ ಪ್ರಶ್ನೆಗಳು ಇಂದಿಗೂ ಮುಂದುವರೆದಿವೆ. 1) ಭಾಷಾಂತರ ಮುಕ್ತವಾಗಿರಬೇಕೋ? ಮೂಲನಿಷ್ಠವಾಗಿರಬೇಕೋ? 2) ಭಾಷಾಂತರ ಮಾಡಲು ಅಗತ್ಯವಾದುದು ವ್ಯುತ್ಪತ್ತಿಯೋ? ಅಥವಾ ಪ್ರತಿಭೆಯೋ? 3) ಭಾಷಾಂತರವು ಶಾಸ್ತ್ರವೋ? ಕಲೆಯೋ? 4) ಭಾಷಾಂತರವು ಮೂಲಭಾಷೆಯಂತಿರಬೇಕೋ? ಪುನಃಸೃಷ್ಟಿಯೋ? 5) ಭಾಷಾಂತರದಲ್ಲಿ ಮೂಲದ ಕಾಲ, ಭಾಷಾ ಶೈಲಿ, ಸಂಸ್ಕೃತಿ ಚಿತ್ರಣ ಇತ್ಯಾದಿಗಳನ್ನು ಮೂಲದಂತೆಯೇ ಇಟ್ಟುಕೊಳ್ಳಬೇಕೆ ಅಥವಾ ಭಾಷಾಂತರಿಸಿದ ಕಾಲಕ್ಕೆ ಅನುಗುಣವಾಗಿ ವ್ಯತ್ಯಾಸ ಹೊಂದಲು ಅವಕಾಶವಿದೆಯೇ? 6) ಭಾಷಾಂತರವನ್ನು ಮಾತೃಭಾಷೆಯಲ್ಲಿ ಮಾಡಬೇಕೋ? ಪರಭಾಷೆಯಲ್ಲೋ? 7) ಭಾಷಾಂತರದ ಪ್ರಯೋಜನಗಳಾವುವು - ಈ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಒದಗಿಸುವವರೆಗೂ ಭಾಷಾಂತರ ಮೀಮಾಂಸೆ ಕತ್ತಲಿನಲ್ಲೇ ಇರುತ್ತದೆ. ಅಲ್ಲದೆ ಚರ್ಚೆ ಕೂಡ ಇನ್ನೂ ಪ್ರಾಥಮಿಕ ಹಂತದಲ್ಲೇ ನಡೆಯುತ್ತಿದೆ. ಜಾರ್ಜ್ ಸ್ಟೈನರ್ ತನ್ನ 'After Able

(ಒ.ಯು.ಪಿ. ಲಂಡನ್ - 1975) ಕೃತಿಯಲ್ಲಿ ಹೇಳಿರುವ ಈ ಮಾತು ಮುಖ್ಯವಾದುದು. ''ವಿದ್ವತ್ತಿನ' ಕಾರಣದಿಂದಾಗಿ ಭಾಷಾಂತರದ ಬಗೆಗಿನ ಮೂಲಭೂತ ಅಜ್ಞಾನ ಇಲ್ಲವಾಗುವುದಿಲ್ಲ.'

1940ರ ಸುಮಾರಿನಲ್ಲಿ ಭಾಷಾಂತರ ಮೀಮಾಂಸೆಯನ್ನು ಭಾಷಾಶಾಸ್ತ್ರದ ಉಪಯೋಜಿತ ಶಾಖೆ ಎಂದು ಪರಿಗಣಿಸಲ್ಪಟ್ಟು, ಇದರ ಎಲ್ಲಾ ಪ್ರಮಾಣವಾದಿ ಪರಿಕಲ್ಪನೆಗಳು ಬದಲಾವಣೆ ಹೊಂದಿದವು. ಈ ಕ್ಷೇತ್ರದಲ್ಲಿ ವರ್ಣನ ಬೆಳೆದು ಭಾಷಾ ಶಿಕ್ಷಣದಲ್ಲಿನ ಸಿದ್ಧಾಂತಗಳು ಭಾಷಾಂತರ ಮೀಮಾಂಸೆಗೆ ಉಪಯುಕ್ತವಾದುವು. ಜೊತೆಗೆ ದ್ವಿಭಾಷಾ ತೌಲನಿಕ ಕ್ಷೇತ್ರ ಬೆಳೆದು ಎರಡು ಸಾಂಸ್ಕೃತಿಕ ಪ್ರಕ್ರಿಯೆಗಳ ಯಥಾರ್ಥ ಚರ್ಚೆ ಆರಂಭಗೊಂಡವು. ಭಾಷಾಂತರವು ಒಂದು ಭಾಷಿಕ ಸಾಂಸ್ಕೃತಿಕ ಆವರಣದಿಂದ ಮತ್ತೊಂದು ಭಾಷಿಕ ಸಾಂಸ್ಕೃತಿಕ ಕ್ಷೇತ್ರಕ್ಕೆ ಸ್ಥಾನಾಂತರ ಮಾಡುವ ಒಂದು ದ್ವೈಭಾಷಿಕ ಪ್ರಕ್ರಿಯೆಯಾಗಿರುವುದರಿಂದ ಈ ರೂಪಾಂತರದಲ್ಲಿ ಭಾಷೆಗಳ ಅಂತಃಸ್ತರವು ಅಧಿಕವಾಗಿ ಕಾರ್ಯಗತವಾಗಿರುತ್ತದೆ. ಜೊತೆಗೆ ಬಾಹ್ಯಸ್ತರದ ಉಪಯೋಗ ಯಾವ ಯಾವ ಸ್ವರೂಪದಲ್ಲಿ ಉಂಟಾಗುತ್ತದೆ ಎಂಬುದು ಭಾಷಾ ಶಾಸ್ತ್ರೀಯ ಉಪ ವ್ಯವಸ್ಥೆಯ ಪ್ರಕ್ರಿಯೆಯಿಂದ ಸ್ಪಷ್ಟವಾಗತೊಡಗಿತು. ಎಲ್ಲಾ ಪ್ರಕಾರದ ಗದ್ಯ- ಪದ್ಯ, ಲಲಿತ- ಶಾಸ್ತ್ರೀಯ ಸಾಹಿತ್ಯಗಳ ಭಾಷಾಂತರದ ನಡುವೆ ಯಾವುದಾದರೂ ರೀತಿಯ ಸಮಾನ ಸತ್ವವಿದ್ದು, ಭಾಷಾ ಬಳಕೆಯಲ್ಲಿ ಸಮಾನ ಗುಣಧರ್ಮದ ವೈಶಿಷ್ಟ್ಯ ಇದ್ದೇ ಇರುತ್ತದೆ. ಈ ನೆಲೆಯಿಂದ ಭಾಷಾಂತರ ಮೀಮಾಂಸಕರು ಭಾಷಾಶಾಸ್ತ್ರಜ್ಞರಿಗಿಂತ ವಿಶಿಷ್ಟವಾದ ಉದ್ದೇಶವನ್ನು ಪ್ರಸ್ತಾಪಿಸಿ, ಭಾಷಾಂತರದ ವಿಸ್ತಾರ ಮತ್ತು ಮೌಲ್ಯವನ್ನು ಸ್ಪಷ್ಟಪಡಿಸಿದ್ದಾರೆ. ಈ ರೀತಿ ಭಾಷಾಂತರ ಮೀಮಾಂಸೆ ಮುನ್ನಡೆದಿದೆ.

ಭಾಷಾಂತರ ಮಾಡುವಾಗ ನಾವು ಗಮನಿಸಬೇಕಾದುದು ಆ ಎರಡೂ ಭಾಷೆಗಳ ಸಂರಚನೆಯ ನಡುವಿನ ಅಂತಃಸ್ತರದಲ್ಲಿನ ಸಾಮ್ಯತೆ. ಶಬ್ದಾರ್ಥ ರಚನಾ ಸಿದ್ಧಾಂತ (symentics) ಮತ್ತು ತೌಲನಿಕ ಭಾಷಾಶಾಸ್ತ್ರದಲ್ಲಿನ ಸಾಮ್ಯದರ್ಶಕ ಅಧ್ಯಯನದಿಂದ ಒಂದು ಭಾಷೆಯ ಸಾಂಕೇತಿಕ ಶಬ್ದಾರ್ಥಗಳನ್ನು ಬೇರೊಂದು ಭಾಷೆಗೆ ಸ್ಥಾನಾಂತರಣ ಮಾಡಲು ಸಾಧ್ಯವೆಂದು ಸಿದ್ಧವಾಗಿದೆ. ಈ ಸ್ಥಾನಾಂತರಣವು ಭಾಷಿಕ ಘಟಕಗಳ ಮಧ್ಯೆ ಅರ್ಥ ದೃಷ್ಟಿಯ ಸಮ ನಿರ್ದೇಶಿತವಾಗಿರುತ್ತದೆ. ಈ ಪ್ರಕ್ರಿಯೆಯಲ್ಲಿ 'ಸಮ ನಿರ್ದೇಶನ ಅರ್ಥ'ವು ಸಂಕಲ್ಪ ವೈವಿಧ್ಯವನ್ನು ಒಳಗೊಂಡಿದ್ದು ಭಾಷಿಕ ಘಟಕದ ಯಾವುದಾದರೊಂದು ವಾಕ್ ಪ್ರಕಾರದ ಅರ್ಥ ದೃಷ್ಟಿಯು ಮೂಲಭಾಷೆಯಲ್ಲಿ ಯಾವ ಸ್ಥಾನದಲ್ಲಿತ್ತೋ ಮತ್ತೊಂದು ಭಾಷೆಯಲ್ಲೂ ಅದೇ ಇರಬೇಕಾಗುತ್ತದೆ. ಒಂದು ವೇಳೆ ಬೇರೆ ವಾಕ್ ಪ್ರಕಾರ ಉಪಯೋಗಿಸಿದಲ್ಲಿ ಮೂಲದ ಅರ್ಥ ಉಳಿಸಿಕೊಳ್ಳಬೇಕಾಗುತ್ತದೆ. ಎರಡೂ ಭಾಷೆಗಳ ನಡುವೆ ವ್ಯಾವಹಾರಿಕ ದೃಷ್ಟಿಯಿಂದ ಸಮಾನ ಅಂಶಗಳನ್ನು ಗುರುತಿಸಬೇಕು. ಈ ಸಮಾನ ಅಂಶಗಳು ಸಾಂಸ್ಕೃತಿಕ ನೆಲಗಟ್ಟಿನ ಮೇಲೆ ನಿಂತಿರಬೇಕು. ಭಾಷಾಂತರದಲ್ಲಿ ಮಾತೃಭಾಷೆಯ ಜ್ಞಾನ ಹೆಚ್ಚಾಗಿದ್ದರೆ ಭಾಷಾಂತರ ಮಾತೃಭಾಷೆಯಲ್ಲಿ ಸೃಜನಶೀಲವಾಗಿರುತ್ತದೆ. ಪರಭಾಷೆಯ ಜ್ಞಾನ ಹೆಚ್ಚಾಗಿದ್ದರೆ ಆ ಭಾಷೆಗೆ ಮಾತೃಭಾಷೆಯಿಂದ ನಡೆದ ಭಾಷಾಂತರ ಹೆಚ್ಚು ಸತ್ವಯುತವಾಗಿರುತ್ತದೆ. ಉದಾಹರಣೆಗೆ ಭಾರತೀಯ ಭಾಷೆಗಳ ಮಧ್ಯೆ ನಡೆಯುವ ಭಾಷಾಂತರ. ಸಾಂಸ್ಕೃತಿಕ ಹಿನ್ನೆಲೆ ಹೆಚ್ಚು ಕಡಿಮೆ ಒಂದೇ ಆಗಿರುವುದರಿಂದ ಹೆಚ್ಚು ಸೃಜನಶೀಲವಾಗಲು ಸಾಧ್ಯವಿದೆ. ಅದೇ ಪಾಶ್ಚಿಮಾತ್ಯ ಭಾಷೆಗಳಿಂದ ನಡೆಯುವ ಭಾಷಾಂತರ ಅಷ್ಟು ಸಮರ್ಪಕವಾಗಿರುವ ಸಾಧ್ಯತೆ ಕಡಿಮೆ. ಸಾಮಾನ್ಯವಾಗಿ ಇಂಗ್ಲಿಷ್‌ನಿಂದ ಕನ್ನಡಕ್ಕೆ ಸಾಕಷ್ಟು ಭಾಷಾಂತರ ಕ್ರಿಯೆ ನಡೆದಿದೆ. ಈ ನಿರಂತರ ಕಾರ್ಯದಿಂದಾಗಿ ಎರಡೂ ಭಾಷೆಗಳ ಮಧ್ಯೆ ವಿಚಾರ ಸ್ವೀಕಾರವಾಗಿ ಒಂದು ಗೌಣ ವ್ಯವಸ್ಥೆಯು ಸ್ವೀಕೃತ ಭಾಷೆಯಲ್ಲಿ

ರೂಪಗೊಂಡಿರುತ್ತದೆ. ಈ ಪ್ರಕ್ರಿಯೆಯಲ್ಲಿ ಸ್ವೀಕೃತ ಭಾಷೆಯು ಸಮಾನ ಅಂಶಗಳನ್ನು ಮೂಲ ಭಾಷೆಯಿಂದ ಪಡೆಯುತ್ತದೆ. ಇಂದು ಪ್ರಚಾರ ಮಾಧ್ಯಮಗಳಿಂದಾಗಿ ಜಗತ್ತು ತೀರ ಹತ್ತಿರ ಬಂದಿದ್ದು ಸಾಂಸ್ಕೃತಿಕವಾಗಿ, ವೈಜ್ಞಾನಿಕವಾಗಿ ಒಂದು ರೀತಿಯ ಅಂತರರಾಷ್ಟ್ರೀಯ ಅರ್ಥ ಕ್ಷೇತ್ರವು ರೂಪುಗೊಳ್ಳುತ್ತಿರುವುದು ಕಂಡುಬರುತ್ತಿದೆ. ಭಾಷಾಂತರ ಇದಕ್ಕೆ ಹೆಚ್ಚು ಸಹಕಾರ ನೀಡಿದೆ. ಭಾಷಾ ಸಂಪರ್ಕದಿಂದ ರಾಷ್ಟ್ರೀಯ ಹಾಗೂ ಸಾಂಸ್ಕೃತಿಕ ಪ್ರಕ್ರಿಯೆಗಳ ಸಂರಚನೆಯ ಪರಿಣಾಮವಾಗಿ ಮೂರನೇ ಕೃತಕ ಭಾಷೆ ಹುಟ್ಟಿಕೊಂಡು 'Indian writing in English' ನಂಥ ಹೊಸ ಸಾಹಿತ್ಯ ಸೃಷ್ಟಿ ಸಾಧ್ಯವಾಗಿದೆ. ಹೀಗೆ ಭಾಷಾಂತರ ಮೀಮಾಂಸೆಯಲ್ಲಿ ವಿವಿಧ ಪ್ರಕಾರಗಳ ಲಿಖಿತ ದ್ವಿಭಾಷಾ ಪರಿಣಾಮಗಳ ಅಧ್ಯಯನಕ್ಕೆ ಅವಕಾಶವಿದೆ.

ಭಾಷಾಂತರದ ವಿಶ್ಲೇಷಣೆ ಎಂದರೆ ಭಾಷಾಶಾಸ್ತ್ರೀಯ ಮತ್ತು ಭಾಷಾಂತರ ಮೀಮಾಂಸೆಯ ಸಂಯೋಗದ ಮೂಲಕ ಉಂಟಾದ ಶಬ್ದಾರ್ಥ ವಿಚಾರಗಳ ವಿಶ್ಲೇಷಣೆ. ಸಂಸ್ಕೃತವನ್ನು ಬೋಧಿಸುವಾಗ ಬಳಸುವ ಅನ್ವಯಾರ್ಥ ಪದ್ಧತಿ ಇದಕ್ಕೆ ನಿದರ್ಶನ. ಭಾಷಾಂತರಕ್ಕೆ ನಿರ್ದುಷ್ಟತೆಯು ಸೂಕ್ಷ್ಮ ದೃಷ್ಟಿಯ ಪಾಠ ಚಿಕಿತ್ಸೆಯಿಂದ ಬರುತ್ತದೆ.

ಸಂವಹನ ಮತ್ತು ಸಂಕೇತ ವಿನಿಮಯದ ವಿಶಾಲತರ ಕ್ಷೇತ್ರಗಳ ಭಾಗವಾಗಿ ಇದರೊಳಗಿನ ಅರ್ಥ ವಿಚಾರ (ವಿವೇಚನೆ) ದೃಷ್ಟಿಯ ಭಾಷಾಂತರವು ಕಾಣುತ್ತದೆ. ಚಿಹ್ನೆಗಳ ಕಲ್ಪನೆ ಭಾಷಾಂತರ ಪ್ರಕ್ರಿಯೆಯಲ್ಲಿ ಉಂಟಾಗುತ್ತದೆ. ನಂತರ ಇನ್ನೊಂದು ಭಾಷೆಯ ಚಿಹ್ನೆಗಳ ನಡುವೆ ಆ ಅರ್ಥವನ್ನು ಕಟ್ಟಿ ಆ ಭಾಷೆಯ ಬಾಹ್ಯ ಸ್ವರದ ಆವಿಷ್ಕಾರ ಮಾಡಬೇಕು. ಮೂಲಅರ್ಥದ ರೂಪ ಸಾಪೇಕ್ಷತೆಯ ಅವಶ್ಯಕತೆ ಇದ್ದರೂ ಆ ಹೊಸ ಚಿಹ್ನೆಗಳ ರಚನೆಯನ್ನು ಮೂಲದಂತೆಯೇ ಇಡಬೇಕು. ಅಲ್ಲದೇ ಹೆಚ್ಚು ಜೋಡು ಕ್ರಿಯೆಗಳನ್ನು ಲಕ್ಷ್ಯಕ್ಕೆ ತೆಗೆದುಕೊಂಡಾಗ ಎರಡು ಭಿನ್ನ ಚಿಹ್ನೆ ವ್ಯವಸ್ಥೆಗಳಲ್ಲಿ ಸಮಾನಾಕಾರ ಅಥವಾ ಏಕರೂಪದ ಕ್ರಿಯಾ ವಿಧಿಯನ್ನು ನಿರ್ಮಿಸುವ ಸಂದೇಶವಹನ (ಸುದ್ದಿವಾಹಕ)ದ ವ್ಯಾವಹಾರಿಕ ಆಕಾಂಕ್ಷೆಯು ಏನಾದರೂ ಮೂಲಭೂತ ವಿರೋಧವನ್ನು ಉಂಟುಮಾಡುತ್ತದೆ. ಭಾಷಾಂತರ ಮೀಮಾಂಸೆಯ ಸಾಂಸ್ಕೃತಿಕ ಅಂಗಗಳನ್ನು ಕುರಿತು ವಿಚಾರ ಮಾಡುವಲ್ಲಿ ಈ ವಿರೋಧಗಳು ಹೆಚ್ಚು ಗಂಭೀರವಾಗುತ್ತವೆ.

ಚಿಹ್ನಾಂಕಿತಗೊಂಡ ಅರ್ಥ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಹೋಗುವ ಪ್ರಕ್ರಿಯೆಯನ್ನು ತರ್ಕಶಾಸ್ತ್ರ, ತತ್ವಶಾಸ್ತ್ರ, ಭಾಷಾಶಾಸ್ತ್ರ ಮತ್ತು ಮನಃಶಾಸ್ತ್ರ ಇವುಗಳ ನಡುವಿನ ವಿಶಿಷ್ಟ ಶಾಖೆಗಳು ಮಂಡಿಸಿರುವ ಸಿದ್ಧಾಂತಗಳನ್ನು ಮುಂದಿಟ್ಟುಕೊಂಡು ವಿಚಾರ ಮಾಡಬೇಕು. ಅರ್ಥದ ಅರ್ಥ, ಅರ್ಥದ ಮೂಲ ಸ್ವರೂಪ, ಭಾಷಾನಿರಪೇಕ್ಷ ಅರ್ಥ, ನಿರ್ಗುಣ ನಿರಾಕಾರಗಳಂಥ ಚಿಹ್ನೆ ನಿರಪೇಕ್ಷ ಅರ್ಥಗಳ ಕಲ್ಪನೆ - ಈ ಬಗ್ಗೆ ಸ್ಪಷ್ಟಪಡಿಸಬೇಕಾಗುತ್ತದೆ. ಭಾಷೆಯ ಮೇಲೆ ಹಿಡಿತವಿರುವ ಓದುಗರು ಈ ಬಗ್ಗೆ ಕೇಳುತ್ತಾರೆ. ಲಿಖಿತ ಸಾಹಿತ್ಯದಲ್ಲಿನ ಭಾಷಾ ರಚನೆಯಲ್ಲಿ ಅರ್ಥ ಶುದ್ಧತೆ ಇರುವುದಿಲ್ಲ. ಲಲಿತ ಸಾಹಿತ್ಯ ಕೃತಿಯ ಸಂಕೇತಗಳ ಅರ್ಥವು ಯಾವಾಗಲೂ ಶುದ್ಧವಾಗಿರುವುದಿಲ್ಲ. ಸಾಂಕೇತಿಕವಾಗಿ ಮಂಡಿಸಿರುವ ರೂಪ ಪ್ರಮಾಣವು ರೂಪ ಸಾಪೇಕ್ಷವಾಗಿದ್ದು, ಅದನ್ನು ಮುರಿಯಲು ಬರುತ್ತದೆ. ಆಗ ಸ್ವಲ್ಪ ಮಟ್ಟಿಗೆ ಅರ್ಥ ಹಾನಿಯಾಗಲಿದ್ದು, ಇದು ರೂಪ ಸಾಪೇಕ್ಷತೆಯ ಅರ್ಥವಾಹಕತೆಯನ್ನು ಅವಲಂಬಿಸಿರುತ್ತದೆ.

ಮೂಲಭಾಷೆಯ ಯಾವುದಾದರೊಂದು ಸಂಕೇತದ ರೂಪ ಸಾಪೇಕ್ಷ ಅರ್ಥವು ಮತ್ತೊಂದು ಭಾಷೆಯಲ್ಲಿನ ಸಂಕೇತದಲ್ಲಿಯೂ ಹಾಗೆಯೇ ಸ್ಥಾನಾಂತರಣಗೊಳ್ಳುವುದು ಸಾಧ್ಯವಿಲ್ಲ. ಭಾಷಾ ಚಿಹ್ನೆಗಳಲ್ಲಿ ಪಸರಿಸಿದ ಅರ್ಥವು ಮತ್ತೊಂದು ಭಾಷೆಯಲ್ಲಿ

ತಿರುಗುಮುರುಗಾಗಿ ಬರುವ ಸಾಧ್ಯತೆ ಇದೆ. ಭಾಷೆಗಳ ನಡುವಿನ ಅಂತರ ಅಷ್ಟೊಂದು ಆಳವಾಗಿಲ್ಲದಿರುವುದು ಇದಕ್ಕೆ ಕಾರಣ. ಭಾಷಾಂತರವು ಸಹಜ ಸಾಧ್ಯವಾದುದಾಗಿ ಭಾಷಿಕ ವಿಶ್ವ ಸಿದ್ಧಾಂತ ಹೇಳುತ್ತದೆ. ಈ ಎರಡೂ ವಿಚಾರಗಳ ನಡುವೆ ಸಾಕಷ್ಟು ವಾದ ವಿವಾದಗಳು ಹುಟ್ಟಿಕೊಂಡಿವೆ. ಯುಜೀನ್ ನಾಯಿಡಾ ಎಂಬ ಶ್ರೇಷ್ಠ ಭಾಷಾಂತರ ಮೀಮಾಂಸಕನ ಪ್ರಕಾರ ಎರಡು ಭಾಷೆಗಳ ನಡುವಣ ಸಾಮ್ಯವು ಅವುಗಳ ಅರ್ಥದ ಗರ್ಭಗುಡಿಗೆ 'ತೀರಾ' ಹತ್ತಿರವಾಗುತ್ತದೆ. ಜೊತೆಗೆ ಅದು ಭಾಷೆಯ ಅಂತಃಸ್ತರದಲ್ಲಿನ ವಾಕ್ಯವಿನ್ಯಾಸದ ನಂತರ ಬಾಹ್ಯಸ್ತರದವರೆಗೆ ಕಡಿಮೆಯಾಗುತ್ತಾ ಹೋಗುತ್ತದೆ. ಅರ್ಥದ ರೂಪದ ನಿರಪೇಕ್ಷತೆಯನ್ನು ಭಾಷಾತೀತ ಉದ್ದೇಶವನ್ನಾಗಿಸಿ ಚಿಹ್ನೀಕರಣ ಮಾಡುವುದನ್ನು ಒಪ್ಪುವ ಮೀಮಾಂಸಕರು ಕೂಡ ಭಾಷಾಂತರದಲ್ಲಿ ಮೂಲ ಅರ್ಥಕ್ಕೆ ಸ್ವಲ್ಪ ಹಾನಿಯಾಗುವುದನ್ನು ಒಪ್ಪುತ್ತಾರೆ. ಅರ್ಥಕ್ಕೆ ನಾವು ಯಾವ ಅರ್ಥ ಕೊಡುತ್ತೇವೆಂಬುದರ ಮೇಲೆ ಈ ಪ್ರಶ್ನೆಗಳ ಉತ್ತರ ಅವಲಂಬಿತವಾಗಿದೆ. ಭಾಷೆಯ ಸ್ವರೂಪ ಪ್ರತಿ ಕಾತ್ಮಕ ಎಂಬುದು ಸ್ವತಃ ಸಾಧನಾಭೂತವಾಗಿದ್ದು, ಅದು ಅದರಾಚೆಯ ಮತ್ತೊಂದನ್ನು ಧ್ವನಿಸುವುದಾಗಿರುತ್ತದೆ. ಮರಾಠಿಯ ಖ್ಯಾತ ವಿಮರ್ಶಕ ಬಾಲಚಂದ್ರ ನೇಮಾಡೆಯ ಪ್ರಕಾರ "ಯಾವುದಾದರೊಂದು ಭಾಷೆಯ ಸಾಹಿತ್ಯದಲ್ಲಿ ಅಡಕವಾಗಿರುವ ಅರ್ಥವು ಅಧಿಕ ಲಕ್ಷಣ, ಸರಳ ವ್ಯಾವಹಾರಿಕ (ವಾಚ್ಯ) ಮತ್ತು ಸಂಕೇತ ನಿಷ್ಠ ಸ್ವರೂಪದಲ್ಲಿ ವ್ಯಕ್ತವಾಗುತ್ತಿರುತ್ತದೆ. ಇದಕ್ಕೆ ಅನುಗುಣವಾಗಿ ಆಯಾಯ ಸಂಕೇತದಲ್ಲಿ ಯಾವ ರೀತಿಯ ಅರ್ಥವು ನಿರ್ಣಾಯಕವಾಗಿರುತ್ತದೆಯೋ, ಅದು ಅವುಗಳ ವ್ಯಾವಹಾರಿಕ ವ್ಯವಸ್ಥೆಯಾಗಿರುತ್ತದೆ. ಭಾಷಾಂತರದಲ್ಲಿ ಅಸಾಧ್ಯತೆ ಮತ್ತು ಅವಶ್ಯಕತೆ ಈ ಎರಡೂ ಧ್ರುವಗಳ ನಡುವೆ ಒಂದು ಮಧ್ಯಮ ಮಾರ್ಗವನ್ನು ರೂಪಿಸಬೇಕು. ಆಗ ಮೇಲಿನ ವ್ಯಾವಹಾರಿಕ ವ್ಯವಸ್ಥೆಯ ಅರ್ಥವನ್ನು ಮೂಲಭೂತವೆಂದು ಮಾನ್ಯ ಮಾಡಿದಾಗ ಯಾವುದೇ ಭಾಷೆಯ ಮೂಲ ಅರ್ಥದ ಪುನರ್ರಚನೆ ಸಾಧ್ಯವಾಗುತ್ತದೆ.[1] "

ರೂಪನಿಷ್ಠವಾದ ಕವಿತೆಯಂತಹ ಸಾಹಿತ್ಯ ಪ್ರಕಾರದ ಭಾಷಾಂತರ ಸಾಧ್ಯವಿಲ್ಲವೆನ್ನುವವರಿದ್ದಾರೆ. ಇದಕ್ಕೆ ಕವಿತೆ ಅತ್ಯಂತ ಸಂಕೀರ್ಣ ಸ್ವರೂಪದ್ದಾಗಿರುವುದೇ ಕಾರಣ. ಅದರ ಭಾಷಿಕ ಸಂರಚನೆ ಮತ್ತು ಚಿಹ್ನೆಗಳ ಬಳಕೆಯಿಂದಾಗಿ ಅನೇಕ ಅರ್ಥಗಳು ವ್ಯಕ್ತವಾಗುತ್ತದೆ. ಹಾಗಾಗಿ ಒಂದು ಭಾಷೆಯ ಕವಿತೆಯನ್ನು ಅದೇ ಭಾಷೆಯ ಮತ್ತೊಂದು ಭಾಷಿಕರಚನೆಯಲ್ಲಿ ರೂಪಿಸಲು ಕಷ್ಟವಾಗುತ್ತದೆ. ಹಾಗಿದ್ದಾಗ ಮತ್ತೊಂದು ಭಾಷೆಯಲ್ಲಿ ಭಾಷಿಕರಚನೆ ರೂಪಿಸುವುದು ಎಷ್ಟು ಕಷ್ಟವೆನ್ನುವುದು ವೇದ್ಯವಾಗುತ್ತದೆ. ಒಂದು ಭಾಷೆಯ ನಿರ್ದಿಷ್ಟ ಅರ್ಥದ ಪದಗಳಿಗೆ ಸಮಾನಂತರ ಪದಗಳನ್ನು ಶೋಧಿಸಬೇಕಾಗುತ್ತದೆ. ಇಂಥ ವಿರುದ್ಧ ಶಾಸ್ತ್ರೀಯ ವಿಷಯದ ಮೇಲಿನ ಸಂಕೇತವು ತಾರ್ಕಿಕ ಚಿಹ್ನೆಗಳ ಭಾಷೆಯನ್ನು ಉಪಯೋಗಿಸುತ್ತಿರುವುದರಿಂದ ಅವುಗಳ ಭಾಷಾಂತರದಲ್ಲಿ ಮೂಲ ಅರ್ಥಕ್ಕೆ ಹಾನಿಯುಂಟಾಗದಂತೆ ಸಮಾನ ಚಿಹ್ನೆಗಳನ್ನು ಬಳಸಿಕೊಳ್ಳುವುದಕ್ಕೆ ಬರುತ್ತದೆ. ಅಲ್ಲದೇ ಶಾಸ್ತ್ರೀಯ ಭಾಷೆಯು ರೂಪತಾಪೇಕ್ಷವಾಗಿರುವುದಿಲ್ಲ. ಆದ್ದರಿಂದ ಭಾಷಾಂತರದಂತಹ ಕಿಷ್ಕಿಂಧ ಮಾರ್ಗದಲ್ಲಿಯೇ ಅದನ್ನು ಮತ್ತೊಂದು ಭಾಷೆಗೆ ಸುಲಭವಾಗಿ ಕೊಂಡೊಯ್ಯುವುದು ಸಾಧ್ಯವಾಗುತ್ತದೆ. ಲಲಿತ ಭಾಷೆಯ ಭಾಷಾಂತರ ಮಾರ್ಗವನ್ನು ಎಷ್ಟು ಹಿಗ್ಗಿಸಿದರೂ ಅದರ ಅರ್ಥ ಹಾನಿಯಾಗುವುದು ಮಾತ್ರ ತಪ್ಪುವುದಿಲ್ಲ.

ಸಂಕೇತಕ್ಕೆ ಸಿಗುವ ಕತೆಯ ಒಪ್ಪಿಗೆ ಓದುಗನ ಮಾನಸಿಕ ಸ್ಥಿತಿ. ಭಾಷಾಂತರವನ್ನು ಓದಿದಾಗ ಮೂಲಕೃತಿಯಂತೇ 'ಭಾಸ' ವಾಗುತ್ತದೆ ಎಂದಾಗ ಈ 'ಭಾಸ' ವನ್ನು ಅಳೆಯಲು ಅಳತೆಗೋಲಿಲ್ಲ. ಹಾಗೆಯೇ ಭಾಷಾಂತರದಲ್ಲಿ 'ಅರ್ಥಹಾನಿ' ಆಗುತ್ತದೆ

ಎಂದೂ ಹೇಳುವುದೂ ಕೂಡ ಸರಿಯಲ್ಲ. ಮೂಲ ಸಂಕೇತದಲ್ಲಿ 'ಎಷ್ಟು' 'ಅರ್ಥ'ವಿದೆಯೋ 'ಅಷ್ಟು' ಅರ್ಥ ಮತ್ತೊಂದು ಭಾಷೆಯಲ್ಲಿ ಮಂಡಿಸುವುದಕ್ಕೆ ಬರಬೇಕೆಂಬ ಈ ನಿಕಷೆಯಲ್ಲಿ 'ಎಷ್ಟು' 'ಅಷ್ಟು'ಗಳಿಗೆ ವಸ್ತುನಿಷ್ಠವಾದ ಮೌಲ್ಯಮಾಪನ ಸಾಧ್ಯವಿಲ್ಲ. ಈ ಹಿನ್ನೆಲೆಯಲ್ಲಿ ಭಾಷಾಂತರ ಕೃತಿ ಮೂಲಕೃತಿಯ ಒಂದು ಪ್ರಭೇದ ಎಂದು ಒಪ್ಪಿಕೊಳ್ಳಬಹುದಾಗಿದೆ.

ಈ ಭೇದದ ಶೈಲಿಶಾಸ್ತ್ರದ ತತ್ವವು ಭಾಷಾಂತರದ ಚರ್ಚೆಗೆ ಅನುಕೂಲಕರ ಚೌಕಟ್ಟನ್ನು ರೂಪಿಸಿಕೊಡುತ್ತದೆ. ಎಲ್ಲ ಮಾನವ ಜಾತಿಯ ವಾಸ್ತವತೆಯ ಕಲ್ಪನೆ ಮತ್ತು ಪತಜನ್ಯ ಅರ್ಥದ ಚಿಹ್ನೀಕರಣವನ್ನು ಅಕ್ಕಪಕ್ಕದ ರೀತಿಯಲ್ಲೇ ಮಾಡಲಾಗುತ್ತದೆ. ಆಯಾಯ ಭಾಷೆಯ ಸಂರಚನೆಯು ಒಂದು ಮಿತಿಯವರೆಗೆ ಈ ಪ್ರಕ್ರಿಯೆಯ ಮೇಲೆ ತನ್ನ ಪರಮಾಧಿಕಾರವನ್ನು ಚಲಾಯಿಸುತ್ತದೆ. ಈ ಅಂಶವನ್ನು ಒಪ್ಪಿಕೊಂಡಲ್ಲಿ ಆ ಮಿತಿಯವರೆಗೆ ಬಳಕೆಯಾದ ಆಯಾಯ ಭಾಷೆಯ ವೈಶಿಷ್ಟ್ಯಪೂರ್ಣ ಅರ್ಥದ ಭಾಷಾಂತರ ಸಹಜವಾಗುವುದಿಲ್ಲ. ಅಲ್ಲದೆ ಯಾವುದನ್ನು ಸಾಧಿಸಲಾಗದೋ ಅದನ್ನು ಹೆಚ್ಚು ಪರಿಶ್ರಮದಿಂದ ಮಾಡುವುದರಲ್ಲಿ ಸ್ವಾರಸ್ಯವಿರುವುದಿಲ್ಲ. ಇಷ್ಟಾಗಿಯೂ ಭಿನ್ನಭಾಷೆಗಳ ಉಪ ವ್ಯವಸ್ಥೆಯ ನಡುವಿನ ಸಮಾನ ಅರ್ಥ ನಿರ್ಮಿತಿ ಸಂಬಂಧದ ಸಿದ್ಧಾಂತವು ಸುಳ್ಳಾಗುವುದಿಲ್ಲ. ಒಂದು ಭಾಷೆಯಲ್ಲಿನ ಅರ್ಥ ಘಟಕದ ಸಮನಿರ್ದೇಶನವು ಮತ್ತೊಂದು ಭಾಷೆಯ ಲೌಕಿಕ ಉಪ ವ್ಯವಸ್ಥೆಯಲ್ಲಿಯೂ ಶೋಧಿಸಬಹುದು. ಇಂತಹ ಸಮ ನಿರ್ದೇಶಕಗಳು ಧ್ವನಿ, ಶಬ್ದ, ಶಬ್ದ ಸಮೂಹ, ವಾಕ್ಯ, ವಿನ್ಯಾಸ, ವಾಕ್ಯ ರಚನೆ ಹಾಗೂ ವಾಕ್ಯದಾಚೆಗಿನ ವಾಕ್ಯ ಸಮೂಹ ಘಟಕಗಳಲ್ಲಿ ಸಿಗಬಹುದು. ಇದರಲ್ಲಿ ಮತ್ತೊಂದು ಮಹತ್ವದ ವಿಚಾರವೆಂದರೆ ಸ್ಥೂಲ ಮತ್ತು ಸೂಕ್ಷ್ಮ ಭಾಷಿಕ ತತ್ವಗಳು ಸಂಪೂರ್ಣವಾಗಿ ಸಾಹಿತ್ಯದ ಶೈಲಿಗೆ ಸಂಬಂಧಿಸಿದವು. ಒಂದೊಂದು ಪ್ರತ್ಯೇಕ ಘಟಕಗಳಿಗೆ ಶೈಲಿಯ ವಿಚಾರದಲ್ಲಿ ಮಹತ್ವವಿಲ್ಲ. ಆದ್ದರಿಂದ ಸಮಾನಾರ್ಥಕಗಳ ಉದ್ದೇಶಗಳಿಗೆ ಹೆಚ್ಚಾಗಿ ಯಥಾರ್ಥವಾಗಿ ಅರ್ಥವು ಪ್ರಾಪ್ತವಾಗುತ್ತದೆ. ಭಾಷಾಂತರ ಎಲ್ಲಾ ಘಟಕಗಳ ಸಮೃದ್ಧಿಯ ಹಾಗೂ ಪ್ರಕ್ರಿಯೆಗಳ ವಿಚಾರಗಳು ಭಾಷ ಚಿಹ್ನೆಗಳ ವ್ಯವಸ್ಥೆ, ಅರ್ಥ ವಿಚಾರ, ಮತ್ತು ಶೈಲಿ ಇವುಗಳ ಸಂಲಗ್ನದಿಂದ ಮೈವೆತ್ತು ಉಂಟಾಗುವ ಭಾಷಾಂತರ ಚಿಕಿತ್ಸೆಯಲ್ಲಿ ಕಂಡು ಬಂದಿರುವುದನ್ನು ನಾವು ನೋಡಿದೆವು. ಆದರೆ ಪರಿಪೂರ್ಣತೆ ಇದರಿಂದ ಮಾತ್ರ ಸಾಧ್ಯವಿಲ್ಲ. ಭಾಷಾಂತರದ ಮಹತ್ವದ ಗುಣ ಧರ್ಮಗಳು ಭಾಷಾವಿಜ್ಞಾನದ ಸ್ಥೂಲ ಹಾಗೂ ಸೂಕ್ಷ್ಮ ದೃಷ್ಟಿಕೋನದಿಂದ ಹೊರಗುಳಿದುದು ಕಂಡುಬರುತ್ತದೆ. ಭಾಷಾಂತರ ಮತ್ತು ತೌಲನಿಕ ಸಾಹಿತ್ಯದ ಸಂಬಂಧವನ್ನು ವಿವೇಚಿಸಿದರೆ ಭಾಷಾಂತರ ಆದರ ಒಂದು ಶಾಖೆಯಾಗಿ ಕಾಣಿಸುತ್ತದೆ. ಎರಡೂ ಭಾಷೆಗಳ ಸಾಹಿತ್ಯ ಪರಂಪರೆ, ಸಾಹಿತ್ಯ ಸಂಪ್ರದಾಯಗಳು, ಶೈಲಿ ಪರಂಪರೆ, ಭಾಷಿಕ ಹಾಗೂ ಸಾಂಸ್ಕೃತಿಕ ಪರಂಪರೆ, ಸಾಹಿತ್ಯ ಪ್ರಕಾರ, ಛಂದೋಪ್ರಕಾರಗಳು, ಸಾಹಿತ್ಯದ ಸೌಂದರ್ಯ ಶಾಸ್ತ್ರೀಯ ಮೂಲ ಪ್ರಣಾಳಿಕೆ ಇತ್ಯಾದಿ ಅಂಶಗಳ ಬಗೆಗೆ ವಿಚಾರ ಮಾಡಲು ಭಾಷಾಂತರ ಸಹಾಯವಾಗಿದೆ. ಅಲ್ಲದೆ ಎರಡು ಭಾಷೆಗಳನ್ನು ಕರಾರುವಾಕ್ಕಾಗಿ ಭೇದಿಸುವ ಸಾಹಿತ್ಯಿಕ ಚಳುವಳಿ, ಪ್ರಭಾವ, ಮಹಾಕಾವ್ಯಗಳ ಸಮಾನ ಪರಿಣಾಮ, ಆಶಯದೃಷ್ಟಿ, ಜನಪದ ಸಾಹಿತ್ಯದ ಸ್ವರೂಪ, ಪ್ರವೃತ್ತಿ, ಪ್ರೇರಣೆಯ ವಿಚಾರಗಳು ಭಾಷಾಂತರ ಅಧ್ಯಯನದ ಅವಿಭಾಜ್ಯ ಅಂಗಗಳಾಗಿವೆ. ಕನ್ನಡ ಸಾಹಿತ್ಯದಲ್ಲಿ ಆಧುನಿಕ ಯುಗ ಪ್ರಾರಂಭವಾಗಿದ್ದೇ ಭಾಷಾಂತರದಿಂದ. ಕಾದಂಬರಿ, ದುರಂತ ನಾಟಕಗಳು, ವಿನೋದ ಸಾಹಿತ್ಯ, ಸಮೀಕ್ಷೆಗಳು, ಪತ್ರ ವ್ಯವಹಾರ ಇಂತಹ ಸಾಹಿತ್ಯಿಕ ಪ್ರವಾಹದ ಮೂಲಕ ವಾಕ್ಯ ರಚನೆ, ವಾಕ್ಯ ವಿನ್ಯಾಸ, ಶಬ್ದಕಲೆ ಮುಂತಾದ ಭಾಷಿಕ ಪ್ರಯೋಗಗಳು ಇಂಗ್ಲಿಷ್‌ಗಿಂತ ಕನ್ನಡದಲ್ಲಿ ಹೇಗೆ ಅಂಕುರಿಸದವು ಎಂಬುದನ್ನು ಒಂದೇ ಭಾಷೆಯ ಸಾಹಿತ್ಯ ಸಮೀಕ್ಷೆಯಿಂದ ಉತ್ತರಿಸಲು ಸಾಧ್ಯವಿಲ್ಲ. ಅದಕ್ಕಾಗಿಯೇ ತೌಲನಿಕ ದೃಷ್ಟಿ ಅವಶ್ಯಕ. ಈ ತೌಲನಿಕ ದೃಷ್ಟಿಗೆ ಭಾಷಾಂತರ ಪೂರಕವಾದುದು.

ಭಾಷೆ ಮತ್ತು ಸಂಸ್ಕೃತಿ ಪರಸ್ಪರ ಅವಲಂಬಿ ಅಂಶಗಳು. ಭಾಷಾಂತರ ಈ ಸಾಂಸ್ಕೃತಿಕ ಸಂಪರ್ಕದ ವಾಹಕ. ಆ ವಿಶೇಷದಲ್ಲಿ ಮೂಲಭೂತ ವಿಚಾರಗಳು, ಮೌಲ್ಯ ವಿವೇಚನೆ ಪರಿಣಾಮ ಇತ್ಯಾದಿ ಅಂಶಗಳು ನಮಗೇ ಗೊತ್ತಿಲ್ಲದಂತೆ ದೇಶ ವಿದೇಶಗಳಲ್ಲಿ ಹರಡಿರುತ್ತವೆ. ಪಂಚತಂತ್ರದ ಒಂದು ಮಾತು ಆರನೆಯ ಶತಮಾನದಲ್ಲಿಯೇ ಭಾರತದಿಂದ ಇರಾನ್ ಮೂಲಕ ಬಾಗ್ದಾದ್. ಕಾನ್‌ಸ್ಟ್ಯಾಂಟಿನೋಪಲ್ ತಲುಪಿ ಯುರೋಪಿನಾದ್ಯಂತ ವ್ಯಾಪಿಸಿತ್ತು. ಇದನ್ನು ಮಾಕ್ಸ್‌ಮ್ಯುಲರ್ ಗುರುತಿಸುವವರೆಗ ನಮಗೇ ತಿಳಿದಿರಲಿಲ್ಲ. ಈ ಹಿನ್ನೆಲೆಯಲ್ಲಿ ಭಾಷಾಂತರದ ಸಾಂಸ್ಕೃತಿಕ ಕಾರ್ಯ ಅತ್ಯಂತ ಮಹತ್ವದ್ದಾಗಿದೆ.

ಭಾಷಾಂತರ ಒಂದು ಕಠಿಣ ಕ್ರಿಯೆ. ಮಾತೃಭಾಷೆ ಮತ್ತು ಪರಭಾಷೆಯ ಸ್ಪರ್ಶ ರೇಖೆಯೊಂದಿಗೆ ಸತತ ಹೋರಾಟದ ಪ್ರಕ್ರಿಯೆ ಅದು. ಇದು ಆಂಟೋನಿ ಗಾಲ್ಡ್, ರಿಚರ್ಡ್ ಬರ್ಟನ್ ಅವರ ಅಭಿಪ್ರಾಯವಾಗಿದೆ. ಅರೇಬಿಯನ್ ನೈಟ್ಸ್‌ನ್ನು ಭಾಷಾಂತರಿಸಿದವರಿಗ ಹೀಗೆನಿಸಬೇಕಿದ್ದರೆ ಅವರು ಪಟ್ಟ ಪರಿಶ್ರಮದ ಅರಿವಾಗುತ್ತದೆ. ಪ್ರತಿಯೊಂದು ಸಮಸ್ಯೆಗೂ ಉತ್ತರವಿರುವುದನ್ನು ನಾವು ಕಾಣುತ್ತೇವೆ. ಕೆಲವೊಂದಕ್ಕೆ ಸುಲಭವಾಗಿ ಉತ್ತರ ಸಿಕ್ಕರೆ ಇನ್ನು ಕೆಲವಕ್ಕೆ ಸಾಕಷ್ಟು ಪರಿಶ್ರಮ ವಹಿಸಬೇಕು. ಮನುಷ್ಯ ಸಂಬಂಧ ಸಮಸ್ಯೆಗಳು ತಮ್ಮದೇ ಆದ ವೃತ್ತದೊಳಗೆ ಪರಿಹಾರ ಕಂಡುಕೊಂಡು ಬದುಕು ಈ ಎಲ್ಲಾ ಅಡತಡೆಗಳನ್ನು ದಾಟಿ ನಡೆದುಕೊಂಡು ಬರುತ್ತಿರುವುದು ಮಾನವ ಬದುಕಿನ ಆಶ್ಚರ್ಯ ಸಂಗತಿ. ಒಂದು ಸಂಸ್ಕೃತಿಯ ಪ್ರವೃತ್ತಿಯ ಸ್ಥೂಲ ಹಾಗೂ ಸೂಕ್ಷ್ಮದರ್ಶನ ಭಾಷಾಂತರದಿಂದ ಸಾಧ್ಯ. ಶಾಸ್ತ್ರೀಯ ಮತ್ತು ತಾಂತ್ರಿಕ ಗ್ರಂಥಗಳನ್ನು ಬಿಟ್ಟರೆ ಇತರ ಎಲ್ಲಾ ಸಾಹಿತ್ಯದ ಪ್ರಕಾರಗಳು ಯಾವುದಾದರೊಂದು ಮಾತೃಭಾಷೆ, ಮಾತೃಸಂಸ್ಕೃತಿಯ ಸಂರಚನೆಗಳಾಗಿರುವುದನ್ನು ನಾವು ಕಾಣಬಹುದು. ಅತ್ಯಂತ ಸಮೃದ್ಧ ಮತ್ತು ಅನುಕೂಲಕರವಾದ ಮಾತೃಸಂಸ್ಕೃತಿಗೆ ಮತ್ತೊಂದು ಭಾಷೆಯ ಮಾತೃ ಸಂಸ್ಕೃತಿಗೆ ಭಾಷಾಂತರಗೊಳ್ಳುತ್ತದೆ. ಹೇಮಿಂಗ್‌ವೇನ 'The oldman and the Sea' ನಲ್ಲಿ ಬರುವ ಅಮೆರಿಕನ್-ಕ್ಯಾರಿಬಿಯನ್, ಯುದ್ಧೋತ್ತರಕಾಲದ ಅಪರಿಷ್ಕೃತ ಮೀನುಗಾರರ ಬದುಕು ಭಾಷಾಂತರಿಸಿದಾಗ ಆಯಾ ಮಾತೃಸಂಸ್ಕೃತಿಯಲ್ಲಿ ಅಭಿವ್ಯಕ್ತವಾಗುತ್ತದೆ. ಅಂದರೆ ಮೂಲಸಂಸ್ಕೃತಿಯ ಉಚ್ಚ ಮೌಲ್ಯಗಳನ್ನು ಶುದ್ಧ ಸ್ವರೂಪದಲ್ಲಿ ಜಗತ್ತಿನಾದ್ಯಂತ ಪ್ರಸ್ತುತಗೊಳಿಸುವ ಭಾಷಾ ವ್ಯವಸ್ಥೆ ಭಾಷಾಂತರದಲ್ಲಿ ಕಾಣಬಹುದು. ಇದರಿಂದಾಗಿ ನೀಚ ಮೌಲ್ಯದ ಸಂಸ್ಕೃತಿ ತಾನಾಗಿಯೇ ವಿಸರ್ಜಿಸಲ್ಪಡುತ್ತದೆ. ಪ್ರಾಚೀನ ಭಾರತೀಯ ಸಾಹಿತ್ಯ ಈಗಲೂ ಎಲ್ಲೆಡೆ ಭಾಷಾಂತರಿಸಲ್ಪಡುತ್ತಿರುವುದು ಅದರ ಉಚ್ಚ ಸಾಂಸ್ಕೃತಿಕ ಮೌಲ್ಯಕ್ಕೆ ಸಾಕ್ಷಿಯಾಗಿದೆ.

ಭಾಷಾಂತರ ಸಾಹಿತ್ಯದ ಮೌಲ್ಯಮಾಪನವೂ ಕೂಡ ಅಷ್ಟೇ ಕಷ್ಟಕರವಾದುದು. ಇದನ್ನು ಮೂಲಭಾಷೆಯ, ಮೂಲ ಸಂಸ್ಕೃತಿಯ, ಮೂಲಸಾಹಿತ್ಯದ ಹಿನ್ನೆಲೆಯಲ್ಲಿ ಮೌಲ್ಯಮಾಪನ ಮಾಡುವ ಪದ್ಧತಿ ಜಾರಿಯಲ್ಲಿದೆ. ಇದು ಸರಿಯೇ? ಮೂಲದ ಅಂತಃಸತ್ವವನ್ನು ಎಷ್ಟರಮಟ್ಟಿಗೆ ಭಾಷಾಂತರಕಾರ ಸೆರೆಹಿಡಿದಿದ್ದಾರೆ ಅನ್ನುವ ಮಟ್ಟಿಗೆ ಇದು ಸರಿ. ಅನಂತರದ್ದು ಅದು ಎಷ್ಟರಮಟ್ಟಿಗೆ ಭಾಷಾಂತರ ಭಾಷೆಯ, ಸಂಸ್ಕೃತಿಯ, ಸಾಹಿತ್ಯದ ಅವಿಭಾಜ್ಯ ಅಂಗವಾಗಿ ಸೇರಿಕೊಳ್ಳುವುದರಲ್ಲಿ ಯಶಸ್ವಿಯಾಗಿದೆ ಎಂಬುದರ ಮೇಲೆ ಉಳಿದ ಮೌಲ್ಯಮಾಪನ ಅವಲಂಬಿಸಿದೆ. ಹಾಗೆಂದಾಗ ಇದು ತೌಲನಿಕ ಸಾಹಿತ್ಯದ ಪರಿಧಿಯನ್ನು ಕೂಡ ದಾಟಿ ಹೊರಬರುತ್ತದೆ. ಭಾಷಾಂತರ ಕೃತಿಗಳ ಪ್ರಭಾವ ಪ್ರಕ್ರಿಯೆಗಳು ಸ್ವತಂತ್ರವಾದ ಅಧ್ಯಯನ ಕ್ಷೇತ್ರದಲ್ಲಿ ಬರುತ್ತವೆ. ಯಾವುದೇ ಭಾಷಾಂತರ ತನ್ನ ಪರಿಸರದ ಸಾಹಿತ್ಯದ ಮೇಲೆ ಅಲ್ಪ ಪ್ರಮಾಣದಲ್ಲಾದರೂ ಪ್ರಭಾವ, ಪರಿಣಾಮ ಬೀರುತ್ತದೆ. ಹಾಗಾಗಿ ಭಾಷಾಂತರ ಸಾಹಿತ್ಯಮೀಮಾಂಸೆಯಲ್ಲಿ ಅಕ್ಷರ ಸಾಹಿತ್ಯದ ಒರೆಗಲ್ಲು ಎಂಬುವುದಾಗಿ ಪರಿಗಣಿಸಲ್ಪಡುತ್ತದೆ. ಇದರಲ್ಲಿ ಭಾಷೆಯ

ಬೆಳವಣಿಗೆಯ ಘಟಕದ್ರವ್ಯಕ್ಕೆ ಗೌಣಸ್ಥಾನ ಪ್ರಾಪ್ತವಾಗುತ್ತದೆ. ಮೂಲಭಾಷೆಯಲ್ಲಿನ ಸಂಕೇತಕ್ಕೆ ಆ ಭಾಷೆಯ ಓದುಗ ಕೇವಲ "ಹಾಗೆ ಅನಿಸುವುದು" ಎಂದು ಮಾತ್ರ ಹೇಳಿಕೊಳ್ಳಬಹುದೇ ವಿನಾ "ಅದು ಹೀಗೆಯೇ" ಎಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಭಾಷಾಂತರ ಮೌಲ್ಯಮಾಪನ ಸಂಸ್ಕೃತಿ ಮತ್ತು ಪರಂಪರೆಗಳಿಗೆ ಸಾಪೇಕ್ಷವಾಗಿದೆ. ಈ ಮೌಲ್ಯಮಾಪನ ವ್ಯಕ್ತಿ ಪ್ರಕ್ರಿಯೆಯಾಗಿದ್ದು ಭಾಷಾಂತರದಲ್ಲಿ ಯಾವುದು ಶ್ರೇಷ್ಠ ಯಾವುದು ಕನಿಷ್ಠ ಎಂದು ತೌಲನಿಕವಾಗಿ ಹೇಳಲು ಮಾತ್ರ ಸಾಧ್ಯ.

ಭಾಷಾಂತರದ ಅಧ್ಯಯನ ಒಂದು ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರದೆ ಅನೇಕ ಕ್ಷೇತ್ರಗಳಲ್ಲಿ ತನ್ನ ಬೇರನ್ನು ಹರಡಿರುವುದನ್ನು ನಾವು ಕಾಣಬಹುದು. ಹಾಗಾಗಿ ಸರ್ವಸಮಾವೇಶಕ ವಿವೇಚನಾ ಪದ್ಧತಿಯಿಂದ ಮಾತ್ರ ಭಾಷಾಂತರಕ್ಕೆ ನ್ಯಾಯ ದೊರೆಯುತ್ತದೆ. ಪರಸ್ಪರ ವ್ಯಾಪಕ ಪದ್ಧತಿ ಮತ್ತು ದೃಷ್ಟಿಕೋನವನ್ನು ಅಧ್ಯಯನ ಮಾಡಿ ನಂತರ ಒಂದು ಸುಸೂತ್ರತೆ ತರಬೇಕಾದುದು ಇದರ ಮೌಲ್ಯಮಾಪನಕಾರರ ಕರ್ತವ್ಯ. ಮಾನವನ ಬದುಕು ಮತ್ತು ಅವನ ಮಾನಸಿಕ ಪ್ರಕ್ರಿಯೆ ಒಂದು ಸಂಕೀರ್ಣ ಘಟಕ. ಇದರ ಅಧ್ಯಯನ ಕೇವಲ ವೈಜ್ಞಾನಿಕ ಮಟ್ಟದಲ್ಲಿ ಮಾತ್ರ ಸಾಧ್ಯವಿಲ್ಲ. ಭಾವನಾತ್ಮಕವಾಗಿಯೂ ವಿಶ್ಲೇಷಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಭಾಷಾಂತರದ ಅಧ್ಯಯನದಲ್ಲಿ ಓದುಗ ಮತ್ತು ಸಮೀಕ್ಷಕರ ಆತ್ಮನಿಷ್ಠ ತತ್ವಗಳ ಗುಣಗಳನ್ನು ಉಳಿಸಿಕೊಂಡು ಹೊಸದಾದ ಮಹತ್ವ ಸಿದ್ಧಾಂತವನ್ನು ಮಂಡಿಸಲು ಸಾಧ್ಯ.

■

---

1. ಬಾಲಚಂದ್ರ ನೇಮಾಡೆ : ಸಾಹಿತ್ಯಾ ಭಾಷಾ (ಮರಾಠಿ), ಸಾಕೇತ ಪ್ರಕಾಶನ, ಔರಂಗಾಬಾದ್ (1987)-ಕನ್ನಡ ಅನುವಾದ : ಶ್ರೀ ವಿಠಲರಾವ್ ಗಾಯಕ್‌ವಾಡ್ (ಭಾಷಾಂತರ ಮೀಮಾಂಸೆಯ ಸ್ವರೂಪ) ಸಂಕ್ರಮಣ, 294, ಸಂಪುಟ 32, ಸಂಚಿಕೆ 2, ಫೆಬ್ರವರಿ 1997.

# ಭಾಷಾಂತರದ ವಿಶಿಷ್ಟ ಸಮಸ್ಯೆಗಳು

ಭಾಷಾಂತರಿಸುವಾಗ ಅನೇಕ ಸಂದಿಗ್ಧತೆಗಳು ಮುಂದೆ ಬರುತ್ತವೆ. ಒಂದು ಶಬ್ದಕ್ಕೆ ಒಂದೇ ಅರ್ಥವಿದ್ದರೆ ಭಾಷಾಂತರ ಸುಲಭಕಾರ್ಯವಾಗುತ್ತಿತ್ತು. ಆದರೆ ಒಂದು ಭಾಷೆ ಬೆಳೆದಂತೆಲ್ಲಾ ಅದರ ಪದಗಳಿಗೆ ನಾನಾ ಅರ್ಥಗಳು ಸೃಷ್ಟಿಯಾಗುತ್ತಾ ಹೋಗುತ್ತವೆ. ಒಂದೇ ಶಬ್ದಕ್ಕೆ ನಾನಾ ಪರ್ಯಾಯಾರ್ಥಗಳು ಇರುತ್ತವೆ. ಹೀಗೆಯೇ ಪದಗುಚ್ಛಗಳು, ನುಡಿಗಟ್ಟುಗಳೂ ಅನೇಕಾರ್ಥವನ್ನು ಹೊಂದಿರುತ್ತವೆ. ಇದರಿಂದಾಗಿ ಭಾಷಾಂತರ ತೊಡಕಾಗುತ್ತದೆ. ಎರಡೂ ಭಾಷೆಗಳ ಮೇಲೆ ಪ್ರಭುತ್ವ ಸಾಧಿಸಿದ ಸಮರ್ಥ ಅನುವಾದಕ ಮಾತ್ರ ಈ ತೊಡಕನ್ನು ನಿವಾರಿಸಲು ಸಮರ್ಥನಾಗುತ್ತಾನೆ. ಕೆಲವು ಗಾದೆ ನುಡಿಗಟ್ಟುಗಳು ಕಾವ್ಯ ಪುರಾಣಗಳಿಂದ ಬಂದಿರುತ್ತವೆ. ಇವು ನಿತ್ಯದ ಭಾಷೆಯಲ್ಲಿ ಬೆರೆತುಹೋಗಿರುತ್ತವೆ. ಇವುಗಳನ್ನು ಶಬ್ದಶಃ ತರ್ಜುಮೆ ಮಾಡಿದರೆ ಈ ನುಡಿಗಟ್ಟುಗಳ ಕಥಾಪ್ರಸಂಗ, ಹಿನ್ನೆಲೆಯನ್ನು ಅರಿಯದ ಜನಾಂಗದ ಮೇಲೆ ಯಾವ ಪ್ರಭಾವವನ್ನು ಬೀರಲಾರದು. ಅವುಗಳ ಸಾರಾಂಶವನ್ನು ಕೊಟ್ಟರೆ ಅವುಗಳ ಸ್ವಾರಸ್ಯ, ಸೌಂದರ್ಯ ಉಳಿಯುವುದಿಲ್ಲ. ಇಂಥ ಕಡೆಗಳಲ್ಲಿ ಆ ಭಾಗದಲ್ಲಿರುವ ಸಮಾನ ಅರ್ಥಕೊಡುವ ನುಡಿಗಟ್ಟುಗಳನ್ನಾಗಲೀ, ಗಾದೆ ಮಾತುಗಳನ್ನಾಗಲೀ ಬಳಸುವುದು ಸೂಕ್ತ. ಆದರೂ, ಇದು ಪೂರ್ಣವಾದ ಅನುವಾದವಾಗಲಾರದು. ಈ ಸಂದಿಗ್ಧತೆಗಳನ್ನು ಪೂರ್ಣವಾಗಿ ನಿವಾರಿಸಲು ಸಾಧ್ಯವಾಗದಿದ್ದಲ್ಲಿ, ಅಂಶತಃ ಭಾಷಾಂತರಿಸಿಕೊಳ್ಳಬೇಕಾಗುತ್ತದೆ. ಉದಾ:Benjamin's mess ಗೆ 'ಭೀಮಪಾಲು' ಎಂತಲೂ Damon and Pythias ಗೆ ಕರ್ಣ ದುರ್ಯೋಧನರೆಂದು ಅಂಶತಃ ಭಾಷಾಂತರಿಸಬಹುದು.

**1. ಕಾನೂನು ಗ್ರಂಥಗಳ ಭಾಷಾಂತರದ ತೊಡಕುಗಳು**

ಕಾನೂನು ನಮ್ಮ ಭಾವನೆ, ಧೋರಣೆ ಮತ್ತು ಮೌಲ್ಯಗಳಿಗೆ ಒಂದು ಸ್ಪಷ್ಟ ರೂಪ ನೀಡುವ ವಿಶೇಷ ಶಕ್ತಿ. ನಮ್ಮ ಹೆಚ್ಚಿನ ಕಾನೂನು, ಕಾಯ್ದೆಗಳನ್ನು ನಾವು ಬ್ರಿಟಿಷರಿಂದ ಬಳುವಳಿಯಾಗಿ ಪಡೆದಿದ್ದೇವೆ. ಹೊಸ ಶಾಸನಗಳ ರಚನೆಯಲ್ಲೂ ಅವರದೇ ಕ್ರಮವನ್ನು ಅನುಸರಿಸುವ ಪರಿಪಾಠ ಮುಂದುವರಿಸಿದ್ದೇವೆ. ಹೀಗಾಗಿ ಇಂಗ್ಲಿಷಿನಲ್ಲಿರುವ ನಮ್ಮ ಕಾನೂನು ಭಾಷೆಯನ್ನು ಕನ್ನಡದಲ್ಲಿ ತರುವುದು ಅತಿಮುಖ್ಯ ಕಾರ್ಯವಾಗಿದೆ. ಆದರೆ ಇದು ಸಾಹಿತ್ಯ ಭಾಷಾಂತರದಷ್ಟು ಸುಲಭಕಾರ್ಯವಲ್ಲ. ಕಾನೂನು ತಜ್ಞರು ಭಾಷಾತಜ್ಞರಾಗಿದ್ದಲ್ಲಿ ಮಾತ್ರ ಈ ಕಾರ್ಯಸಾಧನೆ ಸಾಧ್ಯ. ಇಂಗ್ಲಿಷ್ ಭಾಷೆಯಲ್ಲಿ ಬಹಳ ಸಹಜವಾಗಿರುವ ಕಾನೂನು ವಿಚಾರಗಳು ಕನ್ನಡದಲ್ಲಿ ಅಪರಿಚಿತವಾಗಿದ್ದು ಭಾಷಾಂತರದ ಸಮಯದಲ್ಲಿ ನಮ್ಮ ಸಂಪನ್ಮೂಲ ಹೆಚ್ಚಿಸಿಕೊಂಡು ಸಮನಾರ್ಥಕೊಡುವ ಪದಗಳನ್ನು ಉಪಯೋಗಿಸಬೇಕಾಗುತ್ತದೆ. ಹಾಗೆ ಮಾಡುವಾಗ ಮೂಲಕ್ಕಿಂತ ಕಿಂಚಿತ್ತೂ ಭಿನ್ನವಾಗದಂತೆ ಸೂಕ್ಷ್ಮವಾಗಿ ನೋಡಿಕೊಳ್ಳಬೇಕಾಗುತ್ತದೆ. ಸ್ವಲ್ಪ ವ್ಯತ್ಯಾಸವಾದರೂ ಕಾನೂನನ್ನು ತಿರುಚಲು ಅವಕಾಶವಾಗುತ್ತದೆ.

ಸರ್ಕಾರಿ ಆದೇಶಗಳು, ಸೂಚನೆಗಳು, ಪ್ರಕಟಣೆಗಳು, ನಿಯಮಗಳು, ಅಧ್ಯಾದೇಶ, ಶಾಸನಗಳು ಸರ್ಕಾರದ ಕಟ್ಟುನಿಟ್ಟಾದ ಇಚ್ಛೆಗಳನ್ನು ಜನರಿಗೆ ತಿಳಿಸಿ ಅದರಂತೆ ಪಾಲನೆ ಮಾಡಬೇಕೆಂದು ತಿಳಿಸುವ ಸಾಧನಗಳು. ಆದ್ದರಿಂದ ಇವುಗಳು ಸ್ಪಷ್ಟವಾದ, ತರ್ಕಬದ್ಧವಾದ, ಗಂಭೀರ ಭಾಷೆಯಲ್ಲಿರಬೇಕಾಗುತ್ತದೆ. ಕೆಲವೊಮ್ಮೆ ಒಂದೊಂದು ಪ್ರಕರಣಗಳು (ಸೆಕ್ಷನ್) ಪುಟಗಟ್ಟಲೆ ಇದ್ದು ಸುತ್ತಿ ಬಳಸಿ ಅನೇಕ ವಿಚಾರಗಳನ್ನು ಮುಟ್ಟಿಬರುತ್ತವೆ. ಇವುಗಳನ್ನು ಭಾಷಾಂತರಿಸುವುದು ಅಷ್ಟು ಸುಲಭವಲ್ಲ. ಆಂಗ್ಲಭಾಷೆಯಲ್ಲಿ ಈ ದ್ರಾವಿಡ ಪ್ರಾಣಾಯಾಮ ಕ್ರಮ ಸಹಜವಾಗಿ ಬಂದುಬಿಟ್ಟಿದೆ. ಕನ್ನಡಲ್ಲೂ ಇದೇ ವಿಧಾನ ಅನುಸರಿಸಲು ನಮ್ಮ ಬತ್ತಳಿಕೆಯಲ್ಲಿನ ಎಲ್ಲಾ ಬಾಣಗಳನ್ನು ನಾವು ಉಪಯೋಗಿಸಬೇಕಾಗುತ್ತದೆ. ಜಫರ್‌ಸನ್ ಸ್ವಾತಂತ್ರ್ಯ ಘೋಷಣೆಯ ಒಂದು ಆದೇಶವನ್ನು ಹೊರಡಿಸುವಾಗ 18 ದಿನಗಳ ಕಾಲ ಪದೇ ಪದೇ ತಿದ್ದಿ ಸಿದ್ಧಪಡಿಸಿದನೆಂಬ ಒಂದು ಪ್ರತೀತಿ.ಇದೆ. ಹಾಗೆಯೇ ವಾಲ್ಟೈರನು ಒಂದೇ ಒಂದು ವಾಕ್ಯಕ್ಕಾಗಿ ರಾತ್ರಿ ಎಲ್ಲಾ ತಲೆಕೆಡಿಸಿಕೊಂಡು ಕುಳಿತಿದ್ದನೆಂಬ ಒಂದು ಮಾತಿದೆ. ಇದರಿಂದ ಕಾನೂನು ರಚನೆ ಅಥವಾ ಅದರ ಭಾಷಾಂತರ ಒಂದು ಸುಲಭ ಕ್ರಿಯೆಯಲ್ಲ ಎಂದು ಸ್ಪಷ್ಟವಾಗುತ್ತದೆ.

ಸ್ವಾತಂತ್ರ್ಯ ಬಂದು 50 ವರ್ಷಗಳಾದರೂ ನಾವು ಇಂಗ್ಲಿಷ್ ಪ್ರರೂಪಣಾ ಪದ್ಧತಿ (ಡ್ರಾಫ್ಟಿಂಗ್)ಯನ್ನೇ ಅನುಸರಿಸಿಕೊಂಡು ಬಂದಿದ್ದೇವೆ. ಹಾಗಾಗಿ ನಮ್ಮ ಕಾನೂನು ರಚನೆಕಾರರಿಗೆ ಇಂಗ್ಲಿಷ್ ಜ್ಞಾನ ಅತ್ಯಾವಶ್ಯಕ. ಇಲ್ಲಿಯವರೆಗಿನ ನಮ್ಮ ಎಲ್ಲಾ ಕಾನೂನುಗಳೂ ಇಂಗ್ಲಿಷಿನ ರೂಪದ ಭಾಷಾಂತರವೇ ಆಗಿದೆ. ಕನ್ನಡದಲ್ಲಿ ಭಾಷೆಯ ಜಾಯಮಾನಕ್ಕೆ ಹೊಂದಿಕೊಳ್ಳುವಂತೆ ಜನಸಾಮಾನ್ಯರಿಗೆ ಎಟಕುವಂತೆ ಕಾನೂನು ರಚನೆ ಪ್ರಾರಂಭಿಸಬೇಕಾಗಿದೆ. ಈ ನಿಟ್ಟಿನಲ್ಲಿಸಾಕಷ್ಟು ಪ್ರಯತ್ನಗಳು ನಡೆದಿವೆ. ಉತ್ತರ ಭಾರತದಲ್ಲಿ ಹಿಂದಿಯನ್ನು ಆಡಳಿತ ಭಾಷೆಯಾಗಿ ಉಪಯೋಗಿಸುವ ಪದ್ಧತಿ ಬಹಳ ಹಿಂದೆಯೇ ಜಾರಿಗೆ ಬಂದಿರುವುದರಿಂದ ಅಲ್ಲಿ ಕಾನೂನು ಭಾಷೆಯನ್ನು ಸುಧಾರಿಸುವ ಪ್ರಕ್ರಿಯೆ ಶುರುವಾಗಿದೆ. ಕನ್ನಡನಾಡನಲ್ಲಿ ಇನ್ನೂ ಅಧಿಕಾರಶಾಹಿ ಇಂಗ್ಲಿಷ್‌ಗೆ ಜೋತುಬಿದ್ದಿರುವುದರಿಂದ ಕಾನೂನು ರಚನೆ ಇಂಗ್ಲಿಷ್‌ನಲ್ಲಿ ನಡೆಯುತ್ತಿದೆ. ಅನಂತರ ಅದನ್ನು ಕನ್ನಡಕ್ಕೆ ಭಾಷಾಂತರಿಸುವ ಪ್ರಯತ್ನ ಒತ್ತಾಯಪೂರ್ವಕವಾಗಿ ಮಾಡಲಾಗುತ್ತಿದೆ.ಈ ಕಾರ್ಯಕೂಡ ಪೂರ್ಣ ಮನಸ್ಸಿನಿಂದ ಆಗುತ್ತಿಲ್ಲ. ಕೇವಲ ಕನ್ನಡ ಚಳುವಳಿಕಾರರಿಗೆ ಹೆದರಿ ಅನಿವಾರ್ಯವಾಗಿ ಮಾಡಲಾಗುತ್ತಿದೆ.ಇದರಿಂದಾಗಿ ಕನ್ನಡದಲ್ಲಿ ಕಾನೂನು ರಚನೆ ಸಹಜವಾಗಿ ಮೂಡಿ ಬರುತ್ತಿಲ್ಲ. ಒತ್ತಾಯದಲ್ಲಿ ಮಾಡಿದ ಯಾವುದೇ ಕ್ರಿಯೆ ಒಂದು ಉತ್ತಮ ಕಾರ್ಯವಾಗಲು ಸಾಧ್ಯವಿಲ್ಲ.

ಕಾನೂನು ಭಾಷೆಯನ್ನು ಭಾಷಾಂತರಿಸುವಾಗ ಮೂಲ ಅರ್ಥ ಕೆಡಬಾರದು. ಹಾಗಾದಲ್ಲಿ ಕಾನೂನನ್ನೇ ತಿರುಚಿದಂತಾಗುತ್ತದೆ. ಜೊತೆಗೆ ಭಾಷೆಯ ಜಾಯಮಾನ ಹಾಳಾಗಬಾರದು. ಭಾಷಾಂತರಕಾರ ಉಭಯಭಾಷಾ ವಿಶಾರದನಾಗಿದ್ದು ಎರಡೂ ಭಾಷೆಗಳ ಸಾಂಸ್ಕೃತಿಕ, ಸಾಮಾಜಿಕ ವಿಚಾರಗಳ ಪರಿಚಯ ಚೆನ್ನಾಗಿ ಇರಬೇಕು. ಭಾಷಾಂತರ ಕುಂಟಬಾರದು. ಈ ಹಿನ್ನೆಲೆಯಲ್ಲಿ ವಿದ್ವಾಂಸರಾದವರನ್ನೇ ರಾಜಭಾಷಾ ಆಯೋಗಗಳಿಗೆ ನೇಮಿಸಿ ಪ್ರಾದೇಶಿಕ ಭಾಷೆಗಳಲ್ಲಿ ಕಾನೂನು ರಚನೆಗೆ ಪ್ರಯತ್ನಿಸಲಾಗುತ್ತಿದೆ.

ಖೇರ್ ಕಮಿಷನ್ (ರಾಷ್ಟ್ರ ಭಾಷಾ ಆಯೋಗ)ನವರು ಕಾನೂನು ಪಾರಿಭಾಷಿಕವನ್ನು ರಚಿಸುವಾಗ ನಮ್ಮ ಪ್ರಾಚೀನ

ಧರ್ಮಶಾಸ್ತ್ರಗಳಿಂದ, ಸಾಹಿತ್ಯದಿಂದ, ಸಂಸ್ಕೃತದಿಂದ ಅಗತ್ಯವಿರುವ ಎಲ್ಲಾ ಶಬ್ದಗಳನ್ನು ತೆಗೆದುಕೊಳ್ಳಲು ಹೇಳಿದ್ದಾರೆ. ಹಾಗಾಗಿ ನಮ್ಮ ಭಾರತದ ಸಂವಿಧಾನದ 8ನೇ ಅನುಸೂಚಿಯಲ್ಲಿ ಇರುವ ಎಲ್ಲಾ ಭಾಷೆಗಳನ್ನು ಅಭಿವೃದ್ಧಿಗೊಳಿಸಲು ಇತರ ಭಾಷೆಗಳಿಂದಲೂ ಶಬ್ದಗಳನ್ನು ಬಳಸಿಕೊಳ್ಳಲು ಸೂಚಿಸಲಾಗಿದೆ. ಕನ್ನಡದಲ್ಲಿ ನಾವು ಸ್ವಲ್ಪ ಪ್ರಯತ್ನಪಟ್ಟಲ್ಲಿ ಉತ್ತಮವಾದ ಕಾನೂನು ಪಾರಿಭಾಷಿಕಗಳು ದೊರೆಯುತ್ತವೆ. ಆದರೆ ಕೆಲವೊಮ್ಮೆ ಇಂಗ್ಲಿಷ್ ಪದಗಳೇ ನಮ್ಮಲ್ಲಿ ಸಾಮಾಜಿಕವಾಗಿ ಹೆಚ್ಚು ಬಳಕೆಯಲ್ಲಿ ಬಂದಿರುವುದರಿಂದ ಮೂಲ ಕನ್ನಡ ಪದವನ್ನು ಹುಡುಕಿ ಹಾಕುವುದರಿಂದ ಹೆಚ್ಚು ಗೊಂದಲಕ್ಕೆ ಕಾರಣವಾಗುತ್ತದೆ. ಉದಾಹರಣೆಗೆ ಅಪೀಲು, ವಾರಂಟು, ನೋಟೀಸು, ಅರೆಸ್ಟ್, ಮಜಿಸ್ಟ್ರೇಟ್ ಮುಂತಾದ ಶಬ್ದಗಳು ಜನಸಾಮಾನ್ಯರಿಗೆ ಕೂಡ ಅರ್ಥವಾಗುತ್ತವೆ. ಇವುಗಳನ್ನು ಕನ್ನಡೀಕರಿಸಿದರೆ ಅಷ್ಟು ಸುಲಭವಾಗಿ ಅರ್ಥವಾಗಲಿಕ್ಕಿಲ್ಲ. ತಮಿಳುನಾಡಿನ ರಾಜಭಾಷಾ ಆಯೋಗದ ಅಧ್ಯಕ್ಷರಾದ ಶ್ರೀ ಎಸ್ ಮಹಾರಾಜನ್‌ರವರು ಕೇರಳಿಯರು. ಇಂಗ್ಲಿಷ್ ಪದಗಳನ್ನು ಕಾನೂನು ರಚನೆಯಲ್ಲಿ ಬಹಳ ಸಹಜವಾಗಿ ಬಳಸುತ್ತಾರೆಂದು ಹೇಳಿದ್ದಾರೆ. ಇವರಿಗೆ ಅಷ್ಟು ಮಡಿವಂತಿಕೆ ಇಲ್ಲ. ಹಾಗಾಗಿ ಅವಾರ್ಡ್ ಆ್ಯಕ್ಟ್, ಸರ್ಟಿಫಿಕೇಟ್, ಜಡ್ಜ್, ಪಾರ್ಲಿಮೆಂಟ್, ಪ್ರಾಸಿಕ್ಯೂಟರ್, ಸಮನ್ಸ್ ಮುಂತಾದ ಶಬ್ದಗಳನ್ನು ಮಳಯಾಳನಂಲ್ಲಿ ಹಾಗೇಯೇ ಉಳಿಸಿಕೊಳ್ಳಲಾಗಿದೆ.ತಮಿಳಿನಲ್ಲಿ ಸೆಷನ್ಸ್, ವಿಲ್, ಅಟರ್ನಿ, ನೋಟರಿ, ಕಾರ್ಪ್ಸ್, ಕಂಪನಿ ಮುಂತಾದ ಶಬ್ದಗಳನ್ನು ಉಳಿಸಿಕೊಳ್ಳಲಾಗಿದೆ. ಕನ್ನಡದಲ್ಲೂ ಪೊಲೀಸ್, ಸ್ಟಾಂಪು, ಡಿಕ್ರಿ, ಕ್ಲೇಮು, ಸಿವಿಲ್, ಅಪೀಲು, ವಾರಂಟು ಮುಂತಾದ ಶಬ್ದಗಳನ್ನು ಬಳಸಲಾಗುತ್ತದೆ. ತೆಲುಗಿನಲ್ಲಿ ರೆಕ್‌ಮೆಂಡೇಷನ್, ಎಕ್ಸಿಕ್ಯೂಟ್, ಆಡ್‌ಜುಡಿಕೇಶನ್, ವೇಜ್‌ಬೋರ್ಡ್, ಇಂಪ್ಲಿಮೆಂಟ್ ಮುಂತಾದ ಶಬ್ದಗಳು ಸೇರಿಕೊಂಡಿವೆ. ಇದು ಮರಾಠಿ, ಹಿಂದಿ ಮುಂತಾದ ಉತ್ತರ ಭಾರತದ ಭಾಷೆಗಳಲ್ಲೂ ಕೂಡ ನಡೆದುಕೊಂಡು ಬಂದಿವೆ. ಇದಕ್ಕೆ ಮುಖ್ಯಕಾರಣ ಈ ಶಬ್ದಗಳು ಜನಸಾಮಾನ್ಯರಲ್ಲಿ ಬೆರೆತುಹೋಗಿರುವುದು. ಉದಾಹರಣೆಗೆ 'ಪೊಲೀಸ್' ಶಬ್ದ ಒಂದು ಮಗುವಿಗೂ ಕೂಡ ಗೊತ್ತು.ಇದನ್ನು 'ಆರಕ್ಷಕ'ನೆಂದು ಕನ್ನಡದಲ್ಲಿ ಭಾಷಾಂತರಿಸಿದರೆ ಅದರ ಅರ್ಥ ಬಿಡಿಸಿ ಹೇಳಿ ಪೊಲೀಸ್ ಅಂದಾಗಲೇ ಜನಕ್ಕೆ ಅರ್ಥವಾಗುತ್ತದೆ.

ಇಂಗ್ಲಿಷರು ಈ ನೆಲದ ಮೇಲೆ ಕಾಲಿಡುವ ಮನ್ನ ಮುಸ್ಲಿಂರ ಆಡಳಿತವಿದ್ದ ಕಾಲದಲ್ಲಿ ಉರ್ದು, ಅರಬ್ಬಿ, ಪರ್ಷಿಯನ್ ಭಾಷೆಗಳ ಪದಬಳಕೆ ಸಹಜವಾಗಿತ್ತು. ದಾವೆ, ಮೊಕದ್ದಮೆ, ಸಬೂತು, ಖಿಲಾಸೆ, ವಜಾ, ಸಜಾ, ದಸ್ತಗಿರಿ, ಜಾಮೀನು, ಜಫ್ತಿ, ಅಸಲು, ನಕಲು, ಫಿರ್ಯಾದು, ಜವಾಬು, ಸುಪರ್ದು ಮುಂತಾವ ಶಬ್ದಗಳು ಸಹಜವಾಗಿ ನುಸುಳಿಕೊಂಡಿವೆ. ಉತ್ತರ ಕರ್ನಾಟಕದಲ್ಲಿ ಬಾಂಬೆ ಕರ್ನಾಟಕದಲ್ಲಿ ಮರಾಠಿ ಶಬ್ದಗಳು ಕನ್ನಡದಲ್ಲಿ ಹೆಚ್ಚಾಗಿ ಬಳಕೆಯಾಗುತ್ತಿದ್ದರೆ, ಹೈದ್ರಾಬಾದ್ ಕರ್ನಾಟಕದಲ್ಲಿ ಉರ್ದು ಶಬ್ದಗಳು ಹೆಚ್ಚಾಗಿ ಬಳಕೆಯಾಗುತ್ತದೆ. ಹಾಗಾಗಿ ದಿನಬಳಕೆಯಲ್ಲಿ ಬಂದಿರುವ ಈ ಶಬ್ದಗಳನ್ನು ಹಾಗೆಯೇ ಉಳಿಸಿಕೊಳ್ಳುವುದು ಉಚಿತವೆನಿಸುತ್ತದೆ.

ಕಾನೂನು ರಚನೆಯ ಉದ್ದೇಶ ಸಮಾಜದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವುದಾಗಿತ್ತು. ಈಗ ಸಾಮಾಜಿಕ ಹಾಗೂ ಆರ್ಥಿಕ ಸುಧಾರಣೆ ದೃಷ್ಟಿಯಿಂದ ಸರ್ಕಾರ ಅನೇಕ ಕಾನೂನುಗಳನ್ನು ಜಾರಿಗೆ ತಂದಿದೆ. ನಾಗರೀಕ ಹಕ್ಕುಗಳ ರಕ್ಷಣಾ ಅಧಿನಿಯಮ, ಋಣಪರಿಹಾರ ಅಧಿನಿಯಮ, ಜೀತಗಾರಿಕೆ ನಿಷೇಧ ಅಧಿನಿಯಮ, ಮಹಿಳಾ ಸ್ತ್ರೀನ ಅಧಿಕಾರ

ಅಧಿನಿಯಮ ಮುಂತಾದ ಕಾನೂನುಗಳನ್ನು ಸಮಾಜವನ್ನು ಸುಧಾರಿಸಲು ಸಹಕಾರಿಯಾಗಿವೆ. ಹೀಗೆ ಕಾನೂನಿನಲ್ಲಿ ಕ್ರಾಂತಿ ನಡೆಯುತ್ತಿರಬೇಕಾದಲ್ಲಿ ಕಾನೂನಿನ ಭಾಷೆಯಲ್ಲೂ ಕ್ರಾಂತಿಯಾಗಬೇಕು. ಭಾಷೆ ಜನಸಾಮಾನ್ಯರಿಗೆ ಅರ್ಥವಾಗುವ ಸಹಜ ಭಾಷೆಯಲ್ಲಿರಬೇಕು. ಕನ್ನಡಿಗರಿಗೇ ಕನ್ನಡವನ್ನು ಅರ್ಥೈಸುವಂತೆ ಆಗಬಾರದು. ಇದರಿಂದ ಕಾನೂನನ್ನು ಕನ್ನಡಕ್ಕೆ ತಂದೂ ಉಪಯೋಗವಾಗಲಾರದು. ದೇಶದ ನ್ಯಾಯಾಡಳಿತದಲ್ಲಿ ಜನಸಾಮಾನ್ಯರು ಭಾಗವಹಿಸಬೇಕು. ಬಡವನಿಗೂ ನ್ಯಾಯಸಿಗುವಂತಾಗಬೇಕು. ಹಾಗೇ ಆಗಬೇಕಾದರೆ ಅವನಿಗೆ ಅರ್ಥವಾಗುವ ಭಾಷೆಯಲ್ಲಿ ಕಾನೂನನ್ನು ಇಡಬೇಕು ಎಂದಿದ್ದಾರೆ- ಖ್ಯಾತ ನ್ಯಾಯವಾದಿ ಜಸ್ಟೀಸ್ ಎಸ್. ಡಿ. ವೆಂಕಟೇಶ್‌ರವರು.

ಖೇರ್ ಆಯೋಗದವರು ಇಡೀ ಭಾರತದಲ್ಲಿ ಕಾನೂನು ಏಕರೂಪದಲ್ಲಿರಬೇಕೆಂದು ಪ್ರತಿಪಾದಿಸಿದ್ದಾರೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ, ಗ್ರಾಮಪಂಚಾಯ್ತಿಯಿಂದ ಸರ್ವೋಚ್ಚ ನ್ಯಾಯಾಲಯದವರೆಗೆ ಕಾನೂನು ಏಕರೂಪದಲ್ಲಿರಬೇಕು. ಪ್ರತಿಯೊಂದು ರಾಜ್ಯದವರೂ ತಮ್ಮ ಭಾಷೆಯಲ್ಲಿ ಕಾನೂನು ರೂಪಿಸುತ್ತಾ ಹೋದರೆ, ವಿವಿಧ ನ್ಯಾಯಾಲಯಗಳ ತೀರ್ಪನ್ನು ನೋಡಬೇಕಾದಲ್ಲಿ ಪರಿಣಿತರಾದ ಭಾಷಾಂತರಕಾರರನ್ನು ಹುಡುಕಿಕೊಂಡು ಹೋಗಬೇಕಾಗುತ್ತದೆ. ಭಾಷಾಂತರಕಾರರು ಕೂಡಲೇ ಸಿಗದಿದ್ದಲ್ಲಿ ನ್ಯಾಯಾಲಯದ ತೀರ್ಪು ಲಭ್ಯವಾಗದೇ ನ್ಯಾಯ ದೊರಕುವುದರಲ್ಲೇ ಅನ್ಯಾಯವಾಗಬಹುದು. ಇದರಿಂದಾಗಿ ನ್ಯಾಯಾಂಗದಲ್ಲಿ ಒಂದು ರೀತಿಯ ವಿಚಾರ ಹಾಗೂ ನ್ಯಾಯ ಕ್ಷಾಮವಾಗಬಹುದೆಂದು ಕಾನೂನು ಆಯೋಗದ ಅಧ್ಯಕ್ಷರಾಗಿದ್ದ ಶ್ರೀ ಎಂ. ಸಿ. ಸೆಟಲ್‌ವಾಡರ ಅಭಿಪ್ರಾಯ. ಈ ಒಂದು ಕಾರಣಕ್ಕಾಗಿ ನಾವು ಮತ್ತೆ ಇಂಗ್ಲಿಷ್‌ಗೆ ಜೋತುಬಿದ್ದಲ್ಲಿ ಜನಸಾಮಾನ್ಯನಿಂದ ನ್ಯಾಯಾಂಗವನ್ನು ನಾವು ದೂರ ತೆಗೆದುಕೊಂಡು ಹೋದಂತೆ ಆಗುವುದಲ್ಲದೆ ಸ್ವಾತಂತ್ರ್ಯದ ಹೋರಾಟದ ಪೂರ್ಣ ಪರಿಣಾಮವಾದಂತಾಗುವುದಿಲ್ಲ. ಅಲ್ಲದೆ ರಾಜ್ಯದ ಉಚ್ಚನ್ಯಾಯಾಲಯಕ್ಕಾಗಲೀ, ಸರ್ವೋಚ್ಚ ನ್ಯಾಯಾಲಯಕ್ಕಾಗಲೀ ಬರುವ ಅಪೀಲುಗಳನ್ನು ಗಮನಿಸಿದರೆ ಕೆಳಮಟ್ಟದ ನ್ಯಾಯಾಲಯಗಳಲ್ಲಿ ಇರುವ ಜನಸಾಮಾನ್ಯರ ಅಪೀಲುಗಳಿಗಿಂತ ಕಡಿಮೆ ಪ್ರಮಾಣದಲ್ಲಿರುತ್ತವೆ. ಹಾಗೂ ಬಹುಸಂಖ್ಯೆ ಅಪೀಲುಗಳಿರುವ ಕೆಳಮಟ್ಟದ ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆಗಳನ್ನು ಉಪಯೋಗಿಸುವುದು ಸೂಕ್ತವೆನಿಸುತ್ತದೆ. ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಲಯಗಳಲ್ಲಿ ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳೆರಡನ್ನೂ ಬಳಸಿ, ಉಳಿದ ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆ ಉಪಯೋಗಿಸುವುದು ಒಳ್ಳೆಯದೆಂಬುದು ಕಾನೂನು ತಜ್ಞರ ಅಭಿಪ್ರಾಯ. ನಮ್ಮ ದೇಶದ ಭಾಷಾನೀತಿಯಂತೆ ಕ್ರಮೇಣವಾಗಿ 'ಹಿಂದಿ' ಸಂಪರ್ಕ ಭಾಷೆಯಾಗಿ 'ಇಂಗ್ಲಿಷ್'ನ ಸ್ಥಾನ ತುಂಬಬೇಕು. ರಾಜ್ಯಗಳಲ್ಲಿ ಪ್ರಾದೇಶಿಕ ಭಾಷೆ ಮಹತ್ವ ಪಡೆಯಬೇಕು. ಇದನ್ನು ಗಮನದಲ್ಲಿಟ್ಟುಕೊಂಡು ಕಾನೂನು ಭಾಷೆ ರೂಪಿತವಾಗಬೇಕಾಗುತ್ತದೆ.

1961ರಲ್ಲಿ ರಾಜ ಭಾಷಾ ಆಯೋಗ ಅಸ್ತಿತ್ವಕ್ಕೆ ಬಂದಾಗ ದೇಶದ ಎಲ್ಲಾ ರಾಜ್ಯಗಳ ಪ್ರತಿನಿಧಿಗಳು ಇದರಲ್ಲಿ ಸದಸ್ಯರಾಗಿದ್ದರು. ಇದರ ಉದ್ದೇಶ ದೇಶದ ನಾನಾ ರಾಜ್ಯಗಳಲ್ಲಿ ಸೃಷ್ಟಿಯಾದ ಕಾನೂನುಗಳ ಹಿಂದಿ ಪಾಠವನ್ನು ತಯಾರಿಸಿ ಕಾನೂನು ಪಾರಿಭಾಷಿಕ ಕೋಶವನ್ನು ತಯಾರಿಸುವುದು. ಅದರಂತೆ ಅವರು ಕಾರ್ಯನಿರ್ವಹಿಸಿದ್ದು ಈ ಪಾರಿಭಾಷಿಕವನ್ನು ಕನ್ನಡ ಕಾನೂನು ಭಾಷಾಂತರಗಳಲ್ಲಿ ಬಳಸಿಕೊಳ್ಳಲಾಯಿತು. ಸ್ಥಳೀಯ ಜನರಿಗೆ ಅರ್ಥವಾಗದ ಶಬ್ದ ಪ್ರಯೋಗವಾದಲ್ಲಿ

ನಮ್ಮ ಭಾಷೆಯ ವಿಶಿಷ್ಟ ಪದಗಳನ್ನು ಬಳಸಿಕೊಂಡಿದ್ದೇವೆಂದು ನಮ್ಮ ಕರ್ನಾಟಕ ರಾಜ ಭಾಷಾ ಆಯೋಗದ ಅಧ್ಯಕ್ಷರು ಕೇಂದ್ರದ ರಾಜಭಾಷಾ ಖಂಡಕ ಸಹಕಾರ್ಯದರ್ಶಿಗಳಾದ ಶ್ರೀ ಜಿ. ಕೆ. ಶರ್ಮರವರಿಗೆ ತಿಳಿಸಿ ಮನದಟ್ಟು ಮಾಡಿದ್ದಾರೆ. 'ರೈಟ್' ಎನ್ನುವುದಕ್ಕೆ 'ಹಕ್ಕು' 'ಪವರ್' ಎನ್ನುವುದಕ್ಕೆ 'ಶಕ್ತಿ' 'ಟೈಟಲ್' ಎನ್ನುವುದಕ್ಕೆ 'ಹಕ್ಕು' 'ಲಾ' ಎಂಬುವುದಕ್ಕೆ 'ವಿಧಿ' ಮುಂತಾದ ಅನೇಕ ಬದಲಾವಣೆ ಕನ್ನಡದಲ್ಲಿ ಮಾಡಿಕೊಳ್ಳಲಾಗಿದೆ.

ಕನ್ನಡದಲ್ಲಿ ಕಾನೂನು ಸಾಹಿತ್ಯವನ್ನು ಸೃಷ್ಟಿಸುವವರು ಪಾಶ್ಚಿಮಾತ್ಯ ಕಾನೂನುತಜ್ಞರು ವ್ಯಕ್ತಪಡಿಸಿದ ಅಭಿಪ್ರಾಯಗಳ ಜೊತೆಗೆ ಅಶೋಕನ ಕಾಲದ ರಾಜಮಹಾರಾಜರುಗಳು ಮಾಡಿದ ಕಾನೂನುಗಳು, ಮೊಗಲರ ಕಾಲದಲ್ಲಿ ರಾಜಶಾಸನಗಳು, ನಂತರ ಕದಂಬರು, ವಿಜಯನಗರದರಸರು, ಬಹುಮನಿ ಸುಲ್ತಾನರು, ಹೈದ್ರಾಬಾದಿನ ನಿಜಾಮರು, ಹೈದರಾಲಿ ಟಿಪ್ಪುಗಳು, ಮೈಸೂರಿನ ಯದುವಂಶದ ರಾಜರುಗಳು ಮಾಡಿದ ಕಾನೂನುಗಳನ್ನು ಗಮನಿಸಬೇಕಾಗುತ್ತದೆ. ಪಾಶ್ಚಿಮಾತ್ಯ ಕಾನೂನು ತಜ್ಞರಾದ ಮಿಗ್ನಿಯೋನಿಗಿ, ಚೌಲ್‌ಪಿನ್, ಮೇರಿಯೋಪಿ ಇವರುಗಳು ರಚಿಸಿದ ಕಾನೂನುಗಳನ್ನು ಅಭ್ಯಸಿಸಬೇಕಾಗುತ್ತದೆ. ಇವೆಲ್ಲವನ್ನು ಅಭ್ಯಸಿಸಿದ ನಂತರ ಕಾನೂನು ಭಾಷೆಯನ್ನು ಪ್ರಜಾತಂತ್ರ್ಯಾತ್ಮಕ ಸಮಾಜ ರಚನೆಯ ರೀತಿನೀತಿಗಳಿಗೆ ತಕ್ಕಂತೆ ರೂಪಿಸಿಕೊಳ್ಳಬೇಕು. ಕನ್ನಡದಲ್ಲಿ ಐತಿಹಾಸಿಕವಾಗಿ ಕಾನೂನು ಭಾಷೆ ಹೇಗೆ ರೂಪಿತವಾಗಿ ಬಂದಿದೆ ಎಂಬುದನ್ನು ಶ್ರೀ ಕಂಠೀರಾವ್‌ರವರು ತಮ್ಮ ''ನ್ಯಾಯನಿಬಂಧನೆಗಳು'' ಎಂಬ ಪುಸ್ತಕದಲ್ಲಿ ''ರಾಜಭಾಷೆ- ಸಾಧನೆ ಮತ್ತು ಸಮಸ್ಯೆ'' ಎನ್ನುವ ಲೇಖನದಲ್ಲಿ ವಿವರವಾಗಿ ಹೇಳಿದ್ದಾರೆ. ಕೇಂದ್ರ ಕಾನೂನು ಪಾರಿಭಾಷಿಕೆಯ ಜೊತೆಗೆ ದಕ್ಷಿಣ ಭಾರತದ ಬೇರೆ ಬೇರೆ ಭಾಷೆಗಳಲ್ಲಿ ದೊರೆಯುವ ಶಬ್ದಗಳನ್ನು ಬಳಸಿ, ಕೆಲವೊಮ್ಮೆ ಉಪಸರ್ಗಗಳನ್ನು ಬಳಸಿ ಹೊಸಶಬ್ದ ಸೃಷ್ಟಿ ಮಾಡಬೇಕಾಗುತ್ತದೆ ಎಂದು ಶ್ರೀ ಕಂಠೀರಾಯರು ಪ್ರತಿಪಾದಿಸಿದ್ದಾರೆ.

ಕನ್ನಡದಲ್ಲಿ ಕಾನೂನು ಪರಿಭಾಷೆಯನ್ನು ರೂಪಿಸುವಾಗ ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯನ್ನು ಬಳಸಬೇಕೆಂಬುದು ಎಲ್ಲರ ಅಭಿಪ್ರಾಯ. ಆದರೆ ಇದು ಅಷ್ಟು ಸುಲಭ ಕ್ರಿಯೆಯಲ್ಲ. ಕಾನೂನನ್ನಾಗಲೀ, ವಿಜ್ಞಾನವನ್ನಾಗಲೀ ಜನಸಾಮಾನ್ಯರ ಆಡುಭಾಷೆಯಲ್ಲಿಡುವುದು ಕಷ್ಟಕರವಾದ ಕೆಲಸ. ವೈಜ್ಞಾನಿಕ ಭಾಷೆ ಖಚಿತ ಹಾಗೂ ಕ್ಲುಪ್ತವಾಗಿರುತ್ತದೆ. ಇದಕ್ಕೆ ನಿರ್ದಿಷ್ಟ ಪಾರಿಭಾಷಿಕೆಗಳನ್ನು ರೂಪಿಸಬೇಕು. ಹಾಗೆಯೇ ಅಷ್ಟೊಂದು ಖಚಿತವಲ್ಲದ, ಬಹುವ್ಯಾಪಿಯಾದ ಕಾನೂನು ಭಾಷೆಗೆ ಪಾರಿಭಾಷಿಕೆಗಳನ್ನು ರೂಪಿಸುವುದು ಇನ್ನೂ ಕಷ್ಟ. ಕಾನೂನನ್ನು ಜನರ ಮಟ್ಟಕ್ಕೆ ಇಳಿಸಬೇಕೋ ಅಥವಾ ಜನರ ಮಟ್ಟವನ್ನು ಕಾನೂನನ್ನು ಅರ್ಥಮಾಡಿಕೊಳ್ಳುವ ಒಂದು ನಿರ್ದಿಷ್ಟ ಮಟ್ಟಕ್ಕೆಏರಿಸಲು ಅನುವಾಗಲು ಸಾಕ್ಷರತೆಯನ್ನು ಹೆಚ್ಚಿಸಬೇಕೋ ಎನ್ನುವ ಜಿಜ್ಞಾಸೆ ನಡೆದಿದೆ. ಕೇರಳದಲ್ಲಿ ಸಂಸ್ಕೃತದ ಬಳಕೆ ಹೆಚ್ಚಾಗಿದೆ. ತಮಿಳರು ತಮಿಳಿಗೆ ಹೆಚ್ಚು ಆದ್ಯತೆ ನೀಡಿದ್ದಾರೆ. ಕನ್ನಡ ಮತ್ತು ತೆಲುಗಿನಲ್ಲಿ ಒಂದು ರೀತಿಯ ಸಮಾನ ಭಾವನೆ ಇದ್ದು ಅವರು ಹೆಚ್ಚು ಮಡಿವಂತಿಕೆ ತೋರಿಸಿಲ್ಲ. ಈ ಎರಡೂ ರಾಜ್ಯಗಳು ವಿಜಯನಗರ ಸಾಮ್ರಾಜ್ಯದ ಅಡಿಯಲ್ಲಿದ್ದುದರಿಂದ ಭಾಷೆಗಳಲ್ಲಿ ಸಾಮ್ಯತೆ ಇದೆ. ಕ್ರಿ. ಶ. 7ನೇ ಶತಮಾನದಿಂದಲೇ ಎರಡೂ ಭಾಷೆಗಳಲ್ಲಿ ಶಬ್ದ ಸಾಮ್ಯತೆಯನ್ನು ನಾವು ಕಾಣುತ್ತೇವೆ. ಉಸ್ಮಾನಿಯಾ ವಿಶ್ವವಿದ್ಯಾನಿಲಯದವರು ನ್ಯಾಯಾಡಳಿತ, ಶಿಕ್ಷಣ ಆಡಳಿತದ ಬಗ್ಗೆ ಶಬ್ದಕೋಶವನ್ನು ಉರ್ದು ಭಾಷೆಯಲ್ಲಿ ಹೊರತಂದಿದ್ದಾರೆ. ಹೈದ್ರಾಬಾದ್ ಕರ್ನಾಟಕದಲ್ಲಿ ನೈಜಾಮರ ಆಡಳಿತವಿದ್ದುದರಿಂದ ಇಂದಿಗೂ ಅವರು ಕನ್ನಡದಲ್ಲಿ ಉರ್ದು

ಶಬ್ದಗಳನ್ನು ಬಳಸಿ ಮಾತನಾಡುವುದನ್ನು ನಾವು ಕಾಣಬಹುದು. ತಹಸೀಲ್ದಾರ್, ಅಮಲ್ದಾರ್, ಸುಬೇದಾರ್, ಅದಾಲತ್, ಮುನ್ಸೀಫ್ ಮುಂತಾದ ಶಬ್ದಗಳು ಕನ್ನಡದಲ್ಲಿ ಸೇರಿಹೋಗಿವೆ. ಹಾಗೆಯೇ ಲಾ, ಬೈ- ಲಾ, ಸೆಕ್ಷನ್, ಕ್ಲಾಜ್, ಅಮೆಂಡಮೆಂಟ್ ಮುಂತಾದ ಇಂಗ್ಲಿಷ್ ಕಾನೂನು ಶಬ್ದಗಳಿಗೆ ಸಂಸ್ಕೃತ ಮತ್ತು ಕನ್ನಡ ಮೂಲಗಳಿಂದ ಪ್ರಾದೇಶಿಕ ಶಬ್ದಗಳನ್ನು ಕಂಡುಕೊಳ್ಳಲಾಗಿದೆ. ಇಷ್ಟಾದರೂ ಇನ್ನೂ ಕಾನೂನು ಕ್ಷೇತ್ರದಲ್ಲಿ ಕನ್ನಡ ಬೆಳೆದುಬಂದಿಲ್ಲವೆಂದೇ ಹೇಳಬೇಕಾಗುತ್ತದೆ.

ದಕ್ಷಿಣದ ದ್ರಾವಿಡ ಭಾಷೆಗಳಿಗೆ ಹೋಲಿಸಿದರೆ ಹಿಂದಿ ತುಂಬಾ ಇತ್ತೀಚಿನದು. ಕನ್ನಡ ಮುಂತಾದ ದ್ರಾವಿಡ ಭಾಷೆಗಳಿಗೆ ಎರಡು ಸಾವಿರ ವರ್ಷಗಳ ಇತಿಹಾಸವಿದ್ದರೆ ಹಿಂದಿ, ಕೇವಲ 13-14ನೇ ಶತಮಾನದಿಂದ ರೂಪಿತಗೊಂಡ ಭಾಷೆ. ಹಿಂದಿ ಭಾಷೆ ಸಂಸ್ಕೃತ ಮತ್ತು ಉರ್ದು ಮಿಶ್ರಣದಿಂದ ಸೃಷ್ಟಿಗೊಂಡ ಭಾಷೆ. ಕನ್ನಡದಲ್ಲೂ ಸಂಸ್ಕೃತ ಶಬ್ದಗಳು ಯತೇಚ್ಛವಾಗಿ ಬಳಕೆಯಾಗಿವೆ. ಹಿಂದಿ ಮತ್ತುಇತರ ಪ್ರಾದೇಶಿಕ ಭಾಷೆಗಳಲ್ಲೂ ವಿನಿಮಯ, ವಿಸಂಗತ, ಅಸಂಗತ, ಅನೌಪಚಾರಿಕ, ಅಧಿಗ್ರಹಣ, ಆಧ್ಯಾದೇಶ, ಅಧಿಕರಣ, ಅಧಿಭಾರ,ಉಪನಿಯಮ, ಉಪವಿಧಿ ಮುಂತಾದ ಶಬ್ದಗಳನ್ನು ರೂಪಿಸಿಕೊಳ್ಳಲಾಗಿದೆ. ಈ ರೀತಿ ಮಾಡುವಾಗ ಮಡಿವಂತಿಕೆ ತೋರುವುದು ಸೂಕ್ತವಲ್ಲ. ಭಾಷೆ ಬೆಳೆಯಲು ಮುಕ್ತ ಮನಸ್ಸಿನಿಂದ ಎಲ್ಲ ಮೂಲಗಳಿಂದ ಸ್ವೀಕಾರ ಮಾಡಿದಲ್ಲಿ ಮಾತ್ರ ಸಾಧ್ಯ.

ಕನ್ನಡದಲ್ಲಿ ಆಡಳಿತ ಮತ್ತು ಕಾನೂನಿಗೆ ಸಂಬಂಧಿಸಿದಂತೆ ಅನೇಕ ಗ್ರಂಥಗಳು ಹೊರಬಂದಿವೆ. ಕಾನೂನು ಪಾರಿಭಾಷಿಕ, ಆಡಳಿತ ಪಾರಿಭಾಷಿಕ, ಇಲಾಖಾ ಪಾರಿಭಾಷಿಕ ಕೋಶಗಳು ರಚಿತವಾಗಿವೆ. ಈ ನಿಟ್ಟಿನಲ್ಲಿ ರಾಜ್ಯದ ವಿಶ್ವವಿದ್ಯಾನಿಲಯಗಳು ಹೆಚ್ಚಿನ ಶ್ರಮ ವಹಿಸಿವೆ. ಭಾರತೀಯ ನ್ಯಾಯ ಪದ್ಧತಿ, ನ್ಯಾಯ ನಿಬಂಧನೆಗಳು, ಇಸ್ಲಾಮಿನ್ಯಾಯ, ನ್ಯಾಯಾಲಯಗಳ ತೀರ್ಪು ರಚನಾ ವಿಧಾನ, ಕನ್ನಡ ತೀರ್ಪು, ಕನ್ನಡದಲ್ಲಿ ಕಾನೂನು ಸಾಹಿತ್ಯ ಮುಂತಾದ ಗ್ರಂಥಗಳು ಕನ್ನಡದಲ್ಲಿ ಹೊರಬಂದಿರುವುದು ಕಾನೂನು ಕನ್ನಡ ಭಾಷಾಂತರ ಸಾಹಿತ್ಯ ಬೆಳೆಯುತ್ತಿರುವುದನ್ನು ಸೂಚಿಸುತ್ತದೆ. ಆದರೆ ಈ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಕೆಲಸವಾಗಬೇಕಾಗಿದೆ.

ಕಾನೂನು ಭಾಷೆಯನ್ನು ಭಾಷಾಂತರಿಸುವಾಗ ತುಂಬಾ ಜಾಗ್ರತೆ ವಹಿಸಬೇಕು. ಮೂಲಪಾಠ ಹಾಗೂ ಅರ್ಥಕ್ಕೆ ವ್ಯತ್ಯಾಸವಾಗದಂತೆ ಚಿರಪರಿಚಿತ ಶಬ್ದಗಳನ್ನು ಬಳಸಬೇಕು. ಬಳಸುವ ಶಬ್ದ ಎಷ್ಟು ಶಕ್ತಿಯುತವಾದುದು ಎಂದು ನೋಡಬೇಕು. ಅಗತ್ಯವೆಂದೆಣಿಸಿದರೆ ಪರಭಾಷಾ ಶಬ್ದಗಳನ್ನು ನಿಸ್ಸಂಕೋಚವಾಗಿ ನಮ್ಮದಾಗಿಸಿಕೊಳ್ಳಬೇಕು. ಕಾನೂನಿನಲ್ಲಿ ವಿರಾಮ ಚಿಹ್ನೆಗಳನ್ನು ನಿರ್ಲಕ್ಷಿಸುವಂತಿಲ್ಲ. ಸ್ವಲ್ಪ ವ್ಯತ್ಯಾಸವಾದರೂ ಕಾನೂನನ್ನು ತಿರುಚಬಹುದಾಗಿದೆ. ಮಹಾರಾಷ್ಟ್ರದ ಖ್ಯಾತ ನ್ಯಾಯವಾದಿ ಶ್ರೀ ಹೆಚ್. ಎಸ್. ಉರ್ವೇಕರ್ ರೂಪಿಸಿದ ಸೂತ್ರಗಳನ್ನು ಅನುಸರಿಸಿದಲ್ಲಿ ಕನ್ನಡ ಭಾಷೆಯಲ್ಲಿ ಕಾನೂನು ಸಾಹಿತ್ಯದ ಸೃಷ್ಟಿ ಸುಲಭವಾಗಬಹುದು.

ಕಾನೂನು ಭಾಷೆ ಒಂದು ಶಾಸ್ತ್ರೀಯವಾದ ಭಾಷೆ. ಹಾಗಾಗಿ ಇಂಗ್ಲಿಷ್‌ನಲ್ಲೂಕೂಡ ಕಾನೂನು ಭಾಷೆ ಅರ್ಥಮಾಡಿಕೊಳ್ಳಲು ಬೇರೆ ಬೇರೆ ವ್ಯಾಖ್ಯಾನ ಅಗತ್ಯ. ಹಾಗಿದ್ದಾಗ ಕನ್ನಡದಲ್ಲೂ ಕಾನೂನು ಭಾಷೆ ಅರ್ಥಮಾಡಿಕೊಳ್ಳಲು

ಬೇರೆ ಬೇರೆ ವ್ಯಾಖ್ಯಾನ ಅಗತ್ಯವೆಂದೇ ಹೇಳಬೇಕಾಗುತ್ತದೆ. ಜನಸಾಮಾನ್ಯರಿಗೆ ಕಾನೂನು ಎನ್ನುವುದು ಪರಿಮಿತ ಸತ್ಯವಷ್ಟು, ಹೇಗೆ ವಿಜ್ಞಾನವನ್ನು ಜನಸಾಮಾನ್ಯರಿಗೆ ಅರ್ಥಮಾಡಿಸಲು ವ್ಯಾಖ್ಯಾನ ಅಗತ್ಯವೋ ಕಾನೂನಿನಲ್ಲಿ ಅದೇ ಪ್ರಯತ್ನ ಅಗತ್ಯ. ಹೊಸ ಕಾನೂನು ರಚನೆ ಮಾಡುವಾಗ ಇಂಗ್ಲಿಷಿನಲ್ಲಿ ಕಾನೂನು ರಚಿಸಿ ನಂತರ ಕನ್ನಡಕ್ಕೆ ಭಾಷಾಂತರ ಮಾಡುವುದರ ಬದಲು ಕನ್ನಡದಲ್ಲೇ ಕಾನೂನು ರಚನೆಗೆ ಪ್ರಯತ್ನಿಸಬೇಕಾಗಿದೆ. ಈ ಬಗ್ಗೆ ಇರುವ ಮಡಿವಂತಿಕೆ ಮತ್ತು ಸ್ವಪ್ರತಿಷ್ಠೆಯನ್ನು ದೂರಮಾಡಿ ಹಠಹಿಡಿದು ಪ್ರಯತ್ನಿಸಿದಲ್ಲಿ ಇದೇನು ಅಂತಹ ಕಷ್ಟಕರ ಕೆಲಸವಲ್ಲ. ಹೈದರ್-ಟಿಪ್ಪು ಕಾಲದಲ್ಲಿ ಆಡಳಿತದಲ್ಲಿ ಕನ್ನಡ ಬಳಕೆಯಿತ್ತು. ಮೈಸೂರು ರಾಜರ ಕಾಲದಲ್ಲಿ ಕನ್ನಡಕ್ಕೆ ಪ್ರಾಮುಖ್ಯತೆಯನ್ನು ನೀಡಲಾಗಿತ್ತು. ಬ್ರಿಟೀಷರ ಕಾಲದಲ್ಲೂ ಕನ್ನಡವನ್ನು ಆಡಳಿತದಲ್ಲಿ ಬಳಸಲಾಗುತ್ತಿತ್ತು. ಹೀಗಿರುವಾಗ ಇಷ್ಟು ಹೊತ್ತಿಗೆ ನಾವು ಸಂಪೂರ್ಣವಾಗಿ ಆಡಳಿತದಲ್ಲಿ ಕನ್ನಡ ತಂದು ನಮ್ಮ ಎಲ್ಲಾ ವ್ಯವಹಾರ (ಕಾನೂನು ಸೇರಿದಂತೆ) ಕನ್ನಡದಲ್ಲೇ ಮಾಡುವ ಮಟ್ಟಕ್ಕೆ ಬರಬೇಕಾಗಿತ್ತು. ಇನ್ನೂ ಕೂಡ ಕನ್ನಡಕ್ಕೆ ಭಾಷಾಂತರ ಮಾಡುವ ಬಗ್ಗೆ ಯೋಚಿಸುತ್ತಿರುವುದು ನಮ್ಮ ದೌರ್ಭಾಗ್ಯ.

**2. ವಿಜ್ಞಾನ ಗ್ರಂಥಗಳ ಭಾಷಾಂತರದ ತೊಂದರೆಗಳು**

ಜೆ. ಡಿ. ಬರ್ನಾಲ್ ಎಂಬ ಶ್ರೇಷ್ಠ ವಿಜ್ಞಾನಿ ತನ್ನ Science in History ಎನ್ನುವ ಗ್ರಂಥದಲ್ಲಿ ವಿಜ್ಞಾನದ ಕುರಿತು ಹೀಗೆ ಹೇಳಿದ್ದಾನೆ. ''ವಿಜ್ಞಾನ ಒಂದು ಸಂಸ್ಥೆ, ಒಂದು ವಿಧಾನ, ಜ್ಞಾನದ ಸಂಗ್ರಹಿತ ಪರಂಪರೆ, ಉತ್ಪಾದನೆಯ ಮಟ್ಟವನ್ನು ಕಾದಿಡುವುದರಲ್ಲಿಯೂ ಉತ್ಪಾದನೆಯನ್ನು ಅಭಿವೃದ್ಧಿಪಡಿಸುವುದರಲ್ಲಿಯೂ ಪ್ರಧಾನವಾದ ಒಂದು ಅಂಶ, ಮತ್ತು ವಿಶ್ವ ಹಾಗೂ ಮಾನವನೆಡೆಗೆ ನಂಬಿಕೆಗಳನ್ನು, ನಿಲುವುಗಳನ್ನು ರೂಪಿಸುವ ಅತ್ಯಂತ ಸಾಮರ್ಥ್ಯವಂತ ಪ್ರಭಾವಗಳ ಪೈಕಿ ಒಂದು.'' ವಿಜ್ಞಾನ ಒಂದು ಸೃಜನಾತ್ಮಕ ಕ್ರಿಯೆಯಾಗಿದ್ದು ಅದರದೇ ಆದ ಭಾಷೆಯ ಮೂಲಕ ಅಭಿವ್ಯಕ್ತಗೊಳ್ಳುತ್ತದೆ.

ಇಂದು ವಿಶ್ವದಲ್ಲಿ ಇಂಗ್ಲಿಷ್ ವಿಜ್ಞಾನದ ಭಾಷೆಯಾಗಿದೆ. ವಿಜ್ಞಾನ ಚಿಂತನೆಯೂ ಅದೇ ಭಾಷೆಯಲ್ಲೇ ನಡೆಯುತ್ತಿದೆ. ಶಿಷ್ಟ ಗ್ರಂಥಗಳೂ ಅದೇ ಭಾಷೆಯಲ್ಲಿ ಹೆಚ್ಚಾಗಿ ಹೊರಬಂದಿವೆ. ಇಂಗ್ಲಿಷ್‌ನಲ್ಲಿ ವಿಜ್ಞಾನ ಭಾಷೆಗೆ ವಿವರಣಾತ್ಮಕ, ಪ್ರತೀಕಾತ್ಮಕ, ಚಿತ್ರಾತ್ಮಕ ಎಂಬ ಮೂರು ಬಾಹ್ಯಲಕ್ಷಣಗಳಿವೆ.  ವಿವರಣಾತ್ಮಕದಲ್ಲಿ ವಿಷಯಗಳ ವಿವರವನ್ನೂ, ಪ್ರತೀಕಾತ್ಮಕದಲ್ಲಿಪ್ರತೀಕಗಳನ್ನೂ, ಚಿಹ್ನೆಗಳನ್ನೂ ಹಾಗೂ ಚಿತ್ರಾತ್ಮಕದಲ್ಲಿ ರೇಖಾಕೃತಿ, ರೇಖಿ. ಚಿತ್ರಗಳನ್ನೂ ನೀಡಿ ಸಂಕೀರ್ಣ ವಿಷಯಗಳಿಗೆ ಸ್ಪಷ್ಟರೂಪ ಕೊಡಲಾಗುತ್ತದೆ. ಈ ವಿಜ್ಞಾನ ಗ್ರಂಥಗಳಲ್ಲಿ ಪಾರಿಭಾಷಿಕ ಪದಗಳ ಖಚಿತ ಅರ್ಥವಿವರಣೆ, ಪ್ರತೀಕಗಳನ್ನು, ಚಿಹ್ನೆಗಳನ್ನು ಸೂಚಿಸುವ ಭಾವನೆಗಳ ವಿವರಣೆ, ಆದ್ಯುಕ್ತಿ ಹಾಗೂ ಅಭಿಗ್ರಹೀತಗಳ ಸ್ಪಷ್ಟೀಕರಣ, ತಾರ್ಕಿಕ ಸಾಮಂಜಸ್ಯ, ಸಾಹಿತ್ಯ ಸೌಂದರ್ಯಗಳಿದ್ದು ನಿಸರ್ಗದ ವಿವಿಧ ಸಂಕೀರ್ಣ ವಿದ್ಯಮಾನಗಳನ್ನು ಮಿತಭಾಷೆಯಲ್ಲಿ ತರ್ಕಬದ್ಧವಾಗಿ, ಸಮರ್ಥವಾಗಿ, ಸುಂದರವಾಗಿ ವಿವರಿಸಬಲ್ಲವು.

ಕನ್ನಡ ವಿಜ್ಞಾನದ ಭಾಷೆಯಾಗಿ ಇನ್ನೂ ಬೆಳೆದುಬಂದಿಲ್ಲ. ಕನ್ನಡ ಮಾತ್ರವಲ್ಲ.  ಯಾವುದೇ ಭಾರತೀಯ ಭಾಷೆಗೆ ವಿಜ್ಞಾನದ ವಿಷಯದಲ್ಲಿ ಇನ್ನೂ ಇಂಗ್ಲಿಷನ್ನು ಬದಲಿಸುವ ಶಕ್ತಿ ಸಂಪೂರ್ಣವಾಗಿ ಬಂದಿಲ್ಲ. ಅಲ್ಲದೆ ಕನ್ನಡ ವಿಜ್ಞಾನಿಗಳಿಗೆ, ವಿಜ್ಞಾನ ಕಲಿಸುವವರೆಗೆ, ವಿಜ್ಞಾನ ಕಲಿಯುವವರಿಗೆ ಕನ್ನಡದ ಬಗ್ಗೆ ಒಂದು ರೀತಿಯ ತಾತ್ಸಾರವೂ ಇದೆ. ಇದು ಹೋಗದೆ ವಿಜ್ಞಾನ ಜಗತ್ತಿನಲ್ಲಿಕನ್ನಡ ಉದ್ಧಾರವಾಗದು. ಇದಕ್ಕೆ ಸರ್ವರೀತಿಯ ಪ್ರಯತ್ನ ಅಗತ್ಯ.

ಇಂಗ್ಲಿಷಿನಿಂದ ಕನ್ನಡಕ್ಕೆ ವಿಜ್ಞಾನ ವಿಷಯಗಳನ್ನು ಭಾಷಾಂತರಿಸುವಾಗ ಎದುರಾಗುವ ಸಮಸ್ಯೆಗಳು ಎರಡು. ಒಂದು ವ್ಯಕ್ತಿಮೂಲ, ಎರಡು ಕೃತಿಮೂಲ.

ವ್ಯಕ್ತಿಮೂಲ ಸಮಸ್ಯೆ ಉದ್ಭವಿಸುವುದು ನಮ್ಮ ಜನರ ಇಂಗ್ಲಿಷ್ ಮೋಹದಿಂದಾಗಿ. ಅವರ ದೃಷ್ಟಿಯಲ್ಲಿ ಇಂಗ್ಲಿಷನ್ನಿ ಬಿಟ್ಟರೆ ಕನ್ನಡದಲ್ಲಿ ವಿಜ್ಞಾನ ವಿಷಯ ಹೇಳಲು ಸಾಧ್ಯವೇ ಇಲ್ಲ ಎಂಬ ಧೋರಣೆ. ಈ ಧೋರಣೆ ತಾಳುವಾಗ ಅವರು ಕನ್ನಡಿಗರೆಂಬುದನ್ನು ಮರೆಯುತ್ತಾರೆ. ಎಲ್ಲರಿಗೂ ಅರ್ಥವಾಗುವಂತೆ ಭಾಷಾಂತರಿಸದಿದ್ದರೆ ಪ್ರಯೋಜನವೇನು ಎಂಬುದು ಅವರ ವಾದ. ಆದರೆ ಇಂಗ್ಲಿಷ್‌ನಲ್ಲಿ ಬರೆದಿದ್ದು ಇಂಗ್ಲಿಷ್ ಕಲಿತವರಿಗೆ ಎಲ್ಲವೂ ಅರ್ಥವಾಗುವುದಿಲ್ಲ. ಹಾಗೆಯೇ ವಿಜ್ಞಾನ ವಿಷಯದಲ್ಲಿ ಕನ್ನಡದಲ್ಲಿ ಬರೆದಾಕ್ಷಣ  ಎಲ್ಲರಿಗೂ ಅರ್ಥವಾಗಬೇಕೆಂದೇನಿಲ್ಲ. ಉದಾಹರಣೆಗೆ ಈ ಕೆಳಕಂಡ ವಿಜ್ಞಾನದ ಭಾಷಾಂತರವನ್ನು (ರಿಚರ್ಡ್ ಕೂರಾಂಬಸ್) ಗಮನಿಸಬಹುದು:

"Just  as deduction should be supplemented by intuition, so the impulse to progressive generalization must be tempered and balanced by respect and love for colourful detail."

''ನಿಗಮನ ಹೇಗೆ ಅಂತರ್ಭೋಧದಿಯಿಂದ ಪರಿಪುಷ್ಟಗೊಂಡಿರಬೇಕೋ ಹಾಗೆ ಕ್ರಮಾಗತ ಸಾರ್ವತ್ರೀಕರಣ ಮಾಡಬೇಕೆಂಬ ತೀವ್ರಾಕಾಂಕ್ಷೆ ವರ್ಣವೈವಿಧ್ಯಯುತ ವಿವರವನ್ನು ಕುರಿತು ಗೌರವ ಮತ್ತು ಪ್ರೀತಿಯಿಂದ ಹದಗೊಂಡಿರಬೇಕು ಮತ್ತು ಸಂತುಲಿತವಾಗಿರಬೇಕು.''

ಈ ಎರಡೂ ಪಠ್ಯಗಳು ಜನಸಾಮಾನ್ಯರಿಗೆ ಅಷ್ಟು ಸುಲಭವಾಗಿ ಅರ್ಥವಾಗದು ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಭಾಷಾಂತರವೆಂದ ಕೂಡಲೇ ಎಲ್ಲರಿಗೂ ಅರ್ಥವಾಗಲೇಬೇಕೆಂಬ ವಾದ ಸರಿಯಲ್ಲ. ವಿಜ್ಞಾನದ ವಾಙ್ಮಯವನ್ನು ಭಾಷಾಂತರಿಸುವುದೆಂದರೆ ಪರಭಾಷೆಯಲ್ಲಿ ಇರುವ ವಿಜ್ಞಾನದ ಸಾರ್ವತ್ರಿಕ ಪರಿಕಲ್ಪನೆಯನ್ನು ಸ್ವಭಾಷೆಯಲ್ಲಿ ನಿರೂಪಿಸುವುದು. ಉದಾಹರಣೆಗೆ :

It was the existence of electrons, and of subatomic particles generally, that was to bring a new degree of order into the task of elelments.

ಭಾಷಾಂತರ -1 : ಎಲೆಕ್ಟ್ರಾನುಗಳ - ಸಾರ್ವತ್ರಿಕವಾಗಿ ಉಪಪರಮಾಣವಿಕ ಕಣಗಳ - ಅಸ್ತಿತ್ವದ ಕಾರಣವಾಗಿ ಧಾತುಕೋಷ್ಟಕಕ್ಕೆ ಕ್ರಮಬದ್ಧತೆಯ ಹೊಸಮಟ್ಟ ಒದಗಿಬಂತು.

ಭಾಷಾಂತರ -2 : ಎಲೆಕ್ಟ್ರಾನುಗಳೂ ವ್ಯಾಪಕವಾಗಿ ಉಪಪರಮಾಣ್ವಿಕ ಕಣಗಳೂ ಉಂಟೆಂದು ತಿಳಿದು ಬಂದಿದ್ದರಿಂದ ಮೂಲವಸ್ತುಗಳ ಸಾರಣಿಗೆ ಹೊಸದರ್ಜೆ ವ್ಯವಸ್ಥೆ ಬಂದಿತು.

ಎರಡನೇ ಭಾಷಾಂತರ ಅವಾಂತರವಾಗಿದ್ದು, ಭಾಷಾಂತರಕಾರನಿಗೆ ವಿಜ್ಞಾನ ಪರಿಕಲ್ಪನೆಗಳ ಪರಿಚಯದ ಅಭಾವ ಎದ್ದು ಕಾಣುತ್ತದೆ.

ಶ್ರೀ ಜಿ. ಟಿ. ನಾರಾಯಣರಾಯರ ಪ್ರಕಾರ ವೈಜ್ಞಾನಿಕ ವಿಷಯಗಳ ಭಾಷಾಂತರದ ಪ್ರಮುಖ ಅವಶ್ಯಕತೆಗಳು ಎರಡು:

ಒಂದು ವಿಜ್ಞಾನ ಪರಿಕಲ್ಪನೆಗಳನ್ನು ಅರ್ಥವಿಸಬಲ್ಲಷ್ಟು ವಿಷಯದ ಮೇಲೆ ಪ್ರಭುತ್ವ; ಎರಡು. ಮೂಲ ಹಾಗೂ ಉದ್ದಿಷ್ಟ ಭಾಷೆಗಳೆರಡರಲ್ಲೂ ಪ್ರಾವೀಣ್ಯ. ಭಾಷಾಂತರಕಾರ ಉದ್ದಿಷ್ಟ ಭಾಷೆಯಲ್ಲಿ ಒಬ್ಬ ಸೃಜನಾತ್ಮಕ ಲೇಖಕನಾಗಿದ್ದಲ್ಲಿ ಸಮಸ್ಯೆ ಉದ್ಭವಿಸುದಿಲ್ಲ. ಇದಕ್ಕೆಈ ಕೆಳಗಿನ ಭಾಷಾಂತರವೇ ಉದಾಹರಣೆ.

ಮೂಲ : The earth rotates round itself and revolves round the sun.

ಭಾಷಾಂತರ -1 : ಭೂಮಿ ತನ್ನ ಸುತ್ತ ತಿರುಗುತ್ತದೆ ಮತ್ತು ಸೂರ್ಯನ ಸುತ್ತ ಪ್ರದಕ್ಷಿಣೆ ಹಾಕುತ್ತದೆ.

ಭಾಷಾಂತರ -2 : ಭೂಮಿ ತನ್ನ ಸುತ್ತ ಆವರ್ತಿಸುತ್ತದೆ ಮತ್ತು ಸೂರ್ಯನಸುತ್ತ ಪರಿಭ್ರಮಿಸುತ್ತದೆ.

ಭಾಷಾಂತರ 1ರಲ್ಲಿ ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ ಭಾಷಾಂತರಿಸಲು ಹೋಗಿ ವಿಜ್ಞಾನ ಶಬ್ದದ ಬಳಕೆಯಾಗಿಲ್ಲ. ಭಾಷಾಂತರ 2ರಲ್ಲಿ ವೈಜ್ಞಾನಿಕ ಶಬ್ದದ ಬಳಕೆಯಿಂದ ಭಾಷಾಂತರ ಪರಿಪೂರ್ಣವಾಗಿದೆ. ಭಾಷಾಂತರಕಾರನಿಗೆ ಮೂಲಭಾಷೆಯ ನಯ ನವಿರುಗಳನ್ನು ಗ್ರಹಿಸಿ ಸರಿಯಾಗಿ ಅರ್ಥೈಸುವಷ್ಟು ಜ್ಞಾನವಿದ್ದು ಭಾಷಾ ಸಂಪತ್ತು, ಸೃಜನಾತ್ಮಕ ಸಾಮರ್ಥ್ಯ, ಲೇಖನ ಕೃಷಿಯಲ್ಲಿ ಖಚಿತ ನಿಲುವುಗಳಿರಬೇಕು. ಅದಿಲ್ಲದಿದ್ದಲ್ಲಿ ಭಾಷಾಂತರ ಯಾಂತ್ರಿಕವೂ, ನೀರಸವೂ ಆಗುವುದು. ವಿಜ್ಞಾನ ವಿಷಯಗಳನ್ನು ಭಾಷಾಂತರಿಸುವುದು ಇತರ ಸಾಹಿತ್ಯ ವಿಷಯಗಳನ್ನು ಭಾಷಾಂತರಿಸುವುದಕ್ಕಿಂತ ಸುಲಭವೆನ್ನುವ ಕಲ್ಪನೆ ತಪ್ಪು ಆದ್ದರಿಂದ ಭಾಷಾಂತರಕಾರನಿಗೆ ಭಾಷೆ ಮತ್ತು ವಿಷಯ ಎರಡರ ಮೇಲೂ ಪ್ರಭುತ್ವವಿರಬೇಕು.

ಒಬ್ಬ ಭಾಷಾಂತರಕಾರನಿಗೆ ಮೂಲ ಹಾಗೂ ಉದ್ದಿಷ್ಟ ಭಾಷೆಗಳೆರಡರಲ್ಲೂ ಪ್ರಭುತ್ವವಿದ್ದು ವಿಷಯದ ಮೇಲೂ ಹಿಡಿತವಿದ್ದು ಭಾಷಾಂತರಿಸುವಾಗ ಎದುರಾಗುವ ಸಮಸ್ಯೆಗಳೇ ಕೃತಿಮೂಲ ಸಮಸ್ಯೆಗಳು. ಮೊದಲನೆಯದಾಗಿ ಅವನಿಗೆ ಎದುರಾಗುವ ಸಮಸ್ಯೆ ಪಾರಿಭಾಷಿಕ ಪದಗಳ ಗೊಂದಲ.

ಉದಾಹರಣೆ discover (ಆವಿಷ್ಕರಿಸು) invent (ಉಪಸಜ್ಜಿಸು) find (ಶೋಧಿಸು) Calculate (ಗಣಿಸು) ಈ ಶಬ್ದಗಳಿಗೆ ಸಾಮಾನ್ಯ ಅರ್ಥದಲ್ಲಿ 'ಕಂಡುಹಿಡಿ' ಎಂದು ಬಳಕೆಯಾಗುತ್ತದೆ. ಭಾಷಾಂತರಿಸುವಾಗ ಕೂಡ ವೈವಿಧ್ಯ ಎದ್ದು ಕಾಣುವಂತೆ ಯುಕ್ತ ಪದಗಳನ್ನು ಬಳಸಬೇಕು. ಒಂದೇ ಶಬ್ದಕ್ಕೆ ಅನೇಕ ಅರ್ಥಗಳಿರುವಾಗ ಸೂಕ್ತ ಅರ್ಥವನ್ನು ಬಳಸುವ ಕಲೆಯನ್ನು ಕರಗತಮಾಡಿಕೊಳ್ಳಬೇಕಾಗುತ್ತದೆ. ಇದಕ್ಕಾಗಿ ರಾಜ್ಯ ವಿಜ್ಞಾನದ ಪ್ರಮುಖ ಗ್ರಂಥೋತ್ಪಾದಕರ ಸಂಸ್ಥೆಗಳು ವೈಜ್ಞಾನಿಕ ಪಾರಿಭಾಷಿಕ ಪದಗಳ ನಿಘಂಟನ್ನು ನೀಡಿದಲ್ಲಿ ಈ ಗೊಂದಲ ಕಡಿಮೆಯಾಗುವುದು. ಭಾಷಾಂತರಕಾರ ತನ್ನ ಮನಸ್ಸಿಗೆ ಬಂದ ಪಾರಿಭಾಷಿಕ ಶಬ್ದ ಸೃಷ್ಟಿಮಾಡುವುದು ನಿಲ್ಲುತ್ತದೆ. ಉದಾಹರಣೆಗೆ force ಎಂಬ ಶಬ್ದಕ್ಕೆ 'ತ್ರಾಣ' 'ಶಕ್ತಿ' 'ಸಾಮರ್ಥ್ಯ' 'ಬಲ' ಹೀಗೆ ನಾನಾ ಪರ್ಯಾಯ ಬಳಕೆ ಒಂದೇ ಗ್ರಂಥದಲ್ಲಿ ಆಗಿದೆ. ಇದು ಅಭಾಸಕರ. ಭಾಷಾಂತರಕಾರ ಮೂಲಗ್ರಂಥದಲ್ಲಿ ಬರುವ ಸಮಸ್ತ ಪಾರಿಭಾಷಿಕ ಪದಗಳನ್ನು, ಪದಪುಂಜಗಳನ್ನು ಅಕಾರದ ಪಟ್ಟಿಮಾಡಿ. ಶಬ್ದಕೋಶಗಳನ್ನು ವಿಶ್ವಕೋಶಗಳನ್ನು ಅವಲೋಕಿಸಿ ಕನ್ನಡ ಪಾರಿಭಾಷಿಕ ಪದಗಳನ್ನು ಆಯ್ದು, ಸಮಾನವಾದ ಒಂದು

ಪಾರಿಭಾಷಿಕ ಪದವನ್ನು ಬಳಸಬೇಕು. ಪಾರಿಭಾಷಿಕ ಶಬ್ದ ಸಿಗದಿದ್ದಲ್ಲಿ ಮೂಲ ಪಾರಿಭಾಷಿಕ ಶಬ್ದವನ್ನೇ ಕನ್ನಡದಲ್ಲಿ ಹಾಗೆಯೇ ಬಳಸುವುದರ ಮೂಲಕ ಅದಕ್ಕೆ ಕನ್ನಡದ ಉಡುಪನ್ನು ತೊಡಿಸಬೇಕು. $E=mc^2$ ಎಂಬ ಸಮೀಕರಣವನ್ನು ಹಾಗೆಯೇ ಇಡಬೇಕು. ಇವುಗಳನ್ನು ಭಾಷಾಂತರಿಸುವ ಗೋಜಿಗೆ ಹೋಗಬಾರದು. ಹಾಗೆಯೇ ರಾಸಾಯನಿಕ ಕ್ರಿಯೆಗಳನ್ನು ಸೂಚಿಸುವ ವಿವಿಧ ಸಮೀಕರಣಗಳನ್ನು ಯಾವ ಬದಲಾವಣೆಯಿಲ್ಲದೆ ಕನ್ನಡದಲ್ಲಿಡಬೇಕು.

ಮೂಲಪಠ್ಯವನ್ನು ಪುನಃ ಪುನಃ ಓದಿ ಮನನ ಮಾಡಿ ಒಂದು ಕಚ್ಚಾ ಭಾಷಾಂತರವನ್ನು ತಯಾರಿಸಬೇಕು. ನಂತರ ಮೂಲ ಪಠ್ಯದೊಡನೆ ಸವಿವರ ತುಲನೆ, ಪಾರಿಭಾಷಿಕ ಪದಗಳ ಶಿಷ್ಟೀಕರಣ, ಪ್ರತೀಕ ಮುಂತಾದುವುಗಳ ತಪಾಸಣೆ ಮಾಡಿ ಕಚ್ಚಾ ವಸ್ತುಗಳಿಗೆ ಒಪ್ಪರೂಪವನ್ನು ಕೊಡಬೇಕು. ನಂತರ ಮೂಲ ಪಠ್ಯವನ್ನು ಓದಿದಾಗ ಸಿಗುವ ಆನಂದ ಅನುವಾದಿತ ಪಠ್ಯದಲ್ಲೂ ದೊರಕುವವರೆಗೂ ಪರಿಷ್ಕರಿಸುತ್ತಾ ಹೋಗಬೇಕು. ಉದಾಹರಣೆಗೆ ಅನ್ರಿ ಪ್ವಾನ್ ಕ್ಯಾರೇ ಎಂಬ ಗಣಿತಜ್ಞನ ಮಾತುಗಳ ಭಾಷಾಂತರವನ್ನು ನೋಡೋಣ:

The scientist does not study nature because it is useful; he studies it because he delights in it, and he delights in it because it is beautiful. If nature were not beautiful, it would not be worth knowing, and if nature were not worth knowing, life would not be worth living.

ನಿಸರ್ಗ ಉಪಯುಕ್ತವಾಗಿದೆ ಎಂಬ ಕಾರಣದಿಂದ ವಿಜ್ಞಾನಿ ಅದನ್ನು ಅಭ್ಯಸಿಸುವುದಿಲ್ಲ ಅಂಥ ಅಭ್ಯಾಸ ಆತನಿಗೆ ಸಂತೋಷಕೊಡುವುದರಿಂದ ಆತ ಅದರಲ್ಲಿ ಉದ್ಯುಕ್ತನಾಗುತ್ತಾನೆ. ಆತನಿಗೆ ಅದು ಸಂತೋಷಕೊಡುವುದು ನಿಸರ್ಗ ಚೆಲುವಾಗಿರುವುದರಿಂದ, ನಿಸರ್ಗ ಚೆಲುವಾಗಿರದಿದ್ದಲ್ಲಿ ಅದನ್ನು ತಿಳಿಯುವುದು ವ್ಯರ್ಥವಾಗುತ್ತಿತ್ತು.ನಿಸರ್ಗವನ್ನು ತಿಳಿಯುವುದು ವ್ಯರ್ಥವಾಗಿದ್ದರೆ ಬದುಕು ವ್ಯರ್ಥವಾಗುತ್ತಿತ್ತು. (ಕಚ್ಚಾ ಭಾಷಾಂತರ)

ನಿಸರ್ಗ ಪ್ರಯೋಜನಕಾರಿ ಎಂಬುದಕ್ಕಾಗಿ ವಿಜ್ಞಾನಿ ಅದನ್ನು ಅಧ್ಯಯಿಸುವುದಿಲ್ಲ. ಅವನು ಅದನ್ನು ಅಧ್ಯಯಿಸುವುದು ಅದರಲ್ಲಿ ಅವನಿಗೆ ಆನಂದ ಒದಗುವುದರಿಂದ, ಅದರಲ್ಲಿ ಅವನಿಗೆ ಆನಂದ ಒದಗುವುದು ಅದು ಸುಂದರವಾಗಿರುವುದರಿಂದ. ನಿಸರ್ಗ ಸುಂದರವಾಗಿರದಿದ್ದರೆ ಅದನ್ನು ತಿಳಿಯುವುದು ನಿಷ್ಪ್ರಯೋಜಕವಾಗುತ್ತಿತ್ತು; ನಿಸರ್ಗವನ್ನು ತಿಳಿಯುವುದು ನಿಷ್ಪ್ರಯೋಜಕವಾಗಿದ್ದರೆ ಬದುಕು ಅರ್ಥಹೀನವಾಗುತ್ತಿತ್ತು. (ಪರಿಷ್ಕೃತ ಭಾಷಾಂತರ)

ಭಾಷಾಂತರಕಾರ ಸಂಕಲನ, ವ್ಯವಕಲನ, ಮಕ್ಷಿಕಾಮಕ್ಷಿ, ನಿಘಂಟುವಿನ ಅಂಧಾನುಕರಣೆ, ಅನ್ವಯ, ಅರ್ಥ ಜಾಯಮಾನ, ಪಾರಿಭಾಷಿಕ ಪದ ಉಪ್ಪುಪಕ್ಷಿ ನಿಲುವು, ಉಚ್ಚಾರಣಾ ಮುಂತಾದ ಹತ್ತುಲೋಪಗಳು ಬರದಂತೆ ಜಾಗ್ರತೆ ವಹಿಸಬೇಕು. ಮೂಲದಲ್ಲಿ ಇಲ್ಲದ್ದನ್ನು ಸೇರಿಸುವುದು (ಸಂಕಲನ), ಮೂಲದಲ್ಲಿ ಇದ್ದುದನ್ನು ಬಿಡುವುದು (ವ್ಯವಕಲನ), ಮೂಲದ ಒಂದು ಪದಕ್ಕೆ ಅನುವಾದದಲ್ಲಿ ಒಂದು ಪದ ಇರಬೇಕೆನ್ನುವ ಮೂರ್ಖಶ್ರದ್ಧೆ (ಮಕ್ಷಿಕಾಮಕ್ಷಿ), ವಿವೇಕ ರಹಿತವಾಗಿ ನಿಘಂಟುವಿನ ಪದಗಳನ್ನು ಅಯುಕ್ತ ಪೋಣಿಸುತ್ತಾ ಹೋಗುವುದು (ನಿಘಂಟುವಿನ ಅಂಧಾನುಕರಣೆ), ಮೂಲದಲ್ಲಿ ಅಪಾನ್ವಯ ಮಾಡುವುದರಿಂದ (ಮೇಣ-ಸೂಜಿ-ಹೀಗೆ), ಘಟಿಸುವ ಅಪಚಾರ (ಅನ್ವಯದೋಷ), ಪದಗಳ

ಸಾಧಂರ್ಬಿಕಾರ್ಥ ಸರಿಯಾಗಿ ಗ್ರಹಿಸದೇ ಹೋಗುವುದು (ಅರ್ಥದೋಷ), ಭಾಷಾಂತರದಲ್ಲಿ ಕನ್ನಡತನವ ಗೈರುಹಾಜರಿ (ಜಾಯಮಾನದೋಷ), ಒಂದೇ ಭಾಷಾಂತರದಲ್ಲಿ ಒಂದು ಇಂಗ್ಲಿಷ್ ಪಾರಿಭಾಷಿಕ ಪದಕ್ಕೆ ಹಲವು ಕನ್ನಡ ಪಾರಿಭಾಷಿಕ ಪದಗಳು ಬರುವಿಕೆ (ಪಾರಿಭಾಷಿಕ ಪದದೋಷ), ಪಾರಿಭಾಷಿಕ ಪದಗಳಸೃಷ್ಟಿ ಹಾಗೂ ಬಳಕೆ ಮಾಡದೇ ಇರುವುದು (ಉಪ್ಪೃಪಕ್ಷಿ ನಿಲುವು), ಇಂಗ್ಲಿಷ್ ಪಾರಿಭಾಷಿಕ ಪದಗಳನ್ನು, ಅಂಕಿತನಾಮಗಳನ್ನು ಲಿಪ್ಯಂತರಣ ಮಾಡದಿರುವುದು (ಉಚ್ಛಾರಣಾ ದೋಷ) ಮುಂತಾದ ದೋಷಗಳ ಬಗ್ಗೆ ನಿಗಾ ವಹಿಸಬೇಕು. ಜೊತೆಯಲ್ಲಿ ವ್ಯಾಕರಣ ದೋಷ ತರ್ಕದೋಷಗಳನ್ನು ನಿವಾರಿಸಬೇಕು. ಪರಿಕಲ್ಪನಾತ್ಮಕ ಸ್ಪಷ್ಟತೆಯನ್ನು ಮೊದಲು ಸಾಧಿಸಿ ತದನಂತರವೇ ಉಳಿದ ವಿವರಗಳತ್ತ ಲಕ್ಷ್ಯಹರಿಸಬೇಕು.

ಐತಿಹಾಸಿಕ ಕಾರಣಗಳಿಂದ ಕನ್ನಡ ಈತನಕ ಆಧುನಿಕ ವಿಜ್ಞಾನದ ಮಾಧ್ಯಮವಾಗಿ ಪಳಗಿರುವುದಿಲ್ಲ. ಸಮರ್ಥಕ ಶಾಸ್ತ್ರೀಯ ಕೃಷಿಯಿಂದ ಈ ಪಳಗುವಿಕೆ ಕ್ರಮೇಣ ಸಾಧಿತವಾಗಬೇಕು. ಭಾಷಾಂತರಕಾರರು ತಪಸ್ಸುಮಾಡಿ ಅರ್ಹತೆಯನ್ನು ಗಳಿಸಿಕೊಂಡು ನಂತರ ಕಠಿಣ ಪರಿಶ್ರಮ ವಹಿಸಿ ಶ್ರದ್ಧಾಪೂರ್ವಕವಾಗಿ ಭಾಷಾಂತರಕಾರ್ಯ ನಿರ್ವಹಿಸಬೇಕು. ಆಗ ಭಾಷಾಂತರ ಸಾರ್ಥಕ್ಯವನ್ನು ಪಡೆಯುತ್ತದೆ.

### 3. ಶಾಸನಗಳ ಭಾಷಾಂತರದ ತೊಡಕುಗಳು

ಐತಿಹಾಸಿಕ ದಾಖಲೆಗಳು ಶಾಸನಗಳು. ಅರಸರು ಬಳುವಳಿಯಾಗಿ ನೀಡಿದ ಜಾಗ ಅಥವಾ ವಸ್ತುಗಳು, ದೇಶಕ್ಕಾಗಿ ವೀರಸ್ವರ್ಗ ಸೇರಿದ ವೀರರ, ತ್ಯಾಗ, ಬಲಿದಾನ ಮಾಡಿದವರ ವರ್ಣನೆ, ಅಥವಾ ಆ ಕಾಲದಲ್ಲಿ ನಡೆದ ವಿಶೇಷ ಘಟನಾವಳಿಗಳ ದಾಖಲೆ ಈ ಶಾಸನಗಳು. ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ ಅದರಲ್ಲೂ ಆ ಕಾಲದಲ್ಲಿ ಪ್ರಚಲಿತವಿದ್ದ ಭಾಷೆಯಲ್ಲಿ ಈ ಶಾಸನಗಳನ್ನು ಬರೆದಿರುವುದರಿಂದ ಇವುಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸುವುದು ಅಷ್ಟು ಸುಲಭದ ಕೆಲಸವಲ್ಲ. ಇದಕ್ಕೆ ಭಾಷೆಗಳ ಕುರಿತಾದ ಅಜ್ಞಾನ ಹಾಗೂ ಸಾಂಸ್ಕೃತಿಕ ತೊಡಕು ಕಾರಣಗಳು. ಎಷ್ಟೋ ಸಾರಿ ಹಳಗನ್ನಡದಿಂದ ಹೊಸಗನ್ನಡಕ್ಕೆ ಭಾಷಾಂತರಿಸುವುದೇ ಕಷ್ಟವಾಗುತ್ತದೆ. ಅಲ್ಲದೆ ಆ ಕಾಲದ ಮೌಲ್ಯಗಳಿಗೆ ಈಗ ಅರ್ಥವಿಲ್ಲದೆ ಇರುವುದು, ಕಠಿಣವಾದಂತಹ ಮಾತುಗಳು ಭಾಷಾಂತರಕಾರರಿಗೆ ತೊಡಕಾಗಿ ನಿಲ್ಲುತ್ತವೆ.

ಕೊಡಿಗನ ಮೂದವರಳ್ಳಿಯ ಶಾಸನವನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದ ರೈಸ್‌ರವರು "ಯತಿಕುಂಜರಂ" ಎಂಬ ಶಬ್ದವನ್ನು ಬಿಡಿಸಿ 'ಕುಂಜರಂ' ಎಂಬ ಪದಕ್ಕೆ 'ಆನೆ' ಎಂಬ ಅರ್ಥನೀಡಿ ತಪ್ಪು ಭಾಷಾಂತರ ಮಾಡಿದ್ದಾರೆ. ಅದು Eminent sage (yati) ಎಂದಾಗ ಬೇಕಾಗಿತ್ತು. ಈ ಪ್ರಮಾದಕ್ಕೆ ಅಜ್ಞಾನದ ಜೊತೆಗೆ ಸಾಂಸ್ಕೃತಿಕ ತೊಡಕು ಕಾರಣ. ಹಾಗೆಯೇ ಧಾರವಾಡ ಜಿಲ್ಲೆಯ ಸೂಡಿಗ್ರಾಮದಲ್ಲಿ ದೊರೆತ ಶಾಸನದಲ್ಲಿ ಬರುವ

> ಗೊರಿವರ್ಕ್ಕಳಾ ಮುಖಿನ್ನೆರ್ೃಷ್ಟಿ ಕರೆನಿಸಿದೊಡರ ಭೋಗದೊಳಂ ಮೂರು ಪೊತ್ತುಂ
> ವರಕಾನ್ತಾಸಂಕುಳಳಂ ಬನ್ದಿರದೆ ತಡೆವಡಂ....."

ಎಂಬ ಸಾಲನ್ನು ಡಾ॥ ಎಲ್. ಡಿ. ಬಾರ್ನೆಟ್‌ರವರು-

If the goravas and Kalamukhas should not be devovt, if they should be so neglectful that the company of fair women should not come of three days for enjoyment....

ಇದರ ಅರ್ಥ ಕಾಂತಾಸಂಕುಳದ ಸಹವಾಸ ಮೂರು ದಿನಗಳಿಲ್ಲದಿರುವಷ್ಟು ಗೊರವರು ಕಾಳಾಮುಖರು ಅಜಾಗರೂಕರರಾಗಿದ್ದಲ್ಲಿ ಎಂಬ ಅರ್ಥವನ್ನು ಕೊಡುತ್ತದೆ. ಇದು ಸರಿಯಲ್ಲ. ಇದನ್ನು ಶ್ರೀ ಹೆಚ್. ಕೃಷ್ಣಶಾಸ್ತ್ರಿಗಳು ಸರಿಯಾಗಿ ಭಾಷಾಂತರಿಸಿದ್ದಾರೆ.

.....If the company of fair women (i. e. the temple servants) should be neglectful and not attend the three occassions of service of Bhoga.....

ಡಾ॥ ಬಾರ್ನೆಟ್ ಮಾಡಿರುವ ತಪ್ಪಿಗೆ ಕಾರಣ ನೈಷ್ಠಿಕರು ಕಾಂತಾಸಂಕುಳದೊಡನಿರಬಾರದೆಂಬುದರ ಅರಿವೇ ಇಲ್ಲದ್ದು.

ನಂಜನಗೂಡು ತಾಲ್ಲೂಕಿನ ಗಟ್ಟವಾಡಿ ಗ್ರಾಮದಲ್ಲಿ ದೊರೆತ ಒಂದು ಶಾಸನವನ್ನು ಭಾಷಾಂತರಿಸುವಾಗ ರೈಸ್‌ರವರು 'ಎಳಮಕ್ಕಳ್ಗೆಮೆಚ್ಚಿ'' ಎಂಬುದನ್ನು 'being pleased with her children. (ಎಳೆಮಕ್ಕಳನ್ನು ನೋಡಿ ಸಂತೋಷಪಟ್ಟು) ಎಂದು ಅರ್ಥೈಸಿದ್ದಾರೆ. ಎಳೆಮಕ್ಕಳ ಎಂಬುದು ಗ್ರಾಮದ ಸಭೆಗೆ ಆ ಕಾಲದಲ್ಲಿದ್ದ ಹೆಸರು. ಇದು ತಮಿಳಿನಿಂದ ಬಂದ ಶಬ್ದ. ಇದನ್ನು ಸರಿಪಡಿಸಿದ ಬಾ. ರಾ. ಗೋಪಾಲ್‌ರವರು "made over to the elemakkalal (the village body)" ಎಂದು ಭಾಷಾಂತರಿಸಿದ್ದಾರೆ.

ಸರಗೂರು ಗ್ರಾಮದಲ್ಲಿ ದೊರೆತ ಶ್ರೀ ಪುರುಷನ ತಾಮ್ರ ಶಾಸನದಲ್ಲಿ ''ಶ್ರೀ ಪುರುಷ ಮಹಾರಾಜಮ್ ಭಟಾರರ ಶ್ರೀ ನಕ್ಷತ್ರ'' ಎಂಬುದನ್ನು ರೈಸ್‌ರವರು os Sirnakshastra of Sripurusha's Bhatara ಎಂದು ಭಾಷಾಂತರಿಸಿದ್ದಾರೆ. ಇದರ ಸರಿಯಾದ ಭಾಷಾಂತರ ಶ್ರೀಪುರುಷಭಟಾರ ಎಂದರೆ ರಾಜನದೇ ತಿರುನಕ್ಷತ್ರದಲ್ಲಿ the day of the natal star (Srinakshatra) of Sripurusha-) maharaja ಎಂದಾಗಬೇಕಾಗುತ್ತದೆ. ಹಾಗೆಯೇ ಬಸರಾಳು ಗ್ರಾಮದಲ್ಲಿ ದೊರೆತ ಶಾಸನದಲ್ಲಿದ್ದ ಈ ಸಾಲುಗಳನ್ನು -

'ಮುನಂ ರೂಢಿಯ ಕೃಷ್ಣಕಂಧರನುಮಂ ಮಾರ್ಕೊಂಡು ಚೋಳೋರ್ವ್ವಿಯಂ
ನಿಂನಂತಾರೊಳ ಪೊಕ್ಕು ಸಾಧಿಸಿದ ರಸ್ಪಾಂಡ್ಯೇಶನಂ ಶೌರ್ಯ್ಯದಿಂ'

ಎಂಬುದನ್ನು ರೈಸ್‌ರವರು "First fight against the famous 'Krishna-kandhara. who like you pene-treated in to the Chola territory? who subdued the Pandya lord? ಎಂದು ಭಾಷಾಂತರಿಸಿದ್ದಾರೆ. ಇತಿಹಾಸದ ಹಿನ್ನೆಲೆಯನ್ನು ನೋಡಿದ ನಂತರ ಶ್ರೀ ಬಾ. ರಾ. ಗೋಪಾಲ್‌ರವರು ಇದನ್ನು ಸರಿಯಾಗಿ ಈ ರೀತಿ ಭಾಷಾಂತರಿಸಿದ್ದಾರೆ.

"Vying with the famous Krishnakandhara of the past who like you penetrated into and acquired the Chola terriroty and pursuing with valour subdued with the Pandya lord?"

ಐತಿಹಾಸಿಕ ಘಟನೆಗಳ ಸಂಪೂರ್ಣ ತಿಳುವಳಿಕೆ ಇಲ್ಲದಿದ್ದುರಿಂದ ರೈಸ್‌ರವರ ಭಾಷಾಂತರದಲ್ಲಿ ದೋಷ ಕಾಣಲು ಕಾರಣವಾಯಿತು. ಇತಿಹಾಸಿಕ ಘಟನೆಗಳ ಅಜ್ಞಾನ, ಮೌಲ್ಯಗಳ ಬಗ್ಗೆ ಅರಿವಿಲ್ಲದಿರುವುದು. ಸಾಂಸ್ಕೃತಿಕ ವಿಷಯದ ಮೌಢ್ಯ- ಇವು ಶಾಸನಗಳ ತಪ್ಪು ಭಾಷಾಂತರಕ್ಕೆ ಕಾರಣವಾಗುತ್ತದೆ. ಕೆಲವೊಮ್ಮೆ ಸಮರ್ಪಕ ಶಬ್ದ ದೊರೆಯದೇ ಇರುವುದೂ ಕೂಡ ತಪ್ಪು ಭಾಷಾಂತರಕ್ಕೆ ಕಾರಣವಾಗುತ್ತದೆ. ಧರ್ಮ-Charity ಧರ್ಮಶಾಸನ- Deed of Charity ಅಂತರಂಗಭೋಗ decoration, services and workship' ಎಂದು ಭಾಷಾಂತರಿಸಲಾಗಿದ್ದು, ಇವುಗಳಿಗೆ ಸಮರ್ಪಕ ಶಬ್ದ ದೊರೆಯದೇ ಭಾಷಾಂತರ ಪರಿಪೂರ್ಣವಾಗಿಲ್ಲ. ಇದಕ್ಕೆ ಸಾಂಸ್ಕೃತಿಕ ತೊಡಕು ಕಾರಣ. ಹೀಗೆ ಶಾಸನಗಳ ಭಾಷಾಂತರದಲ್ಲಿ ವಿಶಿಷ್ಟ ತೊಡಕುಗಳನ್ನು ನಾವು ಕಾಣಬಹುದು.

**4. ಕಾದಂಬರಿ ಅನುವಾದದ ತೊಡಕುಗಳು**

ಭಾಷಾಂತರ - ಭಾಷೆಯ ಅಂತರವನ್ನು ಪ್ರತಿನಿಧಿಸುತ್ತಿದ್ದು ಭಾಷೆ ಪರಕೀಯವಾದಷ್ಟು ಈ ಅಂತರ ಹೆಚ್ಚುತ್ತಾ ಹೋಗುತ್ತದೆ. ಹಾಗೆಯೇ ಅನುವಾದದಲ್ಲಿ ಮೂಲದ ಅನೇಕ ಅಂಶಗಳ ನಷ್ಟ, ಸಮಸ್ಯೆಗಳ ಸೃಷ್ಟಿ ಆಗುತ್ತದೆ. ಕಾದಂಬರಿ ಸೃಜನಶೀಲ, ಕಾಲ್ಪನಿಕ, ಭಾವಪ್ರಧಾನವಾದ ಒಂದು ಸಾಹಿತ್ಯ ಪ್ರಕಾರವಾಗಿದ್ದು, ಕಾದಂಬರಿಕಾರ ಭಾಷೆಯನ್ನು ತನಗೆ ಬೇಕಾದ ರೀತಿಯಲ್ಲಿ ಬಳಸಿಕೊಳ್ಳುತ್ತಾನೆ. ಈ ಕಾರ್ಯ ಮಾತೃಭಾಷೆಯಲ್ಲಿ ಹೆಚ್ಚು ಸಹಜವಾಗಿ ನಡೆಯುತ್ತದೆ. ಈ ಕಾದಂಬರಿಗಳ ಭಾಷಾಂತರಕಾರನಿಗೆ ಮೂಲಭಾಷೆಯ ವಿಮರ್ಶಾತ್ಮಕ ಜ್ಞಾನ, ಉದ್ದಿಷ್ಟ ಭಾಷೆಯ ಪ್ರಾಯೋಗಿಕ ಕೌಶಲ ವಿವರಬೇಕಾಗುತ್ತದೆ. ಕಾದಂಬರಿಕಾರ ತನ್ನ ವಿಶಿಷ್ಟ ವ್ಯಕ್ತಿತ್ವವನ್ನು ಬಳಸಿ ಅನೇಕ ಹೊಸ ಶಬ್ದಗಳನ್ನು ಪ್ರಯೋಗಿಸುತ್ತಾನೆ. ಭಾಷಾಂತರಕಾರನಿಗೆ ಇಂತಹ ಸಂದರ್ಭದಲ್ಲಿ ಮೂಲ ಲೇಖಕನನ್ನು ಅನುಸರಿಸುವುದು ಕಷ್ಟವಾಗುತ್ತದೆ. ಉದಾಹರಣೆಗೆ ಇಂಗ್ಲಿಷಿನಲ್ಲಿ ಕಪ್ಪು ಬಿಳುಪುಗಳ ಮಧ್ಯದ ಬಣ್ಣಗಳ 76 ಮಾದರಿ ಗುರುತಿಸಬಹುದಾಗಿದ್ದರೆ ಕನ್ನಡದಲ್ಲಿ ಆರೇಳು ವಿಧಗಳನ್ನು ಮಾತ್ರ ಗುರುತಿಸಬಹುದಾಗಿದೆ. ಹಾಗೆಯೇ ಕಾದಂಬರಿಗಳಲ್ಲಿ ಬರುವ ಭೌತಿಕ, ಸಾಮಾಜಿಕ, ಧಾರ್ಮಿಕ, ಭೌಗೋಳಿಕ, ಪರಿಪರಾತ್ಮಕ ಸಮಸ್ಯೆಗಳು ಭಾಷಾಂತರದಲ್ಲಿ ಪರಿಪೂರ್ಣವಾಗಿ ಮೂಡುವುದು ಕಷ್ಟವಾಗುತ್ತದೆ. ಭಾರತದಲ್ಲೇ ಉತ್ತರ ದಕ್ಷಿಣಗಳ ಭೌಗೋಳಿಕ, ಪರಿಸರಾತ್ಮಕ ವ್ಯತ್ಯಾಸವನ್ನು ನಾವು ಕಾಣಬಹುದು. ಕಾಶ್ಮೀರದಲ್ಲಿ ಹಿಮಪಾತವಾದರೆ ಅದರ ಪರಿಚಯ ದಕ್ಷಿಣದರವರಿಗಿರುವುದಿಲ್ಲ. ಉತ್ತರ ಭಾರತದ ಚಳಿಗಾಲವಾಗಲೀ, ಬೇಸಿಗೆಯಾಗಲೀ ದಕ್ಷಿಣದವರ ಊಹೆಗೆ ನಿಲುಕುವುದಿಲ್ಲ. ಇವೆರಡಕ್ಕೂ ಇರುವ ಸಾಮ್ಯವೆಂದರೆ ಸಾಂಸ್ಕೃತಿಕವಾದುದು ಮಾತ್ರ. ಹೀಗೆ ಒಂದು ದೇಶದೊಳಗೇ ವ್ಯತ್ಯಾಸವಿರಬೇಕಾದರೆ ಇಂಗ್ಲೆಂಡ್‌ನಂತ ಹೊರದೇಶದ ಸನ್ನಿವೇಶವನ್ನು ವರ್ಣಿಸುವಾಗ ಓದುಗರಿಗೆ ಎಷ್ಟರಮಟ್ಟಿಗೆ ಹೃದಯ ಸಂವಾದಿಯಾಗಬಹುದು ಎಂಬುದು ಪ್ರಶ್ನೆ ಅಲ್ಲಿನ ಓಕ್ ಮತ್ತು ಫರ್ ಮರಗಳನ್ನು ವರ್ಣಿಸುವುದು ಕಷ್ಟ. ಹಾಗೆಯೇ ಪ್ರಾದೇಶಿಕತೆ ದಟ್ಟವಾಗಿ ಹಬ್ಬಿಕೊಂಡಿರುವ ಕಾದಂಬರಿಗಳನ್ನು ಅನುವಾದಿಸುವಾಗ ಎಷ್ಟೋ ವಿಚಾರಗಳು ಭಾಷಾಂತರಿಸಲಾಗದ ಲಾವಣ್ಯ ಮಾಯವಾಗುತ್ತದೆ. ಇಂಗ್ಲಿಷ್ ಸಾಹಿತ್ಯದಲ್ಲಿ ಸಮುದ್ರ ಜನಜೀವನ ಹಾಸು ಹೊಕ್ಕಾಗಿ ಬೆಳೆದಿದೆ. ನಮ್ಮ ಕರಾವಳಿಯ ಸಾಹಿತ್ಯದಲ್ಲಿ ಸಮುದ್ರ ಪ್ರಮುಖ ಪಾತ್ರವಹಿಸುತ್ತದೆ. ಸಮುದ್ರವನ್ನು ಕಣ್ಣಲ್ಲೂ ನೋಡದೆ ಭಾಷಾಂತರಿಸಲು ಪ್ರಯತ್ನಿಸಿದರೆ ಅನುವಾದ ಪರಿಪೂರ್ಣವಾಗಲು ಸಾಧ್ಯವಿಲ್ಲ.

ಭಾರತೀಯರು ಭಾರತೀಯ ಹಿನ್ನೆಲೆಯಲ್ಲಿ ಬರೆದ ಇಂಗ್ಲಿಷ್ ಕಾದಂಬರಿಗಳನ್ನು ಅನುವಾದಿಸುವಾಗ ಹೆಚ್ಚು ಸಮಸ್ಯೆ ಉದ್ಭವಿಸುವುದಿಲ್ಲ. ಆದರೆ ಪಾಶ್ಚಾತ್ಯ ಬದುಕಿನ, ಸಂಸ್ಕೃತಿಯ ಹಿನ್ನೆಲೆಯ ಅರಿವಿಲ್ಲದ ಅಲ್ಲಿನ ಕಾದಂಬರಿಗಳನ್ನು ಭಾಷಾಂತರಿಸಲು ಪ್ರಯತ್ನಿಸಿದಾಗ ಕೆಲವೊಂದು ವಿಚಾರಗಳನ್ನು ಅರ್ಥಮಾಡಿಸಲು ತುಂಬಾ ವಿವರಣೆ ನೀಡಬೇಕಾಗುತ್ತದೆ. ಇಂಗ್ಲೆಂಡಿನ ಹವಾಮಾನಕ್ಕೆ ಒಗ್ಗುವಂತೆ ಅಲ್ಲಿನ ಜನ ಉಡುಪನ್ನು ಧರಿಸುತ್ತಾರೆ. ಚಳಿ ಹೆಚ್ಚಾಗಿರುವುದರಿಂದ ಕುಡಿಯುವುದು ಸ್ವಾಭಾವಿಕ. ಮಾಂಸದೂಟದ ವರ್ಣನೆ ಹೆಚ್ಚಾಗಿ ಕಂಡುಬರುತ್ತದೆ. ಇವುಗಳನ್ನು ಭಾಷಾಂತರಿಸುವಾಗ ದೇಶೀಯ ಸೊಗಡನ್ನು ಉಳಿಸಿಕೊಳ್ಳಬೇಕಾಗುತ್ತದೆ. ಅಲ್ಲದೆ ಕಾದಂಬರಿಗಳಲ್ಲಿ ಬರುವ 'Colloquial' ನ್ನು ಭಾಷಾಂತರದಲ್ಲೂ ಉಳಿಸಿಕೊಂಡಲ್ಲಿ ಮಾತ್ರ ಅದರ ಸ್ವಾರಸ್ಯ ಉಳಿಯುತ್ತದೆ. 'ಬಾಲ್' 'ಬ್ಯಾಲೆ' ಮುಂತಾದ ನೃತ್ಯ ಕ್ರಮಗಳ ವೈವಿಧ್ಯತೆ ಅರ್ಥವಾಗಬೇಕು. 'ಬಾಲ್' ನಿಧಾನವಾಗಿ ತೇಲಿದಂತೆ ಚಲಿಸುವ ನೃತ್ಯ ಕ್ರಮವಾದರೆ, 'ಬ್ಯಾಲೆ'ಯಲ್ಲಿ ಕುಣಿತವನ್ನು ಕಾಣುತ್ತೇನೆ. ಇವು ಭಾಷಾಂತರದಲ್ಲಿ ಸ್ಪಷ್ಟವಾಗಿ ಮೂಡಬೇಕು.

ಪ್ರೊ॥ ಹೆಚ್. ಹೆಚ್. ಅಣ್ಣಯ್ಯಗೌಡರು ಜಾರ್ಜ್ ಆರ್‌ವೆಲ್ಲರ 'Animal Farm' ನ್ನು 'ಮೃಗ ಪ್ರಭುತ್ವ' ಎಂದು ರೂಪಾಂತರಿಸಿದ್ದು, ಹೆಸರಿನಿಂದ ಹಿಡಿದು ಕನ್ನಡ ಜನರಿಗೆ ಒಗ್ಗದ ಅನೇಕ ವಿಚಾರಗಳಲ್ಲಿ ಬದಲಾವಣೆ ಮಾಡಿಕೊಂಡಿದ್ದಾರೆ. ಕಾದಂಬರಿಯಲ್ಲಿ ಮಣ್ಣಿನವಾಸನೆ ದಟ್ಟವಾಗಿದ್ದು 'Farm' ನ್ನು 'ದೊಡ್ಡಿ' ಯಂತಲೂ ಬೇರು ಬ್ರಾಂದಿಗಳ ವರ್ಣನೆಯನ್ನು ಎಷ್ಟು ಬೇಕೋ ಅಷ್ಟು ಮಾತ್ರ ಬಳಸಿಕೊಂಡಿದ್ದಾರೆ.

"Most of Animal Farm was within their view-the long pasture streteching down to the main road, the heyfield, the spinney, the drinking pool, the plonghed fileds where the young wheat was thick and green and the red roofs of the farm building with the smoke curling from chimneys. It was a clear spring evening. The grss and the bursting hedges were guided by the level rays of the sun."

''ಆ ಹೆದ್ದಾರಿಯ ತನಕ ಹಬ್ಬದ ಹಸುರುಕ್ಕಿದ ಹುಲ್ಲುಗಾವಲು ಆ ತಣ್ಣನೆಯ ತಿಳಿನೀರಿನ ಕೊಳ ಹೊಂಬಣ್ಣದಿಂದ ಮಿರುಗುತ್ತಿದ್ದ ದಟ್ಟವಾದ ಎಳೆಯ ಗೋಧಿಯ ಪೈರು. ಎಲ್ಲೆಯೂ ಆ ಹಸುರಿನ ಹಬ್ಬುಗೆ, ಹಸುರಿನ ಸಿರಿ. ಕಣ್‌ಕೋರೈಸಿ. ಹೃದಯವನ್ನು ತುಂಬಿದವು. ಸಾಂಯಕಾಲದ ಸೂರ್ಯನ ಅರುಣದೀಪ್ತಿ ಆ ಹಸುರಿನ ಸೊಬಗನ್ನು ನೂರ್ಮಡಿಗೈದಿತ್ತು.''

ಈ ಭಾಷಾಂತರದಲ್ಲಿ ಭಾಷಾಂತರಕಾರರು ಕೌಶಲ್ಯವನ್ನು ಸ್ವಾತಂತ್ರ್ಯವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಾಣುತ್ತದೆ. ಸಮಸ್ಯೆಗಳು ಎದುರಾದಾಗ ಅವುಗಳನ್ನು ಬಿಡಿಸಲು ಪ್ರಯತ್ನಿಸದೆ ಪಕ್ಕಕ್ಕೆ ಸರಿದು ಮುಂದಕ್ಕೆ ಸಾಗಿದ್ದಾರೆ ಭಾಷಾಂತರಕಾರರು.

ಪಾಶ್ಚಾತ್ಯರಲ್ಲಿಕಾಣುವ ಡೇಟಿಂಗ್, ಡೈವೋರ್ಸ್, ಚರ್ಚ್‌ನಲ್ಲಿ ಬರುವ ಕಾರ್ಡಿನಲ್, ಕ್ಲೆರಿಕ್, ಬಿಷಪ್, ಫಾದರ್, ಮದರ್ ಮುಂತಾದ ಕಲ್ಪನೆಗಳು ನಮಗೆ ಹೊಸದು. ಇವುಗಳನ್ನು ಭಾಷಾಂತರಿಸುವಾಗ ಆ ಕಲ್ಪನೆ ಮೂಡಿಸುವಂತಿರಬೇಕು. ಇನ್ನು ವ್ಯಕ್ತಿಯನ್ನು ವರ್ಣಿಸುವಾಗ ವ್ಯಕ್ತಿಯ ಚಿತ್ರ ಕಣ್ಣಮುಂದೆ ಬಂದಂತೆ ಭಾಷಾಂತರಿಸಬೇಕು. ಕೆಲವು ಬಾರಿ ಶಿಷ್ಟ

ಹಾಗೂ ಗ್ರಾಂಥಿಕ ರೂಪದಲ್ಲಿದ್ದರೂ ಪಾತ್ರದ ಯೋಗ್ಯತೆಗೆ ತಕ್ಕಂತೆ ಅನುವಾದಿಸಬೇಕು. ಉದಾಹರಣೆ. Then is there any house to let- a little small new cotage just builded or such like (Mayor of casterbridge-Thomas Hardy)

''ಹೋಗ್ಲಿ, ಮನೆಗಿನೆ ಬಾಡ್ಗೀಗ್ ಸಿಕ್ಕುತ್ತಾ? ಯಾವ್ದಾದ್ರು, ಹೊಸಾದು, ಈಚೆಗ ಗೀಚೆಗ ಕಟ್ಟಿದ್ದು

(ಅನು : ಗಾಲಿ ಉರುಳಿತು, ನಾಗರಾಜರಾವ್)

ಭಾಷಾಂತರಿಸುವಾಗ ಶೈಲಿ ಬದಲಾವಣೆಯಾಗುತ್ತದೆ, ಪದರಚನೆ ಬದಲಾಗುತ್ತದೆ. ಒಂದೇ ಭಾಷೆಯಲ್ಲಿ ಪದ ಬದಲಾವಣೆ ಮಾಡಿದಾಗ ಅರ್ಥವ್ಯತ್ಯಾಸವಾಗುವ ಸಂಭವವಿರುವಾಗ, ಪರಕೀಯ ಭಾಷೆಯ ಪದ ಉಪಯೋಗಿಸುವಾಗ ಮೂಲದ ಶೈಲಿ ಮತ್ತು ಅರ್ಥವನ್ನು ತರಲು ಸಾಧ್ಯವಿಲ್ಲ. ಇದು ಪರಿಹಾರ ಕಾಣದ ಸಮಸ್ಯೆ. ಮೂಲಭಾಷೆಯ ಒಂದು ಶಬ್ದಕ್ಕೆ ಅದೇ ಅರ್ಥಕೊಡುವ ಉದ್ದಿಷ್ಟ ಭಾಷೆಯ ಶಬ್ದಗಳನ್ನು ಬಳಸಿಕೊಂಡರೂ ಕೆಲವು ಸಂದರ್ಭ ಭಾವಕ್ಕೆ ಕುಂದುಂಟಾಗುತ್ತದೆ. ಉದಾಹರಣೆಗೆ : "Poof! rejoined Miss Pross' you were bachelor from your cradle!" ''ಪೂ!'' ಮಿಸ್ ಉತ್ತರ ಕೊಟ್ಟಳು 'ತೊಟ್ಟಿಲಿನಿಂದಲೇ ಬ್ರಹ್ಮಚಾರಿ ನೀವು!' (ಅನು : ಎರಡು ನಗರಗಳ ಕಥೆ. ಎಲ್. ಎಸ್.ಶೇಷಗಿರಿರಾವ್)

ಈ ಅನುವಾದದಲ್ಲಿ ಭಾವಕ್ಕೆ ಕೊರತೆಯಾಗಿರುವುದನ್ನು ನಾವು ಕಾಣಬಹುದು. ಇದನ್ನು ''ಓಹೋ! ಹುಟ್ಟಾ ಬ್ರಹ್ಮಚಾರಿ ನೀವು'' ಎಂದಳು ಮಿಸ್‌ಪ್ರಾಸ್ ಎಂದಿದ್ದರೆ ತುಂಬ ಸಹಜವೆನಿಸುತ್ತಿತ್ತು. ಹಾಗೆಯೇ ಒಂದು ಕಾಲದಲ್ಲಿ ಒಂದು ಶಬ್ದಕ್ಕೆ ಇದ್ದ ಅರ್ಥ ಕ್ರಮೇಣ ಬದಲಾವಣೆಯಾಗಿ ಬೇರೊಂದು ಅರ್ಥವನ್ನೇ ಕೊಡುವ ಸಂದರ್ಭ ಕೂಡ ಇದೆ. ಎಲಿಜಬೆತ್ ಕಾಲದ ಕೆಲವು ಇಂಗ್ಲಿಷ್‌ನ ಪದಗಳು ಈಗ ಬೇರೇ ಅರ್ಥ ಕಂಡುಕೊಂಡಿವೆ. ಉದಾಹರಣೆಗೆ : Securityಗೆ Carelessness ಹಾಗೂ Companionಗೆ Idiot ಎಂಬ ಅರ್ಥ ಆ ಕಾಲದಲ್ಲಿತ್ತು. ''ಇಂಗ್ಲಿಷ್ ಭಾಷೆಯ ಕಾದಂಬರಿಗಳನ್ನು ಭಾಷಾಂತರಿಸುವಾಗ, ಬಾಹ್ಯ ಮತ್ತುಆಂತರಿಕ, ಕೋಶಾತ್ಮಕ ಮತ್ತು ವ್ಯಾಕರಣಾತ್ಮಕ ಮತ್ತುಸಮರ್ಥ ಅಭಿವ್ಯಕ್ತಿ ಕೌಶಲಗಳೂ ಸೇರಿದ್ದರೆ ಭಾಷಾಂತರ ಕಾರ್ಯದ ಕ್ಲಿಷ್ಟತೆ ಕೊಂಚ ಕಡಿಮೆಯಾಗುತ್ತದೆ. ಈ ಎಲ್ಲಾ ಕಾರಣಗಳಿಂದಾಗಿ, ಕಾದಂಬರಿಗಳನ್ನು (ಇಂಗ್ಲಿಷ್) ಅನುವಾದಿಸುವಾಗ. ಇಂಗ್ಲಿಷ್ ಜಾಯಮಾನಕ್ಕೆ ಒಗ್ಗುವಂತೆ ಇಡೀ ಪ್ಯಾರಾಗಳನ್ನೇ ಒಂದೊಂದು ಘಟಕಗಳನ್ನಾಗಿ ಭಾವಿಸುವುದು ಒಳ್ಳೆಯದು. ವಾಕ್ಯದ ನಂತರ ವಾಕ್ಯ ಅನುವಾದ ಮಾಡುವುದರಿಂದ ಸಮಸ್ಯೆಗಳು ಹೆಚ್ಚಾಗುವುದರ ಜೊತೆಗೆ ಮೂಲಭಾವ ಅಥವಾ ಆಶಯ ಮಾಯವಾಗುವ ಸಾಧ್ಯತೆಯೇ ಹೆಚ್ಚು. ಒಂದು ಪ್ಯಾರಾವನ್ನು ಘಟಕವನ್ನಾಗಿ ತೆಗೆದುಕೊಂಡರೆ ಅರ್ಥ ಮತ್ತು ಆಶಯಗಳನ್ನು ಕನ್ನಡದ ಜಾಯಮಾನಕ್ಕೆ ಒಗ್ಗುವಂತೆ ನಿರೂಪಿಸುವುದು ಸುಲಭವಾಗುತ್ತದೆ.ವಾಕ್ಯಗಳ ವಿಭಜನೆ ಅದಲು ಬದಲು ಮಾಡುವುದು. ವಿರಾಮ ಚಿಹ್ನೆಗಳನ್ನು ಬದಲಿಸುವುದು ಮೇಲ್ಭಾಗದ ವಿರಾಮ ಚಿಹ್ನೆಗಳನ್ನು ತೆಗೆದುಹಾಕುವುದು ಮುಂತಾದವುಗಳನ್ನು ಕಾರ್ಯರೂಪಕ್ಕೆ ತಂದು ಮೂಲಕ್ಕೆ ನ್ಯಾಯವನ್ನು ದೊರಕಿಸಬಹುದು. ಎನ್ನುತ್ತಾರೆ ಎಂ. ರಾಮಕೃಷ್ಣರವರು (ಕಾದಂಬರಿಯ ಅನುವಾದ

(ಇಂಗ್ಲಿಷಿನಿಂದ) ವಿಶಿಷ್ಟ ಸಮಸ್ಯೆಗಳು 'ನಾಗವಲ್ಲಿ' ಪುಟ 191). ದೇಜಗೌರವರ 'ಹಮ್ಮು ಬಿಮ್ಮು' (Pride and Prejudice) ನಲ್ಲಿ ಒಂದು ಪ್ಯಾರವನ್ನು ಘಟಕವನ್ನಾಗಿ ಮಾಡಿಕೊಂಡು ಅನುವಾದಿಸಿರುವುದನ್ನು ನಾವು ಕಂಡರೆ ಹೆಚ್. ಎಲ್. ನಾಗೇಗೌಡರ ಕೆನಿಲ್ ವರ್ತ್'' (Kenil worth: Sir Walter Scott) ನ ಸಂಗ್ರಹಾನುವಾದದಲ್ಲಿ ಒಂದು ಪುಟವನ್ನೇ ಘಟಕವನ್ನಾಗಿಸಿಕೊಂಡಿರುವುದು ಕಂಡುಬರುತ್ತದೆ.

ಒಂದು ಭಾಷೆಗೂ ಅಥವ ಜನರ ಸಂಸ್ಕೃತಿಗೂ ಒಂದು ವಿಶಿಷ್ಟ ಸಂಬಂಧವಿದೆ. ಅದನ್ನು ಭಾಷಾಂತರಿಸುವಾಗ ಭಾಷಾಂತರಿಸಿದ ಜನರ ಸಂಸ್ಕೃತಿಗೂ ಮೂಲದ ಜನರ ಸಂಸ್ಕೃತಿಗೂ ವ್ಯತ್ಯಾಸವಿರುವುದರಿಂದ ಈ ಜನಾಂಗಿಕ ಸಮಸ್ಯೆಯನ್ನು ಪೂರ್ಣವಾಗಿ ಪರಿಹರಿಸುತ್ತೇವೆನ್ನುವುದು ಸಾಧ್ಯವಿಲ್ಲ. ಆದರೂ ಅನುವಾದ ಮಾಡುವಾಗ ಮಧ್ಯದ ಕಂದಕವನ್ನು ಆದಷ್ಟು ಮುಚ್ಚಲು ಪ್ರಯತ್ನಿಸಬೇಕು.

**5. ಕಾವ್ಯದ ಅನುವಾದದ ತೊಡಕುಗಳು**

ಕಾವ್ಯನುವಾದದಲ್ಲಿ ಮೂಲಕಾವ್ಯದಲ್ಲಿರುವ ಭಾವ ಸಂಪತ್ತು, ಲಯ, ಪ್ರಾಸ, ಅಲಂಕಾರಗಳು, ವಿಶಿಷ್ಟ ಕಲ್ಪನೆ ಇವುಗಳು ಕೈಗೆ ಸಿಕ್ಕದೆ ನುಣುಚಿಕೊಳ್ಳುವ ಸಾಧ್ಯತೆ ಇರುವುದರಿಂದ ಅನೇಕ ತೊಡಕುಗಳನ್ನು ಎದುರಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕವಿತೆಯನ್ನು ಭಾಷಾಂತರಿಸಲು ಸಾಧ್ಯವಿಲ್ಲವೆಂದು ಜಾನ್‌ಸನ್ ತಿಳಿಸಿದರೆ, ತನ್ನ ಮೂಲದ ಸತ್ವ-ಸೌಂದರ್ಯವನ್ನು ಕಳೆದುಕೊಂಡು ಬಿಡುತ್ತದೆ ಎಂದು ಫ್ರಾಸ್ಟ್ ಹೇಳಿದ್ದಾನೆ. ಹಾಗೆಯೇ ಒಬ್ಬ ಹೀಬ್ರೂ ಕವಿ ಇದನ್ನು ನಲ್ಲೆಯನ್ನು ಪರದೆಯ ಮೂಲಕ ಚುಂಬಿಸುವ ಕ್ರಿಯೆಗೆ ಹೋಲಿಸಿದ್ದಾನೆ. ಅಂದ ಮಾತ್ರಕ್ಕೆ ಕಾವ್ಯಾನುವಾದ ಸಾಧ್ಯವೇ ಇಲ್ಲ ಎನ್ನುವ ಅರ್ಥವಲ್ಲ. ಇದೊಂದು ಕಷ್ಟಸಾಧ್ಯವಾದ ಒಂದು ಕ್ರಮ. ಮೂಲತಃ ಸತ್ವ - ಸೌಂದರ್ಯಗಳನ್ನು, ಶಬ್ದಗಳ ಸಂಯೋಜನೆಯಿಂದ ಹೊರಡುವ ನಾದವನ್ನು ಭಾಷಾಂತರದಲ್ಲಿ ಕಾಪಾಡಿಕೊಂಡು ಬರಬೇಕು. ಕೆಲವೊಮ್ಮೆ ಸನ್ನಿವೇಶವನ್ನು, ಕ್ಷೇತ್ರೀಯ ಆವರಣದ ಭವ್ಯತೆಯನ್ನು ಭಾಷಾಂತರಿಸಲು ಸಾಧ್ಯವಾಗದೇ ಹೋಗಬಹುದು. ಪ್ರಾಸದ ವಿಚಾರದಲ್ಲೂ ಕೂಡ ಅಂತಹ ತಲೆಕೆಡಿಸಿಕೊಳ್ಳಬೇಕಾಗಿಲ್ಲ. ಅನಾಯಾಸವಾಗಿ ಸಹಜವಾಗಿ ಸಾಧಿತವಾದಲ್ಲಿ ಮಾತ್ರ ಪ್ರಾಸ ಉಳಿಸಿಕೊಳ್ಳಬಹುದು. ಭಾಷಾಂತರ ಯಶಸ್ವಿಯಾಗಬೇಕಾದರೆ ಅದರಲ್ಲಿ ಯಥಾರ್ಥತೆ, ವಾಚನೀಯತೆ, ಶೈಲಿ, ಮತ್ತು ಅವಧಾರಣೆ ಇರಬೇಕು.

ಯಥಾರ್ಥತೆ ಎಂದಾಗ ಮುಖ್ಯವಾಗಿ ಮೂಲ ಲೇಖಕ ಸೂಚಿಸದೇ ಇದ್ದುದನ್ನು ಭಾಷಾಂತರಕಾರ ಹೇಳಲು ಹೋಗಬಾರದು ಎನ್ನುವುದು ಮುಖ್ಯ. ಮೂಲದ ಭಾವವನ್ನು ಸೆರೆಹಿಡಿಯುವುದಲ್ಲದೆ, ಛಂದಸ್ಸು, ಪ್ರಾಸ, ಲಾಲಿತ್ಯಗಳ ಬಗ್ಗೆಯೂ ಗಮನವಿರಬೇಕು. ಉದಾಹರಣೆಗೆ-

Twinkle Twinkle litle star
How I wonder what you are!
Up above the world so high
Like a diamond in the sky.

ಅನುವಾದ (1) -

" ಮಿನುಗಲೆ ಮಿನುಗಲೆ ನಕ್ಷತ್ರ
ನನಗಿದು ಚೋದ್ಯವು ಬಲುಚಿತ್ರ
ಗಗನದಿ ಬಲು ದೂರದಲಿ
ಮಿನುಗುವೆ ವಜ್ರಾಕಾರದಲಿ"

ಅನುವಾದ (2) -

"ಮಿರುಮಿರುಗುವೆ ಹಾ ಕಿರುತಾರೆಯೆ
ಅರಿಯೆನು ನಾನೆಲೆ ನೀನಾರೊ
ಧರೆಗಿಳಿಯದೆ ನೀನಿರುತಿಹೆ ದೂರದಿ
ನೆರೆ ಹೊಳೆಯುವ ವಜ್ರದ ತೆರದಿ"

ಈ ಎರಡೂ ಅನುವಾದಗಳಲ್ಲಿ ಯಥಾರ್ಥತೆಯನ್ನು ಉಳಿಸಿಕೊಂಡು ಬಂದಿರುವುದನ್ನು ನಾವು ಕಾಣಬಹುದು. ಇದಕ್ಕೆ ಹೊರತಾಗಿರುವ ಉದಾಹರಣೆ ಎಂದರೆ,

"ನವ ಖಲಿಯ ನೆತ್ತರಿನ ಕಣ್ಣ ತೊಳೆದು ......" (ಕೆ. ಎಸ್. ನರಸಿಂಹಸ್ವಾಮಿ - ಗಾಂಧೀಜಿ ಪಾದಕ್ಕೆ) ಅನುವಾದ "ನೋ ಅಬಾಲಿಕೆಕೆ ರಕ್ತ್‌ಸೇ ಅಂಖೇ ಧೋಕರ್" ಅಂದರೆ ನರಬಲಿಯ ರಕ್ತದಿಂದ ಕಣ್ಣುಗಳ ತೊಳೆದು ಎಂಬ ಮೂಲರ್ಥಕ್ಕೆ ವಿರುದ್ಧವಾಗಿ ಭಾಷಾಂತರಿತವಾಗಿದೆ. ಇದು ಆಗಬಾರದು.

ವಾಚನೀಯತೆ ಇದ್ದಾಗಲೇ ಭಾಷಾಂತರ ಸಾರ್ಥಕವಾಗುವುದು. ಯಥಾವತ್ತಾಗಿ, ವಿದ್ವತ್ ಪೂರ್ಣವಾಗಿ ಭಾಷಾಂತರಿಸಿದರೆ ಸಾಲದು, ಅದು ಸುಲಭವಾಗಿ ಓದಿಸಿಕೊಂಡು ಹೋಗಬೇಕು.

ಮೂಲ : "Little drops of water, little grains of sand,
Make the mighty occean, and the pleasant land,
That 'Unity' is strength' men will understand"

ಅನುವಾದ :

"ತುಂತುರ್ವನಿಯಂ ಬಲ
ಮತಾಂಬುಧಿಯಕ್ಕುಮಲ್ಪ ಸೈಕತ ಕಣದಿಂ!
ಸಂತಸದಿಳೆಯಕ್ಕು! ಜನ
ಯಿಂತಿಹುದೇ ಸಂಘ ಶಕ್ತಿ; ಕಲಿಯುಕ್ಕ ॥

ಈ ರೀತಿಯಾಗಿ ಭಾಷಾಂತರಿಸುವುದರಿಂದ ಉದ್ದೇಶ ಸಾರ್ಥಕವಾಗುವುದಿಲ್ಲ. ಮೂಲ ತುಂಬಾ ಸರಾಗವಾಗಿ ಓದಿಸಿಕೊಂಡು ಹೋದರೆ ಹಳಗನ್ನಡದಲ್ಲಿ ಮಾಡಿದ ಭಾಷಾಂತರ ಎಡವಿ ಮುಗ್ಗರಿಸಿಕೊಂಡು ಹೋಗುತ್ತದೆ. ಇದರಲ್ಲಿ

ವಾಚನೀಯತೆ ಇಲ್ಲ. 'ಅದೇ ಪೈಡ್ ಪೈಪರ್ ಆಫ್ ಹ್ಯಾಮಲಿನ್'ನ್ನು 'ಬೊಮ್ಮನ ಹಳ್ಳಿಯ ಕಿಂದರ ಜೋಗಿ' ಕನ್ನಡಕ್ಕೆ ರೂಪಾಂತರಿಸಿ ಎಲ್ಲರ ನಾಲಿಗೆಯ ತುದಿಯಲ್ಲಿ ನಲಿಯುವಂತೆ ಮಾಡಿದರು ಕುವೆಂಪುರವರು. ಈ ರೀತಿಯ ವಾಚನೀಯತೆ ಇರಬೇಕು.

ಭಾಷಾಂತರದಲ್ಲಿ ಶೈಲಿಯನ್ನು ಕಾಪಾಡಿಕೊಳ್ಳುವುದು ಅತಿಮುಖ್ಯ. ಮೂಲದ ಉಪಮೆಗಳು; ಪದಾಂತಯತಿ; ಪ್ರಸಾದ ಗುಣ, ಅರ್ಥವ್ಯಕ್ತಮಾಡುವುದರ ಮೂಲಕ ಮೂಲದ ನಡೆ, ಶೈಲಿಯನ್ನು ಉಳಿಸಿಕೊಳ್ಳಬೇಕು.

ಮೂಲ : Lead kindly light, amid the encircling gloom
lead thou me on:

ಅನುವಾದ : ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ
ಕೈ ಹಿಡಿದು ನಡೆಸೆನ್ನನು,

ಈ ಅನುವಾದದಲ್ಲಿ ಬಿ. ಎಂ. ಶ್ರೀಯವರು ಮೂಲದ ಶೈಲಿಗೆ ಸ್ವಲ್ಪವೂ ಕುಂದು ಬರದಂತೆ ನೋಡಿಕೊಂಡಿದ್ದಾರೆ.

ಭಾಷಾಂತರದಲ್ಲಿ ಅವಧಾರಣೆ ಅಥವಾ ಒತ್ತುನೀಡುವುದು ಮುಖ್ಯ. ಛಂದಸ್ಸು, ಲಯ, ಪ್ರಾಸ, ಶಬ್ದಸ್ಥಾನ ಇವುಗಳಿಂದ ಅವಧಾರಣೆ ನಿಶ್ಚಯವಾಗುತ್ತದೆ.

| | |
|---|---|
| ಮೂಲ : "Alas for the rarity | ಭಾಷಾಂತರ : ಅಹ ಎಲ್ಲಡಗಿತೋ |
| of the christian charity | ಆರ್ಯಧರ್ಮದ ಕರುಣ |
| under the sun" | ಆರ್ಯ ಜನಗಳ ಮರುಕ |
| | ಉರಿಯುವನೆ ಬಲ್ಲ. |

'Christian charity' ಬದಲಿಗೆ 'ಆರ್ಯಧರ್ಮ' 'Sun' ಬದಲಿಗೆ 'ಉರಿಯುವವನು' ಎಂಬುದನ್ನು ಬಳಸಿ ಶ್ರೀಯವರು ಅವಧಾರಣೆಯನ್ನು ಪರಿಣಾಮಕಾರಿಯಾಗಿ ಮೂಡಿಸಿದ್ದಾರೆ. ಕಾವ್ಯದಲ್ಲಿ ಹಾಗೂ ಅದರ ಅನುವಾದದಲ್ಲಿ ಛಂದಸ್ಸಿನ ಅನಿವಾರ್ಯತೆ ಬಗ್ಗೆ ಡಾ : : ಪ್ರಧಾನ ಗುರುದತ್ತರವರು ಬಹಳ ವಿಚಾರಾತ್ಮಕವಾಗಿ ಹೀಗೆ ಹೇಳಿದ್ದಾರೆ. "ಛಂದಸ್ಸು ಕಾವ್ಯದ ಅನಿವಾರ್ಯ ಅಂಗವಲ್ಲವೆಂಬ ಭಾವನೆ ಇಂದು ಪ್ರಬಲವಾಗಿದ್ದರೂ ಕಾವ್ಯ ತನ್ನದೇ ಆದ ಆಂತರಿಕ ಲಯವೊಂದನ್ನು ಹೊಂದಿರುತ್ತದೆ. ಉತ್ತಮ ಗದ್ಯದಲ್ಲೂ ಇಂಥ ಆಂತರಿಕ ಲಯವೊಂದು ಇರಬಹುದಾದರೂ ಅದು ಕಾವ್ಯದಲ್ಲಿ ಎದ್ದುಕಾಣುವಂತೆ ಗದ್ಯದಲ್ಲಿ ಸ್ಫುಟವಾಗಿ ಕಾಣುವುದಿಲ್ಲ. ಇಷ್ಟಾಗಿಯೂ. ಕಾವ್ಯದ ಆಂತರಿಕ ವೈಶಿಷ್ಟ್ಯದಿಂದಾಗಿ ಸಹೃದಯ ಚೇತನ ಗದ್ಯವನ್ನು ಪದ್ಯದಿಂದ ಪರಿಷ್ಕರಿಸಬಲ್ಲದು. ಛಂದೋಬದ್ಧವಾದ ರಚನೆಯೆಲ್ಲವೂ ಹೇಗೆ ಕಾವ್ಯವಾಗುವುದಿಲ್ಲವೋ. ಹಾಗೆಯೇ. ಛಂದೋವಿರಹಿತವಾದ ರಚನೆಯೆಲ್ಲವೂ ಅಕಾವ್ಯವಾಗುವುದಿಲ್ಲವೆಂಬುದನ್ನು ಗಮನಿಸಬೇಕು. ಛಂದಸ್ಸಿನ ಕಾವ್ಯಕ್ಕೆ ಕೆಲವೊಂದು ಸೌಕರ್ಯಗಳು ದೊರೆಯುತ್ತವೆಂಬುದೇನೋ ನಿಜ. ನದಿಯ ಪ್ರವಾಹಕ್ಕೆ ದಡಗಳು ಹೇಗೆ ಅಗತ್ಯವೋ. ಹಾಗೆಯೇ ಭಾವಪ್ರವಾಹಕ್ಕೂ ಛಂದಸ್ಸು ಅಗತ್ಯವೆಂದು ಹೇಳುವುದುಂಟು. ಈ ಛಂದಸ್ಸಿಂ

ದಡಗಳು ಇಲ್ಲದೆ ಹೋದರೆ ಭಾವ ದಿಕ್ಕಾಪಾಲಾಗಿ ಹರಿಯುತ್ತದೆ. ಅದರಲ್ಲಿ ತೀವ್ರತೆಯಾಗಲೀ, ವೇಗವಾಗಲೀ, ಆಳವಾಗಲೀ ಇರುವುದಿಲ್ಲ. ಇದೇ ರೀತಿ ಭಾವ ಮತ್ತು ಛಂದಸ್ಸುಗಳನ್ನು ಬಾಣ ಮತ್ತು ಬಿಲ್ಲುಗಳಿಗೆ ಹೋಲಿಸುವುದುಂಟು. ಬಲಗೈಯಿಂದ ಎಸೆದ ಬಾಣ ನಿಶ್ಚಿತದೂರವನ್ನಾಗಲೀ, ಗುರಿಯನ್ನಾಗಲೀ ತಲುಪಲಾರದು. ಬಿಲ್ಲಿನಲ್ಲಿ ಹೂಡಿ. ಹೆದೆಯೇರಿಸಿ ಬಿಟ್ಟಾಗ ಅದು ಕರಾರುವಾಕ್ಕಾಗಿ ಗುರಿಯನ್ನು ತಲುಪುತ್ತದೆ. ನಿಶ್ಚಿತ ಪರಿಣಾಮವನ್ನುಂಟುಮಾಡುತ್ತದೆ. ಅಂತೆಯೇ, ಛಂದಸ್ಸೆಂಬ ಬಿಲ್ಲಿನಲ್ಲಿ ಹೂಡಿದ ಭಾವ ಬಾಣ ಸಹೃದಯ ಚೇತನವೆಂಬ ನಿಶ್ಚಿತ ಗುರಿಯನ್ನು ನಿಸ್ಸಂದೇಹವಾಗಿ ತಲುಪುತ್ತದೆ. (ನಾಗವಲ್ಲಿ: ಕಾವ್ಯದ ಅನುವಾದದ -ವಿಶಿಷ್ಟ ಸಮಸ್ಯೆಗಳು : ಪುಟ 205-206)

ಪದ್ಯದಲ್ಲಿ ಮೂಲದ ಭಾವವನ್ನು ತೀವ್ರವಾಗಿಯೂ, ಪರಿಣಾಮಕಾರಿಯಾಗಿಯೂ ಸಂವಹನಿಸಲು ಸಾಧ್ಯವಿದೆ. ದ್ವಿರುಕ್ತಿ, ಪುನರುಕ್ತಿ ತೊಡೆದು ಹಾಕಿರುವುದರಿಂದ ವಿಷಯವನ್ನು ಸಾರವತ್ತಾಗಿ ಮಂಡಿಸಬಹುದು. ಗದ್ಯದಲ್ಲಿ ಈ ಸೌಕರ್ಯವಿಲ್ಲ. ಕಾವ್ಯ ಮೇಲ್ಮಟ್ಟದ ಓದುಗರಿಗಾಗಿ ಇದ್ದು, ಗದ್ಯ ಅಷ್ಟು ಎತ್ತರಕ್ಕೆ ಏರಲಾರದ ಸಾಮಾನ್ಯರಿಗಾಗಿ ಇದೆ. ಆದ್ದರಿಂದ ಕಾವ್ಯವನ್ನು ಭಾಷಾಂತರಿಸುವಾಗ ಅದೇ ಎತ್ತರವನ್ನು ಕಾಪಾಡಿಕೊಳ್ಳಬೇಕಾಗುತ್ತದೆ.ಹಾಗೆಯೇ ''ಕವಿಗೆ ಮತ್ತೊಬ್ಬ ಕವಿಯೇ ಅತ್ಯುತ್ತಮ ಭಾಷಾಂತರಕಾರನಾಗಬಲ್ಲ'' ಎಂಬ ಮಾತು ಇದೆ. ಸ್ವಂತ ಕವಿಯಾದವನು ಮಾತ್ರ ಇನ್ನೊಬ್ಬ ಕವಿಯ ಹೃದಯವನ್ನು ಅರ್ಥಮಾಡಿಕೊಳ್ಳಬಲ್ಲ. ಇದಕ್ಕೆ ಉದಾಹರಣೆ ಬೇಂದ್ರೆಯವರ 'ಮೇಘದೂತ'(ಕಾಳಿದಾಸ)ದ ಭಾಷಾಂತರ ಹಾಗೂ ಪು. ತಿ. ನ. ರವರ 'ಫೌಸ್ಟ್'(ಗಯಟೆ)ನ ಅನುವಾದ. ಹಾಗೆಯೇ ಕವಿಯಾದವನು ಕಾವ್ಯವನ್ನು ಅನುವಾದಿಸುವಾಗ ಭಾವಾವೇಶಕ್ಕೆ ಒಳಗಾಗಿ ಮೂಲದ ಪರಿಧಿಯನ್ನು ದಾಟುತ್ತಾನೆ ಎಂಬ ಅಪಾದನೆಯೂ ಇದೆ. ಕವಿಯಲ್ಲದ ವ್ಯಕ್ತಿ ಅಧ್ಯಯನದಿಂದಾಗಿ ಉತ್ತಮ ಅನುವಾದ ಕೊಡುವ ಸಾಧ್ಯತೆಯೂ ಇದೆ.

ಹೀಗಾಗಿ, ಕಾವ್ಯಾನುವಾದ ಅಷ್ಟು ಸುಲಭ ಕ್ರಿಯೆಯಲ್ಲ. ಇದನ್ನು ಅನುವಾದಿಸುವಾಗ ಎದುರಾಗುವ ಹತ್ತಾರು ತೊಡಕುಗಳನ್ನು ನಿವಾರಿಸಿಕೊಂಡು ಉತ್ತಮ ಭಾಷಾಂತರವನ್ನು ನೀಡುವುದು ಕಷ್ಟಸಾಧ್ಯ. ಕನ್ನಡದಲ್ಲಿ ಬಿ. ಎಂ. ಶ್ರೀ.ಯವರು ಇದನ್ನು ಸಾಧಿಸಿ ತೋರಿಸಿದ್ದಾರೆ.

■

# ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಅನುವಾದ

ಕನ್ನಡ ಸಾಹಿತ್ಯ ತನ್ನ ಇತಿಹಾಸದುದ್ದಕ್ಕೂ ಭಾಷಾಂತರದಿಂದ ತುಷ್ಟಿ-ಪುಷ್ಟಿಗಳನ್ನು ವಿಶೇಷವಾಗಿ ಸಂಪಾದಿಸಿಕೊಂಡಿದೆ. ಹೊಸಗನ್ನಡ ನವೋದಯಕ್ಕೆ ಭಾಷಾಂತರ ಕೃತಿಗಳೇ ಪ್ರೇರಕ ಎನ್ನುವುದು ಪ್ರಸಿದ್ಧವಾದ ಸಂಗತಿ. ಆಧುನಿಕ ಕನ್ನಡ ಸಾಹಿತ್ಯದ ಪ್ರತಿಯೊಂದು ಪ್ರಕಾರವೂ ಭಾಷಾಂತರದಿಂದಲೇ ಮೊದಲಾಯಿತೆಂಬುದನ್ನು ಗಮನಿಸಬೇಕು. ಈ ಭಾಷಾಂತರ ಪ್ರವೃತ್ತಿ ನಮ್ಮಲ್ಲಿ ಅರ್ವಾಚೀನ ಕಾಲಕ್ಕೆ ಮಾತ್ರ ಸೀಮಿತವಲ್ಲ. ಅದು ಕನ್ನಡ ಸಾಹಿತ್ಯದಷ್ಟೆ ಹಳೆಯದು. ಕನ್ನಡ ಸಾಹಿತ್ಯ ತನ್ನ ಉಗಮಕಾಲದಿಂದಲೂ ಭಾಷಾಂತರ ಪರಂಪರೆಯನ್ನೊಳಗೊಂಡು ಸಾಗಿ ಬಂದಿದೆ. ಈ ಸಾಹಿತ್ಯ ಭಾಷಾಂತರದಿಂದಲೇ ಪ್ರಾರಂಭಗೊಂಡಿದ್ದರೂ ಆಶ್ಚರ್ಯವಿಲ್ಲ. ಆಧುನಿಕ ಯುಗದಲ್ಲಿ ಹೇಗೆ ಮುಖ್ಯವಾಗಿ ಇಂಗ್ಲಿಷ್‌ನಿಂದ ಅನುವಾದ ನಡೆದಿದೆಯೋ ಹಾಗೆಯೇ ಪ್ರಾಚೀನ ಕಾಲದಲ್ಲಿ ಸಂಸ್ಕೃತ-ಪ್ರಾಕೃತಗಳಿಂದ ಈ ಕಾರ್ಯ ನಡೆದಿದೆ. ಮುಖ್ಯವಾಗಿ ಸಂಸ್ಕೃತದಿಂದ ಕನ್ನಡಕ್ಕೆ ಅನುವಾದ ಕಾರ್ಯ ಯಥೇಚ್ಛವಾಗಿ ನಡೆದಿದೆ.

ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಪ್ರೇರಕ ಗುರು[1] ಎಂದಿದ್ದಾರೆ ಆಚಾರ್ಯ ಬಿ. ಎಂ. ಶ್ರೀ. ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯ ಮೊದಲಿಂದಲೂ ಸ್ಫೂರ್ತಿ ನೀಡಿದೆ ಎಂಬುದು ಸತ್ಯ. ಆದರೆ ದ್ರಾವಿಡ ಮೂಲದಿಂದ ಬಂದ ಕನ್ನಡ ಭಾಷೆಗೆ ಸ್ವಂತಿಕೆ ಇದೆ. ಕನ್ನಡಿಗರ ಬದುಕಲ್ಲಿ ತನ್ನತನವಿದೆ. ಸಂಸ್ಕೃತ ಎಷ್ಟೇ ಪ್ರಭಾವ ಬೀರಿದರೂ ಕನ್ನಡದ ಮೂಲಸತ್ವ ನಷ್ಟಗೊಳ್ಳಲಿಲ್ಲ. ಆರ್ಯ-ದ್ರಾವಿಡ ಸಂಸ್ಕೃತಿಗಳ ಸಂಗಮದಿಂದ ಒಂದು ವಿಶಿಷ್ಟ ಸಂಸ್ಕೃತಿ ಕನ್ನಡ ರೂಪದಲ್ಲಿ ಬೆಳೆದು ನಾಡುನುಡಿಗಳಿಗೆ ಸಮಗ್ರತೆಯನ್ನು ನೀಡಿದೆ. ಕನ್ನಡ ಕಾವ್ಯಗಳ ಬಗ್ಗೆ ಗ್ರಿಯರ್ಸನ್‌ನ ಹೇಳಿಕೆ ಬಹಳ ಅಪಾಯಕಾರಿ ಅದುದು. "Nearly all the works which have been described seem to be either translations or imitations of Sanskrit:"[2] ಈ ಹೇಳಿಕೆ ಕನ್ನಡ ಸಾಹಿತ್ಯಕ್ಕೆ ಅಪಚಾರವೆಸಗುತ್ತದೆ. ಕನ್ನಡ ಸಾಹಿತ್ಯ ಇಷ್ಟು ಎತ್ತರಕ್ಕೆ ಬೆಳೆಯಲು ಕೇವಲ ಅನುವಾದ ಅನುಕರಣೆಯಿಂದ ಸಾಧ್ಯವಾಗುತ್ತಿರಲಿಲ್ಲ. ಅನುವಾದ ಟಾನಿಕ್ಕೇ ಹೊರತು ಆಹಾರವಲ್ಲ. ಕನ್ನಡ ಸಾಹಿತ್ಯ ಪ್ರಬುದ್ಧವಾಗಿರುವುದು, ಸಿದ್ಧಿ ಪಡೆದಿರುವುದು, ಹಿರಿಮೆ ಗರಿಮೆಗಳನ್ನು ಆರ್ಜಿಸಿರುವುದು ಸ್ವತಂತ್ರ ಸ್ವೋಪಜ್ಞ ರಚನೆಗಳಿಂದ. ಕನ್ನಡ ಕವಿಗಳು ಸ್ವಂತ ಪ್ರತಿಭೆ, ಸ್ವೋಪಜ್ಞತೆ, ಜೀವನಾನುಭವ, ದರ್ಶನಗಳನ್ನು ತಮ್ಮ ಕೃತಿಗಳಲ್ಲಿ ಮೆರೆಸಿದ್ದಾರೆ. ಇದಕ್ಕೆ ಪಂಪ, ರನ್ನ, ನಾಗಚಂದ್ರ ಹಾಗೂ ಕುಮಾರವ್ಯಾಸ ಅವರ ಕೃತಿಗಳನ್ನೇ ಉದಾಹರಣೆಗಾಗಿ ಕೊಡಬಹುದು. ಪಂಪನ ಕಾವ್ಯದಲ್ಲಿ ಹೊರಹೊಮ್ಮಿದ 'ಲೌಕಿಕ ದೃಷ್ಟಿ' ವ್ಯಾಸ ಮಹರ್ಷಿಗಳಲ್ಲಿ ಕಾಣಲು ಸಾಧ್ಯವೇ?

ರನ್ನನ ಸುಯೋಧನ ಹಾಗೂ ನಾಗಚಂದ್ರನ ರಾವಣ ಅವರ ಕಾವ್ಯಗಳಲ್ಲಿ ಪ್ರತಿನಾಯಕರು ಮಾತ್ರವಲ್ಲ, ದುರಂತ ನಾಯಕರೂ ಹೌದು. ಕುಮಾರವ್ಯಾಸನ ಕೃಷ್ಣಭಕ್ತಿ, ಕನ್ನಡ ಸಾಹಿತ್ಯ ವಿಶಿಷ್ಟ ರಸಘಟ್ಟಗಳಾದ ಶರಣ ಹಾಗೂ ದಾಸಸಾಹಿತ್ಯವನ್ನು ಮರೆಯುವಂತಿಲ್ಲ.

ಹೀಗೆ ಕನ್ನಡ ಕವಿಗಳು ಅನೇಕ ಸಾರಿ ಕತೆ ಅಥವಾ ವಸ್ತುವಿಗಾಗಿ ಸಂಸ್ಕೃತ ಸಾಹಿತ್ಯಕ್ಕೆ ಋಣಿಯಾಗಿದ್ದಾರೆ. ಬಹಳಷ್ಟು ಕಡೆ ಅವರ ಸ್ವತಂತ್ರ ಪ್ರತಿಭೆ, ಜೀವನಾನುಭವ, ಪ್ರಸ್ತುತ ನೋಡುತ್ತಿದ್ದ ಪರಿಸರ ಅವರ ಕಾವ್ಯವಾಹಿನಿಯನ್ನು ಮುನ್ನಡೆಸಿದೆ. ಈ ಕಾರಣಗಳಿಗಾಗಿಯೇ ಅವರು ಮಹಾಕವಿಗಳಾಗಿ ಶಾಶ್ವತ ಸ್ಥಾನಗಳಿಸಿರುವುದು. ಜೊತೆಗೆ ಭಾಷಾಂತರದ ಅಂಶವನ್ನು ಸಹ ತರುತ್ತಾರೆ. ಭಾಷಾಂತರದಲ್ಲೂ ಅವರು ಸ್ವಂತಿಕೆ ತೋರಿಸಿದ್ದಾರೆ. ಸಂಸ್ಕೃತದಿಂದ ಅವರ ಕಾವ್ಯಗಳಿಗೆ ವಸ್ತುರೀತಿ ಒದಗಿ ಬಂದರೂ, ಅವರು ತಮ್ಮದೇ ಆದ ಬಗೆಯಲ್ಲಿ ಬಳಸುತ್ತಾರೆ, ಉಸಿರು ತುಂಬುತ್ತಾರೆ. ಹೀಗಾಗಿ ಕನ್ನಡ ಕಾವ್ಯಗಳನ್ನು ಪರಿಮಿತದಲ್ಲಿ ಅನುವಾದಗಳು ಎಂದು ಕರೆಯಬಹುದೇ ವಿನಾ ಅವು ನಿಜವಾಗಿಯೂ ಸ್ವತಂತ್ರ ಕೃತಿಗಳೇ ಆಗಿವೆ. ಡಾ॥ ರಂ. ಶ್ರೀ. ಮುಗಳಿಯವರು ಆಡಿದ ಮಾತನ್ನು ಇಲ್ಲಿ ಗಮನಿಸಬೇಕು: ''ಗುರುವಿನಿಂದ ಪ್ರೇರಣೆ ಪೋಷಣೆಯನ್ನು ಪಡೆದ ಸತ್‌ಶಿಷ್ಯನು ತನ್ನ ರೀತಿಯಲ್ಲಿ ಬೆಳೆದು ಸ್ವತಂತ್ರ ವ್ಯಕ್ತಿಯಾಗುತ್ತಾನೆ. ಹಾಗೆ ಕನ್ನಡ ಸಾಹಿತ್ಯವೂ ಸಂಸ್ಕೃತ- ಸಾಹಿತ್ಯದಿಂದ ಪ್ರಾರಂಭದಿಂದಲೂ ಅನೇಕಾಂಶಗಳಲ್ಲಿ ಸ್ಫೂರ್ತಿ ಹೊಂದಿರುವುದಾದರೂ ತನ್ನ ಸ್ವತಂತ್ರ ವಿಕಾಸದಿಂದ ವೈಲಕ್ಷಣವನ್ನು ಪಡೆದಿರುತ್ತದೆ.[3] ಕನ್ನಡ ಸಾಹಿತ್ಯದಲ್ಲಿ ಭಾಷಾಂತರ ಪ್ರಕ್ರಿಯೆ ಸ್ವತಂತ್ರ ವಿಚಾರಗಳೊಡನೆ ಎಲ್ಲಾ ಕಡೆ ಕಂಡುಬರುತ್ತದೆ. ಭಾವಾನುವಾದ, ಶಬ್ದಾನುವಾದ, ವಿಸ್ತಾರಾನುವಾದ, ನಿಕಟ ಅನುವಾದ, ಸಂಗ್ರಹಾನುವಾದ, ಅಳವಡಿಕೆ ಮುಂತಾದ ಭಾಷಾಂತರ ಪ್ರಕಾರಗಳಿಗೆ ನಿದರ್ಶನಗಳನ್ನು ಕನ್ನಡ ಸಾಹಿತ್ಯದಲ್ಲಿ ಅಪಾರವಾಗಿ ಕಾಣಬಹುದು. ಕನ್ನಡ ಕವಿಗಳು ಕೇವಲ ಒಂದು ಆಕರಕ್ಕೆ ಸೀಮಿತವಾಗಿರದೆ ವರ್ಣನಾವಸರದಲ್ಲಿ ನಾನಾ ಮೂಲಗಳಿಂದ ಅನುವಾದಿಸುವ ಪ್ರವೃತ್ತಿಯನ್ನು ತೋರುತ್ತಾರೆ. ಉದಾಹರಣೆಗೆ ಪಂಪ ಕೇವಲ ವ್ಯಾಸರಿಂದ ಮಾತ್ರವಲ್ಲದೆ ಕಾಳಿದಾಸ, ಭಾರವಿ, ಭಟ್ಟನಾರಾಯಣ, ಮಾಘ, ಬಾಣ ಮುಂತಾದವರ ಕಾವ್ಯಭಾಗಗಳನ್ನು 'ಪಂಪ ಭಾರತ'ದಲ್ಲಿ ಸೇರಿಸಿದ್ದಾನೆ. ಇಂದಿನ ರೀತಿಯ ಭಾಷಾಂತರ ಅವರದಾಗಿರಲಿಲ್ಲ. ಹಿಂದಿನ ಕವಿಗಳು ಸ್ವತಂತ್ರವಾಗಿ ಕಾವ್ಯರಚನೆ ಮಾಡುತ್ತಿದ್ದೇವೆ ಎಂದು ತಿಳಿಯುತ್ತಿದ್ದರೆ ಹೊರತು ಅನುವಾದ ಮಾಡುತ್ತಿದ್ದೇವೆಂಬ ಭಾವನೆ ಅವರಿಗಿರಲಿಲ್ಲ. ಅವರಲ್ಲಿ ಕಂಡುಬರುವ ಅನುವಾದ ಅಪ್ರಜ್ಞಾಪೂರ್ವಕವಾಗಿ ಮೂಡಿದ್ದು ಎಂದು ಹೇಳಬಹುದು.

ಕನ್ನಡದ ಕಾವ್ಯರಚನೆಗೆ ಮೊದಲು ಶಾಸನಗಳಲ್ಲಿ ಕನ್ನಡದ ಬಳಕೆಯನ್ನು ಗಮನಿಸಬೇಕಾಗಿದೆ. ಇಂತಹ ಶಾಸನಗಳ ಮೇಲೂ 'ಸಂಸ್ಕೃತ ಭಾಷೆ'ಯ ಅಪರಿಮಿತ ಪ್ರಭಾವವನ್ನು ಗುರುತಿಸಬಹುದು. ಕನ್ನಡ ಭಾಷೆಯ ಮೊದಲ ಶಾಸನ 'ಹಲ್ಮಿಡಿ ಶಾಸನ'. ಬೇಲೂರಿನ ಬಳಿ ಹಲ್ಮಿಡಿ ಎಂಬ ಗ್ರಾಮದಲ್ಲಿ ಈ ಶಾಸನ ಸಿಕ್ಕಿದುದರಿಂದ ಇದಕ್ಕೆ 'ಹಲ್ಮಿಡಿ ಶಾಸನ' ಎಂದು ಹೆಸರು ಬಂದಿದೆ. ಇದರ ಕಾಲ ಕ್ರಿ. ಶ. 450. ಈ ತನಕ ಇದೇ ಅತ್ಯಂತ ಪ್ರಾಚೀನ ಶಾಸನ. ಅಳಕದಂಬನೆಂಬ ರಾಜನು ವಿಜ ಅರಸ ಎಂಬುವವನಿಗೆ ಎರಡು ಗ್ರಾಮಗಳನ್ನು ದಾನವಾಗಿ ಕೊಟ್ಟನೆಂಬುದೇ ಈ ಶಾಸನದ ವಿಷಯ.

ಆರಂಭದಲ್ಲಿ ಒಂದು ಸಂಸ್ಕೃತ ಶ್ಲೋಕವಿದೆ. ಮಿಕ್ಕ ಭಾಗವೆಲ್ಲ ಗದ್ಯದಲ್ಲಿದೆ. ಪ್ರೊ। ಕೆ. ವೆಂಕಟರಾಮಪ್ಪ ಅವರ ಮಾತುಗಳು ಈ ಸಂದರ್ಭದಲ್ಲಿ ನೆನಪಿಗೆ ಅರ್ಹವಾದುದು: ''ಇದರಲ್ಲಿ ಸಂಸ್ಕೃತದ ಪ್ರಯೋಗ ಹೆಚ್ಚು, ವಿಗಸಿಟ್ಟ ಹಾಗ ಇಪ್ಪತ್ತು ಕನ್ನಡ ಪದಗಳು ಮಾತ್ರ ಇದರಲ್ಲಿ ಕಂಡುಬರುತ್ತವೆ''. ಈ ಕಾಲಕ್ಕಾಗಲೇ ಕನ್ನಡದ ಮೇಲೆ ಸಂಸ್ಕೃತದ ವರ್ಚಸ್ಸು ಅಧಿಕವಾಗಿ ಬಿಟ್ಟಿರಬೇಕೆಂದು ಇದರಿಂದ ವ್ಯಕ್ತವಾಗುತ್ತದೆ.[4] ಸಂಸ್ಕೃತ ಭಾಷೆಯ ಪ್ರಭಾವ ವಲಯದಲ್ಲಿ ಕನ್ನಡ ಹೇಗಿದ್ದಿರಬಹುದೆಂಬುದನ್ನು ಈ ಶಾಸನದಿಂದ ಊಹಿಸಬಹುದು.

ಮತ್ತೊಂದು ಉಲ್ಲೇಖಿಸಬೇಕಾದ ಪ್ರಮುಖ ಶಾಸನ ಬಾದಾಮಿ ಶಾಸನ. ಇದರ ರಚನೆ ಕ್ರಿ. ಶ. 700. ಮಹಾವೀರ ಕಪ್ಪೆ ಅರಭಟ್ಟನ ಸ್ತೋತ್ರ ಶಾಸನವಿದು. ಈ ಶಾಸನದ ಪ್ರಾರಂಭದಲ್ಲಿ ಗದ್ಯ ಮತ್ತು ಸಂಸ್ಕೃತ ಶ್ಲೋಕವನ್ನು ಬಿಟ್ಟರೆ ಉಳಿದದ್ದು ತ್ರಿಪದಿಯಲ್ಲಿದೆ. ಇಲ್ಲಿನ ಸಹಜಸಿದ್ಧ ತ್ರಿಪದಿಯ ರಚನೆ ಗಮನಿಸಿದ ವಿದ್ವಾಂಸರು ಬಹಳ ಹಿಂದಿನಿಂದಲೂ ತ್ರಿಪದಿ ಬಳಕೆಯಲ್ಲಿರಬೇಕೆಂದು ಊಹಿಸಿದ್ದಾರೆ. ಈ ಶಾಸನದಲ್ಲಿ ಸಂಸ್ಕೃತ-ಕನ್ನಡ ಪದಗಳನ್ನು ಸಮಸಮವಾಗಿ ಬಳಸಲಾಗಿದೆ. ಪದ್ಯದ ಓಟ ಕಿವಿಗೆ ಇಂಪಾಗಿಯೂ ಇದೆ. ಈ ಶಾಸನ ಗಮನಿಸಿದರೆ ಕನ್ನಡ ಭಾಷೆ ಸಂಸ್ಕೃತ ಭಾಷೆಯ ಪ್ರಭಾವವಲಯದಿಂದ ತಪ್ಪಿಸಿಕೊಂಡು ತನ್ನ ಸ್ವಂತಿಕೆಯನ್ನು ಕಂಡುಕೊಳ್ಳಲು ಯತ್ನಿಸಿರುವುದನ್ನು ಕಾಣಬಹುದು.

ಪಂಪ ಮಹಾಕವಿಗೆ ಮೊದಲು ಸಂಸ್ಕೃತ ಸಾಹಿತ್ಯದಿಂದ ಪ್ರಭಾವಿತರಾದ ಕವಿಗಳ ಸಾಲಿಗೆ ಕ್ರಿ. ಶ. 845ರಲ್ಲಿದ್ದ 'ಅಸಗ' ಹಾಗೂ ಕ್ರಿ. ಶ. 900ರಲ್ಲಿದ್ದ ಒಂದನೆಯ ಗುಣವರ್ಮನನ್ನು ಹೆಸರಿಸಬಹುದು. ಅಸಗನ ಕಾವ್ಯಕೃತಿ 'ಕರ್ನಾಟಕ ಕುಮಾರಸಂಭವ ಕಾವ್ಯ' ಎಂಬುದನ್ನು ಜಯಕೀರ್ತಿ ತನ್ನ ಛಂದೋನುಶಾಸನದಲ್ಲಿ ಉಲ್ಲೇಖಿಸಿದ್ದಾನೆ. ಇದು ಕಾಳಿದಾಸನ 'ಕುಮಾರ ಸಂಭವ'ದ ಅನುವಾದವಾಗಿರಬಹುದು.[5] ಆದರೆ ಮೊದಲನೆಯ ಗುಣವರ್ಮ 'ಹರಿವಂಶ' 'ಭುವನೈಕ ವೀರ' 'ಶೂದ್ರಕ' ಎಂಬ ಕಾವ್ಯಗಳನ್ನು ಬರೆದಿರುವನೆಂದು ಆತನ 'ಶೂದ್ರಕ'ವು ಗಂಗರಾಜ ಎರೆಯಪ್ಪನ ಕಥೆಯನ್ನು ಸಮೀಕರಿಸಿಕೊಂಡ ಚಂಪೂಕಾವ್ಯವೆಂದೂ, ಸಿದ್ಧವಾಗಿರುವುದರಿಂದ, ಪ್ರಾಯಶಃ ಸಂಸ್ಕೃತ ಹಾಗೂ ಅನ್ಯ ಭಾಷೆಗಳಿಂದ ಕಾವ್ಯ ಸಂಪತ್ತನ್ನು ಕನ್ನಡದಂತಹ ದೇಸೀಯ ಭಾಷೆಗೆ ತರಲು ಈತನೇ ಅಸ್ತಿಭಾರ ಹಾಕಿರಬಹುದು.[6] ಕನ್ನಡದಲ್ಲಿ ಭಾಷಾಂತರ ಸರಣಿ ಸ್ವತಂತ್ರ ಸಾಹಿತ್ಯ ಸೃಷ್ಟಿಗೆ ದ್ವಿತೀಯ ವಾಹಿನಿ (Secondary)ಯಾಗಿ ನಡೆದು ಬಂದಿದೆ ಎಂದೂ, ಇಂದಿನ ನಿಯತವಾದ ಅರ್ಥದಲ್ಲಿ ಶುದ್ಧವಾದ ಭಾಷಾಂತರ ಕೃತಿಗಳು ಪ್ರಾಚೀನ ಸಾಹಿತ್ಯದಲ್ಲಿ ಇಲ್ಲ ಎನ್ನುವಷ್ಟು ವಿರಳವೆಂದೂ ಹೇಳಬೇಕಾಗುತ್ತದೆ. ಸಂಸ್ಕೃತ-ಕನ್ನಡ ಸಂಬಂಧವನ್ನು ಕುರಿತು ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು ಆಡಿರುವ ಈ ನುಡಿಗಳು ಗಮನಾರ್ಹವಾಗಿವೆ: ''ಕನ್ನಡದಲ್ಲಿ ಗ್ರಂಥ ರಚನೆಯಾಗುವ ಹೊತ್ತಿಗೆ ಸಂಸ್ಕೃತವು ಸಮಗ್ರ ಭರತ ಖಂಡದ ಸಂಪರ್ಕಭಾಷೆಯಾಗಿ ಏರ್ಪಟ್ಟು ವಿಶೇಷವಾದ ಪ್ರಾಬಲ್ಯವನ್ನು ಪಡೆದಿತ್ತು. ಸಂಸ್ಕೃತ ಸಾಹಿತ್ಯವೇ ಕನ್ನಡ ಸಾಹಿತ್ಯ ರಚನೆಗೆ ಪ್ರೇರಕವೂ ಆಗಿತ್ತೆಂದು ಹೇಳಬಹುದು. ಕಾವ್ಯಕ್ಕೆ ತಕ್ಕ ವಿಷಯ ಯಾವುದು, ಅದನ್ನು ಕಾವ್ಯದಲ್ಲಿ ಯಾವ ರೀತಿಯಲ್ಲಿ ನಿರೂಪಿಸಬೇಕು ಎಂಬುದನ್ನು ಕನ್ನಡ ಕವಿಗಳು ಸಂಸ್ಕೃತ ಕವಿಗಳಿಂದ ಕಲಿತರು. ಕೆಲವರು ಸಂಸ್ಕೃತ ಪ್ರಾಕೃತ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿದರು. ಮತ್ತೆ ಕೆಲವರು ಕಾವ್ಯವಸ್ತುವನ್ನು ಸಂಸ್ಕೃತದಿಂದ ಸಂಗ್ರಹಿಸಿ ಹೊಸಕಾವ್ಯಗಳನ್ನು ರಚಿಸಿದರು. ಸಂಸ್ಕೃತ ಸಾಹಿತ್ಯವು ಕನ್ನಡ ಸಾಹಿತ್ಯ ಸಾಮಗ್ರಿಯ ಭಂಡಾರವಾದುದು ಮಾತ್ರವಲ್ಲದೆ ಕನ್ನಡ ಕವಿಗಳಿಗೆ ಕನ್ನಡಿಯೂ ಕೈದೀವಿಗೆಯೂ ಆಯಿತು.''

ಕನ್ನಡ ನಾಡಿನಲ್ಲಿ ನಡೆದ ವಿವಿಧ ಮತಪಂಥಗಳ ಮಂಥನದಿಂದ ಅಭಿವ್ಯಕ್ತಿಗೊಂಡ ನವೀನ ಸಾಮರಸ್ಯ ಕನ್ನಡ ಸಾಹಿತ್ಯದಲ್ಲಿ ಮೂಡಿಬಂದಿದೆ. ಪ್ರಾರಂಭದ ಶೈವ, ವೈಷ್ಣವ ಭಕ್ತಿಮಾರ್ಗಗಳು ನಂತರ ಬೌದ್ಧ-ಜೈನ ಧರ್ಮಗಳ ಪ್ರಭಾವ ಅದೇ ರೀತಿ ಶಂಕರ, ರಾಮಾನುಜ, ಮಧ್ವ ತತ್ವಗಳ ಪ್ರಭಾವವೇ ಕನ್ನಡ ಸಂಸ್ಕೃತಿಯ ಸಾರವಾಗಿದೆ. ಜೈನಧರ್ಮ ಕ್ರಿ. ಶ.ದ ಮೊದಲ ಶತಕಗಳಲ್ಲಿ ಕನ್ನಡ ನುಡಿಗೆ ಸಾಹಿತ್ಯದ ಪಟ್ಟ ನೀಡಿತು. ಕ್ರಿ. ಶ. 5-6ನೇ ಶತಮಾನದಿಂದ 12ನೇ ಶತಮಾನದವರೆಗೆ ಜೈನಧರ್ಮ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಮಹತ್ವದ ಕಾಣಿಕೆ ನೀಡಿದೆ. ನಂತರ ಈ ಸ್ಥಾನವನ್ನು ವೀರಶೈವ ಧರ್ಮ ಆಕ್ರಮಿಸಿಕೊಂಡಿತು. ವೀರಶೈವ ಮಧ್ವಮತಗಳ ಸಮನ್ವಯದಿಂದ ಉಂಟಾದ ವೈವಿಧ್ಯವನ್ನು ಕನ್ನಡ ಭಾಷೆ ಹೊರತು ದಕ್ಷಿಣ ಭಾರತದ ಇತರ ಭಾಷೆಗಳಲ್ಲಿ ಕಾಣಲಾರೆವು. ಮರಾಠಿ ಸಾಹಿತ್ಯದಲ್ಲಿ ಭಕ್ತಿಮಾರ್ಗದ ಪ್ರಭಾವ ಕಾಣುತ್ತದೆ. ಗುಜರಾತಿಯಲ್ಲಿ ಜೈನಗ್ರಂಥಗಳಿವೆ. ಆದರೆ ಕನ್ನಡದ ಜೈನ ಪರಂಪರೆ ಅಲ್ಲಿಲ್ಲ. ಹಿಂದಿ ಸಾಹಿತ್ಯದಲ್ಲಿ ರಾಮಾಯಣ, ಮಹಾಭಾರತ, ಭಾಗವತಗಳ ಪ್ರೌಢ ಅಥವಾ ಸರಳ ಅನುವಾದ ಕಾಣುತ್ತದೆ. ಕನ್ನಡ ಸಾಹಿತ್ಯ ಈ ಎಲ್ಲಾ ಭಾಷಾ ಸಾಹಿತ್ಯಗಳ ಗುಣಲಕ್ಷಣಗಳನ್ನು ಹೊಂದಿದ್ದರೂ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದೆ.

ಕನ್ನಡ ಸಾಹಿತ್ಯದ ಗ್ರಂಥರೂಪ, ಛಂದಸ್ಸು, ಶೈಲಿಗಳೂ ಕೂಡ ವಿವಿಧವಾಗಿದ್ದು ವಿಲಕ್ಷಣವಾಗಿವೆ. ಬೆದಂಡೆ-ಚತ್ತಾಣದಂತಹ ಹಳೆಯ ಕಾವ್ಯರೂಪಗಳ ಜೊತೆಗೆ ಶತಕ-ಅಷ್ಟಕಗಳಲ್ಲಿ ಸಂಸ್ಕೃತದ ಪ್ರಭಾವವನ್ನು ಗುರುತಿಸಬಹುದು. ತ್ರಿಪದಿ, ರಗಳೆ, ಷಟ್ಪದಿ, ಸಾಂಗತ್ಯ, ವಚನ, ಕೀರ್ತನೆಗಳಲ್ಲಿ ಕನ್ನಡತನವನ್ನು ಗುರುತಿಸಬಹುದಾಗಿದೆ. ಮಾರ್ಗ-ದೇಸಿ. ಸಂಸ್ಕೃತ-ಕನ್ನಡ ಈ ಕಾವ್ಯ ಪ್ರಭೇದಗಳಿಂದ ಸಮನ್ವಯವನ್ನು ಸಾಧಿಸಿ ಹೊಸಶೈಲಿಯ ಸೃಷ್ಟಿಯಾಗಿದೆ. ಹಳಗನ್ನಡ ಸಾಹಿತ್ಯದಲ್ಲಿ ವೈವಿಧ್ಯತೆ ಸಾಕಷ್ಟು ಇದ್ದರೂ ಸಂಪ್ರದಾಯ ಶರಣತೆ ಇದೆ. ಆದರೆ ಹೊಸಗನ್ನಡ ಸಾಹಿತ್ಯ ಸ್ವತಂತ್ರ ಸಾಮಾಜಿಕ ಶಕ್ತಿಯಾಗಿ ಬೆಳೆಯುತ್ತಿದೆ. ಇಂದು ಗ್ರಂಥಕರ್ತರ ಸಂಖ್ಯೆ ಸಾವಿರಕ್ಕೂ ಮಿಗಿಲಾಗಿ ಬೆಳೆದಿದೆ.

18ನೆಯ ಶತಮಾನದಲ್ಲಿ ನಾಡಿನ ಕೆಲವು ಭಾಗಗಳಿಗೆ ಮಾತ್ರ ಸೀಮಿತವಾದ ವಾಙ್ಮಯ ಕ್ಷೇತ್ರ ಹತ್ತೊಂಬತ್ತನೇ ಶತಮಾನದ ಹೊತ್ತಿಗೆ ರಾಜ್ಯದ ಮೂಲೆಮೂಲೆಗೆ ವ್ಯಾಪಿಸಿರುವುದಲ್ಲದೆ ಹೊರನಾಡಿಗೂ ಹರಡಿತು. ಸಾಹಿತ್ಯ ನಿರ್ಮಿತಿಗೆ ಸಂಸ್ಕೃತ ಮತ್ತು ಇಂಗ್ಲಿಷ್ ಸಾಹಿತ್ಯದ ನೆರವಲ್ಲದೆ ಪ್ರಾಕೃತ. ತಮಿಳು, ಮರಾಠಿ, ಬಂಗಾಳಿ, ತೆಲುಗು ಮೊದಲಾದ ಭಾಷೆಗಳ ನೆರವೂ ದೊರೆಯಿತು. ಸಾಹಿತ್ಯ ಕೃಷಿಯಲ್ಲಿ ರಾಜರು, ಮಠಾಧೀಶರು, ದಾಸರು, ಶರಣರು, ವಿದೇಶೀಯರು, ಶಿಕ್ಷಕರು, ಅಧಿಕಾರಿಗಳು, ರಸಿಕರು -ಹೀಗೆ ನಾನಾ ವರ್ಗದ ಜನರು ಭಾಗವಹಿಸಿ ಕನ್ನಡ ಸಾಹಿತ್ಯಕ್ಕೆ. ವಿಶಾಲ ಭೂಮಿಕೆಯನ್ನು ಸಿದ್ಧಪಡಿಸಿದ್ದಾರೆ. ಇಂತಹ ಹೊಸಗಾಳಿ ಭಾರತದಲ್ಲೆಲ್ಲಾ ಬೀಸಿದಂತೆ ಕನ್ನಡ ನಾಡಿನಲ್ಲೂ ಬೀಸಿದೆ. ಇದರ ಫಲವೇ ಸಾಹಿತ್ಯದಲ್ಲಿ 'ನವೋದಯದ'ದ ಚಿಲುಮೆ ಉಕ್ಕಿ ಹರಿಯಿತು.

19ನೇ ಶತಮಾನದ ಕನ್ನಡ ಸಾಹಿತ್ಯ ಅನುವಾದ ಹಾಗೂ ಅನುಕರಣೆಗಳಿಂದ ಭಾಷಾಂತರ ಪ್ರಭೇದಗಳಿಂದ ಕೂಡಿದ್ದರೂ ಅವುಗಳಲ್ಲಿ ಹೊಸ ವಿಚಾರ ಹಾಗೂ ಹೊಸದೃಷ್ಟಿ ತೋರಿ ಆ ಕಾಲದ ಸ್ವತಂತ್ರ ಕೃತಿಗಳ ಜೊತೆಗೆ ಹೊಸಸ್ವರ

ಸಾಹಿತ್ಯದ ಬೆಳವಣಿಗೆಗೆ ಪುಷ್ಟಿ ನೀಡಿವೆ. ಈ ಕಾಲದ ಸಾಹಿತ್ಯದಲ್ಲಿ ಮನರಂಜನೆಗಿಂತಲೂ ಮುಖ್ಯವಾಗಿ ಲೋಕಶಿಕ್ಷಣ ಮುಖ್ಯ ಉದ್ದೇಶವಾಗಿತ್ತು. ಈ ಸದಾಚಾರದ ಬೋಧನೆಯಿಂದ ಜನರಿಗೆ ತಮ್ಮ ಸಂಸ್ಕೃತಿ ಪರಂಪರೆಯಲ್ಲಿ ಹೊಸತ್ವದ ಮೂಡಿಬಂತು. ಒಂದು ರೀತಿಯ ಸಾಮಾಜಿಕ ಧಾರ್ಮಿಕ ಜಾಗೃತಿ ಮೂಡಿಬಂತು. ಆ ಸಮಯದಲ್ಲಿ ಹುಟ್ಟಿದ ರಾಷ್ಟ್ರೀಯ ಆಂದೋಲನ, ರಾಷ್ಟ್ರೀಯತೆ, ಸ್ವಧರ್ಮ, ಸಂಸ್ಕೃತಿಗಳ ಬಗೆಗಿನ ಚಿಂತನೆ ಎಲ್ಲೆಡೆ ಬೆಳೆಯಿತು. ನಾಡಿನ ಇತಿಹಾಸ. ಜೀವನ ಚರಿತ್ರೆ, ಸಾಹಿತ್ಯ ಸೇವಾ ಕ್ಷೇತ್ರಕ್ಕೆ ಕರೆಯಿತ್ತ ಪ್ರಬಂಧಗಳು, ಧಾರ್ಮಿಕ ಗ್ರಂಥಗಳ ಅನುವಾದ. ಪರಿಷ್ಕೃತ ಪ್ರಕಟಣೆಗಳು, ಕೀರ್ತನೆಗಳು ಈ ಹೊಸತನಕ್ಕೆ ನೆರವಾದವು. ಸ್ವತಂತ್ರ ಕಾದಂಬರಿಗಳು, ನಾಟಕಗಳು, ಪ್ರಬಂಧಗಳು. ಪತ್ರಿಕೆಗಳು ಹಾಗೂ ಸಮಾಜ ಸುಧಾರಣೆಯ, ಆಡಳಿತ ನ್ಯಾಯಪದ್ಧತಿಗಳ ಪರಾಮರ್ಶೆಯ ಅನೇಕ ಗ್ರಂಥಗಳು ಈ ಕಾಲದಲ್ಲಿ ಹೊರಬಂದವು. ಅಲ್ಲದೆ ಭಾಷೆಯ ಬಳಕೆಯಲ್ಲೂ ತೀವ್ರ ಬದಲಾವಣೆಯಾಯಿತು. ಈ ಶತಮಾನದ ಕಡೆಯ ಒಂದೆರಡು ದಶಕಗಳಲ್ಲಿ ಶ್ರೀ ಚಾಮರಾಜ ಒಡೆಯರ್‌ರವರ ಪ್ರೋತ್ಸಾಹದಿಂದಾಗಿ, ಕೆಲವು ವ್ಯಕ್ತಿಗಳ ಹುಮ್ಮಸ್ಸಿನಿಂದ ಕನ್ನಡಕ್ಕೆ ಸಂಸ್ಕೃತ ಹಾಗೂ ಇಂಗ್ಲಿಷ್ ಭಾಷೆಯಿಂದ ಉತ್ತಮ ಭಾಷಾಂತರ ಕೃತಿಗಳು ಬಂದವು. ಹಾಗೆಯೇ ಕೆಲವು ಹಿರಿಯರ ಪ್ರಾಮಾಣಿಕ ಪ್ರಯತ್ನದಿಂದ ಬಂಗಾಳಿ ಹಾಗೂ ಮರಾಠಿ ಭಾಷೆಯಿಂದಲೂ ಕೆಲವು ಕೃತಿಗಳೂ ಭಾಷಾಂತರಗೊಂಡವು.

ಇಪ್ಪತ್ತನೆಯ ಶತಮಾನದ ಆರಂಭ ಅಂದರೆ 1830-1920ರವರೆಗೆ ಕನ್ನಡ ಸಾಹಿತ್ಯ ಧೋರಣೆಯಲ್ಲಾದ ಬದಲಾವಣೆಗಳಿಂದಾಗಿ ಹೊಸಗನ್ನಡ ಸಾಹಿತ್ಯ ಉಗಮ ಮತ್ತು ವಿಕಾಸಕ್ಕೆ ನಾಂದಿಯಾಯಿತು. ಹಳಗನ್ನಡದ ಕಾವ್ಯರೂಪಗಳಾದ ಚಂಪೂ, ಕಂದ, ಷಟ್ಪದಿ, ಸಾಂಗತ್ಯ ರೂಪಗಳು ಹುಟ್ಟಿಕೊಂಡವು. ಜೈನ-ವೀರಶೈವ ಹಾಗೂ ಬ್ರಾಹ್ಮಣರೆಂಬ ಮತದ ಆಧಾರದ ಮೇಲೆ ಕಾವ್ಯ ಹಾಗೂ ಕವಿಗಳ ವಿಭಜನೆ ನಿಂತುಹೋಯಿತು. ಸಂಸ್ಕೃತ ಕಾವ್ಯ-ಶಾಸ್ತ್ರಗಳ ಅಭ್ಯಾಸ ಸೀಮಿತವಾಯಿತು. ಅದರ ಸ್ಥಾನದಲ್ಲಿ ಪಾಶ್ಚಾತ್ಯ ಭಾಷೆಗಳು ಪ್ರಾಮುಖ್ಯವೆನಿಸಿದವು. ವಿಶೇಷವಾಗಿ 'ಇಂಗ್ಲಿಷ್' ಮುಖ್ಯವೆನಿಸಲಾರಂಭಿಸಿತು. ಬೇರೆ ಕಾರಣಗಳಿಂದ ಭಾರತಕ್ಕೆ ಬಂದ ಪಾಶ್ಚಾತ್ಯ ವಿದ್ವಾಂಸರು ಇಲ್ಲಿನ ಶಾಸನ. ಜಾನಪದ ಹಾಗೂ ಭಾಷೆಗಳ ಬಗ್ಗೆ ಸಹಜ ಒಲವು ಬೆಳೆಸಿಕೊಂಡು ಅದರ ಬೆಳವಣಿಗೆಗೆ ಅನನ್ಯ ಕಾಣಿಕೆ ನೀಡಿದರು.

ಕನ್ನಡದ ಮೊದಲ ಉಪಲಬ್ಧ ಗ್ರಂಥ 'ಕವಿರಾಜಮಾರ್ಗ'. ಇದರ ಕರ್ತೃ ರಾಷ್ಟ್ರಕೂಟರ ಮಹಾನ್ ಚಕ್ರವರ್ತಿ ನೃಪತುಂಗ ದೇವನ ಆಶ್ರಯದಲ್ಲಿದ್ದ ಶ್ರೀವಿಜಯ. ಇದರ ಕಾಲ 9ನೇ ಶತಮಾನ. ಈ ಗ್ರಂಥ ಸಂಸ್ಕೃತ ಭಾಷೆಯ ದಂಡಿಯ 'ಕಾವ್ಯಾದರ್ಶ' ಎಂಬ ಗ್ರಂಥದ ಅನುವಾದ. ಆದರೆ ಅನುವಾದ ಪರಿಭಾಷೆಯಲ್ಲಿ ಹೇಳಬೇಕಾದರೆ ಇದನ್ನು ನೇರ ಅನುವಾದವೆಂದು ಹೇಳಲಾಗುವುದಿಲ್ಲ. ಇದೊಂದು ರೂಪಾಂತರ. ಕವಿರಾಜಮಾರ್ಗಕಾರ ಸಮಕಾಲೀನ ಕರ್ನಾಟಕದ ಪರಿಸ್ಥಿತಿ. ಭೌಗೋಳಿಕ ವರ್ಣನೆ, ಜನಜೀವನ ಹಾಗೂ ಅವರ ಸಾಹಿತ್ಯಾಸಕ್ತಿಯ ಬಗ್ಗೆ ಅಪೂರ್ವ ಮಾಹಿತಿಗಳನ್ನು ತನ್ನ ಗ್ರಂಥದಲ್ಲಿ ಒದಗಿಸಿದ್ದಾನೆ.

ಸುಬಟರ್ಕಳ್ ಕಲಿಗಳ್
ಪ್ರಭುಗಳ್ ಚೆಲ್ವರ್ಕಳ್ ಅಭಿಜನರ್ಕಳ್ ಗುಣಿಗಳ್
ಅಭಿಮಾನಿಗಳತ್ಯುಗ್ರ
ಗಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್

ಈ ಪದ್ಯ ಕನ್ನಡ ಸಂಸ್ಕೃತಿ ಸದ್ಗುಣಗಳನ್ನು ಅತ್ಯಂತ ಸಮರ್ಪಕವಾಗಿ ಹಿಡಿದಿಟ್ಟಿದೆ. ಕನ್ನಡ ಭಾಷೆಯಲ್ಲಿ ಆ ತನಕ ಕೃಷಿ ಮಾಡಿದ್ದ ಗದ್ಯ-ಪದ್ಯಕಾರರ ಕವಿಗಳ ಹೆಸರು, ಚತ್ತಾಣ-ಬೆದಂಡೆ ಎಂಬ ಕಾವ್ಯ ರೂಪಗಳು, ಕನ್ನಡ ವ್ಯಾಕರಣಕ್ಕೆ ಸಂಬಂಧಪಟ್ಟಂತೆ ಕೆಲವು ನಿಯಮಗಳು, ಛಂದಸ್ಸು ವಿಷಯ ಮೊದಲಾದ ವಿಶೇಷಾಂಶಗಳಿಂದ 'ಕವಿರಾಜ ಮಾರ್ಗ' ಅನೇಕ ಸಾರಿ ಸ್ವತಂತ್ರ ಕೃತಿಯೆಂಬಷ್ಟು ಮಹತ್ವ ಪಡೆದಿದೆ. ಕವಿಭಾವದಿಂದ ನಿರ್ಮಿತವಾದ ಅನೇಕ ಬಗೆಗಳಲ್ಲಿರುವ (ಗದ್ಯ-ಪದ್ಯ) ವೈಶಿಷ್ಟ್ಯಪೂರ್ಣವಾದ ಶಬ್ದ ವಿವಿಧಾರ್ಥಗಳನ್ನು ಬಿಂಬಿಸುವ, ಅಲಂಕಾರಗಳಿಂದ, ಲಕ್ಷಣಗಳಿಂದ ಈ ಕೃತಿಯೇ ಒಂದು ಕಾವ್ಯವಾಗಿದೆ. ಇಂತಹ ಸಂದರ್ಭಗಳಲ್ಲಿ ಕವಿರಾಜಮಾರ್ಗಕಾರ ದಂಡಿಭಾಮಹ ಮೊದಲಾದವರನ್ನು ಮೀರಿ ಮುಂದ ಹೋಗುತ್ತಾನೆ. ಪ್ರಾಯಶಃ ಶ್ರೇಷ್ಠ ಅನುವಾದದ ಕೃತಿ ಕೆಲವೊಮ್ಮೆ ಮೂಲಕ್ಕಿಂತ ಉತ್ತಮ ಗುಣ ಹಾಗೂ ವಸ್ತುವಿಷಯ ಪ್ರತಿಬಿಂಬಿಸುವ ಕೆಲಸ ಮಾಡುತ್ತದೆಂಬುದಕ್ಕೆ 'ಕವಿರಾಜಮಾರ್ಗ' ಸಾಕ್ಷಿಯೆನಿಸುವ ಗ್ರಂಥವಾಗಿದೆ.''[7] 'ಕವಿರಾಜಮಾರ್ಗ'ವು ಸಂಸ್ಕೃತ ಕವಿಗಳಿಂದ ಸ್ಫೂರ್ತಿ ಪಡೆದುದು. ವಿಶೇಷವಾಗಿ ದಂಡಿ-ಭಾಮಹರಿಂದ ಉಪಕೃತವಾದುದು ನಿಜ. ದಂಡಿಯ ಕಾವ್ಯಾದರ್ಶವನ್ನು ಅನುವಾದಿಸಿದ್ದು ನಿಜ. ಆದರೂ ಇಲ್ಲಿ ಸ್ವತಂತ್ರತೆಗೆ ಬಾಧೆಯಿಲ್ಲ. ಒಂದನೆಯ ಎರಡನೆಯ ಪರಿಚ್ಛೇದಗಳ ಒಟ್ಟು ಪದ್ಯಗಳಲ್ಲಿ ಸುಮಾರು ಮೂರು-ನಾಲ್ಕಾಂಶದಷ್ಟು ಮೂಲದಿಂದ ಭಿನ್ನವಾಗಿದೆ. 3ನೆಯ ಪರಿಚ್ಛೇದದಲ್ಲಿ 'ಕಾವ್ಯದರ್ಶ'ದ ಅನುಕರಣವು ಹೆಚ್ಚಿದೆ. ಒಟ್ಟು 231 ಪದ್ಯಗಳಲ್ಲಿ ಸುಮಾರು 98 ಸ್ವತಂತ್ರ ಪದ್ಯಗಳು, 2 ಮೂಲ ವ್ಯತ್ಯಾಸವುಳ್ಳ ಪದ್ಯಗಳು ಇವೆ. ಅಲಂಕಾರಶಾಸ್ತ್ರ ಭಾಗದಲ್ಲಿ ವಿಶೇಷವಾಗಿ ಲಕ್ಷಣ ನಿರೂಪಣೆಯಲ್ಲಿ ಸಾಮಾನ್ಯವಾಗಿ ದಂಡಿ-ಭಾಮಹರ ಅನುವಾದವಿರುವುದಾದರೂ ಲಕ್ಷ್ಯಪದ್ಯಗಳಲ್ಲಿ ಸ್ವತಂತ್ರ ರಚನೆಯಿಲ್ಲದೆ ಉದ್ಧೃತಿಯೂ ಮೂಲ ವ್ಯತ್ಯಾಸವು ಇಲ್ಲದೆ ವಿಸ್ತಾರವೂ ಕಂಡುಬಂದಿದೆ.[8] ಕವಿರಾಜಮಾರ್ಗದ ಪ್ರಾರ್ಥನಾ ಪದ್ಯವೇ ದಂಡಿಯ ಭಾಷಾಂತರ ಅಥವಾ ರೂಪಾಂತರವಾಗಿದೆ:

ದಂಡಿ : ಚತುರ್ಮುಖ ಮುಖಾಂಭೋಜವನಹಂಸ ವಧೂರ್ಮಮ
ಮಾನಸೇ ರಮತಾಂ ನಿತ್ಯಂ ಸರ್ವಶುಕ್ಲಾ ಸರಸ್ವತೀ (1-1)

ಕವಿರಾಜಮಾರ್ಗ: ಶ್ರೀವಿಶದವರ್ಣೆ ಮಧುರಾ
ರಾವೋಚಿತೆ ಚತುರ ರುಚಿರ ಪದರಚನೆ ಚಿರಂ
ದೇವಿ ಸರಸ್ವತಿ ಹಂಸೀ
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್

ಮೂಲದ ವೈದಿಕ ಕಲ್ಪನೆ 'ಕವಿರಾಜಮಾರ್ಗ'ದಲ್ಲಿ ಮಾರ್ಪಟ್ಟಿರುವುದನ್ನು ಗಮನಿಸಬಹುದು. ಶ್ರೀವಿಜಯನು ಜೈನ ಮತಸ್ಥನಾದ ಕಾರಣ ಬೇರೊಂದು ಪದ್ಯದಲ್ಲಿ ಜಿನಸ್ತುತಿಯಿದೆ. ಮೂರನೆಯ ಪರಿಚ್ಛೇದ ಮೂಲದಲ್ಲಿ 'ಹರಿಪಾದಃ ಶಿರೋಲಗ್ನ' ಎಂಬ ಪದವು 'ಜಿನಚರಣನಖಾದರ್ಶನಂ' ಎಂಬುವಾಗಿ ಅನುವಾದವಾಗಿದೆ. ಕಾವ್ಯದಲ್ಲಿ ದೋಷವಿರಬಾರದು ಎಂದು ಹೇಳುವಲ್ಲಿ 'ಕವಿರಾಜಮಾರ್ಗ ಕಾರ' ದಂಡಿಯ ಶ್ಲೋಕವೊಂದನ್ನು ಅನುವಾದಿಸಿದ್ದಾನೆ. ಆದರೆ ಮೂಲ ಉಪಮಾನವನ್ನು ತ್ಯಜಿಸಿ ಹೊಸದೊಂದನ್ನು ಹಾಕಿದ್ದಾನೆ.

ದಂಡಿ : ತದ್ಪಲಮಪಿನೋವೇಕ್ಷ್ಯಂ ಕಾವ್ಯೋ ದುಷ್ಟಂ ಕಥಂಚನ।
ಸ್ಯಾದ್ವರು : ಸುಂದರಮಲು ಶ್ರೀತೇಣ್ಯೆಕೇನ ಧುರ್ಬಗಮಃ ॥ (1.7)

**ಕವಿರಾಜಮಾರ್ಗ** : ದೋಸಮೇನಾನು ಸ್ವಲ್ಪವೊಡೋರಂ
ಮಾಸಿಸಿರ್ಕುಮಣ ಕೃತಿಮಧುವಂ
ದುರ್ಜನದೊಳಾದ ಪರಿಚಯಂ ಪೇಸದೆ
ಮಾಸಿಸಿ ಕಿಡಿಸುವವೊಲ್ಲೊಪ್ಪುವ ಕುಲವಧುವಂ. (2.112)

ಕನ್ನಡದ ಮಹತ್ವದ ಗದ್ಯಕೃತಿ **ಶಿವಕೋಟ್ಯಾಚಾರ್ಯನ ವಡ್ಡಾರಾಧನೆ.** ಡಾ॥ ರಂ. ಶ್ರೀ. ಮುಗುಳಿಯವರು ವಡ್ಡಾರಾಧನೆಯ ಕಾಲವನ್ನು 'ಪೂರ್ವಯುಗ'ದ ಕೃತಿಯೆಂದು ಭಾವಿಸುತ್ತಾರೆ. ಸುಮಾರು 9ನೆಯ ಶತಮಾನದಲ್ಲಿ ಇದು ರಚಿತವಾಗಿರಬೇಕು. ಇದರಲ್ಲಿ 19 ಕತೆಗಳಿವೆ. ಸುಕುಮಾರಸ್ವಾಮಿಯ ಕಥೆಯಿಂದ ಪ್ರಾರಂಭವಾಗಿ ವೃಷಭಸೇನನ ಕಥೆಯವರೆಗ ವಿವಿಧ ಜೈನ ತೀರ್ಥಂಕರರ ಕತೆ ಇಲ್ಲಿದೆ. ಡಾ॥ ಆ. ನೇ. ಉಪಾಧ್ಯಾಯ ಅವರು ವಡ್ಡಾರಾಧನೆಯ ಕತೆಗಳಿಗೆ ಶೌರಸೇನೀ ಪ್ರಾಕೃತದ ಭಗವತೀ ಆರಾಧನೆ ಎಂಬುದನ್ನು ಮೂಲವೆಂದು ಸ್ಪಷ್ಟಪಡಿಸಿದ್ದಾರೆ. ಡಾ॥ ಹಂ. ಪ. ನಾಗರಾಜಯ್ಯ ಅವರು ವಡ್ಡಾರಾಧನೆ ಕೃತಿಯ ರಚನೆಗೆ ಮೂಲ ಪ್ರೇರಣೆ ಕುರಿತು ಹೀಗೆ ಬರೆಯುತ್ತಾರೆ: "ಭಗವತೀ ಆರಾಧನೆಯ ಮೇಲೆ ರಚಿತವಾದ ಸಂಸ್ಕೃತ - ಪ್ರಾಕೃತ ವಾಖ್ಯಾನಗಳನ್ನು ವಡ್ಡಾರಾದನೆ ಆಧರಿಸಿದೆ. ವಡ್ಡಾರಾಧನೆ ರಚಿತವಾದ ಕಾಲದಲ್ಲಿ ಸಂಸ್ಕೃತ ತನ್ನ ವೈಭವದ ಮುಗಿಲುಮುಟ್ಟಿ ಕಿರೀಟಧಾರಣೆ ಮಾಡಿತ್ತು. ಕನ್ನಡದಲ್ಲೂ ಶಾಸನಗಳಿಂದ ಹಿಡಿದು ಸಾಹಿತ್ಯದ ತನಕ ಎಲ್ಲಾ ಗ್ರಂಥಗಳಲ್ಲಿಯೂ ಸಂಸ್ಕೃತಭೂಯಿಷ್ಠವಾದ ಗದ್ಯ-ಪದ್ಯ ರಚನೆಯೇ ಬಹುರೂಪಿಯಾಗಿ ಬೇರುಬಿಳಲು ಬಿಟ್ಟಿತ್ತು. ಕಡೆಗೆ ಚಂಪೂ ಕಾವ್ಯಗಳಲ್ಲೂ ಅದರ ಮಧ್ಯೆ ಬರುವ ಗದ್ಯದಲ್ಲೂ ಸಂಸ್ಕೃತ ಕನ್ನಡದ ಮೇಲೆ ಸವಾರಿ ನಡೆಸಿತ್ತು. ಆದರೆ ವಡ್ಡಾರಾಧನೆಯ ಗದ್ಯವೆಂದರೆ ಸಂಸ್ಕೃತ - ಕನ್ನಡಗಳ ಹದವರಿತ ಹಿತಮಿತವಾದ ಸಮ್ಮಿಲನವನ್ನು ಸಾರುವ ಆದರ್ಶಮಯ ಗದ್ಯ. ಸಂಸ್ಕೃತ ಪದ್ಯಗಳು ಅದರಲ್ಲಿ ಬಂದರೂ ಅದು ತೀರಾ ಸಹಜವಾಗಿ, ಅನಿವಾರ್ಯವಾಗಿ ವಿಕಾರವಾಗದಂತೆ ಕರ್ಕಶ ಇಲ್ಲದೆ ಕೃತಕವಾಗದಂತೆ ಬಂದಿವೆ. ಹೀಗಾಗಿ ವಡ್ಡಾರಾಧನೆಯ ಗದ್ಯ ಕನ್ನಡಗದ್ಯ ಸೊಗಸಾದ ದೇಸೀ ಶೈಲಿ."[10]

**ಮಹಾಕವಿ ಪಂಪ** : ಪಂಪನನ್ನು ಒಂದು ವಿಧದಲ್ಲಿ ಕನ್ನಡದ ಆದಿಕವಿ ಎನ್ನಬಹುದು. ಶ್ರೀವಿಜಯ ಪಂಪನಿಗಿಂತ ಮುಂಚಿನವನಾದರೂ ಅವನದು ಶಾಸ್ತ್ರ ಗ್ರಂಥವೇ ಹೊರತು ಕಾವ್ಯವಲ್ಲ. ಪಂಪನಿಗೆ ಹಿಂದೆ ಅಸಗ-ಗುಣನಂದಿ ಮೊದಲಾದವರು ಕನ್ನಡದಲ್ಲಿ ಕಾವ್ಯ ರಚಿಸಿದ್ದರಾದರೂ ಪಂಪನ ಕಾವ್ಯಗಳು ಆ ಗ್ರಂಥಗಳನ್ನೆಲ್ಲಾ 'ಇಕ್ಕಿ ಮೆಟ್ಟಿದವು' ಎಂದು ಹೇಳಬೇಕು. ಪಂಪ ಕೇವಲ ಕಾವ್ಯಪರಂಪರೆಗೆ ಅಸ್ತಿಭಾರ ಹಾಕಿದವನಲ್ಲ. ಅನುವಾದ, ಸಂಗ್ರಹಾನುವಾದ, ಭಾವಾನುವಾದ, ರೂಪಾಂತರ ಮೂಲವನ್ನೆ ಪರಿಷ್ಕರಿಸಿದ ಹೊಸಸೃಷ್ಟಿ- ಇವೆಲ್ಲಕ್ಕೂ 'ಆದಿಗುರು' ಎಂದೇ ಕನ್ನಡ ಸಾಹಿತ್ಯದಲ್ಲಿ ಪ್ರಖ್ಯಾತನಾಗಿದ್ದಾನೆ. ಪಂಪನದು ಶುದ್ಧ ಕವಿಹೃದಯ. ಕಾವ್ಯದೇವಿಯ ಆರಾಧನೆಗೆ ಆತ ಮುಂದಾಗುತ್ತಾನೆಯೆ ಹೊರತು, ಶುಷ್ಕ ತತ್ವ ಭೋದನೆಗೆ ಅಲ್ಲ. ಪಂಪ ಎರಡು ಮಹತ್ತರ ಕೃತಿಗಳನ್ನು ಕನ್ನಡಿಗರ ಮಡಿಲಿಗೆ ಹಾಕಿದ್ದಾನೆ.

ವ್ಯಾಸ ಮಹರ್ಷಿಯ 'ಮಹಾಭಾರತ'ವನ್ನು ಆಧರಿಸಿ, 'ವಿಕ್ರಮಾರ್ಜುನವಿಜಯಂ' ಕಾವ್ಯವನ್ನು ಹಾಗೂ ಜಿನಸೇನಾಚಾರ್ಯರ 'ಪೂರ್ವ ಪುರಾಣ'ವನ್ನು ಆಧರಿಸಿ 'ಆದಿ ಪುರಾಣ'ವನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದ್ದಾನೆ. ಈ ಅನುವಾದ ಪರಂಪರೆ ಕನ್ನಡದಲ್ಲಿ ಈ ತನಕ ಮುಂದುವರೆಯುತ್ತಿರುವುದು ಪಂಪನ ಸಾಹಿತ್ಯಿಕ ಕೆಲಸದ ಮಹತ್ವವನ್ನು ಸೂಚಿಸುತ್ತದೆ.

ಸಂಸ್ಕೃತ ಸಾಹಿತ್ಯದಲ್ಲಿ ಆದಾಗಲೇ ಭಾಸ, ಕಾಳಿದಾಸ, ಭವಭೂತಿ ಮೊದಲಾದ ಪ್ರಖ್ಯಾತ ನಾಟಕಕಾರರು ಆಗಿ ಹೋಗಿದ್ದರು. ಪಂಪ ಕೂಡ ಅವರ ಕೃತಿಗಳನ್ನು ನಿಷ್ಠೆಯಿಂದಲೇ ಓದಿರಬೇಕು. ಆದರೆ ನಾಟಕ ರಚನೆಗೆ ಕೈಹಾಕದ ಶುದ್ಧ ಕಾವ್ಯ ಬರೆಯಲು ಮುಂದಾಗಿದ್ದಾನೆ. ಅದಕ್ಕಾಗಿ ಚಂಪೂಶೈಲಿಯನ್ನೆ ಆಯ್ಕೆ ಮಾಡಿಕೊಂಡಿದ್ದಾನೆ. ವ್ಯಾಸ ಹಾಗೂ ಜಿನಸೇನರ ಮಹತ್ವದ ಕೃತಿಗಳನ್ನು ಆತ ಕನ್ನಡೀಕರಿಸಲು ಹೊರಟಿರುವುದೇ ಅವನ ಅಭಿರುಚಿ ಹಾಗೂ ದೂರದೃಷ್ಟಿಯನ್ನು ಪರಿಚಯಿಸುತ್ತದೆ. ಆದರೆ ಈ ಕೃತಿಗಳು ಕೂಡ ಮಕ್ಕೀಕಾಮಕ್ಕಿ ಅನುವಾದವಾಗಿರದೆ, ಹೊಸ ಸೃಜನಶೀಲ ಸ್ವತಂತ್ರ ಕೃತಿಗಳಾಗಿರುವುದು ಪಂಪನ ದೈತ್ಯ ಪ್ರತಿಭೆಗೆ ಸಾಕ್ಷಿಯಾಗಿದೆ.

ಪಂಪನ ಆದಿಪುರಾಣವು ಜಿನಸೇನಾಚಾರ್ಯರ 'ಪೂರ್ವ ಪುರಾಣ'ಕ್ಕೆ ಹೇಗೆ ಋಣಿಯಾಗಿದೆ ಎಂಬುದನ್ನು ಪ್ರೊ॥ ತೀ.ನಂ.ಶ್ರೀ ಅವರು ಹೀಗೆ ಹೇಳುತ್ತಾರೆ: "ಜಿನಸೇನರ ಪೂರ್ವ ಪುರಾಣಕ್ಕೆ ಪಂಪನು ಹೊತ್ತಿರುವ ಸಾಲವನ್ನು ಮೊದಲೆ ಒಪ್ಪಿಕೊಂಡು ಬಿಡುವುದು ಉತ್ತಮ. ಕಥಾಸರಣಿಯನ್ನು ಮಾತ್ರವಲ್ಲ ಎಷ್ಟೋ ಭಾವಗಳನ್ನು ಕಂಡ ಅವನು ಅಲ್ಲಿಂದಲೇ ಸ್ವೀಕರಿಸಿದನು. ಪಂಪನ ಕಾವ್ಯದ ಎಷ್ಟೋ ಪದ್ಯಗಳು ವಚನ ಖಂಡಗಳೂ- ಕೆಲವು ಉತ್ತಮವಾದ ಪದ್ಯಗಳು ಕೂಡ- ಪೂರ್ವಪುರಾಣದ ಭಾಗಗಳ ಅನುವಾದದಂತಿದೆ. ಸಂಸ್ಕೃತ ಮಹಾಕೃತಿಯೊಂದರ ಸಾರವನ್ನು ಕನ್ನಡದಲ್ಲಿ ಭಟ್ಟಿಯಿಳಿಸುವುದು ಹೇಗೆಂಬುದಕ್ಕೆ ನಿದರ್ಶನವಾಗಿ ಆದಿಪುರಾಣ ಹುಟ್ಟಿದಂತಿದೆ."[11]

ವ್ಯಾಸ ಮಹರ್ಷಿಯ ಮಹಾಭಾರತವನ್ನು ಸಮಸ್ತವಾಗಿ ಕನ್ನಡದಲ್ಲಿ ಹೇಳಿದ ಮೊದಲ ಕವಿ ಪಂಪ. ವ್ಯಾಸಭಾರತ ದೊಡ್ಡಗೊಂಡಾರಣ್ಯ, ಅನೇಕ ಕತೆ, ಉಪಕತೆ, ವ್ಯಾಖ್ಯಾನ, ಧರ್ಮನೀತಿ, ರಾಜಕಾರಣ ಹೀಗೆ ಎಲ್ಲವನ್ನು ಒಳಗೊಂಡ ಈ ಕೃತಿ ಪಂಪನ ಕೈಗೆ ಸಿಕ್ಕಿ ಅತ್ಯಂತ ಸುಂದರ ಕಾವ್ಯವಾಗಿದೆ. ಮೂಲವನ್ನು ಪರಿಷ್ಕರಿಸಿ ಹೊಸರೂಪ ಕೊಡುವ ಶ್ರೇಷ್ಠ ಅನುವಾದಕನಾಗಿ ಆದಿಕವಿ ಪಂಪ ಪಾಶ್ಚಾತ್ಯ ಭಾಷಾಂತರಕಾರರಿಗೆ ಕಾಣಿಸಿದರೆ ಆಶ್ಚರ್ಯವಿಲ್ಲ. ಆದರೆ ವ್ಯಾಸಭಾರತ ವ್ಯಾಖ್ಯಾನಕಾರರಾಗಿ ತನ್ನ ಕಾಲದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರದ ಪ್ರತಿರೂಪವಾಗಿ ಅವನು ತನ್ನ 'ವಿಕ್ರಮಾರ್ಜುನ ವಿಜಯಂ' ಕೃತಿ ರಚಿಸಿದ್ದಾನೆ. ವ್ಯಾಸಭಾರತ ಭಯಾನಕವಾದ ಅರಣ್ಯವೆನಿಸಿದರೆ ಪಂಪಭಾರತ ಕೃತಿ ಯೋಜನಾಬದ್ಧವಾಗಿ ನಿರ್ಮಿಸಿದ ಸುಂದರ ಉದ್ಯಾನವೆನಿಸಿದೆ.

"ಮಹಾಭಾರತವು ಲಕ್ಷ ಶ್ಲೋಕಗಳಿಂದ ಕಿಕ್ಕಿರಿದಿರುವ ಮಹಾಗ್ರಂಥ. ಪಂಪನು ಇದನ್ನು ಸಂಗ್ರಹವಾಗಿಯೇ ಹೇಳಬೇಕಾಯಿತು. ಮೂಲದಲ್ಲಿ ಅಧ್ಯಾಯಗಟ್ಟಲೆಯ ವಿಸ್ತಾರವನ್ನುಳ್ಳ ಕಥಾಭಾಗವನ್ನು ನಾಲ್ಕು ಪದ್ಯ, ಎರಡು ವಚನ ಖಂಡದಲ್ಲಿ ಸವಿ ಕೆಡದಂತೆ ಸಂಕ್ಷೇಪಿಸಬೇಕಾದರೆ ಅವನಿಗೆ ಬಲು ಜಾಣ್ಮೆ ಬೇಕಾಯಿತು. ಈ ಪರೀಕ್ಷೆಗೆ ಅವನು ಸಜ್ಜಾಗಿಯೂ ಇದ್ದನು. ಪೂರ್ವಪುರಾಣವನ್ನು ಸಂಗ್ರಹ ಮಾಡಿ ಕೈ ಪಳಗಿಸಿಕೊಂಡಿದ್ದನು"[12] ಎನ್ನುವ ಪ್ರೊ. ತೀ. ನಂ. ಶ್ರೀ. ಮಾತುಗಳಲ್ಲಿ ಪಂಪನ ಸಂಗ್ರಹಾನುವಾದ ಪ್ರತಿಭೆಯನ್ನು ಮನಗಾಣಬಹುದು.

"ಅನುವಾದ ಎಂದಾಕ್ಷಣ ಅದೊಂದು ನೀರಸ ಕೆಲಸವೆಂದು ಯಾರೂ ಭಾವಿಸಬೇಕಾಗಿಲ್ಲ. ಅಥವಾ ಇದಕ್ಕೆ ವಿಶೇಷ ಪ್ರತಿಭೆಯೇನೂ ಬೇಕಾಗಿಲ್ಲ ಎಂದು ನಿರ್ಧರಿಸಬೇಕಾಗಿಲ್ಲ. ಅನುವಾದಕ ಮೂಲ ಲೇಖಕನಷ್ಟೇ ಪ್ರತಿಭಾಶಾಲಿಯಾಗಿರಬೇಕು. ಇಲ್ಲ ಒಮ್ಮೊಮ್ಮೆ ಆವನಿಗಿಂತ ಹೆಚ್ಚಿನ ಪ್ರತಿಭೆ ಇವನಲ್ಲಿರಬೇಕು. ಇದಕ್ಕೆ ಪಂಪನ ಕೃತಿಯೇ ಸಾಕ್ಷಿ. ಅವನ ವಿಕ್ರಮಾರ್ಜುನ ವಿಜಯವು ಕನ್ನಡದ ಕನ್ನಡಿಯಲ್ಲಿ ಚಿಕ್ಕದಾಗಿ ಬಿದ್ದ ವ್ಯಾಸಭಾರತದ ನೆರಳಲ್ಲ, ಅಲ್ಲಿಯ ಚಿನ್ನವನ್ನು ಶೋಧಿಸಿ ತಂದು ಹೊಸದಾಗಿ ಎರಕ ಹೊಯ್ದು ಒಪ್ಪವಿಟ್ಟು ನಿಲ್ಲಿಸಿದ ನೂತನ ಪುತ್ಥಳಿ ಅದು.ಅದರ ನಿರ್ಮಾಣದಲ್ಲಿ ಪಂಪನು ಪಾತ್ರಗಳನ್ನು ತಿದ್ದಿದ್ದಾನೆ. ಸನ್ನಿವೇಶಗಳನ್ನು ನಯಗೊಳಿಸಿದ್ದಾನೆ. ಕಠೋರವೆಂದು ತೋರಿದ ಕೆಲವು ಸಂಗತಿಗಳನ್ನು ಬೇಕೆಂದು ಕೈಬಿಟ್ಟಿದ್ದಾನೆ. ಅಲ್ಲಲ್ಲೇ ಹೊಸ ಸೊಗಸನ್ನು ಎರಡೇ ಮಾತಿನಲ್ಲಿ ಮೂಡಿಸಿದ್ದಾನೆ."[13]

ಪಂಪನ ಸಂಗ್ರಹಾನುವಾದ ಕಲೆಯನ್ನು ಮೆಚ್ಚದವರೇ ಇಲ್ಲ. ಕನ್ನಡದಲ್ಲೇ ಏಕೆ ಸಂಸ್ಕೃತ ವಾಙ್ಮಯದಲ್ಲಿಯೂ ಮಹಾಭಾರತದ ಈ ಬಗೆಯ ರೂಪಾಂತರ ಅಪರೂಪವಾದುದು. ಒಂದು ಉಪಾಖ್ಯಾನವಿರಲಿ, ಉಪದೇಶವಿರಲಿ ಮುಖ್ಯ ಕತೆಗೆ ಅದರ ಸಂಬಂಧವೆಷ್ಟು ಎಂಬುದನ್ನು ತಟ್ಟನೆ ಗ್ರಹಿಸಿ ಅದಕ್ಕೆ ಅನುಗುಣವಾದ ಸ್ಥಾನವನ್ನು ಕವಿ ಕಲ್ಪಿಸಿ ಕೊಡುತ್ತಾನೆ. ಪಂಪನು ತನ್ನ ಕಾವ್ಯದಲ್ಲಿ ಮಾಡಿಕೊಂಡ ಮಾರ್ಪಾಟು ಅವನು ಮೂಲಕೃತಿಯನ್ನು ನೋಡಿದ ದೃಷ್ಟಿ ಇವೆಲ್ಲವೂ ಹೊಸದೊಂದು ಪರಂಪರೆಗೆ ದಾರಿ ಮಾಡಿಕೊಟ್ಟಿದೆ. ಪಂಪನ 'ವಿಕ್ರಮಾರ್ಜುನ ವಿಜಯಂ' ಸಾಹಿತ್ಯಿಕ ಕ್ಷೇತ್ರದಷ್ಟೇ ಇತರ ಕ್ಷೇತ್ರಗಳಿಗೂ ಆಕರ ಗ್ರಂಥವಾಗಿರುವುದು ಪಂಪ ಮಾಡಿಕೊಂಡ ಬದಲಾವಣೆಯಿಂದ ಎನ್ನಬಹುದು. ಮೂಲ ಮಹಾಭಾರತದಲ್ಲಿ ನಾಯಕ ಎಂಬುವವರಿಲ್ಲ. ಪಂಪ ತನ್ನ ಆಶ್ರಯದಾತ ಅರಿಕೇಸರಿಯನ್ನು ತನ್ನ ಕಾವ್ಯದ ನಾಯಕನನ್ನಾಗಿ ಮಾಡಿಕೊಂಡಿದ್ದಾನೆ. ಆ ಕಾರಣ ಚಾಳುಕ್ಯ-ರಾಷ್ಟ್ರಕೂಟರ ಇತಿಹಾಸವನ್ನು ಮಾತ್ರ ಹೇಳದೆ ಆ ಕಾಲದ ಜನಜೀವನವನ್ನು ತನ್ನ ಕಾವ್ಯದಲ್ಲಿ ಪ್ರತಿಬಿಂಬಿಸಿದ್ದಾನೆ. ಹೀಗಾಗಿ ಪಂಪನ ಕಾವ್ಯ 'ಮಹಾಭಾರತ'ದ ಹಂಗನ್ನು ತೊರೆದಿತ್ತೆಂದೂ ಹೇಳುವಂತಿಲ್ಲ. ಕವಿಯೇ ಹೇಳುವಂತೆ "ವ್ಯಾಸ ಮುನೀಂದ್ರರುಂದ್ರ ವಚನಾಮೃತವಾರ್ಧಿಯನೀಸುವೆನ್ ಕವಿ ವ್ಯಾಸನೆಂಬ ಗರ್ವಮೆನಗಿಲ್ಲ", ಅಂದರೆ ವ್ಯಾಸನ ಅಪಾರ ಜ್ಞಾನ ಸಂಪತ್ತಿಗೆ ಆದಿಕವಿ ಪಂಪನು ಕೃತಜ್ಞತೆಯಿಂದ ತಲೆಬಾಗಿದ್ದಾನೆ. ಆದರೆ ಸ್ವಯಂ ಪ್ರತಿಭಾಶಾಲಿಯದ ಈ ಕವಿ ತನ್ನ ಕೃತಿಯಲ್ಲಿ ಮಾಡಿಕೊಂಡ ಬದಲಾವಣೆಯಿಂದಾಗಿ ಕೃತಿಯ ಮಹತ್ವ ತನಗೆ ತಾನೇ ಹೆಚ್ಚಿದೆ. ಅವನ ಬನವಾಸಿ ಪ್ರೇಮ, ಕರ್ಣನ ಪಾತ್ರ ಚಿತ್ರಣ, ದ್ರೌಪದಿ ಕೇಶಪಾಶವು ಕುರುಕುಲಕ್ಕೆ ಯಮಪಾಶವಾದುದು, ಯುದ್ಧ ವರ್ಣನೆ ಇವುಗಳಿಂದಾಗಿ ಪಂಪ ಮೂಲ ಮಹಾಭಾರತ ಕರ್ತೃ ವ್ಯಾಸರಿಗಿಂತ ಹೆಚ್ಚು ಪ್ರಿಯ ಎನಿಸುತ್ತಾನೆ. ಇದೇ ಶ್ರೇಷ್ಠ ರೂಪಾಂತರಕಾರನೊಬ್ಬನ ಲಕ್ಷಣ. ಇದರಿಂದಾಗಿ 'ಮೂಲಕೃತಿ'ಯ ಮಹತ್ವ ಒಂದಿಷ್ಟೂ ಕಡಿಮೆಯಾಗದೆ, ಅದು ಹೆಚ್ಚು ಹೆಚ್ಚು ಪ್ರಸ್ತುತತೆಯನ್ನು ಪಡೆದುಕೊಳ್ಳುತ್ತದೆ.

ಪಂಪ ವ್ಯಾಸ ಮಹರ್ಷಿಯಿಂದಲ್ಲದೆ ಭಾಸ, ಕಾಳಿದಾಸ ಮೊದಲಾದ ಕವಿಗಳಿಂದಲೂ ಪ್ರೇರಣೆ ಪಡೆದಿದ್ದಾನೆ. ಇದಕ್ಕೊಂದು ಉದಾಹರಣೆ ನೋಡಿ

ಕಾಳಿದಾಸ : ಅನ್ಯಾಸಗರ ವಿಧೌ ಪ್ರಜಾಪ್ರತಿರ ಭೂತೆ ಚಂದ್ರೋನುಕಾಂತ ಪ್ರಭಃ
ಶೃಂಗಾರೈಕರಸಃ ಸ್ವಯಂನು ಮದನೋ ಮಾಸೋಮ ಪುಷ್ಪಾಕರಃ
ವೇದಭ್ಯಾಸ ಜಡಃ ಕಥಂಚ ವಿಷಯ ವ್ಯಾವೃತ್ತ ಕೌತೋಹಲೋ
ನಿರ್ಮಾತುಂ ಪ್ರಭವೇತ್ ಮನೋಹರಂ ಮಿದಂ ರೂಪಂ ಪುರಾಣೋ ಮುನಿಃ. (೧.೮)

ಪಂಪ : ಜಗಮಂ ಮಾಡಿದ ಪದ್ಮಜಂ ಪಡೆದನಿಲ್ಲೀ ಕನ್ನೆಯುಂ ಮಾಡುವ
ಲ್ಲಿಗೆ ಚಂದ್ರಂ ಮಳಯಾನಳಂ ಮಳಯಜಂ ನಿರೇಜಮನಿಮ್ಮಾನು
ಲ್ಲಿಗೆಯೆಂದೆಂತಿ ವನಲ್ಕುರಿಂದ ಮರ್ದಿನೋಳ್ ತಾನಮಿಯಂ ತೊಯ್ದುಮ
ಲ್ಲಿಗೆ ಸಂದಂಗಜನೆಂಬಜಂ ಪಡೆದನಂತಾ ಕಾಂತಿಯಿಂ ಕಾಂತೆಯಂ (೪.೭೫)

ರತ್ನತ್ರಯರಲ್ಲಿ ಪೊನ್ನ ಎರಡನೆಯವನು. ಪಂಪ-ರನ್ನರಂತಹ ಮಹಾ ಪ್ರತಿಭಾಶಾಲಿಗಳ ಮಧ್ಯದಲ್ಲಿ ಕುಳಿತ ಅದೃಷ್ಟಶಾಲಿ ಈತ. ರಾಷ್ಟ್ರಕೂಟರ ಮೂರನೆಯ ಕೃಷ್ಣ ಈತನ ಆಶ್ರಯದಾತ. ಪೊನ್ನ ನಾಲ್ಕು ಗ್ರಂಥಗಳನ್ನು ರಚಿಸಿದ್ದಾನೆಂದೂ ಹೇಳಲಾಗಿದೆ. 'ಶಾಂತಿಪುರಾಣ' 'ಭುವನೈಕ ರಾಮಾಭ್ಯುದಯಂ' (ರಾಮಕತೆ) 'ಜಿನಾಕ್ಷರ ಮಾಲೆ', 'ಗತ ಪ್ರತ್ಯಾಗತ'. ಈಗ ಉಪಲಬ್ಧವಾಗಿರುವ ಗ್ರಂಥಗಳೆಂದರೆ 'ಶಾಂತಿ ಪುರಾಣ' ಮತ್ತು 'ಜಿನಾಕ್ಷರ ಮಾಲೆ'. ಜಿನಾಕ್ಷರ ಮಾಲೆ 36 ಕಂದ ಪದ್ಯಗಳುಳ್ಳ ಜಿನಸ್ತುತಿ.

ಪೊನ್ನನ ಭುವನೈಕ ರಾಮಾಭ್ಯುದಯ ಮೂರನೆಯ ಕೃಷ್ಣನ ಪ್ರತಾಪವನ್ನು ಪ್ರತಿಪಾದಿಸುವ ಗ್ರಂಥವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಪ್ರಾಯಶಃ ವಾಲ್ಮೀಕಿ ರಾಮಾಯಣದ ಅನುವಾದ ಗ್ರಂಥವಾಗಿದ್ದಿರಬೇಕು. ಅಂದರೆ ಪಂಪನಂತೆ ಈತ ಕೂಡ ಜಿನ ಮಹಿಮೆ ತಿಳಿಸುವ ಧಾರ್ಮಿಕ ಗ್ರಂಥ ಹಾಗೂ ಆಶ್ರಯದಾತನನ್ನು ಪರಿಚಯಿಸುವ ಲೌಕಿಕ ಗ್ರಂಥವನ್ನು ರಚಿಸಿದ್ದಿರಬೇಕು.

ಪೊನ್ನ ಉತ್ತಮ ಭಾಷಾಂತರಕಾರನಲ್ಲ ಎಂಬುದಕ್ಕೆ ತಕ್ಷಣ ಹೆಸರಿಸಬಹುದಾದ ಕೃತಿಯೆಂದರೆ ''ಶಾಂತಿನಾಥ ಪುರಾಣ.'' ಪೊನ್ನ ತನ್ನನ್ನು ''ಕಾಳಿದಾಸಂಗೆ ನಾಲ್ಮಡಿ'' ''ಕನ್ನಡ ಕವಿತೆಯೊಳಸಗಂಗೆ ನೂರ್ಮಡಿ'' ''ಚತುರ್ಭಾಷಾ ಪಂಡಿತ'' ಮುಂತಾಗಿ ಹೊಗಳಿಕೊಂಡಿದ್ದಾನೆ. ಪ್ರಸ್ತುತ ಕೃತಿ ಶಾಂತಿನಾಥ ಪುರಾಣವನ್ನು ಗಮನಿಸಿದರೆ ಮಂತ್ರಕ್ಕಿಂತ ಉಗುಳೇ ಹೆಚ್ಚು ಎಂಬುದು ಮನವರಿಕೆಯಾಗುತ್ತದೆ.

''ಶಾಂತಿನಾಥ ಪುರಾಣ'' ಕೃತಿಯನ್ನು ಸಂಸ್ಕೃತದಲ್ಲಿ ಅಸಗಕವಿ ರಚಿಸಿದ್ದಾನೆ. ತ್ರಿಷಷ್ಠಿ ಲಕ್ಷಣ ಮಹಾಪುರಾಣ ಸಂಗ್ರಹ ವೆಂಬ ಅಪರನಾಮಧೇಯವುಳ್ಳ ತಮಿಳಿನ 'ಶ್ರೀಪುರಾಣ'ದಲ್ಲಿ ಶಾಂತಿನಾಥನ ಕೊನೆಯ ಜನ್ಮದ ಕಥೆ ಬರುತ್ತದೆ.[15] ಇವುಗಳಲ್ಲಿ ಕಾಳಿದಾಸ ಮೊದಲಾದ ಸಂಸ್ಕೃತ ಕವಿಗಳಿಂದ ಸಾಕಷ್ಟು ಪ್ರಸಂಗ, ಪದ್ಯ ಹಾಗೂ ಭಾವನೆಗಳನ್ನು ನೇರವಾಗಿ ಭಟ್ಟಿ ಇಳಿಸಿದ್ದಾನೆ. ಆದರೆ ಇಲ್ಲೆಲ್ಲೂ ಆತನ ಭಾಷಾಂತರ ಕಲೆ ಗೋಚರಿಸುವುದೇ ಇಲ್ಲ. ಪೊನ್ನನು ಕಾಳಿದಾಸನ ರಘುವಂಶವನ್ನು ಕೂಲಂಕಷವಾಗಿ ಅಭ್ಯಾಸಮಾಡಿ ಅಲ್ಲಿಯ ಎರಡು ಸನ್ನಿವೇಶಗಳನ್ನು ತನ್ನ ಗ್ರಂಥದಲ್ಲಿ (ಶಾಂತಿನಾಥ ಪುರಾಣ) ಅಕ್ಷರಶಃ ಭಾಷಾಂತರ ಮಾಡಿ ಅಳವಡಿಸಿಕೊಂಡಿದ್ದಾನೆ. ಅಲ್ಲಿಯ ಸನ್ನಿವೇಶ ಭಾವ, ಶಬ್ದ ವಾಕ್ಯರಚನೆಗಳೂ

ಇಲ್ಲಿಯೂ ಹಾಗೆಯೇ ಉಪಯೋಗವಾಗಿದೆ. ಕೆಲವೆಡೆಗಳಲ್ಲಿ ಕಾಳಿದಾಸನು ಪದ್ಯದಲ್ಲಿ ಹೇಳಿರುವುದನ್ನು ಪೊನ್ನನು ಗದ್ಯದಲ್ಲಿ ಹೇಳಿದ್ದಾನೆ. ಕೆಲವನ್ನು ಸಂಗ್ರಹಿಸಿದ್ದಾನೆ. ಹೆಸರುಗಳನ್ನು ವ್ಯತ್ಯಾಸ ಮಾಡಿಕೊಂಡಿದ್ದಾನೆ. ಯಾವ ಸಂದರ್ಭದಲ್ಲಿಯೂ ಆತ ಕಾಳಿದಾಸನ ವಾಗ್ವಿಲಾಸವನ್ನು ಮೀರಿರುವುದು ಕಂಡುಬರುವುದಿಲ್ಲ.[16]

ಪೊನ್ನನ 'ಶಾಂತಿನಾಥ ಪುರಾಣ'ದಲ್ಲಿ ಬರುವ ಅಮಿತತೇಜಜ್ಯೋತಿ ಪ್ರಭೆಯ ಸ್ವಯಂವರವು ಸಂಪೂರ್ಣವಾಗಿ ಕಾಳಿದಾಸನ ರಘುವಂಶದಲ್ಲಿ ಬರುವ ಅಜ ಮತ್ತು ಇಂದುಮತಿಯರ ವಿವಾಹದ ಪಡಿಯಚ್ಚು. ಕಾಳಿದಾಸನಲ್ಲಿ ಬರುವ ಪದ್ಯಭಾಗವನ್ನು ಪೊನ್ನ ಗದ್ಯದಲ್ಲಿ ಅನುವಾದಿಸಿದ್ದಾನೆ.

ಕಾಳಿದಾಸನ ರಘುವಂಶ ಕಾವ್ಯದ 7ನೆಯ ಸರ್ಗದ 11ನೆಯ ಪದ್ಯ ಹೀಗಿದೆ:

ತಾಂ ರಾಘವಂ ದೃಷ್ಟಿಭಿರಾಪಿ ಬಂತ್ಯೊ
ನಾರ್ಯೋ ನಜನ್ಮುಃ ವಿಷಯಾಂತರಾಣಿ।
ತಥಾಹಿ ಶೇಷೇಂದ್ರಿಯ ಧೃತಿರಾಸಾಂ
ಸರ್ವಾತ್ಮನಾ ಚಕ್ಷುದಿವ ಪ್ರವಿಷ್ಟಾ॥

ಪೊನ್ನ ಶಾಂತಿನಾಥಪುರಾಣದ 6ನೆಯ ಅಧ್ಯಾಯದ 11ರ ಗದ್ಯಭಾಗ ಹೀಗಿದೆ. ಮೇಲಿನ ಕಾಳಿದಾಸನ ಪದ್ಯದ ನೇರ ಅನುವಾದವೂ ಇದೇ ಆಗಿದೆ:

ಅಂತು ಸೌಜನ್ಯಕಂದಾಂಕುರನ ಲಾವಣ್ಯರಸಮಂ
ಕಣ್ಣೊಳೆ ಪೀರ್ವಂತೆ ನೋಳ್ಪ ನಗರ ವಿಲಾಸಿನಿಯರ
ವೃತ್ತಿನಿಂದ್ರಿಯ ಪ್ರಪಂಚಗಳೆಲ್ಲಂ ಚಕ್ಷುದಿಂದ್ರಿಯ ಮನೆ
ಪೊಕ್ಕುವಿಲೆದುಳಿದು ವಿಷಯ ಯೋಗಂಗಳನಲಿಯದೇ

ಕೇಂದ್ರಿಯ ಭೂತ ಚೂಡಲತಾಕಾರವು ಕೆಯ್ಯಾಂತಡು ಬಿಲ್ಲುಂ ಬೆಲೆದು ಮಾಗಿ ನೋಡೆ ವಧೂವರರ್ ಬರೆವರೆ.

ಇದಲ್ಲದೆ ಪೊನ್ನ ಎರಡು ಪ್ರಕರಣಗಳಲ್ಲಿ ಕಾಳಿದಾಸನನ್ನು ಅಕ್ಷರಶಃ ಅನುವಾದ ಮಾಡಿ ತನ್ನ ಗ್ರಂಥದಲ್ಲಿ ಸೇರಿಸಿ ಸ್ವಂತ ಕೃತಿಯೆಂಬ ಭ್ರಾಂತಿಯನ್ನುಂಟು ಮಾಡಿದ್ದಾನೆ. ಅನುವಾದ ಮಾಡಿದ ಭಾಗವು ಸುಮಾರು ಮುನ್ನೂರು ಪದ್ಯಗಳಿಗಿಂತ ಹೆಚ್ಚಾಗಿದೆ. ಈ ಭಾಗದಲ್ಲಿ ಬಹುಮಟ್ಟಿಗೆ ಕಾಳಿದಾಸನನ್ನು ನಿಕಟವಾಗಿ ಅನುಸರಿಸಿದ್ದರೂ ಶಬ್ದ ಸೌಷ್ಠವದಲ್ಲಿಯಾಗಲಿ, ಭಾವ ಪ್ರಕರ್ಷತೆಯಲ್ಲಾಗಲಿ ಮೂಲವನ್ನು ಮೀರಿಸಿದೆಯೆಂದು ಹೇಳಲಾಗುವುದಿಲ್ಲ.[17]

ರತ್ನತ್ರಯರಲ್ಲಿ ಕೊನೆಯವನಾದ ರನ್ನ ಪಂಪಯುಗದ ಮಹತ್ವ ಕವಿಗಳಲ್ಲಿ ಒಬ್ಬನಾಗಿದ್ದಾನೆ. ಕಲ್ಯಾಣ ಚಾಲುಕ್ಯರ ದೊರೆ 2ನೇ ತೈಲಪ ಹಾಗೂ ಅವನ ಮಗ ಇಜಿವಬೆಡಂಗ ಸತ್ಯಾಶ್ರಯ ಇವನ ಆಶ್ರಯದಾತರು. ಜೊತೆಗೆ ಗಂಗ ಮಹಾಮಾತ್ಯ ಚಾವುಂಡರಾಯ ಹಾಗೂ ದಾನ ಚಿಂತಾಮಣಿ ಅತ್ತಿಮಬ್ಬೆ ರನ್ನನ ಪೋಷಕರಾಗಿದ್ದಾರೆ. ಕ್ರಿ. ಶ. 993ರಲ್ಲಿ ಆತ ಜೀವಿಸಿದ್ದ. ಮುಧೋಳ್ ಅವನ ಜನ್ಮಸ್ಥಳ. ವೃತ್ತಿಯಲ್ಲಿ ಬಳೆಗಾರ. ಧರ್ಮದಲ್ಲಿ ಜೈನ. ಸಂಸ್ಕೃತ, ಪ್ರಾಕೃತ ಹಾಗೂ

ಪಾಳಿ ಭಾಷೆಯಲ್ಲಿ ಅಪಾರ ವಿದ್ವತ್ತು ಪಡೆದಿದ್ದ. ಅವನ ಎರಡು ಕೃತಿಗಳು ಅಂದರೆ ''ಅಜಿತಪುರಾಣ'' ಹಾಗೂ ''ಸಾಹಸಭೀಮವಿಜಯಂ'' ಎಂಬ ಗ್ರಂಥಗಳು ಮಾತ್ರ ದೊರೆತಿವೆ. ಅವನೇ ಬರೆದನೆಂದೂ ಹೇಳಲಾದ ಪರಶುರಾಮ ಚರಿತೆ ಹಾಗೂ ಚಕ್ರೇಶ್ವರ ಚರಿತೆ ಕೃತಿಗಳು ದೊರೆತಿಲ್ಲ.

ಪಂಪನಂತೆ ರನ್ನ ಸವುನಾದವನಲ್ಲ, ಅವನಲ್ಲಿ ಆತ್ಮಪ್ರತ್ಯಯ ಹೆಚ್ಚು. ಸರಸ್ವತಿ ಭಂಡಾರದ ಮುದ್ರೆಯನ್ನು ಸೂರೆಗೊಂಡವನೆಂಬ ಹೆಮ್ಮೆ ಆತನದು. ಈ ಆತ್ಮಪ್ರತ್ಯಯ ಪೊನ್ನನಂತೇ ಬಂಡವಾಳವಿಲ್ಲದ ಬಡಾಯಿಯಾಗಿಲ್ಲ. ಅವನ ಶಕ್ತಿ ಸಾಮರ್ಥ್ಯಗಳಿಗೆ ಅವನ ಕೃತಿಗಳಲ್ಲಿ ಸಾಕಷ್ಟು ಸಾಕ್ಷ್ಯ ದೊರೆಯುತ್ತದೆ.

ಪಂಪನಂತೆ ರನ್ನ ಕೂಡ ಧಾರ್ಮಿಕ ಹಾಗೂ ಲೌಕಿಕ ಕಾವ್ಯಗಳನ್ನು ರಚಿಸಿದ್ದಾನೆ. ಅವನ 'ಅಜಿತನಾಥಪುರಾಣ' ಕಾವ್ಯವೂ ಎರಡನೆಯ ತೀರ್ಥಂಕರನಾದ ಅಜಿತಸ್ವಾಮಿಯ ಕತೆ. ಈ ಗ್ರಂಥಕ್ಕೆ ಚಾವುಂಡರಾಯನ 'ತ್ರಿಷಷ್ಠಿ ಶಲಾಕಾಪುರುಷರ ಪುರಾಣ'ವೂ, ಗುಣಭದ್ರಾಚಾರ್ಯರಿಂದ ಸಂಸ್ಕೃತದಲ್ಲಿ ರಚಿತವಾದ 'ಉತ್ತರ ಪುರಾಣ'ವೂ ಮೂಲ. ಇವೆರಡರಲ್ಲಿಯೂ ಬರುವ 'ಅಜಿತನಾಥಪುರಾಣ' ಬಹು ಚಿಕ್ಕದು. ಆದ್ದರಿಂದ ಇದು ಕನ್ನಡ ಜೈನ ಪುರಾಣಗಳಲ್ಲಿ ಅತ್ಯಂತ ಚಿಕ್ಕದಾದ ಗ್ರಂಥವಾಗಿದೆ. ಅಂದರೆ ರನ್ನ ಮೂಲಕೃತಿಗೆ ಹತ್ತಿರವಾಗಿದ್ದುಕೊಂಡು 'ರೂಪಾಂತರ' ಕೆಲಸವನ್ನು ಮಾಡಿದ್ದಾನೆಂದು ಹೇಳಬೇಕು. ಆದರೂ ಇಲ್ಲಿ ಪ್ರತಿಭೆಗಿಂತ ಪಾಂಡಿತ್ಯಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆತಿರುವುದರಿಂದ ಕೃತಿ ಕೃತಕವಾಗಿಯೇ ಕಾಣುತ್ತದೆ.

ರನ್ನನ ನಿಜವಾದ ಕವಿತಾಶಕ್ತಿಯು ಕಂಡುಬರುವುದು ಅವನ ಲೌಕಿಕ ಕಾವ್ಯವಾದ 'ಗದಾಯುದ್ಧ'ದಲ್ಲಿ. ಈ ಕೃತಿಯಲ್ಲಿ ಅವನು ತೋರಿದ ಅಪೂರ್ವ ಪ್ರತಿಭಾಶಕ್ತಿ ಅವನನ್ನು ಮಹಾಕವಿಯನ್ನಾಗಿಸಿದೆ. ರನ್ನನ 'ಸಾಹಸಭೀಮವಿಜಯಂ' ಗ್ರಂಥಕ್ಕೆ ಮಹಾಭಾರತದ ಗದಾ, ಸೌಪ್ತಿಕ ಪರ್ವಗಳ ಕಥೆಯೇ ವಸ್ತು. ಅದೇ ರೀತಿ ಪಂಪಭಾರತದ ಹದಿಮೂರನೆ ಆಶ್ವಾಸದ ಆಧಾರದ ಮೇಲೆ ರಚಿತವಾಗಿರುವುದು ಸ್ಪಷ್ಟವಾಗುವುದು. ಭಾಷಾಂತರ ಪ್ರಕಾರದಲ್ಲಿ ರನ್ನನ ಈ ಕಾರ್ಯ ವಿಶೇಷ ಅಧ್ಯಯನಕ್ಕೆ ಯೋಗ್ಯವಾಗಿದೆ. ಒಂದೇ ಭಾಷೆಯ ಕೃತಿಯನ್ನೇ ಮತ್ತೊಬ್ಬ ಕವಿ ವಿಸ್ತರಿಸಿ ಅಥವಾ ಸಂಗ್ರಹಿಸಿ ಬರೆದರೆ ಅದು ರೂಪಾಂತರವಾಗಲಿ ಅಥವಾ ಇನ್ನಾವುದೇ ಹೊಸ ರೀತಿಯ ಅನುವಾದ ಪ್ರಕಾರಕ್ಕೆ ಸೇರದೆ 'ಕೃತಿಚೌರ್ಯ' ಎನಿಸುತ್ತದೆ. ಆದರೆ ರಾಷ್ಟ್ರಕವಿ ಕುವೆಂಪು ಅವರು ಇದನ್ನೇ ರನ್ನನ ಶಕ್ತಿಯೆಂದು ವಿಶ್ಲೇಷಿಸುತ್ತಾರೆ. 'ತನಗೆ ಪ್ರೇರಕವಾದ 'ಪಂಪಭಾರತ'ದ ಪಡಿನೆಳಲಾಗದೆ ಗದಾಯುದ್ಧವು ಸ್ವತಂತ್ರ ಕೃತಿಯಾದುದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಪವಾಡವೇ ಸರಿ. ಸ್ಥೂಲದೃಷ್ಟಿಗೆ ಅದರಲ್ಲಿ ಕೃತಿಚೌರ್ಯ, ಸೂಕ್ಷ್ಮ ವಿಮರ್ಶೆಗೆ ಕೃತಿರತ್ನ ತೋರುವುದು.'

ರನ್ನ ಪಂಪನಿಂದ ಎಷ್ಟೊಂದು ಪ್ರಭಾವಿತವಾಗಿದ್ದಾನೆಂದರೆ 'ಕಥಾವಿಷಯ' ವರ್ಣನೆ, ಪದಪ್ರಯೋಗಶೈಲಿಗಳಲ್ಲಿ ಅನೇಕ ಭಾಗಗಳು ಪಂಪನವು. ರನ್ನನು ಅನೇಕ ಕಡೆ ಪಂಪನ ಶಬ್ದಗಳನ್ನು ಶಬ್ದ ಸಮೂಹಗಳನ್ನು, ಪೂರ್ಣ ಪದ್ಯಗಳನ್ನು ಉಪಯೋಗಿಸಿಕೊಂಡಿದ್ದಾನೆ. ಕೆಲವೆಡೆ ಪಂಪನು ಒಂದೆರಡು ಪದ್ಯಗಳಲ್ಲಿ ಹೇಳಿರುವುದನ್ನು ರನ್ನನು ಹತ್ತು ಹನ್ನೆರಡು ಪದ್ಯಗಳಾಗಿ ವಿಸ್ತರಿಸಿದ್ದಾನೆ. ವಿಸ್ತಾರವಾಗಿರುವುದನ್ನು ಸಂದರ್ಭಾನುಸಾರ ಸಂಕೋಚಪಡಿಸಿದ್ದಾನೆ. ಗ್ರಂಥದ ಉದ್ದೇಶ ಸ್ವರೂಪ ಆಕಾರ, ಆದಿ, ಅಂತ್ಯ ಇವೆಲ್ಲವುದರಲ್ಲಿಯೂ ಸಾದೃಶ್ಯವಿದೆ.

ಕವಿತಾಗುಣಾರ್ಣವನ ಕಾವ್ಯ 'ವಿಕ್ರಮಾರ್ಜುನವಿಜಯಂ' ಕವಿಚಕ್ರವರ್ತಿ ರನ್ನನ ಕಾವ್ಯ 'ಸಾಹಸಭೀಮವಿಜಯಂ'. ಪಂಪನು ಆರೂಢ ಸರ್ವಜ್ಞನಂ ವೈರಿನರೇಂ ಪ್ರೋದ್ದಾಮದರ್ಪೋದ್ಧಳವನೆ ಕಥಾನಾಯಕಂ ಮಾಡಿದಂದರ್ಜುನನೊಳ್ ಪೋಲ್ವ 'ಕಥಾಬಿತ್ತಿ'ಯನ್ನು ಹೇಳಿದ್ದರೆ, ರನ್ನನು 'ಸತ್ಯಾಶ್ರಯ' ದೇವನೆ ಪ್ರಥ್ವಿವಲ್ಲಭಂ ಕಥಾನಾಯಕನನಿಜನೊಳ್ ಪೋಲಿಸಿ' ಹೇಳಿದ್ದಾನೆ. ''ವಿಕ್ರಮಾರ್ಜುನವಿಜಯಂ''ನ ಮೊದಲ ಪದ್ಯವು ಉದಾತ್ತ ನಾರಾಯಣನಾದ ಅರಿಕೇರಿಯ ಸ್ತುತಿಯಾದರೆ ''ಸಾಹಸಭೀಮ ವಿಜಯಂ''ದ ಮೊದಲನೆಯ ಪದ್ಯವು ಚಾಳುಕ್ಯ ನಾರಾಯಣನ ಸ್ತುತಿಯಾಗಿದೆ. ''ಪಂಪಭಾರತ''ದಲ್ಲಿ ಅರ್ಜುನನಿಗೂ ಅರಿಕೇಸರಿಗೂ ಅಭೇದ. ಅರ್ಜುನನ ಸಾಹಸ ಕಾರ್ಯಗಳೆಲ್ಲಾ ಅರಿಕೇಸರಿಯಲ್ಲಿ ಆರೋಪಿತವಾಗಿವೆ. ಗದಾಯುದ್ಧದಲ್ಲಿ ಸತ್ಯಾಶ್ರಯನೇ ಭೀಮಸೇನ. ಅಲ್ಲಿ ಅರ್ಜುನನಿಗೆ ಕೊನೆಯಲ್ಲಿ ಪಟ್ಟಾಭಿಷೇಕವಾಗುವ ಹಾಗೆ ಇಲ್ಲಿ ಭೀಮನಿಗೆ ಪಟ್ಟಾಭಿಷೇಕ.

ರನ್ನ ಹಾಗೂ ಪಂಪರ ಸಂಬಂಧ ವಾಲ್ಮೀಕಿ ಕಾಳಿದಾಸರ ಸಂಬಂಧದಂತಹುದು. ಪ್ಲುಟಾರ್ಕ್ - ಷೇಕ್ಸ್‌ಪಿಯರ್ ಸಂಬಂಧದಂತಿರುವುದು. ಕಾವ್ಯ ವಸ್ತುಗಳಿಗೆ ನಿಕಟ ಸಂಬಂಧವಿದ್ದರೂ ನಿರೂಪಣೆಯಲ್ಲಿ ಅದು ಸರಳವಾಗಿದ್ದರೂ ವ್ಯಕ್ತಿ ವೈಶಿಷ್ಟ್ಯಗಳಿಂದ ಇವರಿಬ್ಬರೂ ಭಿನ್ನರು.

ರನ್ನನ ವೈಶಿಷ್ಟ್ಯವೆಂದರೆ ನಾಟಕೀಯತೆ. ಅದ್ಭುತ ರೀತಿಯಲ್ಲಿ ವೀರರಸದ ಪ್ರತಿಪಾದನೆ ಹಾಗೂ ಅವನದೇ ಎನ್ನಬಹುದಾದ ವಿಶಿಷ್ಟವಾದ ಶೈಲಿ. ಪಂಪನಿಗಿರುವಷ್ಟಿಲ್ಲದಿದ್ದರೂ ರನ್ನನು ಭಟ್ಟನಾರಾಯಣನಿಗೂ ಸ್ವಲ್ಪಮಟ್ಟಿಗೆ ಋಣಿ. ಭಟ್ಟನಾರಾಯಣನ ಕೃತಿ 'ವೇಣಿ ಸಂಹಾರ'ದ ಉಲ್ಲೇಖ ರನ್ನನ 'ಗದಾಯುದ್ಧ' ಕೃತಿಯಲ್ಲಿ ಎರಡು ಮೂರು ಸಾರಿ ಬಂದಿದೆ. ಕೆಲವು ಸನ್ನಿವೇಶಗಳು ಅಲ್ಲಿನ ಪಡಿಯಚ್ಚಾಗಿವೆ. ಅಲ್ಲಿಯ ಐದಾರು ಶ್ಲೋಕಗಳು ಮತ್ತು ಗದ್ಯಭಾಗಗಳ ಛಾಯೆ ರನ್ನನಲ್ಲಿಯೂ ಕಂಡುಬರುತ್ತದೆ. ಅದಕ್ಕೊಂದು ಉದಾಹರಣೆ ನೋಡಬಹುದು:

ಭಟ್ಟನಾರಾಯಣ :
ಮಯಾ ಪೀತಂಕ್ಷೀತಂ ತದನುಭವತಾಂಬಾ ಸ್ತನಯುಗಂ
ಮದುಚ್ಛಿರ್ಷಿರ್ವೃತ್ತಿಂ ಜನಯಸಿರಸ್ಯೇರ್ವತ್ಸಲತಯಾ
ವಿತಾನೇಷ್ವಪ್ಯೇವಂ ತವಮಮ ಚ ಸೋಮೋ ವಿಧಿರ ಭೂ
ನ್ನಿವಾಪಾಂಭಃ ಪೂರ್ವಂ ಪಿಬಸಿ ಕಥಮೇವಂ ತ್ವಮಧುನಾ. (6. 30)
ರನ್ನ :
ಜನನಿಸ್ತನ್ಯಮನುಂಡೆನಾಂ ಬಳಿಕ ನೀಂ ಸೋಮಾಮೃತಂ ದಿವ್ಯಭೋ
ಜನಮೆಂಬಿತವನುಂಡೆನಾಂ ಬಳಿಕೆ ನೀಂ ಬಾಲತ್ವದಿಂದೆಲ್ಲಿಯುಂ।
ವಿನಯೋಲ್ಲಂಘನ ಮಾದುವಿಲ್ಲ ಮರಣಕ್ಕೆನ್ನಿಂದೆ ನೀಂ ಮುಂಚಿದಪ್
ಮೊನೆಯೊಳ್ ಸೂಳ್ ತಡಮಾಯ್ತು ದೊಂದೆಡೆಯೊಳ್‌ಹಾವತ್ಸ ದುಶ್ಶಾಸನಾ॥ (5. 7)

ರನ್ನನ ವಿಶೇಷತೆ ಅವನ ಸ್ವಂತಿಕೆ. ಅವನ ಕಥಾವಸ್ತುವು ಮಹಾಭಾರತದ್ದಾಗಿದ್ದರೂ, ಅದರಲ್ಲಿನ ಒಂದು ಭಾಗವನ್ನು ತೆಗೆದುಕೊಂಡು ಸಿಂಹಾವಲೋಕನ ಮಾಡುವ ಕಾರ್ಯ ಮಾಡಿದ್ದಾನೆ. ಮೂಲ ಸಾಮಗ್ರಿಗಳ ವಿವಿಧ ಸಂಯೋಜನೆಯ

ಮೂಲಕವಾಗಿ ಫಲಿಸಿದ ಏಕಮುಖಿ ಕಲಾಕೃತಿಯ ಸೃಂತಿಕೆ ಹಾಗೂ ಸಾಮರಸ್ಯದಲ್ಲಿ ರನ್ನನ ಮಹೋನ್ನತಿ ತಲೆಯೆತ್ತಿ ನಿಂತಿದೆ. ಅಂತೂ ಮೂಲವನ್ನು ಸ್ವೀಕರಿಸಿಯೂ ಅದಕ್ಕೆ ಕೊಟ್ಟ ಚಿನ್ನದ ಸ್ವತಂತ್ರ ಲೇಪದಿಂದ ಬಂದ ಅಚ್ಚರಿಯ ಹೊಳಪು, ಕೇವಲ ಸ್ವತಂತ್ರ ನಿರ್ಮಾಣಕ್ಕಿಂತ ಪೂರ್ವಕಥೆಯ ಪೂರ್ವ ನಿರ್ಮಾಣದ ಮೂಲಕ ಉತ್ತಮ ಕಲಾವಂತಿಕೆ, ಪರಾಕಾಷ್ಠಗುಣಗಳಿಂದ ಗದಾಯುದ್ಧದ ವಸ್ತುರಚನೆ ಭವ್ಯಸುಂದರವಾಗಿದೆ. ಅದರ ಘನತೆಗೆ ದೃಶ್ಯಕಾವ್ಯದ ಸ್ವರೂಪ ಇನ್ನಷ್ಟು ಸೊಗಸನ್ನು ತಂದೊಡ್ಡಿದೆ.''[18]

**ಚಾವುಂಡರಾಯ**

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇಬ್ಬರು ಚಾವುಂಡರಾಯರು ಬರುತ್ತಾರೆ. ಒಬ್ಬ 10ನೆ ಶತಮಾನಕ್ಕೆ ಸೇರಿದ ಜೈನಕವಿ. ಮತ್ತೊಬ್ಬ 12ನೇ ಶತಮಾನಕ್ಕೆ ಸೇರಿದ ಬ್ರಾಹ್ಮಣ ಕವಿ. ಮೊದಲನೇ ಚಾವುಂಡರಾಯನೇ ಜಗತ್ಪ್ರಸಿದ್ಧವಾದ ಶ್ರವಣಬೆಳಗೊಳದ ಗೊಮ್ಮಟ ವಿಗ್ರಹದ ರೂವಾರಿ. ಈತ ಗಂಗರಸ ಮಾರಸಿಂಹ (ಕ್ರಿ. ಶ. 961-74) ಹಾಗೂ ನಾಲ್ಕನೆ ರಾಚಮಲ್ಲನ ಆಶ್ರಯದಲ್ಲಿ ಮಹಾಮಾತ್ಯನಾಗಿದ್ದನು. ಆದಿಕವಿ ಪಂಪನಂತೆ ಚಾವುಂಡರಾಯನು ಕವಿಯೂ ಹೌದು. ಕಲಿಯೂ ಹೌದು.

'ತ್ರಿಷಷ್ಠಿ ಲಕ್ಷಣ ಮಹಾಪುರಾಣ' (ಚಾವುಂಡರಾಯ ಪುರಾಣ) ಎಂಬ ಕನ್ನಡ ಗದ್ಯಗ್ರಂಥವೂ ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಕೃತವಾದ 'ಗೊಮ್ಮಟಸಾರ'ಕ್ಕೆ ಬರೆದ ಟೀಕಾ ಗ್ರಂಥ 'ವೀರ ಮಾರ್ತಂಡೀ' ಚಾವುಂಡರಾಯನ ಕೃತಿಗಳೆಂದು ತಿಳಿಯಲಾಗಿದೆ.[19]

ಚಾವುಂಡರಾಯನು ಜಿನಸೇನ-ಗುಣಭದ್ರರ ಮಹಾಪುರಾಣವನ್ನು ಮುಖ್ಯವಾದ ಆಕರವನ್ನಾಗಿ ಆಶ್ರಯಿಸಿ ಅಲ್ಲಿ ಸವಿಸ್ತಾರವೂ, ಸುದೀರ್ಘವೂ ಆಗಿ ನಿರೂಪಿಸಲ್ಪಟ್ಟಿರುವ ಪದ್ಯನಿಬದ್ಧವಾದ ತೀರ್ಥಂಕರಾದ್ಯರ ಚರಿತ್ರೆಯನ್ನೇ ತನ್ನ ಕೃತಿಯಲ್ಲಿ ಬಹುವಾಗಿ ಸಂಕ್ಷೇಪಗೊಳಿಸಿ ಸರಳವೂ ಸುಲಭವೂ ಆದ ಗದ್ಯದಲ್ಲಿ ನಿರೂಪಿಸಿದ್ದಾನೆ ಎಂಬುದು ಗೋಚರವಾಗುತ್ತದೆ. ಕಥಾವಸ್ತು ವಿಷಯ ವಿನ್ಯಾಸ, ಅಂಕಿತನಾಮಗಳು ಇವುಗಳಿಂದ ಕಂಡುಬರುವ ಗಾಢವಾದ ಸಾದೃಶಗಳಿಂದ ಅದನ್ನು ಗುರುತಿಸುವುದು ಸಾಧ್ಯವಾಗಿದೆ. ಮೂಲವನ್ನು ಸಂಕ್ಷೇಪಿಸುವಲ್ಲಿ ಅದನ್ನು ನಿಷ್ಠೆಯಿಂದ ಅನುಸರಿಸುತ್ತಾ ಭಾವಾನುವಾದ ಮಾಡುತ್ತಾ ಸಾಗಿರುವುದು ಕಾಣುತ್ತದೆ. ವಿರಳವಾದ ಶಬ್ದಾನುವಾದದ ರೀತಿಯುಂಟು. ಹೀಗಾಗಿ ಮೂಲದ ವಾಕ್ಯಗಳನ್ನು ಇನ್ನೂ ಅಡಕವಾಗಿಯೂ ಖಚಿತವಾಗಿಯೂ ಹೇಳುವುದಕ್ಕೆ ಅವಕಾಶ ದೊರೆತಿದೆ. ಕೆಲವೆಡೆ ಸಂಗ್ರಾಹಕತೆ ಹಿತದ ಮಿತಿ ದಾಟಿದಾಗ ಮೂಲದ ಆಶಯ ಹದಗೆಟ್ಟಿರುವುದೂ ಉಂಟು. ಒಟ್ಟಿನಲ್ಲಿ ಕವಿ ತೋರಿರುವ ಸಂಯಮ ಯಶಸ್ವಿಯಾಗಿದೆ.[20]

'ತ್ರಿಷಷ್ಠಿಶಲಾಕಪುರುಷಪುರಾಣ'ದ ಮೇಲೆ ಇತರರ ಪ್ರಭಾವವನ್ನು ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ ಹೀಗೆ ಗುರುತಿಸುತ್ತಾರೆ. ''ಚಾವುಂಡರಾಯ ಅಲ್ಲಿಯ ಭಾಗಗಳನ್ನು ನುಡಿಗಟ್ಟುಗಳನ್ನು ವಾಕ್ಯಗಳನ್ನು ನೇರವಾಗಿ ತೆಗೆದುಕೊಂಡಿರುವುದು. ಆತನ ಕೃತಿ 'ಆದಿಪುರಾಣ' ಭಾಗದಲ್ಲಿ ಅಲ್ಲಲ್ಲಿ ಕಣ್ಣಿಗೆ ಕಟ್ಟಿನಿಲ್ಲುತ್ತದೆ. ಆದರೆ ಇಲ್ಲಿಯೂ ಸಾರಾಂಶ ಗ್ರಹಣವೇ ದೃಷ್ಟಿಪಥದಲ್ಲಿದ್ದುಕೊಂಡಿದೆ.''[21]

'ಅಜಿತ ಪುರಾಣ' ಕಥಾ ಭಾಗದಲ್ಲಿ ಮಾತ್ರವಲ್ಲದೆ 'ಚಾವುಂಡರಾಯ ಪುರಾಣ' ಇತರ ಕಥಾ ಭಾಗಗಳಲ್ಲಿಯೂ ರನ್ನನ 'ಅಜಿತ ಪುರಾಣ'ದೊಡನೆ ಹೋಲುವ ಕಥಾಂಶಗಳು ಅಲ್ಲಲ್ಲಿ ದೊರೆಯಬಹುದು.[22]

ಜಿನಸೇನ-ಗುಣಭದ್ರರ ಸಂಸ್ಕೃತ 'ಮಹಾಪುರಾಣ' 'ಚಾವುಂಡರಾಯಪುರಾಣ'ದ ಮುಖ್ಯ ಆಕರ. 'ಚಾವುಂಡರಾಯ ಪುರಾಣ'ದ 'ಆದಿಪುರಾಣ' ಭಾಗದಲ್ಲಿ ಶ್ರೀಮತಿ ಅಶೋಕವನದಲ್ಲಿ ಪಂಡಿತೆಯೊಡನೆ ತನ್ನ ಕಳೆದ ಮೂರನೆ ಭವದ ವೃತ್ತಾಂತವನ್ನು ನಿರೂಪಿಸಿದಳೆಂದು ಹೇಳುವಲ್ಲಿ ಈ ರೀತಿ ಇದೆ:

.......ಆನೀ ಭವಕ್ಕೆ ಮೂರನೆಯ ಭವದೊಳ್ ದಾತಕೀಷಂಡದ ಮೂಡಣ ಮಂದಿರದ ಪವಿದೇಹದ ಸೀತೋದಾನದಿಯ ಬಡಗಣ ತಡಿಯ ಗಂಧಿಲ ವಿಷಯದ ಪಾಟಲಿ ಗ್ರಾಮದೊಳ್ ನಾಗದತ್ತನೆಂಬ ಪರದಂಗಮಾತನ ಪರದಿತಿ ವಸುದತ್ತೆಗಂ ನಂದಂ ನಂದಿಮಿತ್ರಂ ನಂದಿಷೇಣಂ ವರಸೇನಂ ಜಯಸೇನನೆಂಬೈವರ್ ತನಯರಿಂದಂ ಮದನಕಾಂತ ಶ್ರೀಕಾಂತೆಯುಮೆಂಬಿರ್ವರ್ ತನೂಜೆಯರಿಂದಂ ಕಡೆಯ ಗರ್ಭದೊಳಾಂ ನೆಲಸಲೊಡನೆನ್ನದೊಂದ ಶುಭ ಕರ್ಮೋದಯ ದಿನೆಸ್ನೋಡವುಟ್ಟಿದರುಂ ತಂದೆಯುಂ ಕೆಳದೊಡೆ ಅರಸರ ದೆಸೆಯಿಂ ಮನೆಯುಂ ಕವರ್ತೆವೋಗೆ ಪೆರರ ಕೀವಿಲೊಳ್ ಸಾರ್ದೆಮ್ಮಬ್ಬೆಯುಂ ಮುತ್ತಬ್ಬೆಯುಂ ಬದುಗುಗೆಯ್ಯುಣಿತಿರ್ಪಿನಂ ಆಂ ಪುಟ್ಟಲೊಡನೆನ್ನಮೆಯ್ಯ ದುರ್ಗಂಧಕ್ಕೆ ಪೇಸಿ ಕಂಡರೆಲ್ಲಮೆರೆದು ಕಳೆಯೆ ಪ್ರೇತವನದೊಳ್ ನನ್ನಂ ಬಿರ್ಲಾಶೀರ್ಣ ಚೀರಂಗಳಿಂದಂ ಪುದಿದ್ದಿಸಿ ತಾಮಿರ್ವರುಂ ತಿರಿದು ತಂದಿಕ್ಕಿಗಂಜಿಯೆಮಿದುಂ ತಿಂದುಂ ಪೆಸರುಮಿಲ್ಲದೆ ನಿರ್ನಾಮಿಕೆಯಾಗಿ ಬಳೆವನ್ನಗಂ''

ಜಿನಸೇನ-ಗುಣಭದ್ರರ ಮಹಾಪುರಾಣದಲ್ಲಿ ಇದಕ್ಕೆ ಸಂವಾದಿಯಾದ ಭಾಗ ಈ ರೀತಿಯಾಗಿದೆ:

ಅಹಂಪೂರ್ವಭವನೇ ಭೂವಂ ಧಾತಿಕೀ ಖಂಡನಾಮನಿ
ಮಹಾದ್ವೀತೇ ಸರೋಜಾಕ್ಷಿ ಸ್ವರ್ಗಭೂಮ್ಯತಿ ಶಾಯಿನಿ ॥
ತತ್ರಾಸ್ತಿ ಮಂದರಾತ್ಪೂರ್ನಾದ್ವಿದೇಹೇ ಪ್ರತ್ಯಗಾಶ್ರಿತೇ
ವಿಷಯೋ ಬಂಧಿಲಾಭಿಖ್ಯೋ ಯಂಃ ಕುರೂನಪಿ ನಿರ್ಜಯೇತ್ ॥
ತತ್ರಾಸೀತ್ಪಾಟಲಿ ಗ್ರಾಮೆಂ ನಾಗದತ್ತೋ ವಣಿಕ್ಸುತಃ
ಸುರತಿಸ್ತತ್ಯ ಕಾಂತಾಭೂತ್ತಯೋ ರ್ಜಾತಾಃ ಸುತಾಃ ಇಮೇ ॥
ವರಸೇನೋ ಜಯಾದಿಶ್ಚ ನಂದಿವೇಣಾಹ್ವಯಃ ಪರಃ
ನಂದಶ್ಚ ನಂದಿಮಿತ್ರಶ್ಚ ಸೇನಸ್ತತ್ಸೂನವಃ ಕ್ರಮಾತ್ ॥
ಪುತ್ರಿಕೇಚ ತ್ರಯೋರ್ಜಾತೇ ಮದನ ಶ್ರೀ ಪದಾರಿಕೇ
ಕಾಂತೇ ತಯೋರಹಂ ಜಾತಾ ನಿರ್ನಾರಹಂ ಜಾತಾ ನಿರ್ನಾಮೆಲೆ ಕನೀಯಸೀ ॥

ಶ್ರೀಮತಿ ನಿರೂಪಣೆಯಲ್ಲಿ ನಿರ್ನಾಮಿಕೆಯಾದಂದಿನ ಭವದ ದೀನ ಹೀನಸ್ಥಿತಿಯ ನಿವೇದನೆ 'ಚಾವುಂಡರಾಯ ಪುರಾಣ'ದಲ್ಲಿ ಕಂಡಂತೆ 'ಪೂರ್ವ ಪುರಾಣ'ದಲ್ಲಿ ನಾವು ಕಾಣಲಾರೆವು.

ಪಂಪನ 'ಆದಿಪುರಾಣ'ದ ಭಾಗವನ್ನೇ ಇಲ್ಲಿ ಚಾವುಂಡರಾಯ ಅನುಸರಿಸಿದ್ದಾನೆ. ಅಲ್ಲದೆ ಅನುಸರಣೆಯಲ್ಲಿ ಅವನ ದೃಷ್ಟಿ ಎಂತಹದೆಂಬುದನ್ನು ಗುರುತಿಸಬಹುದು. ವರ್ಣನೆಗಳನ್ನು ಲೋಪಮಾಡುವಿಕೆ, ಕಥೆಯ ಸಾರಾಂಶವನ್ನಷ್ಟೆ ಗ್ರಹಿಸುವಿಕೆ ಮಾರ್ಗದೆಡೆಗೆ ದೇಸಿಯನ್ನು ಬಳಸುವಿಕೆ, ಮೂಲ ಆಕರವನ್ನು ಬಳಸುವಿಕೆ, ಇಂತಹ ಕೆಲವಂಶಗಳಿಂದಾಗಿ ಚಾವುಂಡರಾಯ 'ಅನುವಾದ ಕಲೆ'ಗೆ ಹೊಸವ್ಯಾಖ್ಯಾನ ಬರೆದಿದ್ದಾನೆ.

ಇದಕ್ಕೆ ಪುಷ್ಟಿ ಕೊಡುವಂತೆ ಡಾ॥ ರಂ. ಶ್ರೀ. ಮುಗುಳಿ ಅವರು ಚಾವುಂಡರಾಯನ ಪ್ರಾಮಾಣಿಕ ಅನುವಾದ ಕಲೆಯನ್ನು ಹೀಗೆ ಗುರುತಿಸಿದ್ದಾರೆ: ''ಮಹಾಪುರಾಣ''ವು ಜೈನ ಸಂಪ್ರದಾಯದಲ್ಲಿ ಪವಿತ್ರ ಗ್ರಂಥಗಳಲ್ಲೊಂದು. ಚಾವುಂಡರಾಯನು ಈ ಪವಿತ್ರ ಭಾವನೆಯಿಂದ ಎಲ್ಲಿಯೂ ಸ್ವತಂತ್ರವಾಗಿ ಕಡೆಗೆ ಮೂಲದಲ್ಲಿಯ ಮುಖ್ಯ ಚಾರಿತ್ರಾಂಶ ಹಾಗೂ ಮತಾಂಶಗಳನ್ನು ಅನುವಾದವೆಂದು ತೋರದಂತೆ ಕುಶಲವಾಗಿ ಸಂಗ್ರಹಿಸಿದ್ದಾನೆ[23]

## ಒಂದನೇ ನಾಗವರ್ಮ

10ನೇ ಶತಮಾನದ ತುತ್ತ ತುದಿಯಲ್ಲಿ ಬಾಳಿದ ಗ್ರಂಥಕಾರ ಒಂದನೆಯ ನಾಗವರ್ಮ. 'ಕರ್ನಾಟಕ ಕಾದಂಬರಿ' ಹಾಗೂ 'ಛಂದೋಂಬುದಿ' ಕಾವ್ಯಗಳ ಕರ್ತೃ ಈತ.

'ಕರ್ನಾಟಕ ಕಾದಂಬರಿ' ಬಾಣನ ಸಂಸ್ಕೃತ ಕಾದಂಬರಿಯ ಕನ್ನಡ ಪರಿವರ್ತನ. ಅನುಪಲಬ್ಧವಾದ ಅಸಗನ 'ಕರ್ನಾಟಕ ಕುಮಾರಸಂಭವಕಾವ್ಯ'ವನ್ನು ಬಿಟ್ಟರೆ ಇದೇ ಪ್ರಾಚೀನ ಸಂಸ್ಕೃತ ಕಾವ್ಯದ ಪ್ರಥಮ ಕನ್ನಡ ಅನುವಾದ. ಸಂಸ್ಕೃತದಲ್ಲಿಯ ಉತ್ತಮ ಸಾಹಿತ್ಯ ಗ್ರಂಥವೊಂದನ್ನು ವಿಶಿಷ್ಟವಾದ ರೀತಿಯಲ್ಲಿ ಕನ್ನಡಿಸಬೇಕು ಎಂಬ ಉದ್ದೇಶದಿಂದ ನಾಗವರ್ಮನು ಈ ಪರಿವರ್ತನೆಯನ್ನು ಮಾಡಿದ್ದಾನೆ. ಈ ದಾರಿಯಲ್ಲಿ ಇವನೇ ಮೊದಲಿಗ.[24]

ಜನ್ಮಾಂತರಗಳ ಚಮತ್ಕಾರಗಳ ಸರಪಣಿಯಾಗಿ ಪ್ರಸಿದ್ಧವಾಗಿದ್ದ ಈ ಕತೆಯನ್ನು ಬಾಣಭಟ್ಟ ಸುಸಂಬದ್ಧವಾದ ರೀತಿಯಲ್ಲಿ ರೂಪಿಸಿದ್ದಾನೆ. ಅದರ ಸಂವಿಧಾನ ಎಷ್ಟೊಂದು ಅಚ್ಚುಕಟ್ಟಾಗಿದೆ ಎಂದರೆ ಒಂದನೇ ನಾಗವರ್ಮ ಅದನ್ನು ಎಲ್ಲಿಯೂ ಬದಲಾವಣೆ ಮಾಡಿಲ್ಲ. ತನ್ನ ಪ್ರತಿಭೆಯನ್ನು ಕತೆ ಹೇಳುವ ರೀತಿಯಲ್ಲಿ ತೋರಿಸಿದ್ದಾನೆ. ಈ ಕೃತಿಯ ನಾಯಿಕೆ 'ಕಾದಂಬರಿ'ಯಾದರೂ 'ಮಹಾಶ್ವೇತೆ'ಯ ಕಥೆಯೇ ಹೆಚ್ಚು ಮನೋಜ್ಞವೆನಿಸುತ್ತದೆ. ಜೀವನದಲ್ಲಿ ಅಮೂಲ್ಯವೆನಿಸುವ ಮೈತ್ರಿ, ಶ್ರದ್ಧೆ, ಪ್ರೀತಿಗಳ ಶಕ್ತಿಯನ್ನು, ಅವುಗಳಿಂದ ಜೀವನದಲ್ಲಿ ಮೂಡಬಹುದಾದ ಚೆಲುವನ್ನು ಇಬ್ಬರೂ ಸೊಗಸಾಗಿ ಚಿತ್ರಿಸಿದ್ದಾರೆ.

ಬಾಣನ 'ಕಾದಂಬರಿ' ಸಂಸ್ಕೃತ ಗದ್ಯ ಮಹಾಕಾವ್ಯ. ಇದರ ಪೂರ್ವಾರ್ಧವನ್ನು ಬಾಣ ಉತ್ತರಾರ್ಧವನ್ನು ಅವನ ಮಗ ಪೂರ್ಣಗೊಳಿಸಿದರೆಂಬ ಅಭಿಪ್ರಾಯವಿದೆ. ಆದರೆ ನಾಗವರ್ಮ ಇದೇ ಕೃತಿಯನ್ನು ಒಬ್ಬರದೆಂಬಂತೆ ಭಾವಿಸಿ ಕಾವ್ಯವೆಂಬಂತೆ ಕಂಡಿದ್ದಾನೆ. ಗದ್ಯ ಕೃತಿಯನ್ನು ಚಂಪೂಕಾವ್ಯವಾಗಿ ಪರಿವರ್ತಿಸಿದ್ದಾನೆ.

ನಾಗವರ್ಮ ಇದನ್ನು ಕನ್ನಡಿಸುವಲ್ಲಿ ಅವಶ್ಯವೆನಿಸುವಲ್ಲಿ ಸ್ವತಂತ್ರವಹಿಸಿದ್ದಾನೆ. ಈ ಸ್ವಾತಂತ್ರ್ಯ ಕೂಡ ಕನ್ನಡದ 'ಕರ್ನಾಟಕ ಕಾದಂಬರಿ'ಗೆ ಪೂರಕವಾಗಿರುವುದು ಗಮನಾರ್ಹ ವಿಚಾರ. ಉದಾಹರಣೆಗೆ ಹೇಳುವುದಾದರೆ ಬಾಣನ ಉತ್ತರ ಭಾಗದ ಕೃತಿಯ 317ನೇ ವಚನಕ್ಕೂ 318ನೇ ವಚನಕ್ಕೂ ನಡುವೆ ಸಂಸ್ಕೃತ ಮೂಲದಲ್ಲಿದ್ದ ಪತ್ರಲೇಖೆಯ ಹೇಳಿಕೆಯಲ್ಲಿ ನಾನೂರು ಪದಗಳಷ್ಟು ಭಾಗವನ್ನು ಕೈಬಿಟ್ಟಿದ್ದಾನೆ. ಇದರಿಂದ ಕನ್ನಡದ ಕೃತಿಗೆ ನಷ್ಟವೇನೂ ಇಲ್ಲವೆಂದೇ ಹೇಳಬೇಕು.[25]

ಬಾಣನ ಗದ್ಯ ಕೃತಿಯನ್ನು ಚಂಪೂ ಕಾವ್ಯವನ್ನಾಗಿ ಮಾಡಿಕೊಂಡ ನಾಗವರ್ಮನ ಬದಲಾವಣೆ ಕುರಿತು ವಿದ್ವಾಂಸರು ಹೀಗೆ ಗುರುತಿಸಿದ್ದಾರೆ. ಬಾಣನು ಬರೆದದ್ದು ಶಾಸ್ತ್ರ ಪರಿಭಾಷೆಯಲ್ಲಿ ಗದ್ಯವೆನಿಸದ್ದರೂ ಅದು ಒಂದು ತರಹದ ಮುಕ್ತಛಂದಸ್ಸಿನ ಪದ್ಯವೇ ಎನ್ನಬೇಕು. ಅದಕ್ಕೆ ಸಮೀಪವರ್ತಿಯಾದದ್ದು ನಾಗವರ್ಮನ ಚಂಪೂ ಪ್ರಕಾರವೇ.[26]

ಅನುವಾದವು ಮೂಲ ಕೃತಿಯಲ್ಲಿನ ಅರೆ, ಕೊರೆಗಳನ್ನು ತಿದ್ದಬಹುದು. ಅದಕ್ಕೆ ಉದಾಹರಣೆ ಸುಮಾರು ನಾನ್ನೂರು ಸಮಾಸ ಪದಗಳಿಂದ ಬಾಣನು ಮಾಡಿದ ಕಿರಾತ ನಾಯಕನ ವರ್ಣನೆಯ ಉಪಭಾಗವನ್ನು ನೂರು ಇಪ್ಪತ್ತು ಪದಗಳ ಒಂದು ವಚನದಲ್ಲಿ ಸಂಗ್ರಹಿಸಿ, ನಡುವೆ ಉಳಿದ ಭಾಗಗಳನ್ನು ಮೊದಲು ಒಂದು ವೃತ್ತದಲ್ಲಿಯೂ, ಕಡೆಯಲ್ಲಿ ಒಂದು ವೃತ್ತ, ಒಂದು ಕಂದ, ಒಂದು ವಚನ ಎರಡು ಕಂದಗಳಲ್ಲಿ ಅಳವಡಿಸಿದ್ದಾನೆ.

ಅಪತ್ಯಮಿವ ವಂಧ್ಯಾಚಲಸ್ಯ ಅಂಶಾವತಾರಮಿವ ಕೃತಾಂತಸ್ಯ
ಸಹೋದರಮಿವ ಪಾಕಸ್ಯ ಸಾರಮಿವ ಕಲಿ ಕಾಲಸ್ಯ

ಎಂಬ ಭಾಗವನ್ನು

ಪಡೆದಂ ವಿಂಧ್ಯ ನಗೇಂದ್ರ
ಕ್ರೊರವುಟ್ಟಿದನಂತಕರಿಗೆ ನಂಟಂಪಾಪ
ಕ್ಕೊಡನಾಡಿ ಕಲಿಗೆನಿಪ್ಪ
ಪೊಡೆವಿಯೊಳಿನ್ನಾತನಿಂ ಭಯಂ ಕಸಾಮಂ।

ಬಾಣನ ಐದು ನೂರು ಪದಗಳಿಗೂ ಹೆಚ್ಚಾಗಿರುವ ಆಶ್ರಮದ ವರ್ಣನೆ ನಾಗವರ್ಮನು ಒಂದೇ ವಾಕ್ಯದಲ್ಲಿ ಪೋಣಿಸಿರುವ ಸುಂದರ ಶಬ್ದಗಳಿಂದಾಗಿ ಮೂಲದ ಕಸುವು ಹಾಗೆಯೇ ಉಳಿದಿವೆ.

ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಸತ್ವ ಬೇರೆಬೇರೆಯಾದುದರಿಂದಲೂ ಬಾಣನ ಸಮಕಾಲೀನ ಸಮಾಜದ ವರ್ಣನೆ ನಾಗವರ್ಮನಿಗೆ ತುಂಬಾ ಹಳೆಯದಾದುದರಿಂದಲೂ ಭಾವಗಳನ್ನು ಅನುವಾದದಲ್ಲಿ ತರದೇ ಹಾಗೆಯೇ ಬಿಟ್ಟಿದ್ದಾನೆ.

''ಭಾಷಾಂತರ ಅಧ್ಯಯನ ವಿಷಯದಲ್ಲಿ ರೂಪಾಂತರ ಎಂಬ ವಿಭಾಗವುಂಟಷ್ಟೆ. ಇದನ್ನು ನಾಗವರ್ಮ ಅನುಸರಿಸಿದ್ದಾನೆ. ಸಮಾಸಮಯವಾದ ಬಾಣನ ಗದ್ಯ ಬಾಣಾವಳಿಯನ್ನು ಪರಿವರ್ತನಕಾರನು ಎದುರಿಸಿ ನಿಲ್ಲಲಾರನು. ಇದ್ದಂತೆ ಅವನ್ನಿಟ್ಟು ಕನ್ನಡ ಪ್ರತ್ಯಯಗಳಿಂದ ಕೊನೆಗೊಳಿಸಬೇಕು. ಕೃತಕವಾಗಿ ಕನ್ನಡಿಸಬೇಕು. ಮಾರ್ಪಾಡಿನಿಂದ ಈ ಬಿಕ್ಕಟ್ಟು

ಇಲ್ಲವಾಯಿತು. ರೂಪಾಂತರದ ಮೂಲಕ ಪರಿವರ್ತನವು ಮೂಲದಿಂದ ದೂರಹೋಗಬಾರದೆಂದು, ಭಾಷಾಂತರ ಬುದ್ಧಿಯ ಮೂಲಕ ತೀರ ಹತ್ತಿರ ಬರಬಾರದೆಂದೂ ನಾಗವರ್ಮನು ಒಂದು ನಡುದಾರಿಯನ್ನು ಹಿಡಿದು ಪರಿವರ್ತನ ಕಲೆಗ ಮಾದರಿಯನ್ನು ನಿರ್ಮಿಸಿಕೊಟ್ಟಿದ್ದಾನೆ. ಮೂಲದ ಕಥಾಪ್ರಸಾರ, ಪಾತ್ರಗಳ ಜೀವಾಳ, ವರ್ಣನೆಗಳ ಸ್ವಾರಸ್ಯ ಇವುಗಳಿಗ ಒಟ್ಟಿನಲ್ಲಿ ಕುಂದು ಬರದಂತೆ ಮೂಲವನ್ನು ಮನಸ್ಸಿನಲ್ಲಿಟ್ಟುಕೊಂಡು ತಾನೇ ರಚಿಸುವಂತೆ ಸಲೀಲವಾಗಿ ಬರೆದಿದ್ದಾನೆ. ಇದರಿಂದ ಅನುಕೃತಿಯು ಸ್ವತಂತ್ರ ಕೃತಿಯಂತಾಗಿದೆ.''[27]

ನಾಗವರ್ಮ ಉತ್ತಮ ಅನುವಾದಕನೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. ''ಸಂಸ್ಕೃತ' ಕನ್ನಡಗಳನ್ನು ಹದವಾಗಿ ಬೆರೆಸಿ ಅನುವಾದಗೊಂಡ 'ಕರ್ನಾಟಕ ಕಾದಂಬರಿ' ಇಂದಿಗೂ ರಸಿಕ ಜನರಿಗೆ ಆಹ್ಲಾದಕಾರಿಯಾಗಿದೆ. ಸಾವಿರಕ್ಕೂ ಮಿಕ್ಕಿ ವರುಷಗಳು ಉರುಳಿಹೋಗಿದ್ದರೂ ಈ ಅನುವಾದವನ್ನು ಸರಿಗಟ್ಟುವ ಮತ್ತೊಂದು ಅನುವಾದ ಕನ್ನಡದಲ್ಲಿ ಬಂದಿಲ್ಲವೆಂದರೆ ಕರ್ನಾಟಕ ಕಾದಂಬರಿ ಹಿರಿಮೆ ಮಹತ್ವ ಯಾರಿಗೂ ಗೊತ್ತಾದೀತು.[28]

**ದುರ್ಗಸಿಂಹ**

ದುರ್ಗಸಿಂಹ 10ನೆ ಶತಮಾನದ ಕೊನೆ ಹಾಗೂ 11ನೆ ಶತಮಾನದ ಪ್ರಾರಂಭದ ಪ್ರಮುಖನಾದ ಕವಿ. ಈತ ತನ್ನ ಪಂಚತಂತ್ರ ಕೃತಿಯನ್ನು ಕ್ರಿ. ಶ. 1031ರಲ್ಲಿ ರಚಿಸಿದನೆಂದೂ ಹೇಳಲಾಗಿದೆ. ಭಾಷಾಂತರಕಾರ ಹೇಗೆ ಕಾಲಾತೀತನಾಗಿರುತ್ತಾನೆಂಬುದಕ್ಕೆ ದುರ್ಗಸಿಂಹ ಸಾಕ್ಷ್ಯ ಒದಗಿಸಿದ್ದಾನೆ. ಮೂಲಕೃತಿ ಬೇರೆ ಕಾರಣದಿಂದ ಮರೆಯಾದರೆ ಭಾಷಾಂತರ ಕೃತಿಯ ಸಹಾಯದಿಂದಲೇ ಮೂಲಕೃತಿಯ ಸೊಗಸನ್ನು ಕಾಣಬಹುದು. ಆಗ ಭಾಷಾಂತರಕಾರನಿಗೆ ಇಲ್ಲದ ಕೋಡು ಮೂಡುತ್ತದೆ. ದುರ್ಗಸಿಂಹನ ಪಾಲಿಗೆ ಇಂತಹ ಹೆಗ್ಗಳಿಕೆ ದೊರೆತಿದೆ. ಇದು ನೈಜ ಭಾಷಾಂತರಕಾರನಿಗೆ ದೊರೆಯಬಹುದಾದ ವಿಶಿಷ್ಟ ಸ್ಥಾನವೂ ಹೌದು. ಅದರ ಸಾರಾಂಶ ಹೀಗಿದೆ.

ಗುಣಾಢ್ಯನು ಪೈಶಾಚಿ ಭಾಷೆಯಲ್ಲಿ ಬೃಹತ್ಕಥೆಗಳನ್ನು ಹೇಳಿದ್ದನು. ಆ ಕಥಾ ಸಮುದ್ರದಲ್ಲಿ ಪಂಚರತ್ನಗಳಾದ ಐದು ಕಥೆಗಳನ್ನಾಯ್ದುಕೊಂಡು ವಸುಭಾಗಬಟ್ಟನು 'ಪಂಚತಂತ್ರ' ಎಂದು ಹೆಸರಿಟ್ಟು ಹೇಳಿದನು. ಆ ವಸುಭಾಗಭಟ್ಟನ ಕೃತಿಯನ್ನು ಕನ್ನಡದಲ್ಲಿ ''ಪೊಸತಾಗಿರೆ ವಿರಚಿಸುಂ'' ಎಂದು ದುರ್ಗಸಿಂಹನು ಹೇಳಿದ್ದಾನೆ. ಪ್ರಸ್ತುತ ವಸುಭಾಗಭಟ್ಟನ ಮೂಲ ಪಂಚಚಂತ್ರಗ್ರಂಥವೂ ದೊರೆಯುತ್ತಿಲ್ಲ. ದುರ್ಗಸಿಂಹನ ಕನ್ನಡಾನುವಾದ ಕೃತಿಯಿಂದಲೇ ಮೂಲವನ್ನು ತಿಳಿಯಬೇಕಾಗಿದೆ. ಈ ದೃಷ್ಟಿಯಿಂದ ದುರ್ಗಸಿಂಹನ ಕೃತಿಗೆ ಭಾರತೀಯ ಮಹತ್ವವಿದೆ.

ಕಥೆ-ನೀತಿಗಳಲ್ಲಿ ದುರ್ಗಸಿಂಹನು ಒಟ್ಟಿನಲ್ಲಿ ಮೂಲವನ್ನು ನಿಷ್ಠೆಯಿಂದ ಅನುಸರಿಸಿದಂತಿದೆ. ಆದರೂ ಹಲವು ಕಡೆ ವರ್ಣನ-ಕಥನಗಳಲ್ಲಿ ವಿಸ್ತರಣೆಯ ಕಲೆಯನ್ನು ತೋರಿಸಿದ್ದಾನೆ. ಪ್ರೌಢ ಚಂಪೂಕಾವ್ಯದ ರೀತಿಯಲ್ಲಿ ವರ್ಣನಾತ್ಮಕ ಗದ್ಯ-ಪದ್ಯಗಳನ್ನು ಸ್ವತಂತ್ರವಾಗಿ ರಚಿಸಿದ್ದಾನೆ. ಒಳ್ಳೆಯ ಅನುವಾದಕನ ವ್ಯುತ್ಪತ್ತಿ-ಪ್ರತಿಭೆಗಳು ದುರ್ಗಸಿಂಹನಲ್ಲಿವೆ.

ಕನ್ನಡ ಅನುವಾದಕರಲ್ಲಿ ದುರ್ಗಸಿಂಹನು ಮಧ್ಯಮ ತರಗತಿಯ ಮನ್ನಣೆಯ ಸ್ಥಾನಕ್ಕೆ ತಕ್ಕವನು.

**ನಾಗಚಂದ್ರ**

ಕನ್ನಡ ಸಾಹಿತ್ಯದ ಒಂದು ಸಂಧಿಕಾಲದಲ್ಲಿ ಬರುತ್ತಾನೆ ನಾಗಚಂದ್ರ. ಪಂಪನ ಕಾಲದ ಪರಿಸ್ಥಿತಿ ಇವರ ಕಾಲದಲ್ಲಿರಲಿಲ್ಲ. ಜೈನಧರ್ಮ ತನ್ನ ಮಹತ್ವ ಕಳಕೊಂಡಿತ್ತು. ವೀರಶೈವಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ವಚನ ಸಾಹಿತ್ಯ ಆವಿರ್ಭವಿಸಿ ಭಾಷಾ ಪಲ್ಲಟವಾಗಿ ನಡುಗನ್ನಡದ ಪ್ರಚಾರ ಮೊದಲಾಯಿತು. ಹೀಗಾಗಿ ಅವನ ಕಾವ್ಯಗಳಿಗೆ ವಿಶೇಷ ಮಹತ್ವವಿದೆ. ಅವನ ಕಾಲ ಕ್ರಿ. ಶ. 1100.

ಅವನ ಕೃತಿಗಳು 'ಮಲ್ಲಿನಾಥ ಪುರಾಣ' ಹಾಗೂ 'ರಾಮಚಂದ್ರ ಚರಿತ ಪುರಾಣಂ.' ಈತನಿಗೆ 'ಅಭಿನವ ಪಂಪ'ನೆಂಬ ಬಿರುದು ಸಹ ಇದೆ. ಈತನಿಗೆ ಆದಿಕವಿ ಪಂಪನಲ್ಲಿ ವಿಶೇಷ ಗೌರವವಿದೆ.

'ಮಲ್ಲಿನಾಥ ಪುರಾಣ' ನಾಗಚಂದ್ರನ ಪ್ರಥಮ ವಿರಚನೆ. ಇದು 19ನೆಯ ತೀರ್ಥಂಕರನಾದ ಮಲ್ಲಿನಾಥನ ಕತೆಯನ್ನು ನಿರೂಪಿಸುವ ಜೈನಪುರಾಣ. ಇದೊಂದು ಧಾರ್ಮಿಕ ಕೃತಿ. ಮಲ್ಲಿನಾಥ ಪುರಾಣದ ಕತೆ ವಾಸ್ತವವಾಗಿ ಪ್ರಮಾಣದಲ್ಲಿ ಕಿರಿದು. ಇದಕ್ಕೆ ಮೂಲ ಗುಣಭದ್ರಾಚಾರ್ಯರ 'ಉತ್ತರ ಪುರಾಣ'. ಇಲ್ಲಿ ಈ ಕತೆ ಕೇವಲ 125 ಶ್ಲೋಕಗಳಲ್ಲಿ ನಿರೂಪಿತವಾಗಿದೆ. ಚಾವುಂಡರಾಯನ 'ತ್ರಿಷಷ್ಟಿ ಶಲಾಕರಪುರುಷ ಪುರಾಣ'ದಲ್ಲಿ ಸುಮಾರು 45 ಪಂಕ್ತಿಗಳಷ್ಟು ಇದೆ. ಹೀಗೆ ಮೂಲದಲ್ಲಿನ ಕತೆಯನ್ನು ವಿಸ್ತರಿಸಿದ್ದಾನೆ. ಅಷ್ಟೆ ಅಲ್ಲ ಅದನ್ನು ಉತ್ತಮಪಡಿಸಿದ್ದಾನೆ. 'ಉತ್ತರ ಪುರಾಣ'ದಲ್ಲಿ ಬರುವ ಮಲ್ಲಿಜಿನನ ಕತೆ ನೀರಸವಾದುದು. ಶುದ್ಧ ಪುರಾಣೋಚಿತವಾದುದು. ನಾಗಚಂದ್ರ ಅದನ್ನು ರಸಾನ್ವಿತ ಕಲಾಕೃತಿಯನ್ನಾಗಿಸಲು ಉದ್ದೇಶಿಸಿದ್ದಾನೆ. ಪ್ರಾರಂಭದಲ್ಲಿ ಶೃಂಗಾರವನ್ನು ಅವನು ಎಷ್ಟೇ ತಲ್ಲೀನತೆಯಿಂದ ಚಿತ್ರಿಸಿರಲಿ, ಕಥೆಯ ಮುಖ್ಯಭಾಗಕ್ಕೆ ಬಂದಾಗ ಜಾಗೃತನಾಗಿ ಅದನ್ನು ಹಿಂದಿಕ್ಕಿ ಶಾಂತರಸಕ್ಕೆ ಅಗ್ರಪಟ್ಟ ಕಟ್ಟಿದ್ದಾನೆ.[29]

ರಾಮಚಂದ್ರ ಚರಿತ ಪುರಾಣವು ಕನ್ನಡದಲ್ಲಿ ಉಪಲಬ್ಧವಾದ ಮೊದಲನೆಯ ಜೈನ ರಾಮಾಯಣ. ನಾಗಚಂದ್ರನ ಹೆಚ್ಚು ಪರಿಪಕ್ವತೆಯನ್ನು ಪ್ರತಿಬಿಂಬಿಸುವ ಕೃತಿ. ಜೈನ ರಾಮಾಯಣಕ್ಕೂ ವಾಲ್ಮೀಕಿ ರಾಮಾಯಣಕ್ಕೂ ಹಲವು ಭೇದಗಳಿವೆ. ದಶರಥನ ಪುತ್ರಕಾಮೇಷ್ಟಿಯಾಗವಾಗಲಿ, ಹನುಮಂತನ ಸಮುದ್ರ ಲಂಘನವಾಗಲಿ ಅಥವಾ ರಾಮ ರಾವಣನನ್ನು ಹತ ಮಾಡುವುದಾಗಲಿ ಇಲ್ಲಿ ಕಾಣಬರುವುದಿಲ್ಲ.

ಜೈನ ರಾಮಾಯಣದ ಪರಂಪರೆಯಲ್ಲಿ ವಿಮಲಸೂರಿ ಹಾಗೂ ಗುಣಭದ್ರಾಚಾರ್ಯರೆಂಬ ವಿಭಾಗವುಂಟು. ವಿಮಲಸೂರಿ ಸಂಪ್ರದಾಯವೇ ಹೆಚ್ಚು ಪ್ರಚುರವೂ ಹೌದು. ವಿಮಲಸೂರಿಯ "ಪಉಮ ಚರಿತ" (ಪದ್ಮ ಚರಿತ) ಅತ್ಯಂತ ಪ್ರಾಚೀನವಾದ ಜೈನ ರಾಮಾಯಣ. ಇದರ ಭಾಷೆ ಪ್ರಾಕೃತ. ಕ್ರಿ. ಶ. 3ನೇ ಶತಮಾನದಲ್ಲಿ ಇದು ರಚಿತವಾಗಿದೆ. ಇದಕ್ಕಿಂತ ಹಿಂದೆ ಸಂಸ್ಕೃತದಲ್ಲಿ "ಮಹಾ ರಾಮಾಯಣ" ಎಂಬ ಜೈನ ರಾಮಾಯಣವನ್ನು ರವಿಷೇಣ (ಕ್ರಿ. ಶ. 678) ರಚಿಸಿದ. ನಾಗಚಂದ್ರನು ರವಿಷೇಣನಿಂದಲೂ ಪ್ರಭಾವಿತನಾಗಿದ್ದಾನೆ.

ನಾಗಚಂದ್ರ ಮೂಲ ಸಂಸ್ಕೃತ ರಾಮಾಯಣವನ್ನು ಮಕ್ಕೀಕಾಮಕ್ಕಿ ಅನುವಾದಿಸಿಲ್ಲ. ಅವನದು ಸಂಗ್ರಹಾನುವಾದ. "ಪ್ರಾಕೃತ ಮೂಲದೊಡನೆ ಹೋಲಿಸಿ ನೋಡಿದರೆ ನಾಗಚಂದ್ರನು ಕೊಟ್ಟಿರುವ ಸಂಗ್ರಹ ಹತ್ತರಲ್ಲಿ ಒಂದು ಪಾಲು ಕೂಡ ಆಗಿಲ್ಲ. ಯಾವುದನ್ನು ಬಿಡಬೇಕು, ಯಾವುದನ್ನು ಮಿತವಾಗಿ ಹೇಳಬೇಕು, ಯಾವುದನ್ನು ವಿಸ್ತರಿಸಬೇಕು ಎಂಬ ಪ್ರಮಾಣ ಜ್ಞಾನವು ನಾಗಚಂದ್ರನಲ್ಲಿ ಬಹುಮಟ್ಟಿಗೆ ಇದೆ" ಎಂಬ ಡಾ॥ ಡಿ. ಎಸ್. ಎಸ್. ಅವರ ಮಾತು ಸಮಂಜಸವಾಗಿದೆ. ಇದು ಭಾಷಾಂತರಕಾರನ ಅರ್ಹತೆಯೂ ಹೌದು.

ವಿಮಲಸೂರಿಯಲ್ಲಿ ಬರುವ ಅನೇಕ ಶುಷ್ಕವಾದ, ಪೇಲವವಾದ ಭಾಗಗಳಿಗೆ ನಾಗಚಂದ್ರ ಜೀವವನ್ನು, ಬಣ್ಣವನ್ನು ತುಂಬಿ ಉಜ್ವಲಗೊಳಿಸಿದ್ದಾನೆ. ಮೂಲದ ಮಂಕನ್ನು ಎಷ್ಟೋಕಡೆ ಬೆಳಗಿಸಿದ್ದಾನೆ. ಅಲ್ಲದೆ ಮೂಲದ ಸೌಂದರ್ಯವನ್ನು ಎಷ್ಟೋ ಕಡೆ ಪುಷ್ಟೀಕರಿಸಿದ್ದಾನೆ.

ಮೂಲದ ಕೆಲವು ಅನೌಚಿತ್ಯಗಳು ನೌಗಚಂದ್ರನಲ್ಲಿ ಪರಿಷ್ಕೃತವಾಗಿದೆ. ಉದಾಹರಣೆಗೆ ಮಂಡೋದರಿಯ ಸವತಿ ಮಾತ್ಸರ್ಯವನ್ನು ತೋರಿಸುವ ಒಂದು ಸನ್ನಿವೇಶ. ಹಾಗೆಯೇ ಮೂಲದಲ್ಲಿಲ್ಲದ ಎಷ್ಟೋ ಚೆಲುವುಗಳು ಅವನಲ್ಲಿ ಹೊಸದಾಗಿ ಸೇರಿವೆ. ಉದಾಹರಣೆಗೆ ಉತ್ಪಲನೇತ್ರನ ವಿವಾಹ ಸಂದರ್ಭ.

ಪ್ರತಿನಾಯಕನಾದ ರಾವಣ ಪಾತ್ರ ಚಿತ್ರಣದಲ್ಲಿ ನಾಗಚಂದ್ರ ಸ್ವತಂತ್ರ ಹಾದಿ ಹಿಡಿದಿದ್ದಾನೆ. ಉಪಲಬ್ಧವಿರುವ 'ರಾಮಾಯಣ'ಗಳಲ್ಲಿ ನಾಗಚಂದ್ರನ ಜೈನ ರಾಮಾಯಣವೇ ಕನ್ನಡದ ಆದಿ ರಾಮಾಯಣವಾಗಿದೆ. ನಾಗಚಂದ್ರ ವಿಮಲಸೂರಿಯ 'ಪಉಮ ಚರಿತ' (ಪದ್ಮ ಚರಿತ)ವನ್ನು ಕಣ್ಣು ಮುಚ್ಚಿಕೊಂಡು ಅನುಸರಿಸಿಲ್ಲ. ಕಥಾಸರಣಿಯಲ್ಲಿ ಪಾತ್ರದ ವಿವರಗಳಲ್ಲಿ ಅವನು ಹಲಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿರುವುದುಂಟು. ಔಚಿತ್ಯಪ್ರಜ್ಞೆಯುಳ್ಳ ಅನುವಾದಕನಿಗೆ ನಾಗಚಂದ್ರ ಉದಾಹರಣೆಯಂತಿದ್ದಾನೆ. ಭಾಷಾಂತರಕಾರ ಎಷ್ಟೇ ಪ್ರತಿಭಾಶಾಲಿಯಾದರೂ ಮೂಲದ ಸ್ವರೂಪವನ್ನು ಬಿಡುವಂತಿಲ್ಲ. ನಾಗಚಂದ್ರ ಇದನ್ನು ಅನುಸರಿಸಿದ್ದಾನೆ. ಪ್ರೊ॥ ಡಿ. ಎಲ್. ನರಸಿಂಹಾಚಾರ್ ಅವರು ಇದನ್ನು ಹೀಗೆ ಹೇಳುತ್ತಾರೆ. "ಕೆಲವು ಸಣ್ಣಸಣ್ಣ ಮಾರ್ಪಾಟುಗಳನ್ನು ನಾಗಚಂದ್ರನು ಮೂಲಕಥೆಯಲ್ಲಿ ಮಾಡಿಕೊಂಡಿದ್ದಾನೆ. ಇದನ್ನು ಬಿಟ್ಟರೆ ವಿಮಲಸೂರಿಯ ಜಾಡನ್ನು ಚಾಚುತಪ್ಪದೇ ಅವನು ಹಿಡಿದಿದ್ದಾನೆ. ಉತ್ಕೃಷ್ಟ ಕಲೆಯಿಂದ ತುಂಬಿದ ಮಾರ್ಪಾಟುಗಳಾವುವು ಅವನ ಕಾವ್ಯದಲ್ಲಿ ಕಂಡುಬರುವುದಿಲ್ಲ. ಮೂಲಜೈನ ರಾಮಾಯಣ ನಾಗಚಂದ್ರನಲ್ಲಿ ಪೂರ್ತಿಯಾಗಿ ಪ್ರತಿಫಲಿಸಿದೆ."[30]

ಆದರೆ ಡಾ॥ ರಂ. ಶ್ರೀ. ಮುಗಳಿ ಅವರು ಈ ಮಾತನ್ನು ಒಪ್ಪದೇ ನಾಗಚಂದ್ರನು "ಒಳ್ಳೆಯ ಅನುವಾದಕಾರ.......... ಹಾಗೆಯೇ ನಾಗಚಂದ್ರನು ಮೂಲನಿಷ್ಠೆಯ ಸಂಗ್ರಹಕಾರ"[31] ಎನ್ನುತ್ತಾರೆ.

ನಾಗಚಂದ್ರ ಮಹಾಕವಿಯ ಪ್ರತಿಭೆಯುಳ್ಳವನೆಂಬುದು ಬಹುಜನ ವಿದ್ವಾಂಸರ ಅಭಿಪ್ರಾಯ. ನಾಗಚಂದ್ರ ಮೂಲತಃ ವಿಶಿಷ್ಟ ಪ್ರತಿಭೆಯುಳ್ಳವನು. ನಾಗಚಂದ್ರನ ರಾಮಾಯಣ ವಿಮಲಸೂರಿಯ 'ಪಉಮ ಚರಿತ'ವನ್ನು ಅವಲಂಬಿಸಿದ್ದರೂ ಅದರ ಪಡಿಯಚ್ಚಲ್ಲ. ನೆರಳಲ್ಲ. ಭಾಷಾಂತರವಲ್ಲ.

ವಿಮಲಸೂರಿಯ 'ಪಉಮಚರಿತ'ಯು ಪ್ರಧಾನವಾಗಿ ಪುರಾಣ. ಅದೊಂದು ಗೊಂಡಾರಣ್ಯ. ಅದನ್ನು ಪರಿಷ್ಕರಿಸಿ ಒಂದು ಉಪವನವನ್ನಾಗಿ ಮಾಡುವ ಜವಾಬ್ದಾರಿ ನಾಗಚಂದ್ರನ ಮೇಲೆ ಬಿದ್ದಿತು. ''ಪಿರಿದೆನಿಸಿರ್ದ ರಾಮಕಥೆಯುಂ ಪಿಜಿದಾಗಿದ'' ಎಂದು ಹೇಳುವ ಸವಾಲು ಅವನಿಗೊಡ್ಡಿ ನಿಂತಿತು.

ಆಂಡಯ್ಯ ಕ್ರಿ. ಶ. 1235ರಲ್ಲಿಜನಿಸಿದನು. ಇಷ್ಟು ಹೊತ್ತಿಗಾಗಲೇ ಕನ್ನಡ ಸಂಸ್ಕೃತ ಹಾಗೂ ಪ್ರಾಕೃತ ಭಾಷೆಗಳ ಭಾಗದಿಂದ ನಲುಗಿತ್ತು. ಅನುವಾದವೆಂಬುದು ಕಲೆಯಾಗಿರದೆ, ಕವಿಗಳ ಶಕ್ತಿ ಪ್ರದರ್ಶನವಾಗಿತ್ತು. ಕನ್ನಡ ಭಾಷೆಗೆ ಯಾವ ಗ್ರಂಥ ತರಬೇಕೆಂಬ ಯುಕ್ತಾಯುಕ್ತ ಪರಿಜ್ಞಾನವಿಲ್ಲದೆ ಸಂಸ್ಕೃತದಲ್ಲಿದ್ದ ಕೃತಿಯನ್ನು ಯಥಾವತ್ತಾಗಿ ಭಟ್ಟಿ ಇಳಿಸಲು ಪ್ರಯತ್ನಿಸಿದ್ದರು. ಕನ್ನಡದ ಕವಿಗಳು. ಅಂತಹವರ ಕನ್ನಡ ಭಾಷೆಗೆ ಜೀವಂತಿಕೆ ಲಕ್ಷಣವನ್ನು ಘೋಷಿಸಿದವರು ಆಂಡಯ್ಯ ಮತ್ತು ನಯಸೇನ.

ಸಂಸ್ಕೃತ ಹಾಗೂ ಕನ್ನಡ ಭಾಷೆಗಳು ಪ್ರತ್ಯೇಕ ಅಸ್ತಿತ್ವವುಳ್ಳ ಭಾಷೆಗಳು. ಸಂಸ್ಕೃತದ ಪಡಿನೆರಳಾಗಿ ಕನ್ನಡ ಬೆಳೆಯಬಾರದೆಂಬ ಕಠೋರ ಪ್ರತಿಜ್ಞೆ ಆಂಡಯ್ಯನದು. ಅವನ 'ಕಬ್ಬಿಗರ ಕಾವ'ದಲ್ಲಿ ಸಂಸ್ಕೃತ ಪದಗಳ ಮಿಶ್ರಣವಿಲ್ಲ. ದೇಶ್ಯಪದ ತದ್ಭವ ಪದಗಳಿಂದಲೇ ಆತ ಕಾವ್ಯ ರಚಿಸಿದ್ದಾನೆ.

ಅದರಂತೆ 12ನೇ ಶತಮಾನದ ಮೊದಲಭಾಗದಲ್ಲಿ ಆಗಿ ಹೋದ 'ನಯಸೇನ' ಎಂಬ ಜೈನ ಮುನಿಯ ವಿಚಾರವೂ ಚಿಂತನಾರ್ಹ. ಈತ ಕನ್ನಡದ ಸ್ವಂತಿಕೆಯನ್ನು ಎತ್ತಿ ಹಿಡಿಯುವ ಪ್ರಯತ್ನ ಮಾಡಿದ್ದಾನೆ. ಕನ್ನಡದಲ್ಲಿರುವ ಅನೇಕ ಜೈನ ಗ್ರಂಥಗಳಿಗೆ ಸಂಸ್ಕೃತ ಅಥವಾ ಪ್ರಾಕೃತ ಗ್ರಂಥಗಳು ಆಧಾರ. ಆದರೆ ನಯಸೇನ ಯಾವುದೊಂದು ಸಂಸ್ಕೃತ ಗ್ರಂಥವನ್ನು ಅನುವಾದ ಮಾಡಿದಂತೆ ಕಾಣಬರುವುದಿಲ್ಲ. ಅವನ 'ಧರ್ಮಾಮೃತ' ಗ್ರಂಥ ವಿಡಂಬ, ಪ್ರಸ್ತುತ ಸಮಾಜದ ಪ್ರತಿಬಿಂಬ ಹಾಗೂ ಅಚ್ಚ ದೇಶಿಯತೆಗೆ ಸಾಕ್ಷ್ಯವೆನಿಸಿದೆ. ಸಾಹಿತ್ಯ ಪ್ರಕಾರದ ಯಾವುದೇ ದಾರಿ ಕಾಲಾನುಕ್ರಮದಲ್ಲಿ ಸವೆದು ಹೋಗಿ, ಇತರರಿಗೆ ಅನುಪಯುಕ್ತವೆನಿಸುತ್ತದೆ. ಆಗ ಪ್ರತಿಭಾಶಾಲಿ ನೂತನ 'ರಾಜಮಾರ್ಗ' ಕಂಡುಹಿಡಿದು ತಾನು ಮೊದಲು ಹೋಗಿ ಅನಂತರ ಇತರರಿಗೆ ಸ್ಪೂರ್ತಿದಾಯಕನಾಗುತ್ತಾನೆ. ಆಂಡಯ್ಯ, ನಯಸೇನರು 'ಚಂಪೂಮಾರ್ಗ' ನಡೆಯಲಾಗದಷ್ಟು ಸವೆದುಹೋಗಿದೆ ಎಂದು ಧ್ವನಿಸಿದರು. ಇದೇ ಮುಂದೆ ಹರಿಹರ, ರಾಘವಾಂಕ, ಹಾಗೂ ಕುಮಾರವ್ಯಾಸರಿಗೆ ಸ್ಫೂರ್ತಿ ಕೊಟ್ಟಿರಬೇಕು.

ಕವಿಬ್ರಹ್ಮಶಿವನ 'ಸಮಯ ಪರೀಕ್ಷೆ', 'ತ್ರೈಲೋಕ್ಯ ಚೂಡಾಮಣಿ ಸ್ತೋತ್ರ' ಎಂಬ ಕೃತಿಗಳನ್ನು ರಚಿಸಿದವನು. ನಯಸೇನನ ಸಂಯಮ ಕವಿ ಬ್ರಹ್ಮಶಿವನಲ್ಲಿ ಕಾಣಲಾಗುವುದಿಲ್ಲ. ಅನ್ಯಮತ ಅಸಹನೆ ಕಣ್ಣಿಗೆ ಗೋಚರವಾಗುತ್ತದೆ. ಎರಡನೆಯ ನಾಗವರ್ಮನು 'ಕರ್ನಾಟಕ ಭಾಷಾಭೂಷಣ' 'ಕಾವ್ಯಾವಲೋಕನ' ಎಂಬ ಕೃತಿಗಳನ್ನು ರಚಿಸಿದ್ದಾನೆ.

ವಚನ ಸಾಹಿತ್ಯದ ನಂತರವೂ 'ಚಂಪೂಮಾರ್ಗ'ವನ್ನು ಮುಂದುವರಿಸಿದವರಲ್ಲಿ ನೇಮಿಚಂದ್ರ, ರುದ್ರಭಟ್ಟ, ಜನ್ನ ಪ್ರಮುಖರು.

## ನೇಮಿಚಂದ್ರ

12ನೇ ಶತಮಾನದ ಪ್ರಾರಂಭದಲ್ಲಿ ನೇಮಿಚಂದ್ರ ಕಾವ್ಯರಚಿಸಿದನೆಂದು ಹೇಳಲಾಗಿದೆ. ಕ್ರಿ. ಶ. 1190ರಲ್ಲಿ ಆತ 'ಲೀಲಾವತಿ' ಕೃತಿಯನ್ನು ರಚಿಸಿದ್ದಿರಬೇಕೆಂದು ಎನ್. ಅನಂತರಂಗಾಚಾರ್ ಹೇಳುತ್ತಾರೆ.[32]

ನೇಮಿಚಂದ್ರ ಚತುರ್ಭಾಷಾ ಪಂಡಿತ. 'ಲೀಲಾವತಿ' ಹಾಗೂ 'ನೇಮಿನಾಥ ಪುರಾಣ' ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. ಲೀಲಾವತಿ ಲೌಕಿಕ ಕಾವ್ಯ. ಶೃಂಗಾರ ರಸ ಪ್ರಧಾನವಾದ ಕಟ್ಟುಕತೆ. ಒಂದನೆಯ ನಾಗವರ್ಮನಿಗೆ ಬಾಣನ ಸಂಸ್ಕೃತ ಗದ್ಯಕೃತಿ ಸ್ಫೂರ್ತಿಯಿದ್ದಂತೆ, ಸುಬಂಧುವಿನ 'ವಾಸವದತ್ತೆ' ಎಂಬ ಸಂಸ್ಕೃತ ಗದ್ಯಕೃತಿ ಈತನಿಗೆ ಪ್ರೇರಣೆ ನೀಡಿದೆ. ಇವುಗಳಲ್ಲದೆ ರಾಜಶೇಖರನ ಕರ್ಪೂರಮಂಜರಿ ಹಾಗೂ ಕಾಳಿದಾಸನ 'ವಿಕ್ರಮೋರ್ವಶೀಯ' ಕೃತಿ ಸಹ ಪ್ರೇರಣೆ ನೀಡಿದೆ. ಕ್ರಿ ಶ. 800ರಲ್ಲಿ ಕುತೂಹಲನೆಂಬ ಕವಿ ರಚಿಸಿದ 'ಲೀಲಾವತಿ' ಎಂಬ ಪ್ರಾಕೃತ ಗ್ರಂಥ ಕೂಡ ನೇಮಿಚಂದ್ರನಿಗೆ ಪ್ರೇರಣೆ ನೀಡಿತೆಂದೂ ಡಾ|| ಆ. ನೇ. ಉಪಾಧ್ಯೆ ಅವರು ಬರೆಯುತ್ತಾರೆ. ನೇಮಿಚಂದ್ರನ ಶಕ್ತಿ ಸಾಮರ್ಥ್ಯಗಳನ್ನು ವಿಮರ್ಶಕರು ಸರಿಯಾಗಿಯೇ ಗುರಿತಿಸಿದ್ದಾರೆ. 'ಲೀಲಾವತಿ' ಅನುವಾದವಲ್ಲ, ಅನುಕರಣೆಯಲ್ಲ, ಸ್ವತಂತ್ರ ಕಾವ್ಯ ಭಾವ ಕಲ್ಪನೆಗಳು ಇದರಲ್ಲಿ ಹೇರಳವಾಗಿದೆ. ಕಲ್ಪನಾಚಮತ್ಕೃತಿಯಲ್ಲಿ ನೇಮಿಯದು ಮೇಲುಗೈ.[33]

ನೇಮಿಚಂದ್ರನ ಎರಡನೆಯ ಚಂಪೂಕಾವ್ಯ 'ನೇಮಿನಾಥ ಪುರಾಣ'ದಲ್ಲಿ ಕುರುವಂಶ ಹಾಗೂ ಹರಿವಂಶಗಳ ಚರಿತ್ರೆಯನ್ನು ಹೇಳುವ ಉದ್ದೇಶ ನೇಮಿಚಂದ್ರನದು. 'ಚಾವುಂಡರಾಯ ಪುರಾಣ' ಇವನಿಗೆ ಪ್ರೇರಣೆ ನೀಡಿರಬಹುದು. ನೇಮಿಚಂದ್ರ ಹಿಂದಿನ ಪರಂಪರೆಯಂತೆ ಲೌಕಿಕ ಹಾಗೂ ಧಾರ್ಮಿಕ ಕಾವ್ಯಗಳನ್ನು ಚಂಪೂಮಾರ್ಗದಲ್ಲೇ ರಚಿಸಿದ್ದಾನೆ. ಆದರೆ ದೇಸೀಯತೆ ಪ್ರಭಾವ ಅವನ ಭಾಷಾಶೈಲಿಯ ಮೇಲಾಗಿದೆ.

## ಜನ್ನ

ಚಂಪೂ ಮಾರ್ಗದಲ್ಲಿ ಹೆಸರಿಸಬೇಕಾದ ಪ್ರಮುಖ ಕವಿ ಜನ್ನ. ಇವನು ಕ್ರಿ. ಶ. 1209ರಲ್ಲಿ 'ಯಶೋಧರ ಚರಿತೆ', 1230ರಲ್ಲಿ 'ಅನಂತನಾಥ ಪುರಾಣ' ಬರೆದು ಮುಗಿಸಿದನು.

ಯಶೋಧರನ ಕತೆ ಜನ್ನನ ಸ್ವಂತ ಸೃಷ್ಟಿಯಲ್ಲ. ಅದು ಜೈನ ಸಂಪ್ರದಾಯದಲ್ಲಿ ಬಹು ವಿಖ್ಯಾತವಾದ ಮತ್ತು ಜನಪ್ರಿಯವಾದ ಕತೆ. ಕ್ರಿ. ಶ. 650ರಿಂದಲೂ ಇದು ಸಂಸ್ಕೃತ-ಪ್ರಾಕೃತಗಳಲ್ಲಿ ಭಿನ್ನಭಿನ್ನ ರೀತಿಯಲ್ಲಿ ನಿರೂಪಣೆಗೊಳ್ಳುತ್ತಾ ಬಂದಿದೆ.

ಯಶೋಧರನ ಕತೆ ಮೊಟ್ಟಮೊದಲು ಗ್ರಂಥರೂಪ ಧರಿಸಿದ್ದು ಪ್ರಭಂಜನನ ಕೃತಿಯಲ್ಲಿ ಎನ್ನಲಾಗಿದೆ. ಇವನ ಕಾಲ ಕ್ರಿ. ಶ. 650. ಇವರ ಕೃತಿ ದೊರತಿಲ್ಲ. ಪ್ರಭಂಜನನ ತರುವಾಯ ಹರಿಭದ್ರನ 'ಸಮದಾಯಿಚ್ಚಕಹಾ (ಸಮುದಾದಿತ್ಯಕಥಾ) ಎಂಬ ಪ್ರಾಕೃತ ಗ್ರಂಥದಲ್ಲಿ ಯಶೋಧರನ ಕಥೆ ಬರುತ್ತದೆ.

ಸೋಮದೇವನ 'ಯಶಸ್ತಿಲಕ ಚಂಪು' ಮತ್ತು ಪುಷ್ಪದಂತನ 'ಜಸಹರಚರಿಉ' ಕೂಡ ಸ್ಫೂರ್ತಿ ನೀಡಿದೆ. ಕ್ರಿ ಶ. 932ರಲ್ಲಿ ಹರಿಶೇಷ ರಚಿಸಿದ 'ಬೃಹತ್ಕಥಾಕೋಶ'ದಲ್ಲಿ ಯಶೋಧರಾ-ಚಂದ್ರಮತಿ ಕಥಾನಕವಿದೆ. ಇವುಗಳ ಜೊತೆಗೆ

ವಾದಿರಾಜನ ಸಂಸ್ಕೃತ ಕೃತಿ 'ಯಶೋಧರ ಚರಿತೆ' ಜನ್ನನಿಗೆ ಮೂಲವಾಗಿದೆ. ಹೆಜ್ಜೆಹೆಜ್ಜೆಗೂ ಜನ್ನ ವಾದಿರಾಜನ ಕತೆಯನ್ನು ಅನುಸರಿಸಿದ್ದಾನೆ. ವಾದಿರಾಜನಲ್ಲಿ ನಾಲ್ಕುಸರ್ಗಗಳು, 294 ಪದ್ಯಗಳು, ಜನ್ನನಲ್ಲಿ ನಾಲ್ಕು ಅವತಾರಗಳು, 310 ಪದ್ಯಗಳು.[34]

''ಅನ್ಯಭಾಷಾ ಕೃತಿಯಿಂದೆತ್ತಿಕೊಂಡ ವಸ್ತುವೊಂದನ್ನು ತಾಯ್ನುಡಿಯಲ್ಲಿ ಎಷ್ಟು ಚೆನ್ನಾಗಿ ನಿರ್ವಹಿಸಬಹುದೋ ಅಷ್ಟು ಚೆನ್ನಾಗಿ ನಿರ್ವಹಿಸಿ ಯಶಸ್ವಿಯಾಗಿದ್ದಾನೆ ಜನ್ನ. ಕೆಲವೆಡೆ ಮೂಲವನ್ನು ಸೊಗಸಾಗಿ ಅನುವಾದಿಸಿ ತನ್ನ ಭಾಷಾಂತರ ಶಕ್ತಿಯಿಂದ ಮೆರೆದಿದ್ದಾನೆ. ಕೆಲವೆಡೆ ಮೂಲದ ಸೌಂದರ್ಯವನ್ನು ಹೆಚ್ಚಿಸಿದ್ದಾನೆ. ಎಷ್ಟೋ ಕಡೆ ಮೂಲವನ್ನು ಅಂದವಾಗಿ ಸಂಗ್ರಹಿಸಿದ್ದಾನೆ, ವಿಸ್ತರಿಸಿದ್ದಾನೆ.''[35]

'ಅನಂತನಾಥ ಪುರಾಣ' 14ನೆಯ ಜಿನನಾದ ಅಜಿತನಾಥನ ಕಥೆಯನ್ನು ವಸ್ತುವಾಗುಳ್ಳ 14 ಆಶ್ವಾಸಗಳ ಪ್ರೌಢ ಚಂಪೂಕಾವ್ಯ. ಸಂಪ್ರದಾಯದಂತೆ ಅದರಲ್ಲಿ ಬಲದೇವ-ವಾಸುದೇವರ ಕತೆಯೂ ಸೇರಿಕೊಂಡಿದೆ. ಗುಣಭದ್ರಾಚಾರ್ಯರ ಉತ್ತರಪುರಾಣವೂ ಜನ್ನನಿಗೆ ಆಧಾರ. ಈ ಗ್ರಂಥ ಸಂಸ್ಕೃತ ಭೂಯಿಷ್ಠವಾಗಿದೆ. ಅಷ್ಟೇ ಅಲ್ಲ, ಶೃಂಗಾರ ರಸದ ಅತಿರೇಕ ಇಲ್ಲಿದೆ. ಜನ್ನನ 'ಅನಂತನಾಥ ಪುರಾಣ'ದಲ್ಲಿ ಸಂಪ್ರದಾಯ ಪಡಿಯಚ್ಚಿನ ರೀತಿಯಲ್ಲಿ ಮೂಡಿಬಂದಿದೆ.

ಒಟ್ಟಾರೆ ಜನ್ನ ಹಲವು ಮೂಲಗಳಿಂದ ವಸ್ತುವನ್ನು ಆಯ್ಕೆಮಾಡಿಕೊಂಡ ಅಕ್ಕಸಾಲಿಗನಂತೆ ಕಚ್ಚಾ ಚಿನ್ನದಿಂದ ಒಡವೆಗಳನ್ನು ಮಾಡಿದ್ದಾನೆ.

ಚಂದ್ರರಾಜನ (ಕಾಲ : 1040) 'ಮದನತಿಲಕ' ಕಾಮಶಾಸ್ತ್ರದ ಅನುವಾದ ಗ್ರಂಥ. ಕನ್ನಡದಲ್ಲಿ ಬಂದ ಮೊದಲ ಜ್ಯೋತಿಷ್ಯಗ್ರಂಥ ಶ್ರೀಧರಾಚಾರ್ಯರ ಜ್ಯೋತಿಷ್ಯತಿಲಕಂ.

ಕನ್ನಡದ ಮೊದಲ ಬ್ರಾಹ್ಮಣ ಕವಿ ರುದ್ರಭಟ್ಟನ (ಕ್ರಿ. ಶ. 1200) 'ಜಗನ್ನಾಥ ವಿಜಯ.' ರುದ್ರಭಟ್ಟನ ಜಗನ್ನಾಥ ವಿಜಯಂ ಕಾವ್ಯಕ್ಕೆ ಮುಖ್ಯ ಆಕರ 'ವಿಷ್ಣು ಪುರಾಣ' ಹಾಗೂ ಭಾರತ ಭಾಗವತಗಳ ಪ್ರಭಾವ. ವಿಷ್ಣು ಪುರಾಣದ ಕಥಾಸರಣಿ ಹೆಚ್ಚಾಗಿ ಸರಳವಾಗಿದೆ. ಜಗನ್ನಾಥ ವಿಜಯದ ಕಥೆ ಹೆಚ್ಚು ವಿಸ್ತಾರವಾದ ಪ್ರೌಢಶೈಲಿಯಲ್ಲಿದೆ. 'ವಿಷ್ಣು ಪುರಾಣ'ದ ಆಧಾರದ ಮೇಲೆ ಭಕ್ತಿಪ್ರಧಾನವಾದ ಒಂದು ಧಾರ್ಮಿಕ ಕಥನಕಾವ್ಯವನ್ನು ರುದ್ರಭಟ್ಟನೇ ಮೊದಲಿಗೆ ಬರೆದನೆಂಬ ಎಸ್. ಆರ್. ಮುಳಗಿ ಅಭಿಪ್ರಾಯ ಸಮರ್ಪಕವಾಗಿದೆ.

ಪಂಪನಿಂದ ಹಿಡಿದು ಜನ್ನನವರೆಗೆ ಸುಮಾರು ಮೂರು ಶತಮಾನಗಳ ಅಂತರದಲ್ಲಿ ಕನ್ನಡ ಸಾಹಿತ್ಯ ಭದ್ರವಾದ ನೆಲೆಯನ್ನು ಕಂಡುಕೊಂಡಿದೆ. ಲೌಕಿಕ ಹಾಗೂ ಧಾರ್ಮಿಕ ಎಂಬ ಪ್ರಜ್ಞೆ ಕಾವ್ಯಕ್ಷೇತ್ರ ಪ್ರವೇಶಿಸಿದ ಈ ಸಾಲಿನ ಸಾಹಿತಿಗಳು ತಮ್ಮ ಪ್ರತಿಭೆಯನ್ನು ಸಮರ್ಪಕವಾಗಿ ತೋರಿದ್ದಾರೆ. ಆಳವಾದ ಪಾಂಡಿತ್ಯ, ವಿವಿಧ ಭಾಷೆಗಳ ಪರಿಚಯ, ಜನಜೀವನದ ನಿಕಟ ಪರಿಚಯ, ರಾಜ್ಯಾಡಳಿತದಲ್ಲಿ ನೇರವಾಗಿ ಭಾಗವಹಿಸುವಿಕೆ, ಶಾಸ್ತ್ರಜ್ಞಾನದ ತಿಳಿವು ಈ ಕಾಲದ ಕವಿಗಳಲ್ಲಿರಬೇಕಾದ ಗುಣವಾಗಿತ್ತು. ವಾಲ್ಮೀಕಿ, ವ್ಯಾಸ, ಭಾಸ, ಕಾಳಿದಾಸ, ಭವಭೂತಿ, ದಂಡಿ, ಆನಂದವರ್ಧನರ ನಿಕಟ ಬಾಂಧವ್ಯ ಕನ್ನಡದ

ಎಲ್ಲ ಕವಿಗಳಿಗೂ ಇತ್ತು. ಒಂದಲ್ಲಾ ಒಂದು ರೀತಿಯಿಂದ ಅವರ ಪ್ರಭಾವಕ್ಕೆ ಒಳಗಾಗಿದ್ದರು. ಇದರ ಜೊತೆಗೆ ಪ್ರಾಕೃತ ಭಾಷೆಯ ಅಧ್ಯಯನ ಕೂಡ ನಡೆದಿತ್ತು. ಯಾವುದೇ ಭಾಷೆಯು ಪ್ರಾರಂಭದ ಕಾಲದಲ್ಲಿಅದಕ್ಕಿಂತ ಹಿರಿದಾದ ಭಾಷೆಯನ್ನು ಆದರ್ಶವಾಗಿಟ್ಟುಕೊಳ್ಳುತ್ತದೆ. ಮಗು ಬಾಲ್ಯದಲ್ಲಿ ತಾಯಿಯನ್ನು ಆಶ್ರಯಿಸಿ ತಾನೇ ದೊಡ್ಡದಾಗಬೇಕು. ಅದೇ ರೀತಿ ಕನ್ನಡ ಪ್ರಾರಂಭದಲ್ಲಿ ಸಂಸ್ಕೃತದಲ್ಲಿದ್ದ ಅಗಾಧ ಸಾಹಿತ್ಯರಾಶಿಗೆ ಮಂತ್ರಮುಗ್ಧವಾಗಿತ್ತು. ಇಷ್ಟಾದರೂ ಕನ್ನಡದ ಕವಿಗಳು ಎಲ್ಲೂ ತಮ್ಮತನ ಕಳೆದುಕೊಳ್ಳಲಿಲ್ಲ. ವಸ್ತುವನ್ನು ಕಡ ತೆಗೆದುಕೊಂಡರು. ತಮ್ಮ ಮೂಸೆಯಲ್ಲಿ ಅದಕ್ಕೆ ರೂಪಕೊಡುವುದನ್ನು ಮರೆಯಲಿಲ್ಲ. ಉದಾ: ಒಂದನೇ ನಾಗವರ್ಮ ಹಾಗೂ ನೇಮಿಚಂದ್ರರು ಸಂಸ್ಕೃತದ ಗದ್ಯ ಕೃತಿಯನ್ನು ಕನ್ನಡದಲ್ಲಿ ಚಂಪೂ ಕಾವ್ಯವನ್ನಾಗಿಸಿದರು.

ಭಾಸ, ಕಾಳಿದಾಸ, ಭಟ್ಟನಾರಾಯಣರಿಂದ ಕನ್ನಡದ ಕವಿಗಳು ಪ್ರೇರಣೆ ಪಡೆದಿದ್ದರೂ ಅವರು ನಾಟಕ ರಚನೆಗೆ ಕೈಹಾಕಲಿಲ್ಲ. 'ಶುದ್ಧಕಾವ್ಯ' ರಚಿಸಬೇಕೆಂಬುದು ಅವರ ಇಚ್ಛೆಯಾಯಿತು. ಆದರೆ ಸಂಸ್ಕೃತ ಕವಿಗಳು ನಾಟಕದಿಂದ ಸ್ಫೂರ್ತಿ ಪಡೆದು ತಮ್ಮ ಕೃತಿಗಳಲ್ಲಿ 'ನಾಟಕೀಯ'ಗುಣ ಹೊರಹೊಮ್ಮಿಸಿದರು. ಕನ್ನಡದ ಕವಿಗಳಿಗೆ 'ಯುಕ್ತಾಯುಕ್ತ ಪರಿಜ್ಞಾನ' ಹೆಚ್ಚಿರುವುದರಿಂದ ಅವರ ಕಾವ್ಯ ನಿತ್ಯ ಹಸಿರು ಸೂಸುವ ವನಗಳಾಗಿವೆ. ಆದಿಕವಿ ಪಂಪನ ಬನವಾಸಿ ವರ್ಣನೆ, ಸಮಕಾಲೀನ ರಾಜಕೀಯ ಹಾಗೂ ಸಾಮಾಜಿಕ ಸ್ಥಿತಿಗಳ ಪ್ರತಿಬಿಂಬಗಳು ಇತರರಿಗೆ ಮಾರ್ಗದರ್ಶನವಾದವು.

ಪ್ರಾರಂಭದಲ್ಲಿ ಸಂಸ್ಕೃತ ಕನ್ನಡ ಭಾಷೆಯ ಮೇಲೆ ಹೋರಾಟ ನಡೆಸಿದುದುಂಟು. ಇದೇನು ಸಂಸ್ಕೃತ ಕಾವ್ಯವೇ ಎಂಬಷ್ಟು ಪಾಂಡಿತ್ಯ ಪ್ರದರ್ಶನಕ್ಕೆ ಕೆಲವರು ಮುಂದಾದರು. ಆದರೆ ನಯಸೇನ, ದುರ್ಗಸಿಂಹ ಹಾಗೂ ಆಂಡಯ್ಯನಂತವರ ಪ್ರಯತ್ನದಿಂದಾಗಿ ದೇಸೀಯತೆ ಸಹ ಮಾನ್ಯತೆ ಗಳಿಸಿತು. ಈ ಕವಿಗಳು ತಮಗೆ ಗೊತ್ತಿಲ್ಲದೆಯೇ 'ವಚನ ಚಳುವಳಿ'ಯ ಸವಿಯನ್ನು ಉಂಡಿದ್ದಾರೆ.

ಇಷ್ಟಾದರೂ ಈ ಪರಂಪರೆ ಬರುಬರುತ್ತಾ ನಡೆಯಲಾಗದಷ್ಟು ಕೊರಕಲು ಬಿಟ್ಟಿತು. ಹೊಸ ವಿಚಾರಗಳಿಗೆ ಕಾವ್ಯ ಜಡ್ಡುಗಟ್ಟಿತು. ಸಂಸ್ಕೃತ ಹಾಗೂ ಇತರ ಭಾಷೆಗಳಿಂದ ಭಾಷಾಂತರ ಮಾಡಲು ಕೃತಿಯ ಆಯ್ಕೆಗೆ ಯಾವುದೇ ಮಾನದಂಡ ಇಲ್ಲವಾಯಿತು. ಅನ್ಯಮತ ಅಸಹಿಷ್ಣುತೆಯ ನಾತ ಮೂಗಿಗೆ ಬಡಿಯಿತು. ಆಗ ಸಾಹಿತ್ಯದ ಪ್ರಕಾರ ಜನಸಾಮಾನ್ಯರ ಆದರಕ್ಕೆ ಗುರಿಯಾಗುವುದರ ಬದಲು ಅವರ ರೋಷಕ್ಕೆ ಗುರಿಯಾಯಿತು. ಇಂತಹ ವಿಷಮ ಕಾಲದಲ್ಲಿ ಹುಟ್ಟಿಕೊಂಡ ಸಾಹಿತ್ಯವೇ ವಚನ ಸಾಹಿತ್ಯ.

ಸಂಸ್ಕೃತ ಕಾವ್ಯ ಪರಂಪರೆಯನ್ನು ಅನುಸರಿಸಿದ ಕನ್ನಡ ಕವಿಗಳು, ಆ ಮಾರ್ಗ ಜಾಳಾಗುವಂತೆ ಮಾಡಿದರು. ಅದರಲ್ಲೂ ಸಾಹಿತ್ಯ ಪಂಡಿತರಿಗಷ್ಟೆ ಸೀಮಿತವಾಯಿತು. ರಾಜಾಶ್ರಯವಿದ್ದವ ತನ್ನ ಆಶ್ರಯದಾತನ ಋಣ ತೀರಿಸಲು ಕಾವ್ಯ ಬರೆಯುತ್ತಿದ್ದ. ತನ್ನ ಧರ್ಮದ ಮೇಲ್ಮೆಯನ್ನು ಚಿತ್ತರಿಸಲು ಯಾವುದಾದರೊಂದು ಧಾರ್ಮಿಕ ಕಾವ್ಯ ಬರೆಯುತ್ತಿದ್ದ. ಆದರೆ ಜನಸಾಮಾನ್ಯರಿಗೆ ಸಾಹಿತ್ಯ ಕೊಡಬೇಕಾದ ರಸಸ್ವಾದನೆಯಾಗಲಿ, ಬದುಕಿಗೆ ತೋರಬೇಕಾದ ದಿಕ್ಸೂಚಿಯಾಗಲಿ, ಸಮಕಾಲೀನ ಪರಿಸ್ಥಿತಿಯಲ್ಲಿ ತೋರಬೇಕಾದ ಜಾಗೃತಿಯಾಗಲಿ 11ನೇ ಹಾಗೂ ಅನಂತರದ ಸಾಹಿತ್ಯ ಕೃತಿಗಳು

ಪ್ರತಿಬಿಂಬಿಸಲಿಲ್ಲ. ಆಗ ಜೀವಂತ ಭಾಷೆಯಲ್ಲಿ ಆಗುವ 'ಸಾಹಿತ್ಯಕ್ರಾಂತಿ' ಕನ್ನಡದಲ್ಲೂ ಆಯಿತು. ಒಂದು ಪಕ್ಷ ಇಂತಹ ಸಾಹಿತ್ಯ ಕ್ರಾಂತಿ ನಡೆಯದಿದ್ದರೆ ನಿಂತ ನೀರಿನಂತಾಗಿದ್ದ ಕನ್ನಡ ಭಾಷೆ, ಪ್ರಾಕೃತ, ಸಂಸ್ಕೃತ ಹಾಗೂ ಪಾಳಿಗಳಂತಾಗುತ್ತಿತ್ತೇನೋ! ಇಂತಹ ವಿಪತ್ತಿನಿಂದ ಕನ್ನಡ ಭಾಷೆಯನ್ನು ಪಾರು ಮಾಡಿದವರು ವಚನಕಾರರು. ವಚನ ಸಾಹಿತ್ಯದ ಉಗಮಕ್ಕೆ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಸಾಹಿತ್ಯಿಕ ಕಾರಣಗಳಿವೆ.

ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು ಮೊದಲಾದ ರಾಜ ವಂಶದವರು ಇತಿಹಾಸದಿಂದ ಮರೆಯಾದ ಮೇಲೆ ಅವರ ಸಾಮಂತರು ಅಧಿಕಾರದ ಕೇಂದ್ರಸ್ಥಾನಕ್ಕೆ ಬಂದರು. ಆಗಾಧ ಜನ ಪರಿಚಯ, ಅಪೂರ್ವ ಸಂಘಟನಾ ಚಾತುರ್ಯವುಳ್ಳ ಈ ಸಾಮಂತರು ಶ್ರೀಸಾಮಾನ್ಯರನ್ನು ಒಲಿಸಿಕೊಳ್ಳಲು ಆಯಾಯ ಸಮಾಜದ ಹಿರಿಯ ವ್ಯಕ್ತಿಗಳನ್ನು ಆಶ್ರಯಿಸಿದ್ದರು. ವಚನಕಾರರು ತಮ್ಮ ಪಾಂಡಿತ್ಯ ಹಾಗೂ ಜನಪದ ಕಾಳಜಿಯಿಂದ ಎಲ್ಲರಿಗೂ ಬೇಕಾದವರಾಗಿದ್ದರು. ಕಳಚೂರ್ಯವಂಶ. ಪೆರುಮಾಡಿ, ಬಿಜ್ಜಳ ಮೊದಲಾದ ಆಳರಸರು ತಮ್ಮ ಉಳಿವಿಗಾಗಿ ಪ್ರಾರಂಭದಲ್ಲಿ ವಚನಕಾರರ ಸಹಾಯ ಪಡೆದರು.

ಮುಸ್ಲಿಂ ಆಳ್ವಿಕೆ ಉತ್ತರ ಭಾರತದಲ್ಲಿ ಪ್ರಾರಂಭವಾಗಿದ್ದು, ಅದರ ದಾಳಿಯ ಭೀತಿ ದಕ್ಷಿಣ ಭಾರತಕ್ಕೂ ಇತ್ತು. ಜನರನ್ನು ಸಂಘಟಿಸಬೇಕಾದ ಅಗತ್ಯ ಕೂಡಾ ಹೆಚ್ಚಾಗಿ ಧಾರ್ಮಿಕ ಹಾಗೂ ರಾಜಕೀಯ ಕ್ಷೇತ್ರದ ಮುಂದಾಳುಗಳ ಮೇಲಿತ್ತು.

ಭಾರತೀಯ ಸಮಾಜ ಜಾತಿ, ಉಪಜಾತಿ ಹಾಗೂ ಪಂಗಡಗಳಿಂದ ಒಡೆದು ಚೂರಾಗಿತ್ತು. ವೈದಿಕರನ್ನು ವಿರೋಧಿಸಿ ಹುಟ್ಟಿಕೊಂಡ ಜೈನಪಂಥ ಸಹ ಸಂಪ್ರದಾಯತೆಗೆ ಶರಣಾಯಿತು. ಇಲ್ಲಿಂದ ಬಹುಬೇಗನೆ ಬೌದ್ಧಮತ ಅದೃಶ್ಯವಾಯಿತು. ಸ್ತ್ರೀಯರ ಹಾಗೂ ಕೆಳವರ್ಗದವರ ಸ್ಥಿತಿ ಚಿಂತಾಜನಕವಾಗಿತ್ತು. ತಮಿಳುನಾಡಿನಲ್ಲಿ ಆಳ್ವಾರ್ ಹಾಗೂ ನಾಯನಾರ್ ಅವರುಗಳು ಕೆಳವರ್ಗದ ಜನರ ಸಂಘಟನೆಗೆ ಕಾರಣೀಭೂತರಾಗಿದ್ದರು. ಅದರಲ್ಲೂ ನಾಯನಾರ್ ಅವರು ಶಿವಭಕ್ತರಾಗಿದ್ದರು. ಸಮಾಜದ ವಿವಿಧ ಸಮುದಾಯಗಳಿಂದ ಬಂದವರಾಗಿದ್ದರು.

ವಚನ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ಪ್ರಭಾವಶಾಲಿ ಆತ್ಮವಿಮರ್ಶೆಯ ಮಾಧ್ಯಮವಾಗಿ, ಸ್ವತಂತ್ರವಾಗಿ ಬೆಳೆದು ವಿಜೃಂಭಿಸಿ ಮುಂದಿನ ಸಾಹಿತ್ಯ ಪರಂಪರೆಗಳ ಮೇಲೆ ಪ್ರಭಾವ ಬೀರಿ ಕನ್ನಡ ಸಾಹಿತ್ಯದಲ್ಲಿ ಮಾತ್ರವಲ್ಲದೆ ವಿಶ್ವಸಾಹಿತ್ಯದಲ್ಲೂ ಒಂದು ಅವಿಭಾಜ್ಯ ಅಂಗವಾಗಿದೆ. ದೇವರದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ. ಅಂಬಿಗರ ಚೌಡಯ್ಯ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ನುಲಿಯ ಚಂದಯ್ಯ, ಸೂಳೆ ಸಂಕವ್ವೆ, ಹಡಪದ ಅಪ್ಪಣ್ಣ, ಒಕ್ಕಲು ಮುದ್ದಯ್ಯ, ಏಕಾಂತರಾಮಯ್ಯ, ಮಡಿವಾಳ ಮಾಚಯ್ಯಾ, ಹೆಂಡದ ಮಾರಯ್ಯ ಮುಂತಾದ 115ಕ್ಕೂ ಹೆಚ್ಚು ಜನ ಶರಣರು 45ಕ್ಕೂ ಹೆಚ್ಚು ವಿವಿಧ ಕಸುಬುಗಳಲ್ಲಿ ತೊಡಗಿದವರಾಗಿದ್ದರು. ಇವರು ತಮ್ಮ ಅಭಿವ್ಯಕ್ತಿಗೆ ವಚನವನ್ನು ಮುಖ್ಯ ಮಾಧ್ಯಮವನ್ನಾಗಿ ಮಾಡಿಕೊಂಡರು. ಸಮಾಜದ ಎಲ್ಲಾ ಜಾತಿಯವರೂ ವಚನವನ್ನು ಬಳಸಿ ತಮ್ಮ ಅನುಭವಗಳನ್ನು ಹೇಳಿಕೊಳ್ಳತೊಡಗಿದ್ದರಿಂದ ವಚನ ಒಂದು ಚಳುವಳಿಯಾಯಿತು.[35]

ಒಂದು ಕಾಲದಲ್ಲಿ ಪ್ರತಿಷ್ಠೆಯ ವಿಷಯವಾಗಿದ್ದ ಚಂಪೂ ಮಾರ್ಗ ಆಕ್ಷೇಪಣೆಗೆ ಗುರಿಯಾಗಿತ್ತು. ಸಾಹಿತ್ಯ ಜನಪರವಾಗಿದ್ದರೂ ಜನರ ಭಾಷೆಯಲ್ಲೇ ಪ್ರತಿಬಿಂಬಿತವಾಗಬೇಕೆಂದು ಹೇಳಲಾಗಿತ್ತು. ಮುಕ್ತಿಗೆ ಜ್ಞಾನ ಮಾರ್ಗದಂತೆ

ಕರ್ಮಭಾಗ ಹಾಗೂ ಭಕ್ತಿ ಮಾರ್ಗಗಳು ಅವಶ್ಯವೆಂದು ಭಾವಿಸಲಾಯಿತು. ನೂರಾರು ವಚನಕಾರರು ಸಾಹಿತ್ಯ ಕೃಷಿಯನ್ನು ವ್ರತದಂತೆ ಕೈಗೊಂಡರು. ಜನರ ಮಧ್ಯೆ ಬಾಳಿ ಅವರಿಗೆ ಬೇಕೆನಿಸುವ ಮಾರ್ಗದರ್ಶನ ನೀಡಿದರು.

ವಚನಕಾರರು ವಚನ ಸಾಹಿತ್ಯ ಜನಪರ ಚಳುವಳಿ ಆಗುವಂತೆ ಮಾಡಿದರು. ಎಲ್ಲಾ ವಚನಕಾರರು ತುಂಬಾ ಮೇಧಾವಿಗಳು, ಮೇಲಾಗಿ ಜೀವನಾನುಭವವುಳ್ಳವರು. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಅಪೂರ್ವ ಸಾಧನೆ ಮಾಡಿದವರು. ವೈದಿಕ, ಜೈನ ಹಾಗೂ ಧಾರ್ಮಿಕ ಪಂಥಗಳನ್ನು ಸಂದರ್ಭೋಚಿತವಾಗಿ ಟೀಕೆ ಮಾಡಿದ್ದರೂ ಎಲ್ಲದರ ಜ್ಞಾನ ಅವರಲ್ಲಿತ್ತು. ವೇದ, ಉಪನಿಷತ್ತು, ಪುರಾಣ ಹಾಗೂ ಇತರ ಸಾಹಿತ್ಯದ ಪರಿಚಯ ಅವರಿಗೆ ಚೆನ್ನಾಗಿತ್ತು. ಬಸವ, ಅಲ್ಲಮ ಹಾಗೂ ಚನ್ನಬಸವಣ್ಣನವರ ವಚನಗಳನ್ನು ನೋಡಿದಾಗ ಉಪನಿಷತ್ತುಗಳ ದರ್ಶನವಾಗುವುದರಲ್ಲಿ ಸಂಶಯವಿಲ್ಲ. "ವಚನ ಸಾಹಿತ್ಯವೇ ತಪೋವನದ ಈ ಉಪನಿಷತ್ಸಾಹಿತ್ಯ. ವಚನಕಾರರೇ, ಉಪನಿಷತ್ಕರ್ತೃಗಳಾದ ಮಹರ್ಷಿಗಳು."

ಹುಟ್ಟು ಸಾವುಗಳನ್ನು ಮೀರಿ ಬೆಳೆಯುವುದೇ ಶ್ರೇಷ್ಠ ಮನುಷ್ಯರ ಗುರಿ. ನಚಿಕೇತನಿಗೆ ಸಕಲೈಶ್ವರ್ಯವನ್ನು ಕೊಡುತ್ತೇನೆಂದರೂ ಆತ ತಿರಸ್ಕರಿಸಿ ಹೀಗೆ ಹೇಳುತ್ತಾನೆ:

ಯೇ ಯೇ ಕಾಮಾ ದುರ್ಲಭಾಮ್ಮರ್ತ್ಯಲೋಕೇ
ಸರ್ವಾನ್ ಕಾಮನ್‌ಧನ್ವಿತಃ ಪ್ರಾರ್ಥಯಸ್ವ
ಇಮಾರಾಮಾಃ ಸರಥಾಃ ಸತೂರ್ಯ
ನಹೀ ದೃಶಾಲದ್ಮನೀಯಾ ಮನುಷ್ಯ:
ಅಭಿರ್ಮಾತ್ಪ್ರತ್ತಾಭಿಃ ಪರಿಚಾರಯಸ್ವ
ನಚಿಕೇತೋ ಮರಣಂ ಮಾನು ಪ್ರಾಕ್ಷೀ:

- ಕಠೋಪನಿಷತ್ತು

ಉತ್ತರವನ್ನು ಆದ್ಯವಚನಕಾರರಲ್ಲಿ ಒಬ್ಬನಾದ ದೇವರದಾಸಿಮಯ್ಯ ಹೀಗೆ ಹೇಳಿದ್ದಾನೆ:

"ಕರಿಯನಿತ್ತೊಡೆ ಒಲ್ಲೆ, ಸಿರಿಯನಿತ್ತೊಡೆ ಒಲ್ಲೆ, ಹಿರಿದಪ್ಪ ರಾಜ್ಯವಿತ್ತೊಡೆಒಲ್ಲೆ, ನಿಮ್ಮ ಶರಣರ ಸೂಳ್ನುಡಿಯು ಒಂದರಗಳಿಗೆ ಇತ್ತಡೆ ನಿನ್ನನಿತ್ತೆ ಕಾಣಾ ರಾಮನಾಥ."

ಉಪನಿಷತ್ಕಾರರ ಮುಂದಿದ್ದ ಪ್ರಶ್ನೆಗಳೇ ಸಮಸ್ಯೆಗಳೇ, ದೇಶಕಾಲಾದಿ ಭೇದಗಳಿಲ್ಲದೆ ಎಲ್ಲಾ ದರ್ಶನಕಾರರ ಮುಂದಿರುವ ಪ್ರಶ್ನೆಗಳು, ಸಮಸ್ಯೆಗಳು. ಅವುಗಳಿಗೆ ವಚನಕಾರರು ಹೇಳಿರುವ ಉತ್ತರಗಳು ಉಪನಿಷತ್ಕಾರರ ಉತ್ತರಗಳೇ ಆಗಿವೆ. ವಿಶ್ವಸೃಷ್ಟಿಯ ರಹಸ್ಯ. ಮನುಷ್ಯನ ಇಂದ್ರಿಯಗಳಿಗೆ ಎಲ್ಲಿಂದ ಶಕ್ತಿ ಬರುತ್ತದೆ. ವಿಶ್ವಾತ್ಮನಿಗೂ, ಅಂತರಾತ್ಮನಿಗೂ ಇರುವ ಏಕರೂಪ ಕುರಿತು ಉಪನಿಷತ್ತುಗಳು ಚರ್ಚಿಸುತ್ತವೆ. 'ಕೇನೋಪನಿಷತ್‌ನಲ್ಲಿ' ಬರುವ ಮಾತು ಹೀಗಿದೆ.

ಕೇನೇಷಿತಂ ಪತತಿ ಪ್ರೇಷಿತಂ ಮನಃ
ಕೇನಪ್ರಾಣಃ ಪ್ರಥಮ ಪ್ರೈತಿಯುಕ್ತಃ

ಕೇನೇಷಿತಾಂ ವಾಚ್ಯಾಮಿಮಾಂ ದುರಸ್ತಿ
ಚಕ್ಷುಃ ಶ್ರೋತ್ರಂ ಮನಸೋ ಮನೋಯದ್
ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ
ಚಕ್ಷುಣಸ್ಯಕ್ಷುರತಿ ಮುಚ್ಯ ಧೀರಾಃ॥

ಪ್ರೋತ್ಯಾಸ್ಮಾಲ್ಲೋ ಕಾರಮೃತಾ ಭವಸ್ತಿಯತ್ಪ್ರಾಣೇನನ ಪ್ರಾಣಿತಿಯೇನ ಪ್ರಾಣಃ ಪ್ರಾಣೀಯತ ತದೇವ ಬ್ರಹ್ಮತ್ವಂ ವಿದ್ಧಿನೇರಂ ಯದಿದ ಮುಪಾಸತೆ

ಯಾವುದು ಮನಸ್ಸು, ಪ್ರಾಣ, ಮಾತು-ಇವುಗಳೊಡನೆ ಪ್ರೇರಕವಾಗಿದ್ದು ಅವುಗಳಿಂದ ಕೆಲಸ ಮಾಡಿಸುತ್ತದೆಯೋ, ಯಾವುದು ಕಣ್ಣು ಕಿವಿಗಳಿಗೆ ಆಜ್ಞೆ ಮಾಡುತ್ತದೆಯೋ ಅದೇ ಪರಬ್ರಹ್ಮ. ಅದೇ ಪ್ರಾಣಕ್ಕೆ ಪ್ರಾಣ, ಕಣ್ಣಿಗೆ ಕಣ್ಣು, ಕಿವಿಗೆ ಕಿವಿ.

"ತನುವಿಂಗೆ ತನು ರೂಪಾಗಿ ತನುವಿಂಗಾಧಾರವಾದ
ಮನಕೆ ಮನರೂಪವಾಗಿ ಮನಕ್ಕೆ ನೆನಪಿನ ಶಕ್ತಿಯನ್ನಿತ್ತು ಮನಕ್ಕಾಧಾರವಾದ.
ಪ್ರಾಣಕ್ಕೆ ಪ್ರಾಣರೂಪವಾಗಿ ಪ್ರಾಣಕ್ಕಾಧಾರವಾದೆ........................ನಿಜಗುರು
ಸ್ವತಂತ್ರ ಸಿದ್ಧಲಿಂಗೇಶ್ವರಾ.

ಪರವಸ್ತು ಮೂವತ್ತಾರು ತತ್ವಗಳಿಗೆ ಮೀರಿದ್ದು, ನಿರಾಕಾರ, ನಿಷ್ಕಲ. ಅದಕ್ಕೆ ನಾಮರೂಪ ಕ್ರಿಯಾದಿಗಳಿಲ್ಲ. ಅದು ಬ್ರಹ್ಮ, ವಿಷ್ಣು ರುದ್ರಾದಿಗಳಲ್ಲ. ಇದನ್ನೇ 'ಕಠೋಪನಿಷತ್'ನಲ್ಲಿ ಯಮ ನಚಿಕೇತನಿಗೆ ಹೇಳುತ್ತಾನೆ:

ಅಶಬ್ದಮನಸ್ಪರ್ಶ ಮ ರೂಪಮಮಯಂ
ತಥಾರಸಂ ನಿತ್ಯದ್ದುನವಚ್ಛಯತ್
ಅನಾದ್ಯನಂತಂ ಮಹಂತಃ ಪರಂಧ್ರುನಂ,
ನಿಚಾಯ್ಯ ತನ್ಮತ್ಯು ಮುಖಾತ್ ಪ್ರಮುಚ್ಯತೆ

ಇದನ್ನೇ ಅಲ್ಲಮಪ್ರಭು ಹೀಗೆ ಹೇಳುತ್ತಾನೆ:

ಆದಿ, ಅನಾದಿ ಇಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು ಸುರಾಳ ನಿರಾಳ ಇಲ್ಲದಂದು. ಶೂನ್ಯ ನಿಶೂನ್ಯವಿಲ್ಲದಂದು ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರನೊಬ್ಬನೇ ಇದ್ದೆಯಲ್ಲ, ಇಲ್ಲದಂತೆ. ಅಣುರೇಣುಗಳಲ್ಲಿಯೂ ಪರಮಾತ್ಮ ವ್ಯಾಪಿಸಿಕೊಂಡಿದ್ದಾನೆಂಬುದನ್ನು 'ಈಶೋಪನಿಷತ್ತು' ಹೀಗೆ ಬಣ್ಣಿಸುತ್ತದೆ:

ಈಶಾವಾಸ್ಯಮಿದಂ ಸರ್ವಂಯತ್ಕಿಂಚ ಜಗತ್ಯಾಂಜಗತ್'
ಅದನ್ನು ದೇವರ ದಾಸಿಮಯ್ಯ ಹೀಗೆ ನುಡಿದಿದ್ದಾನೆ.
"ಅಣುರೇಣುಮಧ್ಯದಲ್ಲಿ ಗುಣಭರಿತ ನೀನೆಂದು
ಮಣಿವುತಿರ್ಪೆನ್ನಯ್ಯ ರಾಮನಾಥ....................

ಬಸವಣ್ಣನವರು ಅದನ್ನು ಬೇರೆ ಮಾತಿನಲ್ಲಿ ಹೀಗೆ ಹೇಳುತ್ತಾರೆ:

ಎತ್ತೆತ್ತ ನೋಡಿದರತ್ತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಪು ನೀನೇ, ದೇವಾ, ವಿಶ್ವತೋ ಬಾಹು. ನೀನೇ ದೇವಾ, ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋಮುಖ ನೀನೇ ದೇವಾ ವಿಶ್ವತೋಪಾದ ನೀನೇ ದೇವಾ ಕೂಡಲಸಂಗಮದೇವಾ......

ದೇವರ ದಾಸಿಮಯ್ಯ ಆದ್ಯ ವಚನಕಾರರಲ್ಲಿ ಒಬ್ಬನಾಗಿದ್ದಾನೆ. ಬಸವಣ್ಣನವರಿಗಿಂತ ಹಿಂದೆಯೇ ವಚನ ಸಾಹಿತ್ಯದ ಪ್ರಾರಂಭಕ್ಕೆ ಕಾರಣೀಭೂತನಾದ ದೇವರ ದಾಸಿಮಯ್ಯ ಮುಂದಿನ ವಚನಕಾರರಿಗೆ ಒಂದು ವೇದಿಕೆ ಸಿದ್ಧತೆ ಮಾಡಿಕೊಟ್ಟಿದ್ದನು. ಈ ಬಗ್ಗೆ ಡಾ॥ ಜ. ಚ. ನಿ. ಹೀಗೆ ಹೇಳುತ್ತಾರೆ: ''ಸೂತ್ರದಾರನಾದ ದಾಸಿಮಯ್ಯನ ಒಂದು ವಚನಾಭಿಪ್ರಾಯವನ್ನ ನಾಲ್ಕಾರು ವಚನಗಳ ಮುಖಾಂತರ ಬಸವಣ್ಣನು ಎತ್ತಿ ವಿವರಿಸುತ್ತಾನೆ. ಅದೇ ಉಪಮೆಗಳನ್ನು ಧಾರಾಳವಾಗಿ ಉಪಯೋಗಿಸುತ್ತಾನೆ. ದೇವರ ದಾಸಿಮಯ್ಯ ಹನ್ನೊಂದನೇ ಶತಮಾನದಲ್ಲಿ ಕೈಗೊಂಡ ಸಾಮಾಜಿಕ ಕಾರ್ಯಗಳು. ತಾತ್ವಿಕ ಪ್ರಚಾರವು ವಚನರಚನೆಯ ಹನ್ನೆರಡನೇ ಶತಮಾನದ ಬಸವಣ್ಣನ ಹೃದಯ ಮುಕುರದಲ್ಲಿ ಚೆನ್ನಾಗಿ ಪ್ರತಿಬಿಂಬಿಸಿವೆ. ಮುದ್ದಾಗಿ ಮೂರ್ತಿಗೊಂಡಿವೆ, ಹಬ್ಬುಗೆಯಾಗಿ ಮುಂದುವರೆದಿದೆ. ದಾಸಿಮಯ್ಯನ ವಚನ ಪ್ರಭಾವ, ಬಸವಣ್ಣನವರಿಂದ ಸರ್ವಜ್ಞನವರೆವಿಗೂ ಇರುವ ಕವಿಗಳ, ಗ್ರಂಥಕಾರರ ಮೇಲೆ ಒಂದಲ್ಲಾ ಒಂದು ರೀತಿಯಿಂದ ಬಿದ್ದಿದೆ.''

ಸಂಬಳಕ್ಕಿಡಿಸಿಕೊಂಡ ಪುರೋಹಿತ ಕೈಯಲ್ಲಿ ತಮ್ಮ ಮನೆಯ ದೇವರ ಪೂಜೆ ಮಾಡಿಸಿ ಮಂಗಳಾರತಿ ತೀರ್ಥಪ್ರಸಾದ ತೆಗೆದುಕೊಂಡು ಕೃತಾರ್ಥರಾದೆವೆಂದು ಭಾವಿಸುವ ದೊಡ್ಡಸ್ತಿಕೆ ಜನರನ್ನು ದಾಸಿಮಯ್ಯ ಹಾಗೂ ಬಸವಣ್ಣ ಇಬ್ಬರೂ ತರಾಟೆಗೆ ತೆಗೆದುಕೊಳ್ಳುತ್ತಾರೆ.

ದೇವರದಾಸಿಮಯ್ಯನ ವಚನ:

ಸತಿಯರ ಸಂಗವನು, ಅತಿಶಯದ ಗ್ರಾಸವನು ಪೃಥಿವನೀಶ್ವರನ
ಪೂಜೆಯನು, ಅರಿವುಳ್ಳೆಡೆ ಹೆರರ ಕೈಯಿಂದ ಮಾಡಿಸುವರೆ ರಾಮನಾಥ

ಬಸವಣ್ಣನವರ ವಚನ ಹೀಗಿದೆ:

ತನ್ನಾಶ್ರಯದ ರತಿ ಸುಖವನು, ತಾನುಂಬ ಊಟವನು
ಬೇರೊಬ್ಬರ ಕೈಯಲು ಮಾಡಿಸಲುಬಹುದೇ?
ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವನು

ತಾ ಮಾಡಬೇಕಲ್ಲವೆ
ಬೇರೆ ಮತ್ತೊಬ್ಬರ ಕೈಯಲಿ ಮಾಡಿಸಲುಬಹುದೇ?
ಕೆಮ್ಮನುಪಚಾರಕ್ಕೆ ಮಾಡುವರಲ್ಲದೆ
ನಿಮ್ಮನೆತ್ತಬಲ್ಲರು ಕೂಡಲ ಸಂಗಮದೇವಾ

ಅಲ್ಲಮನ ವಚನದ ಮೇಲೂ ದೇವರದಾಸಿಮಯ್ಯನ ಪ್ರಭಾವವಿದೆ. ದೇವರದಾಸಿಮಯ್ಯನ ವಚನವೊಂದು ಹೀಗಿದೆ:

ಮೆಳೆಯ ಮೇಲಣ ಕಲ್ಲು ಜಗದೊಡೆಯನಾಗಬಲ್ಲುದೇ
ಮೆಳೆ ಶಿವಭಕ್ತನಾಗಬಲ್ಲುದೆ?
ನಿಮ್ಮ ತನು-ಮನ ಧನವರಿಯದಿರ್ದಡೆ
ಸದುಭಕ್ತರಹುರೆ ರಾಮನಾಥ

ಅಲ್ಲಮನ ವಚನವೊಂದು ಹೀಗಿದೆ :

ಹೊಟ್ಟೆಯ ಮೇಲೆ ಕಟ್ಟೋರಗದ ಮೊಟ್ಟೆಯ ಕಟ್ಟಿದರೇನು?
ಹಸಿವು ಹೋಹುದೇ?
ಅಂಗದ ಮೇಲೆ ಲಿಂಗಸ್ವಾಯತವಾದರೇನು?
ಶಿವಭಕ್ತನಾಗಬಲ್ಲನೆ?
ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದರೆ
ಆ ಕಲ್ಲು ಲಿಂಗವೇ?
ಆ ಮೇಳೆ ಭಕ್ತನೇ? ಇಟ್ಟವಗುರುವೆ?

ಇಂತಪ್ಪವರ ಕಂಡರೆ ನಾಚುವೆನಯ್ಯಾ ಗುಹೇಶ್ವರ.

ವಚನಕಾರರಲ್ಲಿ ಪರಸ್ಪರ ಒಬ್ಬರ ಮೇಲೆ ಒಬ್ಬರ ವ್ಯಕ್ತಿತ್ವ ಹಾಗೂ ಕೆಲಸಕಾರ್ಯಗಳು ಅಪರಿಮಿತ ಪ್ರಭಾವ ಬೀರಿವೆ. ಜೊತೆಗೆ ಪ್ರೇರಣೆಯನ್ನು ಮತ್ತಾವ ಕಡೆಯಿಂದಲಾದರೂ ಪಡೆದಿರಬೇಕು. ಇವುಗಳ ಜೊತೆಗೆ ವಿವಿಧ ಕಸಬುಗಳಿಂದ ಬಂದ ವಚನಕಾರರೂ ತಮ್ಮ ಜೀವನಾನುಭವವನ್ನು ಕಾವ್ಯವನ್ನಾಗಿಸಿದ್ದಾರೆ.

ಬಸವಣ್ಣನಿಗಿಂತ ಹಿರಿಯನಾದ ಸಕಲೇಶ ಮಾದರಸ ಅನೇಕ ವರ್ಷ ರಾಜ್ಯವಾಳಿ ವೈರಾಗ್ಯತಾಳಿ ಶ್ರೀಶೈಲಕ್ಕೆ ಹೋದನೆಂದು ಹೇಳಲಾಗಿದೆ. ಅವರ ಕೆಲವು ವಚನಗಳು ತುಂಬಾ ಸರಳವಾಗಿವೆ.

ವಚನಕಾರರಲ್ಲಿ ಅತ್ಯಂತ ಪೂಜನೀಯ ಸ್ಥಾನ ಪಡೆದವನು ಅಲ್ಲಮಪ್ರಭುದೇವ. ಶೂನ್ಯ ಸಿಂಹಾಸನಾಧೀಶ್ವರ ಅಲ್ಲಮಪ್ರಭು ಮಹಾಮೇಧಾವಿ. ಅನುಭವ ಮಂಟಪದ ಅಧ್ಯಕ್ಷನಾಗಿದ್ದ, ಶರಣರಿಗೆ ಮಾರ್ಗದರ್ಶಕನಾಗಿದ್ದ ಅಲ್ಲಮ ಸಕಲಶಾಸ್ತ್ರ ಪಾರಂಗತ. ''ಪ್ರಭುದೇವನ ವ್ಯಕ್ತಿತ್ವ ಮತ್ತು ವಚನ ರಚನೆ ಕನ್ನಡ ವಾಙ್ಮಯಕ್ಕಲ್ಲದೆ ಭಾರತೀಯ ಹಾಗೂ ಜಾಗತಿಕ ಸಾಹಿತ್ಯಕ್ಕೆ ಅಸಾಧಾರಣವಾದ ತೇಜಸ್ಸುಳ್ಳ ಕಾಣಿಕೆಯಾಗಿರುತ್ತದೆ'' ಎಂಬ ಡಾ॥ ರಂ. ಶ್ರೀ. ಮುಗಳಿ ಅವರ ಮಾತು ದಾಖಲಾರ್ಹವಾಗಿದೆ.[36]

ಈಶೋಪನಿಷತ್ತಿನಲ್ಲಿ ಬರುವ ಈ ವಾಕ್ಯ ಹೀಗಿದೆ:
ಪೂಷನ್ನೇಕರ್ಷೇಯಮಸೂರ್ಯ ಪ್ರಜಾಪತ್ಯಾವ್ಯೂಹರಶ್ಮಿನ್।
ಸಮೂಹ ತೇಜೋಯತ್ತೇರೂಪಂ ಕಲ್ಯಾಣತಮಂ ತತೇ ಪಶ್ಯಾಮಿ
ಯೋ ಸಾವಸೌ ಪುರುಷಃ ಸೋಹಮಸ್ಮಿ॥

ಅಲ್ಲಮನ ಕೆಲವು ವಚನಗಳನ್ನು ಹೋಲಿಸಿ ನೋಡಬೇಕು:

'ನಿಮ್ಮ ತೇಜವ ನೋಡಲೆಂದು ಪೆರ ಸಾರಿ ನೋಡುತಿರಲು। ಶತಕೋಟಿ ಸೂರ್ಯರು
ಮೂಡಿದಂತೆ ಇದ್ದುರಯ್ಯ, ಮಿಂಚಿನ। ಬಳ್ಳಿಯ ಸಂಚವ ಕಂಡರೆ ಎನಗಿದು ಸೋಜಿಗ
ವಾಯಿತು। ಗುಹೇಶ್ವರಾ ನೀನೂ ಜ್ಯೋತಿ ವಿಹಂಗವಾದರೆ ಉಪಮಿಸಿ ನೋಡಬಲ್ಲವರಿಲ್ಲಯ್ಯ
ಸ್ವಸ್ಥಾನ ಸುಸ್ಥಿರದ ಸುಮನ ಮಂಟಪದೊಳಗೆ ನಿತ್ಯ ನಿರಂಜನ
ಪ್ರಭೆಯ ಬೆಳಕು ಶಿವಾಯೋನಾನುಭವವು ಏಕಾರ್ಥವಾಗಿ ಗುಹೇಶ್ವರಾ
ನಿಮ್ಮ ಶರಣ ಅನುಪಮ ಸುಖಿಯಾಗಿದ್ದನಾ.

ಎಲೆ ಮನವೇ ನೀ ನನ್ನ ನಿಜವ ತಿಳಿದೆಡೆ ಆ ನಿನ್ನ ನಿಜವ ಪೇಳುವೆ ಕೇಳು, ಅದು ಕೇವಲ ಜ್ಯೋತಿ. ಅದು ವರ್ಣಾತೀತ.

ಪ್ರಭುದೇವನು ಹಿರಿಯ ಜ್ಞಾನಿಯಾದರೆ ಬಸವೇಶ್ವರನು ಹಿರಿಯ ಭಕ್ತ. ವಚನ ಹಾಗೂ ಸಾಮಾಜಿಕ ಸುಧಾರಣೆಗೆ 12ನೇ ಶತಮಾನದಲ್ಲಿ ಕೇಂದ್ರವ್ಯಕ್ತಿಯಾಗಿದ್ದವನು ಬಸವಣ್ಣ. ವೇದ, ಆಗಮ, ಉಪನಿಷತ್‌ಗಳ ಗಾಢವ್ಯಾಸಂಗ ಬಸವಣ್ಣನವರಲ್ಲಿತ್ತು. ಆದರೆ ಸಂಪ್ರದಾಯತೆ ವಿರುದ್ಧ ಸಿಡಿದೆದ್ದು ಹೊಸಮಾರ್ಗ ನಿರ್ಮಿಸಿದ ಶಕಪುರುಷರು ಅವರು. ಅವರ ವಚನಗಳು ಬರಿ ನಟನೆಯಲ್ಲ, ಅವು ಅಂತರಂಗ ಸ್ಫುರಿತ ನೈಸರ್ಗಿಕ ಭಾವಗಳು............ ಬಸವಣ್ಣನವರ ಆತ್ಮವೃತ್ತವು ಪ್ರಬಲವಾದ ಮನೋಯುದ್ಧದ ಚರಿತ್ರೆಯಾಗಿರುತ್ತದೆ[37] ಎಂಬ ಎಂ. ಆರ್. ಶ್ರೀ. ಮಾತುಗಳು ಸಮಂಜಸವಾಗಿವೆ.

ಬಸವಣ್ಣನ ಸೋದರಳಿಯ ಚನ್ನಬಸವೇಶ್ವರ ತುಂಬಾ ಪ್ರಮುಖನಾದ ಮತ್ತೊಬ್ಬ ವಚನಕಾರ. ಅಲ್ಲಮನಿಂದ 'ಮಹಾಜ್ಞಾನಿ' ಎನಿಸಿಕೊಂಡವ, ಬಸವಣ್ಣನೇ ಈತನ ಗುರು. ಪರಂಪರಾನುಗತವಾದ ವಿದ್ಯೆಯನ್ನೆಲ್ಲಾ ಈತ ಕರತಲಾಮಲಕ ಮಾಡಿಕೊಂಡಿದ್ದ. ಬಸವಣ್ಣನ ಜನಪ್ರಿಯತೆ, ಸಂಘಟನೆ ಹಾಗೂ ಅಲ್ಲಮನ ಆಧ್ಯಾತ್ಮ ಜ್ಞಾನ ಇವರಲ್ಲಿ ಸಂಗಮಿಸಿತು. ಕಲ್ಯಾಣದ ಕ್ರಾಂತಿಯನಂತರ ವೀರಶೈವ ಧರ್ಮದ ಸಂಘಟನೆ ಹಾಗೂ ವಚನ ಸಾಹಿತ್ಯದ ರಕ್ಷಣೆಯ ಕಾರ್ಯದಲ್ಲಿ ಈತ ವಹಿಸಿದ ಪಾತ್ರ ತುಂಬಾ ಮಹತ್ವದ್ದು. ಅದಕ್ಕಾಗಿಯೇ ಈತನನ್ನು ಎಂ. ಆರ್. ಶ್ರೀ. ಅವರು "ಪಾದರಸದಂತೆ. ಮಿಂಚಿನಂತೆ ಆತನ ಪ್ರತಿಭೆ ಎಂದಿದ್ದಾರೆ."[38] ಇವರ ವಚನಗಳಲ್ಲಿ ಭಾರತೀಯ ಸಾಹಿತ್ಯದ ನಿಚ್ಚಳ ಪ್ರಭಾವವನ್ನು ಗುರುತಿಸಬಹುದು.

ಈ ಕಾಲದ ಮತ್ತೊಬ್ಬ ಪ್ರಮುಖ ವಚನಗಾರ್ತಿ ಅಕ್ಕಮಹಾದೇವಿ. ಈಕೆ ಕನ್ನಡದ ಮೊದಲ ಕವಿಯತ್ರಿ. ಉಡುತಡಿ ಈಕೆಯ ಹುಟ್ಟೂರು. ಅಕ್ಕಮಹಾದೇವಿ ಲೋಕದ ಸಂಸಾರದ ಕೆಸರನ್ನು ತುಳಿದವರಾದರೂ, ಬಹುಬೇಗನೆ ಅದರಿಂದ ಹೊರಬಂದು ಚನ್ನಮಲ್ಲಿಕಾರ್ಜುನನಿಗೆ ಶರಣಾದಳು. ಈಕೆಯ ವಚನದಲ್ಲಿರುವ ಕಲಾತ್ಮಕತೆಯನ್ನು ಗಮನಿಸಿದರೆ ಈಕೆ ಕ್ರಮಬದ್ಧ ಸಾಹಿತ್ಯಾಧ್ಯಯನ ನಡೆಸಿದ್ದಾಳೆಂದು ಹೇಳಬೇಕು.

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯಾ,
ಸಮುದ್ರದ ತಡಿಯೊಳಗೊಂದು ಮನೆಯ ಮಾಡಿ ನೊರೆತೊರೆಗಳಿಗಂಜಿದಡೆಂತಯ್ಯಾ

ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯಾ
ಚೆನ್ನಮಲ್ಲಿಕಾರ್ಜುನ ದೇವ ಕೇಳಯ್ಯ
ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದಡೆ
ಮನದಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

ಅತ್ಯುತ್ತಮ ಸಾಹಿತ್ಯಿಕ ಗುಣ ಹೊರಸೂಸುವ ಈ ಕೃತಿ ಭಾವಗೀತೆಯ ಲಕ್ಷಣ ಹೊಂದಿದೆ. ಅಕ್ಕನ ವಚನಗಳು ಉಪಮೆ, ರೂಪಕ, ದೃಷ್ಟಾಂತ ಮೊದಲಾದ ಅಲಂಕಾರಗಳಿಂದ ಮೆರುಗು ಪಡೆದಿರುವುದರ ಜೊತೆಗೆ ಅವು ತಮ್ಮದೇ ಆದ ಒಂದು ಬಗೆಯ ಛಂದಸ್ಸಿನ ಲಯಗತಿಯಲ್ಲಿ ನಿನದಿಸುತ್ತಿರುವುದರಿಂದ ಕೇಳುವುದಕ್ಕೆ ಕಿವಿಗೆ ಹಿತವಾಗಿಯೂ, ಇಂಪಾಗಿಯೂ ಇವೆ.[39]

ವಚನಗಳ ವೈಶಿಷ್ಟ್ಯವನ್ನು ತಿಳಿಯಹೊರಟರೆ ಅದೊಂದು ಮೂಲತಃ ಈ ಕನ್ನಡದ ನೆಲದಲ್ಲಿ ಅರಳಿದ ಕುಸುಮವೆಂದೇ ಹೇಳಬೇಕು. ವಚನವೆಂದರೆ ನಡುಗನ್ನಡ ಶೈಲಿಯ ಅನುಭಾವ. ಗದ್ಯದಲ್ಲಿ ಉಸುರಿದ ಆಧ್ಯಾತ್ಮಿಕ ಭಾವಗೀತೆಗಳು. ಜಗತ್ತಿನ ಸಾಹಿತ್ಯದಲ್ಲಿ ಇವುಗಳನ್ನು ಹೋಲುವ ರೂಪ ಕಡಿಮೆ. ಕನ್ನಡದಲ್ಲಿ ಬೆಳಗಿದ ಅಪೂರ್ವ ಬೆಳೆಯೆಂಬ ಡಾ॥ ರಂ. ಶ್ರೀ. ಮುಗಳಿ ಅವರ ಮಾತುಗಳು ಸತ್ಯಾಂಶದಿಂದ ಕೂಡಿವೆ. ಈ ಹಿಂದೆ ಸಂಸ್ಕೃತದಲ್ಲಿ ಮುಕ್ತಕಗಳು ಹಾಗೂ ಜನಪದ ಸಾಹಿತ್ಯದಲ್ಲಿ ಬದುಕಿನ ಮಾರ್ಗ ತಿಳಿಸುವ ಸಾವಿರಾರು ತ್ರಿಪದಿಗಳು ಇದ್ದವು. ವಚನಕಾರರೂ ಅವುಗಳಿಂದ ಸ್ಫೂರ್ತಿ ಪಡೆದು ಉಪನಿಷತ್ತುಗಳ ಚಿಂತನೆಯಿಂದ ಶಕ್ತಿಗಳಿಸಿಕೊಂಡು ಅದನ್ನು ತಮ್ಮ ವಿವಿಧ ಕೃತಿಗಳಿಂದ ದೊರಕಿದ ಜೀವನಾನುಭವವನ್ನುವ ಮೂಸೆಯಲ್ಲಿ ಸಿಲುಕಿಸಿ ವಿಶಿಷ್ಟವಾದ ಕಾವ್ಯ ಪರಂಪರೆಯಾದ ವಚನ ಸಾಹಿತ್ಯವನ್ನು ನಮಗೆ ಕೊಟ್ಟಿದ್ದಾರೆ.

ವಚನ ಸಾಹಿತ್ಯ ಮೇಲ್ತರಗತಿಯ ಸಾಹಿತ್ಯ, ಪಾಂಡಿತ್ಯ, ಪ್ರತಿಭೆಗಳ ಸಂಯೋಗದಿಂದ ಉಂಟಾದ ಗ್ರಂಥ ಸಾಹಿತ್ಯವಲ್ಲ. ಅನುಭಾವಿಗಳ ಆತ್ಮಮಥನದಿಂದ ಮೂಡಿದುದು ವಚನ ಸಾಹಿತ್ಯ. ಸಂಸ್ಕೃತ ಸಾಹಿತ್ಯ ಪರಂಪರೆಯಲ್ಲಿ ಅನೇಕ ಋಷಿವರ್ಯರು ಚಿಂತಿಸಿ ಎಷ್ಟೋ ಕಾಲದ ನಂತರ ಬರಹಕ್ಕಿಳಿಸಿದ 'ದರ್ಶನ ಸಾಹಿತ್ಯ'ವನ್ನು ನಾವು ಇಲ್ಲಿ ಕಾಣಬಹುದು. ಪ್ರಾರ್ಥನೆ, ಆತ್ಮಪರಿಶೋಧನೆ ಹಾಗೂ ಸ್ತೋತ್ರರೂಪದ ಜಾತಿಗೆ ಸೇರಿದ ಸಾಹಿತ್ಯವೇ ವಚನ ಪರಂಪರೆ.

ವಚನ ಸಾಹಿತ್ಯದ ಉದಾತ್ತ ಪರಂಪರೆಯನ್ನು ಎಂ. ಆರ್. ಶ್ರೀ. ಅವರು ಹೀಗೆ ಕಂಡರಿಸಿದ್ದಾರೆ. "ಭಾರತದ ಪ್ರಾಚೀನ ಋಷಿ ಪರಂಪರೆಯಂತೆ ವಚನಕಾರರು ಜನರ ಬದುಕಿಗೆ ಮಾರ್ಗದರ್ಶನ ನೀಡುವ ಸಾಹಿತ್ಯ ಸೃಷ್ಟಿಸಿದ್ದಾರೆ. ವಚನಗಳು ನಮ್ಮ ಕನ್ನಡ ಸಾಹಿತ್ಯದ ಉಪನಿಷತ್ತು, ಆ ಕವಿಗಳು ನಮ್ಮ ನಾಡಿನ ರಸಋಷಿಗಳು. ಆ ರಸಋಷಿಗಳ ಉಪದೇಶ ಸಾರ ಸಾಹಿತ್ಯವೇ ದರ್ಶನ. ದರ್ಶನವೇ ಸಾಹಿತ್ಯ"[40]

ಉಪನಿಷತ್ತುಗಳಲ್ಲಿನ ಅನೇಕ ಅಂಶಗಳು ವಚನಗಳಲ್ಲಿವೆ. ಅದೇ ಉಪನಿಷತ್ತುಗಳ ಪ್ರಭಾವ ಕೂಡಾ ವಚನಕಾರರ ಮೇಲೆ ಆಗಿದೆಂಬುದನ್ನು ಡಾ॥ ರಂ. ಶ್ರೀ. ಮುಗಳಿ ಇಲ್ಲಿ ಸ್ಪಷ್ಟಪಡಿಸಿದ್ದಾರೆ. "ಉಪನಿಷತ್ತುಗಳಿಗೆ ಹೋಲುವ ಉಕ್ತಿಗಳು ವಚನವಲ್ಲಿ ಬಂದಿವೆ ಮಾತ್ರವಲ್ಲ, ಉಪನಿಷತ್ಕಾರರ ಆತ್ಮಾನುಭವ, ದೃಷ್ಟಿವೈಶಾಲ್ಯ, ಸತ್ಯಧರ್ಮದರ್ಶನ ಇವು ವಚನಕಾರರಲ್ಲಿವೆ.

ಜೊತೆಗೆ ಉಪನಿಷತ್‌ನಲ್ಲಿ ಇಲ್ಲದ ತತ್ವ ಪ್ರಚಾರ, ಸಮಾಜನೀತಿ, ಆಚಾರಧರ್ಮಗಳು ಅವುಗಳನ್ನು ಕನ್ನಡಿಸುವುದಕ್ಕೆ ತೊರಟ ಭಾಷೆಯ ಜನ ಸಮ್ಮುಖ ಸ್ವರೂಪಗಳವುಳ್ಳ ವಚನಗಳಿವೆ.''

ವಚನ ಸಾಹಿತ್ಯ ಉಪನಿಷತ್ತು ಸಾಹಿತ್ಯದ ನೇರ ಅನುವಾದವಲ್ಲ ಅಥವಾ ಅನುವಾದದ ಛಾಯೆಯನ್ನು ಉಳಿಸಿಕೊಂಡ ಸಾಹಿತ್ಯ ಪ್ರಕಾರವೂ ಅಲ್ಲ. ಅದೊಂದು ಹಿರಿದಾದ ಚೇತನವನ್ನು ಕಂಡಾಗ ಭಕ್ತಿ ಭಾವದಿಂದ ಅದರ ಉತ್ತಮಾಂಶಗಳನ್ನು ಅಳವಡಿಸಿಕೊಳ್ಳಲು ಸತ್‌ವ್ಯಕ್ತಿ ಮಾಡುವ ಪ್ರಯತ್ನದಂತೆ ವಚನಕಾರರು ಕೂಡ ಅಲ್ಲಿಯ ಸತ್ವ ಹೀರಿಕೊಂಡು ವಿಶಿಷ್ಟ ಬೆಳೆಯನ್ನು ಕನ್ನಡದ ನೆಲದಲ್ಲಿ ಬೆಳೆದಿದ್ದಾರೆ.

★ ★ ★

ವಚನಕಾರರ ಸದಾಶಯವನ್ನು ಕಾವ್ಯವಾಹಿನಿಯಾಗಿ ಬಳಸಿಕೊಂಡವರಲ್ಲಿ 'ಹರಿಹರ' ತುಂಬಾ ಪ್ರಮುಖನಾದ ಕವಿ. ವಚನ ಸಾಹಿತ್ಯದ ಪರಂಪರೆಯ ನಂತರ ಬಂದ ಹರಿಹರ, ರಾಘವಾಂಕ ಹಾಗೂ ಪದ್ಮರಸ ಕವಿಗಳು ಕನ್ನಡದಲ್ಲಿ ನಿತ್ಯನೂತನವೆಂಬಂತಹ ಕೃತಿಗಳನ್ನು ರಚಿಸಿದ್ದಾರೆ. ಇವರಲ್ಲಿ ಮೊದಲಿಗೆ ಬರುವವನು ಹರಿಹರ. ಇವನ ಎಲ್ಲಾ ಕೃತಿಗಳಲ್ಲೂ ಆತನ ಭಕ್ತಿಪೂರ್ಣವಾದ ಸಮಗ್ರ ವ್ಯಕ್ತಿತ್ವವೊಂದು ಗೋಚರಿಸುತ್ತದೆ.

'ಪಂಪಾಶತಕ', 'ರಕ್ಷಾಶತಕ' 'ಮುಡಿಗೆಯ ಅಷ್ಟಕ' 'ಗಿರಿಜಾಕಲ್ಯಾಣ' ಹಾಗೂ ''ಶಿವಗಣರ ರಗಳೆಗಳು'' ಇವು ಹರಿಹರನ ಕೃತಿಗಳು.

''ಹರಿಹರನ 'ಗಿರಿಜಾಕಲ್ಯಾಣ' ಸುಂದರವಾದ ಚಂಪೂಕೃತಿ, ಹರಿಹರನಂತಹ 'ಯುಗದಕವಿ' ಕೂಡ ಬೃಹತ್ ಭಾಷೆ ಹಾಗೂ ಸಾಹಿತ್ಯದ ಪ್ರಭಾವಕ್ಕೆ ಹೇಗೆ ಬಳುಕುತ್ತಾನೆಂಬುದಕ್ಕೆ ಅವನ 'ಗಿರಿಜಾ ಕಲ್ಯಾಣ' ಕೃತಿಯನ್ನು ನೋಡಬೇಕು. ''ರಗಳೆಗಳನ್ನು ಬರೆದಿದ್ದಕ್ಕಾಗಿ ಹರಿಹರನು ತಲೆಬಗ್ಗಿಸಬೇಕಾಗದ್ದೇನೂ ಇರಲಿಲ್ಲ. ಒಂದು ವೇಳೆ ಆತನು ಗಿರಿಜಾಕಲ್ಯಾಣ ವನ್ನು ರಚಿಸದೆಯೇ ಹೋಗಿದ್ದರೂ ಆತನಿಗೆ ಕನ್ನಡ ಸಾಹಿತ್ಯದಲ್ಲಿ ದೊರೆತಿರುವ ಸ್ಥಾನಕ್ಕೆ ಏನೂ ಚ್ಯುತಿ ಬರುತ್ತಿರಲಿಲ್ಲ'' ಎಂದು ಪ್ರೊ. ಟಿ. ಎಸ್. ವೆಂಕಣ್ಣಯ್ಯ ಅವರು ಬರೆಯುತ್ತಾರೆ. ತಾನು ಮಹಾಕವಿ, ಎಂಬುದನ್ನು ಸ್ಪಷ್ಟಪಡಿಸಲೆಂಬಂತೆ ಹರಿಹರ 'ಗಿರಿಜಾಕಲ್ಯಾಣ' ಕೃತಿಯನ್ನು ಆಯ್ಕೆ ಮಾಡಿಕೊಂಡಿದ್ದಾನೆ. ಗಿರಿಜಾಕಲ್ಯಾಣ ಪರಂಪರಾನುಗತವಾದ ಚಂಪೂಶೈಲಿಯಲ್ಲಿದೆ. ಸಂಸ್ಕೃತ ಹಾಗೂ ಕನ್ನಡ ಭಾಷೆಗಳಲ್ಲಿ ಕವಿಗಿರುವ ಅಸಾಧಾರಣ ಪ್ರೌಢಿಮೆಯನ್ನು ಈ ಕಾವ್ಯ ಸ್ಪಷ್ಟಪಡಿಸುತ್ತದೆ.

ಗಿರಿಜಾ ಕಲ್ಯಾಣದ ಕಥಾವಸ್ತುವು ಅತಿ ಪ್ರಾಚೀನವಾದುದು. ಕಾಳಿದಾಸನ ಮನಸ್ಸನ್ನು ಆಕರ್ಷಿಸಿ ಸಂಸ್ಕೃತ ಸಾಹಿತ್ಯದಲ್ಲಿ 'ಕುಮಾರ ಸಂಭವಂ' ಮಹಾಕಾವ್ಯವಾಗಿ ಪರಿವರ್ತಿತವಾದ ವಸ್ತುವಿದು. ಇದು ಶೈವ ಪುರಾಣಗಳಿಂದ ಉದ್ಭವವಾದುದು.ಶಿವನ ಪಂಚವಿಂಶತಿ ಲೀಲೆಗಳಲ್ಲಿ ಇದು ಒಂದು. ಇಂತಹ ಪ್ರಾಚೀನ ಕತೆಯನ್ನು ಬದಲಿಸುವ ಗೊಡವೆಗೆ ಹೋಗದೆ ಕನ್ನಡ ಕಾವ್ಯ ಸೃಷ್ಟಿಗಿಳಿದನೆಂದು ಕೆಲವು ವಿದ್ವಾಂಸರು ಹೇಳುತ್ತಾರೆ.

''ಕಥಾವಿಷಯ, ವಸ್ತುರಚನೆ, ವರ್ಣನೆ, ಶೈಲಿ, ಇವುಗಳಲ್ಲಿ ಪೂರ್ವ ಪರಂಪರೆಯ ಅಂಶಗಳನ್ನು ಸ್ವೀಕರಿಸಿ ಸ್ವತಂತ್ರವಾದ ಕೆಲವನ್ನು ಸೇರಿಸಿ ವ್ಯಕ್ತಿತ್ವದ ಪ್ರಕ್ರಿಯೆಯಿಂದ ಅದಕ್ಕೆ ಕೊಟ್ಟ ಮೆರುಗಿನಲ್ಲಿ ಈ ಗ್ರಂಥದ ಹೊಸತನವಿದೆ. ಈವರೆಗಿನ ಕನ್ನಡ ಚಂಪೂಗಳಲ್ಲಿ ಕಾಣದೊರೆಯದ ಕಥಾವಿಷಯವು ಇದರಲ್ಲಿದೆ.''

ಕಾಳಿದಾಸನ 'ಕುಮಾರಸಂಭವ'ವೂ ತನ್ನ ಪ್ರಭಾವ ಬೀರಿದಂತೆ ಕಾಣುತ್ತದೆ. ಆದರೆ ಅದು 'ಕುಮಾರಸಂಭವ', ಇದು 'ಗಿರಿಜಾ ಕಲ್ಯಾಣ'. ಹೆಸರಿನಲ್ಲಿ ವ್ಯತ್ಯಾಸವಿದ್ದೇ ಇದೆ. ಅದೇ ರೀತಿ ಇಬ್ಬರ ದೃಷ್ಟಿಯಲ್ಲೂ ಸಹ ವ್ಯತ್ಯಾಸವಿದೆ. ಮೂಲದಲ್ಲಿ ಹರಿಹರನು ಮಾಡಿಕೊಂಡ ಮಾರ್ಪಾಡುಗಳಲ್ಲಿ ಬೃಹಸ್ಪತಿಯ ಕಾವ್ಯ, ವಿಷ್ಣುವಿನಿಂದ ಕಾಮನ ಮನವೊಲಿಸುವಿಕೆ, ವಟುವೇಷದ ಶಿವನನ್ನು ಕುಪಿತಳಾದ ಗಿರಿಜೆ ವಿಭೂತಿಯಿಂದ ಹೊಡೆಯುವುದು - ಇವು ಮಹತ್ವದವು. ಕೊನೆಯದಂತೂ ಯಾವ ಮೂಲದಲ್ಲಿಯೂ ಇಲ್ಲದ ಹೊಸ ಕಲ್ಪನೆಯಾಗಿ ಗಿರಿಜೆಯ ಪಾತ್ರವನ್ನು ಚೆನ್ನಾಗಿ ಪ್ರಕಾಶಿಸುತ್ತದೆ. ಹರಿಹರ ಬೇರೆ ಭಾಷೆಯಿಂದ ತನ್ನ ಭಾಷೆಗೆ ತರುವಾಗ ಮಾಡಿಕೊಂಡ ಈ ಮಾರ್ಪಾಡುಗಳು ಅವರ ಸೃಜನಶೀಲ ಪ್ರತಿಭೆಗೆ ಸಾಕ್ಷಿ.

'ಶಿವಗಣರ ರಗಳೆ'ಗಳು ಹರಿಹರನ ವ್ಯಕ್ತಿತ್ವದ ಸಿರಿಯ ಪತಾಕೆಗಳು. ಈ ರಗಳೆ ರಚನೆಯಿಂದಾಗಿಯೇ ಹರಿಹರ ಕನ್ನಡ ಸಾಹಿತ್ಯದ ನಿತ್ಯನೂತನ ಕವಿ ಆಗಿದ್ದಾನೆ. ಹೀರೆಮಲ್ಲೂರು ಈಶ್ವರನ್ ಹರಿಹರನ ರಗಳೆಯ ಸಂಖ್ಯೆ 106 ಎಂದು ನಿರ್ಧರಿಸಿದ್ದಾರೆ. ಇದರಲ್ಲಿ 63 ಪುರಾತನರವು. ವೀರಶೈವ ಶರಣ ಚರಿತೆಗಳು ಹಾಗೂ ಪುಷ್ಪರಗಳೆಯಂತಹ ಸ್ಫೂರ್ತಿದಾಯಕ ಆಶಾಕಾವ್ಯಗಳು ಇಲ್ಲಿ ಸೇರಿವೆ.

ಪ್ರಾಯಶಃ 63 ಪುರಾತನರು ಅಂದರೆ 'ಪೆರಿಯಪುರಾಣ'ದಲ್ಲಿ ಹೇಳಿದ ತಮಿಳುನಾಡಿನ ಶಿವಭಕ್ತರ ಕತೆಗಳನ್ನು ಈತ ಇಲ್ಲಿ ಕೊಟ್ಟಿದ್ದಾನೆ. 'ಪೆರಿಯಪುರಾಣ' ಹರಿಹರನಿಗೆ 63 ಪುರಾತನ ಶಿವಶರಣರ ಚರಿತ್ರೆ ಸಂಗ್ರಹಿಸಲು ಸಹಾಯಮಾಡಿದೆ. ಶೈವರು ಈ ಹಿಂದೆ ಜೈನರ 'ತ್ರಿಷಷ್ಠಿ ಶಲಾಕ ಪುರುಷ ಪುರಾಣ' ಅಂದರೆ 63 ಜನ ಜೈನಧರ್ಮದ ಮಹಾಪುರುಷರ ಕತೆ ಬರೆದಂತೆ, ತಾವು 63 ಪುರಾತನರ ಚರಿತ್ರೆ ರಚಿಸಿದ್ದಿರಬೇಕು. ತಮಿಳು ಭಾಷೆಯಲ್ಲಿ 'ಪೆರಿಯ ಪುರಾಣ' ರಚನೆಯ ಹಿನ್ನೆಲೆಯಲ್ಲಿ 63 ಜೈನ ಶಲಾಕ ಪುರುಷರ ಕತೆ ಪ್ರಭಾವ ಬೀರಿದೆ. 'ಪೆರಿಯ ಪುರಾಣ'ದ ವಸ್ತುವನ್ನು ಶಿವಗಣರ ರಗಳೆಯಾಗಿ ಹರಹರ ಬಳಸಿಕೊಂಡಿದ್ದಾನೆಂಬುವುದಕ್ಕೆ ಯಾವುದೇ ಸಂಶಯವಿಲ್ಲ. ಆದರೆ ಈ ವಸ್ತುವನ್ನು ಹರಿಹರ ಅಚ್ಚ ಹೊಸದೆಂಬಂತೆ ತಂದಿರಿಸಿದ್ದಾನೆ. ಇದಕ್ಕೆ ಅವನ 'ಅಸಾಧಾರಣ' ಪ್ರತಿಭೆ ಕಾರಣವಾಗಿದೆ.

ರಾಘವಾಂಕ ಹರಿಹರನ ಪ್ರಿಯಶಿಷ್ಯ ಹಾಗೂ ಸೋದರಳಿಯ. ಹರಿಹರನಂತೆ ಕನ್ನಡ ಸಾಹಿತ್ಯದಲ್ಲಿ ವಿನೂತನ ಮಾರ್ಗವನ್ನು ತೋರಿಸಿಕೊಟ್ಟವನು. ರಾಘವಾಂಕ ಪಾಂಡಿತ್ಯ ಪ್ರತಿಭೆಗಳ ಸಂಗಮ ಕ್ಷೇತ್ರವಾಂತಿದ್ದವನು. ಕನ್ನಡ-ಸಂಸ್ಕೃತಗಳೆರಡರಲ್ಲೂ ನಿಷ್ಣಾತ ವಿದ್ವಾಂಸ. ಮಲ್ಹಣ, ಬಾಣ-ಉದ್ಭಟ, ಭೋಜ, ಭಲ್ಲಟ, ಕಾಳಿದಾಸ, ಹಲಾಯುಧ, ಕೇಶಿರಾಜ, ಭಾರವಿ ಮೊದಲಾದ ಕವಿಗಳನ್ನು ತನ್ನ ಕಾವ್ಯಾರಂಭದಲ್ಲಿಯೇ ಸ್ತುತಿಸಿದ್ದಾನೆ. ಇವರು ತನ್ನ ಕಾವ್ಯವನ್ನು ನಡೆಸಬೇಕೆಂದು ಪ್ರಾರ್ಥಿಸುತ್ತಾನೆ. ಕ್ರಿ. ಶ. 1225 ಇವನ ಕಾಲ.

ಮನುಜರ ಮೇಲೆ ಸಾಮಾನ್ಯರ ಮೇಲೆ, ಕನಿಷ್ಠರ ಮೇಲೆ ಕಾವ್ಯ ಬರೆಯುವುದಿಲ್ಲವೆಂಬ ಕಠೋರ ಪ್ರತಿಜ್ಞೆ ಮಾಡಿದ್ದ ಹರಿಹರನ ಸಮುಖದಲ್ಲಿ 'ಹರನೆಂಬುದೇ ಸತ್ಯ. ಸತ್ಯವೆಂಬುದೇ ಹರ'' ಎಂಬ ತತ್ವಾಚರಣೆಯಲ್ಲಿ ಬದುಕು ನಡೆಸಿದ ಹರಶ್ಚಂದ್ರನ ಕಾವ್ಯ ರಚಿಸಿದ ಕೀರ್ತಿ ರಾಘವಾಂಕನದು. ಈ ಕಾವ್ಯದಿಂದಲೇ ರಾಘವಾಂಕ ಕನ್ನಡ ಸಾಹಿತ್ಯದಲ್ಲಿ ಅತ್ಯುನ್ನತ ಸ್ಥಾನ ಗಳಿಸಿದ್ದಾನೆ. ರಾಘವಾಂಕ ಒಟ್ಟು 'ಆರು' ಗ್ರಂಥಗಳನ್ನು ರಚಿಸಿದ್ದಾನೆ. 'ಸೋಮನಾಥ ಚಾರಿತ್ರ', 'ವೀರೇಶ ಚಾರಿತ್ರ'

'ಸಿದ್ಧರಾಮಚಾರಿತ್ರ', 'ಹರಿಶ್ಚಂದ್ರ ಚಾರಿತ್ರ' ಎಂಬ ಅವನ ನಾಲ್ಕು ಕಾವ್ಯಗಳು ಈಗ ಉಪಲಬ್ಧ. 'ಶರಣಸಾಹಿತ್ಯ' ಹಾಗೂ 'ಹರಿಹರ ಮಹತ್ವ' ಕಾವ್ಯ ದೊರೆತಿಲ್ಲ. ಕೊನೆಯ ಕಾವ್ಯ ಹರಿಹರನ ಬದುಕು ಸಾಹಿತ್ಯ ಸಾಧನೆಯನ್ನು ಕುರಿತಾದ ಕೃತಿ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

'ಸೋಮನಾಥ ಚಾರಿತ್ರ' ಇದು ಆದಯ್ಯನ ರಗಳೆ. ಸೌರಾಷ್ಟ್ರದ ಶಿವಭಕ್ತನಾದ ಆದಯ್ಯನು ಪುಲಿಗೆರೆಗೆ ಬಂದು ಸೌರಾಷ್ಟ್ರದ ಸೋಮನಾಥನನ್ನು ಅಲ್ಲಿ ಪ್ರತಿಷ್ಠೆ ಮಾಡಿ ಪವಾಡಗಳಿಂದ ಮೆರೆದು ಜೈನರನ್ನು ಶಿಭಕ್ತರನ್ನಾಗಿ ಮಾಡಿದ ಕಥೆ. ಹರಿಹರನ 'ಆದಯ್ಯನ ರಗಳೆ'ಯಿಂದ ಇದಕ್ಕೆ ಸ್ಫೂರ್ತಿ ದೊರೆತಿರುವುದಾದರೂ ಇದು ಅದರ ಷಟ್ಪದಿ ರೂಪವಾದ ಅನುವಾದವಲ್ಲ. ಕಥಾರಂಭದಲ್ಲಿ ಹೊಸ ಸನ್ನಿವೇಶಗಳು ಅಲ್ಲಲ್ಲಿ ಮಿನುಗುತ್ತವೆ. ಕಥಾನಕವೂ ಆದಯ್ಯನ ಚಾರಿತ್ರವನ್ನು ಎತ್ತಿ ತೋರಿಸುವ ಸಂದರ್ಭಗಳಲ್ಲಿ ಶಕ್ತಿಯುತವಾಗಿದೆ.

'ಸಿದ್ಧರಾಮ ಚಾರಿತ್ರ' ಕಾವ್ಯಕ್ಕೆ ಹರಿಹರನ ಉಲ್ಲೇಖ-ಜನಪದದಲ್ಲಿ ಹರಡಿ ಬಂದಿರುವ ಕಥೆಗಳು ಹಾಗೂ ಮಿಗಿಲಾದ ಅವನದೇ ಆದ ವಚನಗಳು. ಇವುಗಳನ್ನು ಆಧರಿಸಿ ರಾಘವಾಂಕ ತನ್ನ ಸಿದ್ಧರಾಮನ ಕಥೆಯನ್ನು ನಿರೂಪಿಸಿರುವಂತೆ ಕಾಣಬರುತ್ತದೆ.[41]

''ವಸ್ತು, ರೂಪ, ಸತ್ವ ಎಲ್ಲ ದೃಷ್ಟಿಯಿಂದಲೂ ಕ್ರಾಂತಿಯನ್ನೊಳಗೊಂಡ ಸ್ವತಂತ್ರಕಾವ್ಯ. ಕನ್ನಡ ಸಾಹಿತ್ಯದಲ್ಲಿಯೇ ಉನ್ನತ ಸ್ಥಾನವನ್ನುಂಲಕರಿಸಿದ ಶ್ರೇಷ್ಠ ತರಗತಿಯ ಕಲಾಕೃತಿ ಎಂಬುದು ಡಾ॥ ಆರ್. ಸಿ. ಹಿರೇಮಠವರ ಅಭಿಪ್ರಾಯ''.[42]

'ವೀರೇಶ ಚರಿತೆ' 127 ಪದ್ಯ 2 ಸಂಧಿಗಳ ಚಿಕ್ಕಕಾವ್ಯ. ಕಥಾರಚನೆಯ ಮೇಲೆ ಹರಿಹರನ ' ವೀರಭದ್ರದೇವರ ರಗಳೆ' ಪ್ರಭಾವವನ್ನು ಕಾಣಬಹುದು. ಜೊತೆಗೆ ಈ ಕಥೆ ಸ್ಕಂದಪುರಾಣ, ಶಿವಪುರಾಣ, ಲಿಂಗಪುರಾಣ, ವಾಯುರಿಂದ್ರ ಸಂಹಿತೆ, ಭಾರತ ಭಾಗವತ ಗ್ರಂಥಗಳಲ್ಲಿ ಕಂಡುಬರುತ್ತದೆ. ರಾಘವಾಂಕನ ಕಾವ್ಯಸಿದ್ಧಿಯ ಹೆಗ್ಗುರುತು 'ಹರಿಶ್ಚಂದ್ರಕಾವ್ಯ'. ಅವನ ಶಕ್ತಿ- ವಿಶೇಷಗಳೆಲ್ಲ ಇದರಲ್ಲಿ ತನಿಗೊಂಡು ಮೇಳಗೊಂಡಿದೆ. ಹರಿಶ್ಚಂದ್ರನ ಕಥೆ, ವೇದ ಪುರಾಣ ಕಾವ್ಯಗಳಲ್ಲಿ ಸುಪ್ರಸಿದ್ಧವಾದುದು. ''ಕಥಾಬೀಜವೀಂ ಬೀಜವಂ ಬಿತ್ತಿ ಬೆಳೆಸಿದವನೀ ಕಾವ್ಯ ವೃಕ್ಷಮಂ'' ಎಂದು ಅವನೇ ಹೇಳಿದಂತೆ ಪೂರ್ವ ಪರಂಪರೆಯಿಂದ ಕಥಾಬೀಜವನ್ನು ಎತ್ತಿತಂದು ತನ್ನ ಕಾವ್ಯ ವೃಕ್ಷವನ್ನು ಬೆಳೆಸಿದ್ದಾನೆ. ಪೂರ್ವ ಕಥೆಯ ಅಪೂರ್ವ ನಿರೂಪಣೆಯಲ್ಲಿ ''ಹರಿಶ್ಚಂದ್ರ ಚಾರಿತ್ರ''ದ ಹೊಸತನವಿರುತ್ತದೆ. ರಾಘವಾಂಕನಿಗಿಂತ ಹಿಂದಿನ ಆಕರಗಳೊಡನೆ ಇವನ ಸಂಧಾನವನ್ನು ಹೋಲಿಸಿದರೆ ಭಾರತೀಯ ಸಾಹಿತ್ಯದಲ್ಲಿಯೇ ಕಾಣ ದೊರೆಯದ ನೂತನ ಸನ್ನಿವೇಶ ಸೃಷ್ಟಿ, ಕೃತಿ ಬಂಧ ಇಲ್ಲಿ ಇವೆ ಎಂಬುದು ಹೆಮ್ಮೆಯ ಸಂಗತಿ.[43]

ರಾಘವಾಂಕ ತನ್ನ ಕಾವ್ಯ ಮಾಧ್ಯಮವಾಗಿ ಷಟ್ಪದಿ ಪ್ರಕಾರವನ್ನು ಆರಿಸಿಕೊಂಡಿರುದು ಅವನ ವಿಶಿಷ್ಟತೆಯನ್ನು ಪ್ರತಿಬಿಂಬಿಸುತ್ತದೆ. ಚಂಪೂಮಾರ್ಗವನ್ನು ಹರಿಹರ ಕೈ ಬಿಡಲಾಗದೆ ತೊಳಲಾಡಿದ್ದನೆ. ಅವನ ಶಿಷ್ಯ ರಾಘವಾಂಕ ಕನ್ನಡ

ಕಾವ್ಯ ಪರಂಪರೆಗೆ ಹೊಸನೀರು ಹರಿಸಿದ್ದಾನೆ. ಅವನನ್ನು ನೇರವಾಗಿ ಭಾಷಾಂತರಕಾರರ ಗುಂಪಿಗೆ ಸೇರಿಸಲಾಗುವುದಿಲ್ಲ. ಆದರೆ ಎಚ್ಚರಿಕೆಯಿಂದ ತನ್ನ ಕಾವ್ಯದ ವಸ್ತುಗಳಿಗೆ ವಿವಿಧ ಮೂಲಗಳಿಂದ ಸಾಮಗ್ರಿಯನ್ನು ಸಂಗ್ರಹಿಸಿದ್ದಾನೆ. ಹಿರಿಯ ಸಂಸ್ಕೃತ ಹಾಗೂ ಕನ್ನಡ ಕೃತಿಗಳಿಂದ ಸ್ಫೂರ್ತಿ ಪಡೆದಿದ್ದಾನೆ.

ಹರಿಹರ-ರಾಘವಾಂಕರ ಸಮಕಾಲೀನ ಪದ್ಮರಸ. ಈತನ ಕಾಲ ಕ್ರಿ. ಶ. 1385. ಈತ ಸಕಲೇಶ ಮಾದರಸನ ಮೊಮ್ಮಗ. ಈತ 'ಪದ್ಮರಾಜ ಪುರಾಣ' ಎಂಬ ಕೃತಿ ರಚಿಸಿದ್ದಾನೆ. 'ಶಿವಾದ್ವೈತ ಸಾನಂದ ಚರಿತ' ಎಂಬ ಸಂಸ್ಕೃತ ಗ್ರಂಥವನ್ನು 'ದೀಕ್ಷಾಬೋಧೆ' ಎಂಬ ಹೆಸರಿನಲ್ಲಿ ಅನುವಾದ ಮಾಡಿದ್ದಾನೆ.

ಪಾಲ್ಕುರಿಕೆ ಸೋಮನಾಥ (ಕ್ರಿ. ಶ. 1195) ತೆಲುಗಿನಲ್ಲಿ ''ಬಸವಪುರಾಣಮು'' ಎಂಬ ಕೃತಿ ರಚಿಸಿದ್ದಾನೆ. ಈತ ಸಂಸ್ಕೃತ, ಪ್ರಾಕೃತ ಹಾಗೂ ಕನ್ನಡ ಭಾಷೆಗಳಲ್ಲಿ ಮಹಾ ವಿದ್ವಾಂಸನಾಗಿದ್ದರೂ 'ಶೀಲಸಂಪಾದನೆ', 'ಸಹಸ್ರಗಣನಾಮ', 'ಪಂಚರತ್ನ' ಮೊದಲಾದ ಕೃತಿಗಳನ್ನು ಕನ್ನಡದಲ್ಲಿಯೂ ರಚಿಸಿದ್ದಾನೆ.

ಕ್ರಿ. ಶ. 1360ರಲ್ಲಿ ಭೀಮಕವಿ ಎಂಬುವವನು ಪಾಲ್ಕುರಿಕೆ ಸೋಮನಾಥನ 'ಬಸವ ಪುರಾಣಮು' ಎಂಬ ಕಾವ್ಯವನ್ನು 'ಬಸವ ಪುರಾಣ' ಎಂಬ ಕಾವ್ಯವನ್ನಾಗಿ ಕನ್ನಡಿಸಿದ್ದಾನೆ.

ಪಾಲ್ಕುರಿಕೆ ಸೋಮನಾಥನ 'ಬಸವಪುರಾಣ'ವನ್ನು ಚಾರಿತ್ರಿಕ ಸಾಮಗ್ರಿ, ಕಥಾಕ್ರಮ, ಪವಾಡಗಳ ಮಾಲಿಕೆ, ಇತರ ಭಕ್ತರ ಚರಿತ್ರೆ ಈ ಮುಂತಾದ ಎಲ್ಲ ಅಂಶಗಳಲ್ಲಿ ಇದು ಕನ್ನಡಿಸಿದೆ ಎಂಬುದು ಸ್ಪಷ್ಟ.[44] ಈ ಅಭಿಪ್ರಾಯವನ್ನು ಸಂಪೂರ್ಣವಾಗಿ ಒಪ್ಪದ ವಿದ್ವಾಂಸರೂ ಇದ್ದಾರೆ. ಕನ್ನಡ ಬಸವ ಪುರಾಣವು ಮೂಲ ತೆಲುಗು ಕೃತಿಯ ಕೇವಲ ಅನುವಾದವಲ್ಲ. ಮೂಲವನ್ನು ಕೆಲವೆಡೆ ಹಾಗೆಯೇ ಅನುವಾದಿಸಿದ್ದಾನೆ. ಕೆಲವೆಡೆ ಸಂಗ್ರಹಿಸಿದ್ದಾನೆ. ಇನ್ನು ಕೆಲವೆಡೆ ವಿಸ್ತರಿಸಿದ್ದಾನೆ. ಮೂಲದಲ್ಲಿ ಇಲ್ಲದ ಅನೇಕ ವರ್ಣನೆಗಳು ಇಲ್ಲಿ ಬಂದಿವೆ. ಇದಕ್ಕಿಂತ ಮುಖ್ಯ ಸಂಗತಿ ಎಂದರೆ ಮೂಲದಲ್ಲಿ ಇಲ್ಲದ ತನಗೆ ತಿಳಿದು ಬಂದ ಅನೇಕ ಪ್ರಸಂಗಗಳನ್ನು, ಕತೆಗಳನ್ನು ಭೀಮಕವಿ ಹೊಸದಾಗಿ ಸೇರಿಸಿರುವುದು.[45]

ಕುಮದೇಂದು 'ಜೈನ ರಾಮಾಯಣ'ವನ್ನು ಕ್ರಿ. ಶ. 1370ರಲ್ಲಿ ರಚಿಸಿದ್ದಾನೆ. ನಾಗಚಂದ್ರನ ಕೃತಿಗೆ ಇದು ಹೆಚ್ಚು ಕಡಿಮೆ ಋಣಿಯಾಗಿದೆ. ಎರಡನೆಯ ನಾಗವರ್ಮ, ಕಮಲಭವ, ಮಹಾಬಲ ಹಾಗೂ ಮಹಾಕವಿಗಳು ತಮ್ಮ ಕೃತಿಗಳಿಗೆ ಹಿಂದಿನ ಕನ್ನಡ ಕವಿಗಳನ್ನೇ ಆಶ್ರಯಿಸಿದ್ದಾರೆ.

ಕ್ರಿ. ಶ. 1400ರಲ್ಲಿಪದ್ಮಣಾಂಕನು 'ಪದ್ಮರಾಜ ಪುರಾಣ' ಎಂಬ ವಾರ್ಧಕ ಷಟ್ಪದಿಯ 13 ಸಂಧಿಗಳ ಕೃತಿ ರಚಿಸಿದ್ದಾನೆ. ಕೆರೆಯ ಪದ್ಮರಸನ ವಂಶಜನಾದ ಈತ ತನ್ನ ವಂಶದ ಹಿರಿಯನನ್ನು ತುಂಬಾ ಭಯಭಕ್ತಿಗಳಿಂದ ಚಿತ್ರಿಸಿದ್ದಾನೆ. ಹರಿಹರ ಮತ್ತು ರಾಘವಾಂಕನು ರಚಿಸಿದ ಶರಣರ ಜೀವನ ಚರಿತ್ರೆಯ ಕೃತಿಗಳು ಈತನಿಗೆ ಸಹಾಯಕವಾಗಿದೆ.

ನಡುಗನ್ನಡ ಸಾಹಿತ್ಯದ ಮೇಲೆ ಬಸವಣ್ಣ ಹಾಗೂ ಹರಿಹರನ ನಿಚ್ಚಳ ಪ್ರಭಾವ ಗುರುತಿಸಬಹುದು. ಪಂಪಯುಗದ ಹಾಗೂ ಅನಂತರದ ಕೆಲವು ಜೈನ ಕವಿಗಳು ತಮ್ಮ ಕಾವ್ಯ ಮಾಧ್ಯಮವನ್ನು ಲೌಕಿಕ ಹಾಗೂ ಧಾರ್ಮಿಕ ಎಂದು ತಮಗೆ

ತಾವೇ ಅಡ್ಡಗೋಡೆ ಹಾಕಿಕೊಂಡಿದ್ದರು. ಧಾರ್ಮಿಕ ಕಾವ್ಯವನ್ನು ಅಂದರೆ ಜೈನ ಪುರಾಣಗಳನ್ನು ಅನುವಾದಿಸುವಾಗ ತುಂಬಾ ಶ್ರದ್ಧೆ ಭಕ್ತಿಗಳನ್ನಿಟ್ಟುಕೊಂಡು ಮೂಲಕ್ಕೆ ಅತಿನಿಷ್ಠೆಯನ್ನು ತೋರಿಸುತ್ತಿದ್ದರು. ಲೌಕಿಕ ಕಾವ್ಯ ಬರೆಯುವಾಗ ಕತೆಯು ಮೂಲಕ್ಕೆ ಋಣಿಯಾಗಿದ್ದರೂ, ಇನ್ನುಳಿದ ವಿಚಾರಗಳಲ್ಲಿ ತಮ್ಮ 'ಕಾವ್ಯ ಪ್ರತಿಭೆ' ಯನ್ನು ತೋರಿಸುತ್ತಿದ್ದರು. 'ರಾಮಾಯಣ' 'ಮಹಾಭಾರತ' 'ಹರಿವಂಶ' 'ವಿಷ್ಣು ಪುರಾಣ'ಗಳು ಅವರುಗಳಿಗೆ ಲೌಕಿಕ ಕಾರ್‍ಯಕ್ಕೆ ಪ್ರೇರಕ ನೀಡುತ್ತಿದ್ದವು. ಅನಂತರ ಬಂದ ಬಸವಣ್ಣ ಹಾಗೂ ಹರಿಹರನ ನಂತರದ ಕವಿಗಳು ಸಾಹಿತ್ಯದ ಪೂರ್ವ ಪಥವನ್ನು ಸಂಪೂರ್ಣವಾಗಿ ಬದಲಾಯಿಸಿದರು. ವಸ್ತುವಿನ ಆಯ್ಕೆ ಹಾಗೂ ಕಾವ್ಯಮಾಧ್ಯಮದಲ್ಲೂ ನೂತನ ಆವಿಷ್ಕಾರಕ್ಕೆ ಅಣಿಯಾದರು. ರಾಘವಾಂಕ ಹೇಳಿದಂತೆ 'ಜನ ಬದುಕಬೇಂದು ಕಾವ್ಯ ಮುಖದಿಂ ಪೇಳ್ವನಪೇಕ್ಷೆಯಿಂದ'' ಎಂಬುದು ಎಲ್ಲಾ ಕವಿಗಳ ಮಹತ್ವದ ಗುರಿಯಾಯಿತು. ವಚನ, ರಗಳೆ, ಷಟ್ಪದಿ ಮೊದಲಾದ ನೂತನ ಛಂದಸ್ಸುಗಳಿಗೆ ಕವಿಗಳು ಮನಸೋತರು. ಅಷ್ಟೇ ಅಲ್ಲ ಉನ್ನತ ಮೌಲ್ಯಗಳಿಗಾಗಿ ಬದುಕಿದ ತಮ್ಮ ಸಮಕಾಲೀನರಾಗಿದ್ದ ಅನೇಕರನ್ನು ಕಾವ್ಯದ ವಸ್ತುವಾಗಿಸಿದರು. ಅದರಲ್ಲೂ 'ಭಕ್ತಿರಸ' ತನ್ನ ಪ್ರಾಮುಖ್ಯತೆಯನ್ನು ಪ್ರತಿಷ್ಠಾಪಿಸಿಕೊಂಡಿತು. ಸಾಹಿತ್ಯ ಹಾಗೂ ಶ್ರೀಸಾಮಾನ್ಯರ ನಡುವೆ ಸುಮಧುರ ಸ್ನೇಹಸೇತುಬಂಧ ನಿರ್ಮಾಣವಾಯಿತು. ಅನುವಾದದ ವಿವಿಧ ಪ್ರಕಾರಗಳು ಈ ಕಾಲದ ಕವಿಗಳ ನೆನಪಿಗೆ ಬಂದವು. ಮೂಲದ ಭಾವಾನುವಾದ, ಸಂಗ್ರಹಾನುವಾದ, ಪ್ರೇರಣಾನುವಾದವನ್ನು ಈ ಕಾಲದ ಕವಿಗಳು ಅನುಸರಿಸಿದ್ದಾರೆ. ಕೇವಲ ಸಂಸ್ಕೃತ ಭಾಷೆಯಿಂದಲ್ಲದೆ ತಮಿಳು ಹಾಗೂ ತೆಲುಗು ಭಾಷೆಗಳಿಂದಲೂ ಈ ಕವಿಗಳು ನೆರವು ಪಡೆದಿರುವುದನ್ನು ಗಮನಿಸಬೇಕು.

ಕ್ರಿ. ಶ. 15ನೇ ಶತಮಾನದಿಂದ 19ನೇ ಶತಮಾನದವರೆಗೆ ಅಂದರೆ ಆಧುನಿಕ ಯುಗದವರೆಗಿನ ಕಾಲವನ್ನು ಕನ್ನಡ ಸಾಹಿತ್ಯದಲ್ಲಿ 'ಕುಮಾರವ್ಯಾಸ ಯುಗ' ಎಂದೇ ವರ್ಣಿಸಲಾಗಿದೆ. ಈ ಯುಗದ ಪ್ರಮುಖ ಕವಿಯಾದ 'ಕುಮಾರವ್ಯಾಸ' ಸಂಸ್ಕೃತದ ವ್ಯಾಸ ಮಹರ್ಷಿಯಿಂದ ಪ್ರೇರಿತನಾಗಿ 'ಮಹಾಭಾರತ'ದ ರಚನೆಗೆ ಕೈಹಾಕಿದನು. ಚಂಪೂ ಮಾರ್ಗದ ಜಟಿಲತೆಯಾಗಲಿ, ಹರಿಹರನ ಕಾಲದ ದ್ವಂದ್ವವಾಗಲಿ ಈ ಕಾಲದಲ್ಲಿ ಕಾಣಬರುವುದಿಲ್ಲ. ಇದೊಂದು ದೇಸೀ ನಿಷ್ಠವಾದ ಕಾಲ. ಷಟ್ಪದಿ ಸಾಂಗತ್ಯ, ತ್ರಿಪದಿ, ಕೀರ್ತನೆ ಇವುಗಳ ಪ್ರಸಾರ ಈ ಯುಗದಲ್ಲಿ ಆಯಿತು. ವಚನಕಾರರು ಹಾಗೂ ಹರಿಹರ ಮತ್ತು ರಾಘವಾಂಕ ಮಹಾಕವಿಗಳು ಕನ್ನಡ ಹದಗೊಳಿಸಿದ್ದರು. ಅದಕ್ಕೊಂದು ವಿಶಿಷ್ಟ ರೂಪಕೊಡಲು ಮಹಾಕವಿಯೊಬ್ಬರ ಅವಶ್ಯಕತೆ ಆಯಿತು. ಆ ಕೆಲಸವನ್ನು 'ಕುಮಾರವ್ಯಾಸ' ಅರ್ಥಾತ್ ಗದುಗಿನ ವೀರನಾರಣಪ್ಪ ಸಮರ್ಥ ರೀತಿಯಲ್ಲಿ ನೆರವೇರಿಸಿದ್ದಾನೆ.

ಈ ಯುಗದಲ್ಲಿ ಕಾಣಬರುವ 'ಸಮನ್ವಯತೆ' ಹೆಚ್ಚು ಅರ್ಥಪೂರ್ಣವಾದುದು. ಜೈನ ವೀರಶೈವ ಹಾಗೂ ವೈದಿಕ ಎಂಬ ಭೇದವಿಲ್ಲದೆ ಎಲ್ಲರೂ ಸಾಹಿತ್ಯಸೇವೆಗೆ ಮುಂದಾಗಿದ್ದಾರೆ. ಜನರ ಅಭಿರುಚಿಗೆ ತಕ್ಕಂತೆ ಕಾವ್ಯ ರಚಿಸಿದ್ದಾರೆ. ವಿಶೇಷವಾಗಿ ದೇಸೀ ಛಂದಸ್ಸಿಗೆ ಅಗ್ರಸ್ಥಾನ ದೊರಕಿದೆ. 'ಭಕ್ತಿ' ಶ್ರೇಷ್ಠತೆಯನ್ನು ಸ್ಪಷ್ಟಪಡಿಸುವುದೇ ಎಲ್ಲಾ ಸಾಹಿತ್ಯ ಕೃತಿಗಳ ಮುಖ್ಯ ಗುರಿಯಾಗಿದೆ.

ಉತ್ತರ ಭಾರತದಿಂದ ಬಂದ ಇಸ್ಲಾಂ ಪಂಥ ತನ್ನ ಪ್ರಭಾವವನ್ನು ನಿಚ್ಚಳವಾಗಿ ಸಾಹಿತ್ಯದ ಮೇಲೆ ಬೀರತೊಡಗಿತ್ತು. 'ಸೂಫಿ' ಪಂಥದ ಪರೋಕ್ಷ ಪ್ರಭಾವವನ್ನು ಭಕ್ತಿ ಸಾಹಿತ್ಯದ ಮೇಲೆ ವಿಶೇಷವಾಗಿ ಗುರುತಿಸಲಾಗಿದೆ. ಜೊತೆಗೆ ಪಾರ್ಸಿ, ಅರೆಬಿಕ್ ಹಾಗೂ ಉರ್ದು ಭಾಷೆಯ ನೂರಾರು ಶಬ್ದಗಳು ಕನ್ನಡ ಭಾಷೆಗೆ ಸೇರ್ಪಡೆಯಾಗಿದೆ. ಇದರಿಂದಾಗಿ ಕನ್ನಡ ಭಾಷೆಯು ಮತ್ತಷ್ಟು ಸಮೃದ್ಧವಾಗಿ ಮುಂದಿನ ದಿನಗಳಲ್ಲಿ ಅನುವಾದ ಸಾಹಿತ್ಯಕ್ಕೆ ಒಳ್ಳೆಯ ಭೂಮಿಕೆ ಸಿದ್ಧವಾಯಿತು.

ಸಂಸ್ಕೃತ, ತಮಿಳು, ತೆಲುಗು ಭಾಷೆಯ ಕೃತಿಗಳ ಪ್ರಭಾವವು ಕನ್ನಡ ಭಾಷೆಯ ಮೇಲಾಗಿರುವುದನ್ನು ಗುರುತಿಸಬಹುದಾಗಿದೆ. ಜೊತೆಗೆ 'ಮರಾಠಿ' ಭಾಷೆಯ ಪ್ರಭಾವವನ್ನು ಸಹ ಅಲ್ಲಲ್ಲಿ ಗುರುತಿಸಬಹುದು. ಇವುಗಳ ಜೊತೆಗೆ ಮಹಾನ್ ವ್ಯಕ್ತಿಗಳಾದ ರಾಮಾನುಜಾಚಾರ್ಯರು, ತಾತ್ಯಾಚಾರ್ಯರು ಹಾಗೂ ನಾಮದೇವ ಅವರ ಪ್ರಭಾವ ಕನ್ನಡ ಭಾಷೆಯ ಮೇಲಾಗಿದೆ. ವಚನಕಾರರು ಹಾಗೂ ಅನಂತರ ಹರಿಹರ ಕನ್ನಡ ಸಾಹಿತ್ಯ ಸರಸ್ವತಿಯನ್ನು ರಾಜಾಶ್ರಯದಿಂದ ಬಿಡುಗಡೆ ಮಾಡಿ ಶ್ರೀಸಾಮಾನ್ಯರ ಬಳಿಗೆ ಕರೆದೊಯ್ದವರು. ಕುಮಾರವ್ಯಾಸ ಹಾಗೂ ಅನಂತರದ ಕವಿಗಳು ಕನ್ನಡ ಭಾಷೆಯಲ್ಲಿ ಅಮೂಲ್ಯ ಕೃತಿಗಳನ್ನು ರಚಿಸುವುದರ ಮೂಲಕ ಎಲ್ಲರ ಬಾಯಿಯಲ್ಲೂ ಕನ್ನಡ ಭಾಷೆ ನಲಿದಾಡುವಂತೆ ಮಾಡಿದರು.

ಈ ಯುಗದ ಕವಿಗಳಲ್ಲಿ ಮೊದಲಿಗನು, ಅತ್ಯಂತ ಸರ್ವಶ್ರೇಷ್ಠನಾದವನು ಕುಮಾರವ್ಯಾಸ. ಅರ್ಥಾತ್ ಗದುಗಿನ ನಾರಾಣಪ್ಪ. ಕ್ರಿ . ಶ. 1430 ಈತನ ಕಾಲ. ಗದುಗಿನ ಕೋಳಿವಾಡ, ಇವನ ಜನ್ಮಸ್ಥಳ. ಗದುಗಿನ ವೀರನಾರಾಯಣನೇ ಈತನ ಆರಾಧ್ಯದೈವ. ಇವನ ಕೃತಿ 'ಕರ್ನಾಟಕ ಭಾರತ ಕಥಾಮಂಜರಿ'. ವ್ಯಾಸಮಹರ್ಷಿಯ ಹದಿನೆಂಟು ಪರ್ವಗಳ ಮಹಾಭಾರತದಲ್ಲಿ ಅವನ ಮಗನೆಂದು ಕರೆದುಕೊಂಡ ಗದುಗಿನ ನಾರಣಪ್ಪ ಹತ್ತುಪರ್ವಗಳನ್ನು ಮಾತ್ರ ಕನ್ನಡಿಸಿದ್ದಾನೆ. ಈ ಕಾವ್ಯ ಭಾಮಿನಿಷಟ್ಪದಿಯಲ್ಲಿದೆ. ಆದಿಪರ್ವದಿಂದ ಗದಾಪರ್ವದ ಅಂತ್ಯದವರೆಗೆ ಇಲ್ಲಿ ಕತೆ ಹರಡಿದೆ.

'ಮಹಾಭಾರತ'ದ ಪ್ರತಿಪರ್ವದ ಪ್ರಮುಖ ಭಾಗಗಳನ್ನು ಕುಮಾರವ್ಯಾಸ ಕನ್ನಡಿಸಿದ್ದಾನೆ. ಕನ್ನಡಿಸುವ ಪ್ರಕ್ರಿಯೆಯಲ್ಲಿ ಸಂಕೋಚ-ವಿಸ್ತಾರಗಳಾಗಿವೆ. ಮೂಲತ್ಯಾಗ ಇಲ್ಲದೆ ವ್ಯತ್ಯಾಸಗಳಾಗಿವೆ. ಆದ್ದರಿಂದ ಕನ್ನಡ ಭಾರತವು ವ್ಯಾಸಭಾರತದ ಸರಳಾನುವಾದವಲ್ಲ, ಸ್ವತಂತ್ರ ಕಳೆಯುಳ್ಳ ಪ್ರತಿನಿರ್ಮಾಣ.[46]

ಲಕ್ಷ ಶ್ಲೋಕಗಳ ದಿವ್ಯಗ್ರಂಥವನ್ನು ಆಮೂಲಾಗ್ರವಾಗಿ ಓದಿದ್ದಾನೆ ಕುಮಾರವ್ಯಾಸ. ಬರಿಯ ರಸಸ್ವಾದನೆ ಮಾಡಿರುವುದಷ್ಟೆ ಅಲ್ಲ; ಅನೇಕ ವೇಳೆ ಅದನ್ನು ವಿಧೇಯವಾಗಿ ಮಾಡಿಕೊಂಡಿದ್ದಾನೆ. ಹೆಜ್ಜೆಹೆಜ್ಜೆಗೂ ಮೂಲವನ್ನು ಅನುಸರಿಸುವುದಲ್ಲದೆ ಅನೇಕ ಕಡೆ ಮೂಲದ ಶ್ಲೋಕಗಳನ್ನು ಭಾಷಾಂತರ ಮಾಡುತ್ತಾನೆ. ಆದರೂ ಆತ ಬರಿಯ ಭಾಷಾಂತರಕಾರನೂ ಅಲ್ಲ, ಸಂಗ್ರಹಕಾರನೂ ಅಲ್ಲ, ಅವನು ವಿಶಿಷ್ಟ ಶಕ್ತಿಯ ಸ್ವತಂತ್ರ ಕವಿ.[47]

ತನ್ನ ರೂಪಕ ಮಹಾಶಕ್ತಿಯಿಂದಾಗಿ ವ್ಯಾಸರಿಗಿಂತ ತಾನೆ ವಿಶಿಷ್ಟವೆಂಬ ಭಾವನೆ ಬರುವಂತೆ ವಿಜೃಂಭಿಸಿದ್ದಾನೆ. ಒಟ್ಟಾರೆ ತನ್ನ ಕಾವ್ಯದಲ್ಲಿ ಅಖಂಡವಾದೊಂದು ದರ್ಶನವನ್ನು ವ್ಯಾಸರಿಗಿಂತ ವಿಶಿಷ್ಟವಾದುದನ್ನು ಗುರುತಿಸಿದ್ದಾನೆ. ನಿಜಕ್ಕೂ ಇವನು ಕುಮಾರವ್ಯಾಸನೇ, ಶುಕರೂಪನೆ. ವ್ಯಾಸ ಮಾನಸಪುತ್ರನೆ ಎಂಬ ಅನುಭವವನ್ನುಂಟು ಮಾಡಿದ್ದಾನೆ.[48]

ನಾರಣಪ್ಪ ಮಹಾಭಾರತದ ಮುಖ್ಯವಾದ, ಮುದ್ದಾದ ಹತ್ತು ಪರ್ವಗಳನ್ನು ಕನ್ನಡಿಸಿದ್ದಾನೆ. ಹಾಗೆ ಸಂಗ್ರಹ ಮಾಡುವಾಗ ಅನೇಕ ಪ್ರತ್ಯೇಕ ಪ್ರಸಂಗಗಳನ್ನು ಅಂದವಾಗಿ ರಚಿಸುವ ಜವಾಬ್ದಾರಿ ಅವನ ತಲೆಯ ಮೇಲಿತ್ತು. ಅದನ್ನು ಎಷ್ಟು ವಿಚಕ್ಷಣವಾಗಿ ನಿರ್ವಹಿಸಿದನೆಂದರೆ ಆ ವಿಚಾರದಲ್ಲಿ ಇನ್ನಾವ ಕನ್ನಡ ಕವಿಯೂ ಅವನಿಗೆ ಸರಿದೂಗಲಾರ.[49]

ಕುಮಾರವ್ಯಾಸ ಆದಿಪರ್ವದಲ್ಲಿ ಹೆಚ್ಚು ಕಡಿಮೆ ವ್ಯಾಸರನ್ನು ಅನುಸರಿಸಿದ್ದಾನೆ. ಸಭಾಪರ್ವದಲ್ಲಿ ಉಪಾಖ್ಯಾನ, ನಾರದನೀತಿ, ಕೃಷ್ಣ ಮಹಾತ್ಮೆ ಮೊದಲಾದ ಕಡೆ ಅವನ ಸಂಗ್ರಹಕಾರ್ಯ ಚಿತ್ತರವಾಗಿದೆ. ಮೂಲಕ್ಕೆ ಹೊಸರೂಪ ಕೊಟ್ಟ ಕೀರ್ತಿ ಕೂಡ ಕುಮಾರವ್ಯಾಸನಿಗೆ ಸೇರುತ್ತದೆ. ಉದಾ: ಸಭೆಯಲ್ಲಿ ತನ್ನ ಮಾನಭಂಗಪಡಿಸಿದವನ ಕರುಳದಂಡೆಯನ್ನು ಬಗೆದು, ಆಮೇಲೆ ತುರುಬು ಕಟ್ಟುವೆನೆಂದು ಸಾರಿದ ದ್ರೌಪದಿಗೆ, ಅದನ್ನು ನಡೆಸಿಕೊಡುವುದಾಗಿ ಭೀಮ ವ್ರತ ತೊಡುವುದು (ಸಭಾ 16-40). ವ್ಯಾಸಭಾರತದಲ್ಲಿ ಕಾಣದ ಈ ಭಾವ ಪಂಪನಲ್ಲಿ ಕಾಣಬರುತ್ತದೆ. ದ್ರೌಪದಿಯ ಶ್ರೀಮುಡಿಯಿಂದಾಗಿ ಇಡೀ ಮಹಾಭಾರತಕ್ಕೆ ವಿಶೇಷ ಮಹತ್ವ ಬಂದಿರುವುದನ್ನು ಕುವೆಂಪು ಸೊಗಸಾಗಿ ತಮ್ಮ ವಿಮರ್ಶಾ ಲೇಖನದಲ್ಲಿ ಚಿತ್ರಿಸಿದ್ದಾರೆ. ಮೂಲವನ್ನು ಪರಿಷ್ಕರಿಸುವ ಹೊಣೆ ಶ್ರೇಷ್ಠ ಭಾಷಾಂತರಕಾರರಿಗೆ ಇರುತ್ತದೆಂಬುದಾದರೆ, ಆ ಶಕ್ತಿ ಕುಮಾರ ವ್ಯಾಸನಿಗೆ ಇದ್ದೇ ಇದೆ.

ಮೂಲದಲ್ಲಿಲ್ಲದ ಸೊಗಸು ಕುಮಾರವ್ಯಾಸನಲ್ಲಿರುವುದಕ್ಕೆ ದೂರ್ವಾಸಾತಿಥ್ಯ ಒಂದು ನಿದರ್ಶನ. ಕನ್ನಡ ಭಾರತದಲ್ಲಿ ಇದೊಂದು ಅಪೂರ್ವ ಸಂಗ್ರಹ. ವ್ಯಾಸರ ಮಹಾಭಾರತದಲ್ಲಿ ದೂರ್ವಾಸ ಶುದ್ಧ ಹೊಟ್ಟೆಬಾಕ. ಊಟಕ್ಕೋಸ್ಕರ ಪರರನ್ನು ಯದ್ವಾ ತದ್ವ ಗೋಳಾಡಿಸಲು ಹಿಂದೆಗೆಯದ ಅರ್ಧ ಹುಚ್ಚ. ಕೌರವನ ಅರಮನೆಯಲ್ಲಿ ನಿಶೆಯಲ್ಲಿ ಎಚ್ಚೆತ್ತ ಕೂಡಲೇ ಭೋಜನ ಬಡಿವ ಎನ್ನುವನು, ಪಾಕಸಿದ್ಧವಾದರೆ ಹಸಿವಿಲ್ಲ ಎನ್ನುವವನು. ಧರ್ಮರಾಜನಿಗೆ ಊಟಕ್ಕೆ ಸಿದ್ಧಮಾಡುವಂತೆ ಹೇಳಿ ನದಿತೀರಕ್ಕೆ ಹೋಗಿ, ಹೇಳಕೇಳದೆ ಓಡಿ ಹೋಗುವವನು, ವ್ಯಾಸರ ದೂರ್ವಾಸಮುನಿ. ಕುಮಾರವ್ಯಾಸನಾದರೋ ಈ ಪ್ರಸಂಗವನ್ನು ಕೃಷ್ಣನ ಮಹಿಮೆಯನ್ನು ಸಾರಲು ಸಮರ್ಪಕವಾಗಿ ಬಳಸಿಕೊಂಡಿದ್ದಾನೆ. ಅಷ್ಟೆ ಅಲ್ಲ. ಇಲ್ಲಿ ದ್ರೌಪದಿ ಕೃಷ್ಣನ ನಡುವೆ ನಡೆಯುವ ಸದಸ ಸಂಭಾಷಣೆ ಅತ್ಯಂತ ಸುಮಧುರವಾದ ವೀಣಾವಾದನದಂತೆ ಆಕರ್ಷಣೀಯವಾಗಿದೆ. ಡಾ॥ ಎಸ್. ವಿ. ರಂಗಣ್ಣ ಅವರು ಹೇಳುವಂತೆ ಈ ಪ್ರಸಂಗದಲ್ಲಿ ನಾರಣಪ್ಪನ ಸತ್ಯಭಾವನೆಯ ವಿನ್ಯಾಸವೇ ವಿನ್ಯಾಸ. ಸುರಸ ಕಥನದ ಜಾಣ್ಮೆಯೇ ಜಾಣ್ಮೆ. ಕುಮಾರವ್ಯಾಸ ಕೇವಲ ವ್ಯಾಸಗ್ರಂಥಕ್ಕೆ ಮಾತ್ರ ಋಣಿಯಾಗಿಲ್ಲ. ಪಂಪ, ಭಾಸ, ವಚನಕಾರರು, ವಿಶೇಷವಾಗಿ ಬಸವಣ್ಣ ಮೊದಲಾದವರಿಗೆ ಋಣಿಯಾಗಿದ್ದಾನೆ.

ಮೊದಲನೆಯಾದಾಗಿ ಕುಮಾರವ್ಯಾಸ ಪಂಪನಿಗೆ ಹೇಗೆ ಋಣಿಯಗಿದ್ದಾನೆಂಬುದನ್ನು ನೋಡೋಣ. ಆದಿಕವಿ ಪಂಪ ಮೊದಲ ಬಾರಿಗೆ ವ್ಯಾಸರ ಸಮಸ್ತ ಭಾರತವನ್ನು ಕನ್ನಡಕ್ಕೆ ಕೊಟ್ಟ ಮಹಾನುಭಾವ. ಕುಮಾರವ್ಯಾಸ ನಿಷ್ಠೆಯಿಂದ ಪಂಪಭಾರತವನ್ನು ಓದಿದ್ದಾನೆ. ಅದರ ಪ್ರಭಾವಕ್ಕೆ ತೀರಾ ಒಳಗಾಗದಂತೆ ಅತಿ ಎಚ್ಚರಿಕೆ ವಹಿಸಿದ್ದರೂ ಅನೇಕ ಪ್ರಸಂಗಗಳಲ್ಲಿ ಪಂಪನ ನೆರವು ಪಡೆದಿದ್ದಾನೆ.

ಸಂಧಿಯ ಮಾತುಕತೆಯಲ್ಲಿ ವಿದುರನನ್ನು ತೊತ್ತಿನ ಮಗನೆಂದು ದುರ್ಯೋಧನನು ಮಾಡಿದ ಹೀಯಾಳಿಕೆಗೆ ವಿದುರ ತನ್ನ ಬಿಲ್ಲನ್ನು ಮುರಿದುದು, ಕುಂತಿಯು ಕರ್ಣನನ್ನು ಕಾಣಲು ಬಂದಾಗ ಗಂಗಾದೇವಿ ಬಂದು ತನ್ನ ಮಗ ಕರ್ಣನನ್ನು ಅವಳಿಗೆ ಒಪ್ಪಿಸಿದುದು. ಪಂಪ-ಕುಮಾರವ್ಯಾಸರ ನುಡಿಗಳು ಈ ಸಂದರ್ಭದಲ್ಲಿ ಸರಿ ಹೊಂದುತ್ತದೆ. ಪ್ರಾಯಶಃ ಕುಮಾರವ್ಯಾಸ ಈ ಪ್ರಸಂಗವನ್ನು 'ಪಂಪ'ನಿಂದಲೇ ತೆಗೆದುಕೊಂಡಿರಬೇಕು.

ಸಂಧಿಯ ಕಾಲದಲ್ಲಿ ತುಂಬಿದ ಸಭೆಯಲ್ಲಿ ಅಹಂಕಾರದಿಂದ ದುರ್ಯೋಧನನು ಸಿಂಹಾಸನದ ಮೇಲೆ ಹಾಗೆಯೇ ಕುಳಿತಿದ್ದಾಗ ತನ್ನ ಕಾಲ ಮೇಲೆ ಆತ ಬೀಳುವಂತೆ ಭೂಮಿ ಒತ್ತುವ ಪ್ರಸಂಗವನ್ನು ಕುಮಾರವ್ಯಾಸ ಭಾಸಕವಿಯ 'ಊರುಭಂಗ' ನಾಟಕದಿಂದ ತೆಗೆದುಕೊಂಡಿರಬಹುದು.

ಬಸವಣ್ಣ-ಕುಮಾರವ್ಯಾಸರ ಅನುಭವದ ತೀವ್ರತೆ, ರೂಪಕ, ಮನೋಧರ್ಮ, ಭಾಷಾಭಿವ್ಯಕ್ತಿ ವಿಧಾನ, ಭಾಷೆಯ ಶಕ್ತಿ ಮತ್ತಿತರ ಪ್ರಯೋಗಗಳಲ್ಲಿ ಸಾಮ್ಯವನ್ನು ಸಹೋದರತ್ವವನ್ನು ಕಾಣಬಹುದು. ರಾಮಾಯಣದ ವಿಷಯದಲ್ಲಿ 'ಫಣಿರಾಯ ತಿಣುಕಿದ' ಎನ್ನುವ ಕುಮಾರವ್ಯಾಸನ ಪಂಕ್ತಿಯನ್ನಿಲ್ಲಿ ನೆನೆದುಕೊಳ್ಳಬಹುದು.''ತಿಣುಕಿದನು ಫಣಿರಾಯ ರಾಮಾಯಣದ ಕಲಿಗಳ ಭಾರದಲಿ, ತಿಂತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ'' ಬಸವಣ್ಣನವರು ತಮ್ಮ ಕಾಲದ ಜನರ ಬದುಕಿನಲ್ಲಿ ತಿರಿಯುತ್ತಿದ್ದ ದೈವಗಳನ್ನು ಕಂಡು ಹೀಗೆಂದುಕೊಂಡರು: ''ಮಡಕೆ ದೈವ, ಮೊಳೆದೈವ, ಬೀದಿಯ ಕಲ್ಲುದೈವ......ದೈವವೈರವೆಂದು ಕಾಲಿಡಲಿಂತಿಲ್ಲಾ......! ಈ ಶಕ್ತಿವತ್ತಾದ ಸಮಾನ ರೂಪಕಾಭಿವ್ಯಕ್ತಿಯ ಹಿಂದಿರುವ ರೂಪಕ ಮನೋಧರ್ಮ ಹೆಚ್ಚು ಸಾದೃಶ್ಯವುಳ್ಳದ್ದಾಗಿದೆ.[50]

ಕುಮಾರವ್ಯಾಸನನ್ನು ಕುರಿತು ಅನೇಕ ದಂತ ಕತೆಗಳಿವೆ. ಈತನೊಬ್ಬ ಸಾಮಾನ್ಯ ವ್ಯಕ್ತಿ, ದೈವಕೃಪೆಯಿಂದ ಇಂತಹ ಕಾವ್ಯ ರಚಿಸಲು ಸಾಧ್ಯವಾಯಿತೆಂಬುದೇ ಈ ದಂತಕತೆಗಳ ಸಾರಾಂಶ. ಕಾಳಿದಾಸನಿಗೆ ಸಂಬಂಧಪಟ್ಟ ದಂತಕತೆಯಂತೆ ಈ ಪ್ರಸಂಗಗಳು ಕಾಣಬರುತ್ತವೆ.ಕುಮಾರವ್ಯಾಸನ ಕಾವ್ಯಕ್ಕೆ ಅಸಾಧಾರಣ ಜನಮನ್ನಣೆ ಕೊಡಿಸಲು ಕೆಲವರು ಹೂಡಿದ ತಂತ್ರವಿದು. ನಿಶ್ಚಯವಾಗಿ ನಾರಣಪ್ಪ ಪ್ರಬಲ ಪಂಡಿತ. ಸಂಸ್ಕೃತ ಮಹಾಭಾರತವನ್ನು ಆಮೂಲಾಗ್ರಹವಾಗಿ ಪಠಿಸಿದ್ದ. ಶಾಸ್ತ್ರ, ಸಂಗೀತ, ಜ್ಯೋತಿಷ್ಯ, ಸ್ಮೃತಿ, ಪುರಾಣ, ಕೊಂಚ ಮರಾಠಿ ಸಾಹಿತ್ಯ, ಬಹುಶಃ ಭಾಸ, ವೇಣೀ ಸಂಹಾರಾದಿ ಸಂಸ್ಕೃತ ಸಾಹಿತ್ಯ, ಪಂಪಭಾರತ, ಲಕ್ಷಣಗ್ರಂಥ, ನಿಘಂಟುಗಳು ಅವನ ನಾಲಗೆಯ ತುದಿಯಲ್ಲಿದ್ದವು. ಸಹಜ ಪ್ರತಿಭೆಯಿಂದಾಗಿ ಬಹುದೊಡ್ಡವ. ಪ್ರಪಂಚಾನುಭವದಲ್ಲಿ ನಿಷ್ಣಾತ.[51]

ಎಷ್ಟೋ ಸುಂದರ ಹೃದಯಸ್ಪರ್ಶಿ ಪ್ರಸಂಗಗಳನ್ನು ಪಂಪನಿಂದ ನಾರಣಪ್ಪ ಉಪೇಕ್ಷಿಸಿಯೋ ಗ್ರಹಿಸಿಯೋ ವಂಚಿತನಾಗಿದ್ದಾನೆ. ಒಂದೆರಡು ನಿದರ್ಶನಗಳನ್ನು ಹೇಳುವುದಾದರೆ ಬಕಾಸುರ ವಧೆಯಲ್ಲಿ ಬರುವ ಮಗುವಿನ ಚಿತ್ರಣ. ಭೀಷ್ಮರನ್ನು ಕೊಲ್ಲುವ ಉಪಾಯವನ್ನು ಅವರಿಂದಲೇ ತಿಳಿದು ಬಂದ ಮೇಲೆ ಅರ್ಜುನ ಅಳುವ ಚಿತ್ರಣವನ್ನು ನೆನೆದುಕೊಳ್ಳಬಹುದು. ಎಂತಹ ಹೃದಯ ಸಂಗಮ ಚಿತ್ರಗಳು.[52]

ಒಟ್ಟಾರೆ ಕುಮಾರವ್ಯಾಸ ಶ್ರೇಷ್ಠ ಅನುವಾದಕನಾಗಿ, ಸಂಗ್ರಹಕಾರನಾಗಿ ಆದರ್ಶವೊಂದನ್ನು ತೋರಿಸಿದ್ದಾನೆ. ಇದರ ಜೊತೆ ಸಹಜ ಕವಿ ಪ್ರತಿಭೆಯ ಮೂಲಕ ನೂರೊಂದು ನಿತ್ಯ ನೂತನ ಸನ್ನಿವೇಶಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ.

ಅವನ ಅಭಿಮನ್ಯು, ಉತ್ತರೆ, ಭೀಮ, ಕರ್ಣ, ಅರ್ಜುನ, ದ್ರೌಪದಿ ಅದಕ್ಕಿಂತಾ ಮಿಗಿಲಾಗಿ ಶ್ರೀಕೃಷ್ಣ ಕನ್ನಡನಾಡಿನ ಜನಮನದಲ್ಲಿಶಾಶ್ವತ ಸ್ಥಾನಗಳಿಸಿದ್ದಾರೆ. ವ್ಯಾಸಭಾರತ ಮೊದಲು ಕನ್ನಡದಲ್ಲೇ ರಚನೆಯಾಯಿತೋ ಎಂಬಷ್ಟು ಸ್ವತಂತ್ರ ಸೃಜನಶೀಲತೆಯನ್ನು ಕುಮಾರವ್ಯಾಸ ತನ್ನ 'ಕರ್ನಾಟಕ ಭಾರತ ಕಥಾಮಂಜರಿ' ಕಾವ್ಯದಲ್ಲಿ ಸ್ಪಷ್ಟಪಡಿಸಿದ್ದಾನೆ.

ಕುಮಾರವ್ಯಾಸನಿಂದ ಹೆಚ್ಚು ಪ್ರಭಾವಿತರಾದವರಲ್ಲಿ ಕುಮಾರ ವಾಲ್ಮೀಕಿ ಒಬ್ಬನು. ಇವನ ಕಾಲ ಕ್ರಿ. ಶ. 1500. ಕುಮಾರವ್ಯಾಸನಂತೆ ಕುಮಾರ ವಾಲ್ಮೀಕಿ ಎಂದು ಕರೆದುಕೊಂಡಿರುವ ಈ ಕವಿಯ ಹೆಸರು ನರಹರಿ. ಇವನ ಜನ್ಮಸ್ಥಳ ತೊರವೆ. ಕುಮಾರವ್ಯಾಸನಿಗೆ ಗದುಗಿನ ನಾರಾಯಣ ಆರಾಧ್ಯದೈವ. ಕುಮಾರವಾಲ್ಮೀಕಿಗೆ ತೊರವೆ ನಾರಸಿಂಹ ಆರಾಧ್ಯ. ಇಬ್ಬರೂ ಭಾಮಿನಿ ಷಟ್ಪದಿಯಲ್ಲಿ ಕಾವ್ಯ ರಚಿಸಿದ್ದಾರೆ. ತೊರವೆ ರಾಮಾಯಣ 5000ಕ್ಕೂ ಹೆಚ್ಚು ಪದ್ಯಗಳನ್ನು ಒಳಗೊಂಡಿದೆ. ಹೆಜ್ಜೆಹೆಜ್ಜೆಗೂ ಈತ ಕುಮಾರವ್ಯಾಸನನ್ನು ಅನುಸರಿಸಿದ್ದಾನೆ. ಆದರೆ ಕುಮಾರವ್ಯಾಸನ ದರ್ಶನ ಧ್ವನಿಗಳು ಇವನಲ್ಲಿ ಕಾಣಬರುವುದಿಲ್ಲ. ಈತ ಕುಮಾರವ್ಯಾಸನಲ್ಲದೆ ಕಾಳಿದಾಸನಿಂದಲೂ ಪ್ರಭಾವಿತನಾಗಿದ್ದಾನೆ. ರಾಮಾಯಣದ ಕಥೆಯನ್ನು ಶಿವನು ಪಾರ್ವತಿಗೆ ಹೇಳಿದಂತೆ ಇಲ್ಲಿ ಸಂಭಾಷಿಸಲಾಗಿದೆ. ವಾಲ್ಮೀಕಿಯು ಅದ್ವಿತೀಯನಾದ ಮಾನವ ಶ್ರೇಷ್ಠನನ್ನು ಕಂಡಿದ್ದಲ್ಲಿ, ಕುಮಾರ ವಾಲ್ಮೀಕಿ ರಾಮನಲ್ಲಿ ದೇವತ್ವದ ಆವಾಹನೆ ಮಾಡಿದ್ದಾನೆ. ಅದಕ್ಕೆ ತಕ್ಕಂತೆ ಸೀತೆಯೂ 'ಸಾಕ್ಷಾತ್‌ಲಕ್ಷ್ಮಿ' 'ವಿಶ್ವಮಾತೆ' 'ಲೋಕದ ಮಹಾಮಾಯಾ ವಿನೋದೆ' ಹೀಗೆ ನಾಯಕ- ನಾಯಕಿಯರಿಬ್ಬರೂ ಲೌಕಿಕ ಪ್ರಭಾವಳಿಯಲ್ಲೇ ಕಾಣಿಸಿಕೊಳ್ಳುತ್ತಾರೆ. ಮೂಲಕೃತಿಯ ಪ್ರಮುಖ ಉದ್ದೇಶವನ್ನೇ ಇಲ್ಲಿ ಅನುವಾದವಾದರೂ ಗ್ರಹಿಸಿಕೊಳ್ಳದೇ ಹೋಗಿದ್ದಾನೆ.

ತಿಮ್ಮಣಕವಿ ಕ್ರಿ. ಶ. 1510ರಲ್ಲಿ ಕೃಷ್ಣದೇವರಾಯನ ಆಜ್ಞೆಯಂತೆ ಇನ್ನುಳಿದ ಎಂಟು ಪರ್ವಗಳನ್ನು ಕನ್ನಡಿಸಿದ್ದಾನೆ. ವ್ಯಾಸ ಮಹರ್ಷಿಯ ಕೃಪೆಗಿಂತ ಈತ ತೆಲುಗಿನ ಕವಿಗಳ ಕಾವ್ಯಕ್ಕೆ ಹೆಚ್ಚು ಋಣಿಯಾಗಿದ್ದಾನೆ. ತಿಕ್ಕಣ್ಣ ಹಾಗೂ ನಾನ್ನಯ್ಯ ಕವಿಗಳು ತೆಲುಗಿನಲ್ಲಿ ಬರೆದಿರುವ ಭಾರತದಿಂದ ಅನಾಮತ್ತಾಗಿ ಪದ್ಯಗಳನ್ನು ಎತ್ತಿಕೊಂಡು ಕನ್ನಡಿಸಿದ್ದಾನೆ.

ಶುಕಮುನಿ ರಚಿತ ಸಂಸ್ಕೃತ ಭಾಗವನ್ನು ಕನ್ನಡಕ್ಕೆ ತಂದು ಕೊಟ್ಟಿರುವವ 'ಸದಾನಂದಯೋಗಿ' ಎನ್ನಲಾಗಿದೆ. ನಿತ್ಯಾತ್ಮನಾಥ, ವಿದ್ಯಾನಂದ, ಸದಾನಂದಯೋಗಿ, ನಿರ್ಮಾಣನಾಥ, ಚಾರು ವಿಠ್ಠಲನಾಥ ಈ ಐವರು ಕನ್ನಡ ಭಾಗವತವನ್ನು ಬರೆದಿದ್ದಾರೆಂದು ಶ್ರೀ ಬೆಟಗೇರಿ ಕೃಷ್ಣಶರ್ಮರು ಹೇಳುತ್ತಾರೆ. ಇವರು ಉತ್ತರ ಭಾರತದಲ್ಲಿದ್ದ ನವನಾಥ ಪಂಥಕ್ಕೆ ಸೇರಿದವರು. ಚಾರುವಿಠಲನಾಥನ ಕಾಲ ಕ್ರಿ. ಶ. 1530. ಚಾರುವಿಠಲನಾಥನ 'ಭಾಗವತ ಹರಿಭಕ್ತಿಕೋಶ'ದಲ್ಲಿ ಕುಮಾರವ್ಯಾಸನ ಪ್ರಭಾವ ದಟ್ಟವಾಗಿ ಕಾಣಬರುತ್ತದೆ. ಆದರೆ ಕುಮಾರವ್ಯಾಸನ ಪ್ರತಿಭೆಯ ಕಿಂಚಿತ್ತಂಶವಾದರೂ ಅವನ ಈ ಕೃತಿಯಲ್ಲಿ ಕಾಣಬರದಿರುವುದರಿಂದ ಅನುವಾದ ಪೇಲವನಾಗಿ ಗೋಚರಿಸುತ್ತದೆ. ಪಂಪನಿಗೆ ರನ್ನ, ಹರಿಹರನಿಗೆ ರಾಘವಾಂಕನಿದ್ದಂತೆ, ಕುಮಾರವ್ಯಾಸನಿಗೆ ಲಕ್ಷ್ಮೀಶ. ಕುಮಾರವ್ಯಾಸ ಉಳಿಸಿದ್ದ ಎಂಟು ಪರ್ವಗಳ 'ಜೈಮಿನಿ ಭಾರತ' ಕತೆಯನ್ನು ಲಕ್ಷ್ಮೀಶ ಕನ್ನಡಿಸಿದ್ದಾನೆ. ಈತನ ಕಾಲ ಕ್ರಿ. ಶ. 1530. ಲಕ್ಷ್ಮೀಶ ವಾರ್ಧಕ ಷಟ್ಪದಿಯಲ್ಲಿ ಅದ್ವಿತೀಯವಾದ ಸಿದ್ಧಿಯನ್ನು ಸಾಧಿಸಿದ್ದಾನೆ. ಧರ್ಮರಾಯ ಅಶ್ವಮೇಧಯಾಗ ಮಾಡಿದ ಕತೆಯನ್ನು ಆಯ್ಕೆ ಮಾಡಿಕೊಂಡ ಲಕ್ಷ್ಮೀಶ

ಸಹಜವಾಗಿಯೇ 'ವೀರರಸ'ಕ್ಕೆ ಹೆಚ್ಚಿನ ಪ್ರಾಧಾನ್ಯ ನೀಡಿದ್ದಾನೆ. ಶ್ರೀಕೃಷ್ಣನನ್ನು ಆರಾಧ್ಯ ದೈವವಾಗಿ ಸ್ವೀಕರಿಸಿದ ಕಾರಣ ಭಕ್ತಿರಸಕ್ಕೂ ಕೊರತೆಯಿಲ್ಲ.

ಕವಿಲಕ್ಷ್ಮೀಶನು ತನ್ನ ಕಾವ್ಯವನ್ನು ಸಂಸ್ಕೃತದಿಂದ ಎತ್ತಿಕೊಂಡಿರುವನಾದರೂ ಇದೊಂದು ಸ್ವತಂತ್ರ ಕೃತಿ ರತ್ನವೆಂಬಂತೆ ತನ್ನ ಕಾವ್ಯ ಸೃಷ್ಟಿಸಿದ್ದಾನೆ. ಪುರಾಣರೂಪವಾಗಿರುವ ಮೂಲಗ್ರಂಥವನ್ನು ಅರ್ಧದಷ್ಟಕ್ಕೆ ಸಂಗ್ರಹಿಸಿರುವುದು, ಮೂಲಕಥೆಯನ್ನು ತನ್ನಭಿರುಚಿ ಅವಶ್ಯಕತೆಗಳಿಗೆ ತಕ್ಕಂತೆ ಹಿಗ್ಗಿಸಿ ಕುಗ್ಗಿಸಿರುವುದು ಆತನ ಹಿತಮಿತಕ್ಕೆ ಸಾಕ್ಷಿ. ಅಷ್ಟೆ ಅಲ್ಲ. ಮೂಲ ಪುರಾಣವು ಕವಿಯ ಕೈಯಲ್ಲಿ ಕಾವ್ಯವಾಗಿ ಪರವರ್ತಿತವಾಗಿರುವುದು.[53]

ಸಂಸ್ಕೃತದಲ್ಲಿ ಅರವತ್ತೆಂಟು ಅಧ್ಯಾಯಗಳಲ್ಲಿ ವಿಸ್ತಾರವಾಗಿ ವರ್ಣಿಸಿರುವ ಜೈಮಿನಿ ಭಾರತದ ಕಥೆಯನ್ನು ಲಕ್ಷ್ಮೀಶನು ಕನ್ನಡದಲ್ಲಿಅದರ ಅರ್ಧದಷ್ಟು ಸಂಗ್ರಹಿಸಿದ್ದಾನೆ. ಅವನು ಶ್ರೇಷ್ಠವರ್ಗದ ಸಂಗ್ರಹಕಾರ. ಕಥಾಸರಣಿಯಲ್ಲಾಗಲಿ, ಪಾತ್ರ ಸೃಷ್ಟಿಯಲ್ಲಾಗಲಿ ಆತನು ಹೆಚ್ಚು ವ್ಯತ್ಯಾಸಗಳನ್ನು ಮಾಡಿಕೊಂಡಿಲ್ಲ. ಹೊಸದಾಗಿ ಯಾವ ಸನ್ನಿವೇಶವನ್ನಾಗಲಿ, ಪಾತ್ರಗಳನ್ನಾಗಲಿ ಸೃಷ್ಟಿಸಿಕೊಳ್ಳದೆ ಮೂಲವನ್ನು ಬಹುಮಟ್ಟಿಗೆ ಅನುಸರಿಸಿದ್ದಾನೆ. ರಸ ನಿರೂಪಣೆಯಲ್ಲಿಯೂ ವಿಶೇಷತಃ ಮೂಲಕ್ಕೆ ಋಣಿಯಾಗಿದ್ದಾನೆ. ಕಥಾಶರೀರದ ಬೇರೆ ಬೇರೆ ಭಾಗದ ಪರಿಣಾಮವು ಮೂಲಗ್ರಂಥದಲ್ಲಿರುವಂತೆಯೇ ಇದೆ. ಲಕ್ಷ್ಮೀಶನಿಗೆ ಈಗ ದೊರೆತಿರುವ ಬಹುಭಾಗದ ಗೌರವಕ್ಕೆ ಮೂಲಗ್ರಂಥವೇ ಕಾರಣ. ಕನ್ನಡ ಜೈಮಿನಿ ಭಾರತದಲ್ಲಿ ತೋರಿಸಿರುವ ಕಥಾ ಸಂವಿಧಾನದ ಕೌಶಲ್ಯ, ಸಂಭಾಷಣೆಗಳ ಸ್ವಾರಸ್ಯ, ಹಾಸ್ಯರಸ ಪ್ರತಿಪಾದನೆ ಮೂಲಗ್ರಂಥದಲ್ಲಿ ಸ್ಪಷ್ಟವಾಗಿದೆ. ಕನ್ನಡ ಗ್ರಂಥದ ಬಹುಭಾಗವು ಸಂಸ್ಕೃತ ಗ್ರಂಥದ ಅನುವಾದ ಮಾತ್ರವಾಗಿದೆ.[54]

ಕ್ರಿ. ಶ. 1530ರಲ್ಲಿ ಗೋವಿಂದಂಬುವವನು 'ನಂದಿಮಹಾತ್ಮಾ' ಮತ್ತು 'ಚಿತ್ರಭಾರತ' ಎಂಬ ಕೃತಿ ರಚಿಸಿದ್ದಾನೆ. ಚಿತ್ರಭಾರತದಲ್ಲಿ ಭಾರತ ಕಥಾಂಶವೇ ಇದೆ. ಸುಮಾರು ಅರ್ಧದವರೆಗೆ ರಾಜಸೂಯಯಾಗ, ದ್ಯೂತ, ವನವಾಸವಿದ್ದು ಉಳಿದರ್ಧದಲ್ಲಿ ವಸ್ತ್ರಾಪಹರಣದ ವಿಸ್ತಾರವಿದೆ. ಮಹಾರಾಷ್ಟ್ರದ ಮರಾಠಿ ಭಾಷೆಯಲ್ಲಿ ಈ ಕಥೆ ಪ್ರಚುರವಾಗಿದೆಯೆಂದು ಕನ್ನಡದಲ್ಲಿ ತಾನು ಬರೆದಿರುವುದಾಗಿ ಗೋವಿಂದ ಕವಿ ಹೇಳಿಕೊಂಡಿದ್ದಾನೆ. ಕುಮಾರವ್ಯಾಸ ಹಾಗೂ ಲಕ್ಷ್ಮೀಶರ ಪ್ರಭಾವ ಹೆಚ್ಚು ಸ್ಫುಟವಾಗಿ ಗೋಚರಿಸುತ್ತದೆ.

ಕ್ರಿ ಶ. 1850ರಲ್ಲಿದ್ದ ನಾಗರಸ ಭಗವದ್ಗೀತೆಯನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾನೆ. ಇವನು ಭಾಗವತ ಸಂಪ್ರದಾಯದ ಸ್ಮಾರ್ತ, ಅಂದರೆ ಶಂಕರ ಅದ್ವೈತ ಮತದವನೆಂದು ಹೇಳಲಾಗಿದೆ.

ಭಗವದ್ಗೀತೆಯ ಕನ್ನಡ ಅನುವಾದವನ್ನು ಭಾಮಿನಿಷಟ್ಪದಿಯಲ್ಲಿ ಮಾಡಿದ್ದಾನೆ. ಕುಮಾರವ್ಯಾಸನ ಪ್ರಭಾವ ನಿಚ್ಚಳವಾಗಿ ತೋರಿದೆ. ನಾಗರಸನ ಅನುವಾದ ಕಾರ್ಯವು ಸಮರ್ಪಕವಾಗಿದೆ. ಹೃದ್ಯವಾಗಿದೆ. ತನ್ನ ಮತದೃಷ್ಟಿಯಿಂದ 'ಗೀತೆ'ಯ ಶ್ಲೋಕಗಳನ್ನು ಚೆನ್ನಾಗಿ ತಿಳಿದುಕೊಂಡು ಅದಕ್ಕೆ ತಿಳಿಗನ್ನಡದ ಸ್ವರೂಪ ತೊಡಿಸುವುದರಲ್ಲಿ ಅವನು ಪಡೆದ ಯಶಸ್ಸು ಹೆಚ್ಚಿನದು. ಸಂಸ್ಕೃತ ಪದಗಳನ್ನು ಹಾಗೇ ಇಟ್ಟು ಇಲ್ಲವೆ ಇನ್ನೂ ಕಠಿಣವಾದ ಪದಗಳನ್ನು ಸೇರಿಸಿ ಅವನು ಭಾಷಾಂತರ

ಮಾಡಿದ್ದರೆ 'ಭಗವದ್ಗೀತೆ'ಯೇ ಸರಳವೆನಿಸಿಕೊಳ್ಳಬಹುದಾಗಿತ್ತು. ಇವನ ಸರಳ ಸ್ಪಷ್ಟ, ಅಚ್ಚುಗನ್ನಡದ ಅನುವಾದಕ್ಕೆ 'ಅವನೊಬ್ಬನು ತನುವಿನೊಳಗಿಹ ಜೀವನವನು,' 'ಕೊಲುವಾತನೆಂಬವನಾನೊಬ್ಬನು ಕೊಡಿಸಿ ಕೊಂಬವತಾನೆಯುಂಬುವನು'' ಮುಂತಾದ ಪದ್ಯಗಳನ್ನು ಉದಾಹರಣೆ ಕೊಡಬಹುದು. ಕೆಲವು ಸಲ ಮೂಲದ ಅರ್ಥವು ಅಸ್ಪಷ್ಟವಾಗಿದೆ. ಶೈಲಿ ಕ್ಲಿಷ್ಟವಾಗಿದೆ. ಆದರೆ ಹೆಚ್ಚು ಕಡೆಗಳಲ್ಲಿ ನಾಗರಸನು ಕನ್ನಡಿಗನಾಗಿ 'ಕನ್ನಡ ಭಗವದ್ಗೀತೆ'ಯನ್ನು ಅಂದವಾಗಿ ರಚಿಸಿದ್ದಾನೆ. ತಾತ್ವಿಕ ಗ್ರಂಥಗಳ ಸರಳಾನುವಾದಕ್ಕೆ ಮಾದರಿಯಾಗಿರುವುದು ಇವನ ಗ್ರಂಥ.[55]

* * *

ಕ್ರಿ. ಶ. 12ನೇ ಶತಮಾನದಲ್ಲಿ ಜರುಗಿದ ಧಾರ್ಮಿಕ ಕ್ರಾಂತಿ ಕರ್ನಾಟಕದ ಜನಜೀವನದಲ್ಲಿ ಅತ್ಯದ್ಭುತ ಬದಲಾವಣೆ ತಂದಿತು. ಏಕದೈವೋಪಾಸನೆ, ಜಾತಿ-ಮತಗಳ ನಿವಾರಣೆ, ಭಕ್ತಿಯೊಂದೇ ಭಗವಂತನನ್ನು ಮುಟ್ಟಲು ಸಾಧ್ಯವೆಂಬ ದೃಢನಂಬಿಕೆ, ಸರಳಜೀವನ ಕಾಯಕತತ್ತ್ವ ಇವೇ ಮೊದಲಾದ ತತ್ವಗಳಿಂದಾಗಿ 'ವೀರಶೈವ' ಧರ್ಮ ಹೆಚ್ಚು ಹೆಚ್ಚು ಜನಪ್ರಿಯತೆ ಗಳಿಸಲಾರಂಭಿಸಿತು. ಇದೇ ರೀತಿ ಮುಂದುವರಿದರೆ ವೈದಿಕ ಮತ ತನ್ನ ನೆಲೆ ಕಳೆದುಕೊಳ್ಳುವಲ್ಲಿ ಸಂಶಯವಿಲ್ಲ ಎಂದು ಭಾವಿಸಿದ, ವೈದಿಕ ಮತಸ್ಥರು ತಮ್ಮ ಮನೋಭಾವದಲ್ಲಿ ತೀವ್ರತರವಾದ ಬದಲಾವಣೆ ಮಾಡಿಕೊಂಡು ಶ್ರೀಸಾಮಾನ್ಯರ ಹೃದಯಕ್ಕೆ ತಂಪನ್ನೆರದರು.

ವಚನ ಸಾಹಿತ್ಯದಿಂದ ಸ್ಫೂರ್ತಿ ಪಡೆದಿರುವ ಸಾಹಿತ್ಯ ದಾಸಸಾಹಿತ್ಯ. ಬಸವಣ್ಣನಂತೆ ಮಧ್ವಾಚಾರ್ಯರೂ ಕನ್ನಡಿಗರೇ ಇಬ್ಬರ ಕಾರ್ಯರಂಗವೂ ಬಹುಮಟ್ಟಿಗೆ ಕರ್ನಾಟಕವೇ. ಬಸವಣ್ಣನವರದು ಹರಪಾರಮ್ಯಬೋಧನೆ, ಮಧ್ವಾಚಾರ್ಯರದು ಹರಿಸರ್ವೋತ್ತಮತ್ವ. ಇಬ್ಬರು ಆಧ್ಯಾತ್ಮಿಕತೆಯಲ್ಲಿ ಭಕ್ತಿಗೆ ಪ್ರಥಮಸ್ಥಾನ ನೀಡಿದ್ದಾರೆ. ತಮ್ಮ ಮತ ಪ್ರಚಾರಕ್ಕಾಗಿ ಇವರು ಅನುಸರಿಸಿದ ಮಾರ್ಗವೂ ಸ್ವಲ್ಪ ಹೆಚ್ಚು ಕಡಿಮೆ ಸಮಾನವಾದುದೇ. ಇಬ್ಬರೂ ಉಪದೇಶಕ್ಕೆ ಜನರ ನುಡಿಯನ್ನೇ ಆಶ್ರಯಿಸಿದರು. ಶಿವಶರಣರು ಕಾವ್ಯಮಯವಾದ ಗದ್ಯದಲ್ಲಿ ತಮ್ಮ ವಚನಗಳನ್ನು ಕಟ್ಟಿ ಹಾಡಹೊರಟರೆ ಹರಿದಾಸರು ಹೃದಯವನ್ನು ಸೂರೆಗೊಳ್ಳಬಲ್ಲ, ಕೀರ್ತನೆಗಳನ್ನು ಕಟ್ಟಿ ಹಾಡಹೊರಟರು.[56]

ವೀರಶೈವ ಸಂಘಟನೆ ಮಾರ್ಗದರ್ಶನಗಳಿಗೆ ಶೂನ್ಯಸಿಂಹಾಸನ -ಅನುಭವ ಮಂಟಪಗಳು ನೆರವಾದರೆ ಅದೇ ಕಾರ್ಯಕ್ಕಾಗಿ ಹರಿದಾಸರು 'ವ್ಯಾಸಕೂಟ' 'ದಾಸಕೂಟಲ ಸ್ಥಾಪಿಸಿಕೊಂಡರು.

ವೈದಿಕ ಆಧಾರಗ್ರಂಥಗಳನ್ನು ಮೂಲದಲ್ಲಿ ಓದಿ, ಜನಸಾಮಾನ್ಯರಲ್ಲಿ ಕೀರ್ತನೆಗಳ ಮೂಲಕ ಪ್ರಸಾರ ಮಾಡುವ ಕಾರ್ಯಕ್ಕೆ 'ದಾಸಕೂಟ' ಸೇರಿದುದು. ಇವೆರಡಕ್ಕೂ ಇರುವ ವ್ಯತ್ಯಾಸ ಕೇವಲ ಭಾಷೆಗೆ ಸಂಬಂಧಿಸಿದುದು. ವಚನಗಳಿಗೂ ಕೀರ್ತನೆಗಳಿಗೂ ಮುಖ್ಯ ಹೋಲಿಕೆ ಎಂದರೆ ಅವರ ಕೃತಿಗಳಲ್ಲಿನ ಅಂಕಿತ. ಶ್ರೀಪಾದರಾಜರ ಅಂಕಿತ ''ರಂಗವಿಠಲ'' ವ್ಯಾಸರಾಯರದು ''ಶ್ರೀ ಕೃಷ್ಣ'' ವಾದಿರಾಜರದು ''ಹಯವದನ'' ಪುರಂದರದಾಸರದು ''ಪುರಂದರ ವಿಠಲ'' ಕನಕದಾಸರದು ''ಆದಿಕೇಶವ'' ರಾಘವೇಂದ್ರ ತೀರ್ಥರದು ''ಧೀರವೇಣುಗೋಪಾಲ'' ಅದೇ ರೀತಿ ವಚನಕಾರರ ಅಂಕಿತ. ದೇವರದಾಸಿಮಯ್ಯನದು 'ಸಕಲಸಿದ್ಧ ಮಲ್ಲಿಕಾರ್ಜುನ', ಅಕ್ಕಮಹಾದೇವಿಯದು 'ಚೆನ್ನಮಲ್ಲಿಕಾರ್ಜುನ' ಅಲ್ಲಮಪ್ರಭುವಿನದು. 'ಗುಹೇಶ್ವರ' ಇತ್ಯಾದಿ.

ವಚನಕಾರರು ತಮ್ಮ ಇಷ್ಟ ದೈವವನ್ನು ಅಂಕಿತವಾಗಿ ಬಳಸಿದಂತೆ, ಹರಿದಾಸರು ತಮ್ಮ ಇಷ್ಟದೈವದ ಅಂಕಿತಗಳಲ್ಲಿ ಕೀರ್ತನೆ ರಚಿಸಿದ್ದಾರೆ.

ದಾಸಸಾಹಿತ್ಯ ಮತ್ತು ವಚನ ವಾಙ್ಮಯ ಈ ಎರಡರ ಗುರಿಯೂ ಮತತತ್ವ ಪ್ರತಿಪಾದನೆ ಮತ್ತು ಪ್ರಚಾರ. ಇತರ ಮತಗಳಿಗಿಂತ ತಮ್ಮ ಮತ ಶ್ರೇಷ್ಠವೆಂಬಂತೆ ಸಮರ್ಥನೆ, ತಮ್ಮದಲ್ಲದ ದೈವದ ಅವಹೇಳನ, ನೀತಿಬೋಧನೆ, ಸಮಾಜದ ದುರಾಚಾರ ಮತ್ತು ಲೋಪದೋಷಗಳ ಖಂಡನೆ ಇವು ಎರಡಕ್ಕೂ ಸಮಾನ. ಸಂಸ್ಕೃತದಲ್ಲಿದ್ದ ಆಧ್ಯಾತ್ಮಿಕ ತತ್ವಗಳನ್ನು ಜನರ ಮಾತಿನಲ್ಲಿ ಅಳವಡಿಸಿಕೊಂಡು ಮನೆಮನೆಗೂ ಕೊಂಡೊಯ್ದು ಹಂಚುವ ಸತ್ಕಾರದಲ್ಲಿ ಈ ಎರಡೂ ಬಗೆಯ ವಾಙ್ಮಯಗಳಿಗೆ ಸಮಾನ ಪ್ರಶಸ್ತಿ ಸಲ್ಲಬೇಕಾಗಿದೆ. ನುಡಿದಂತೆ ನಡೆದು ದೊಡ್ಡ ಬಾಳನ್ನು ನಡೆಸಿದ ಈ ಸಂತ ಜೀವಿಗಳು ಜನರಲ್ಲಿ ದೈವಭಕ್ತಿಯನ್ನು ಪ್ರಚೋದಿಸಿ ಸಮಾಜದ ನೈತಿಕ ಮಟ್ಟವನ್ನು ಮೇಲಕ್ಕೆತ್ತುವುದರಲ್ಲಿ ಬಹುಮಟ್ಟಿಗೆ ಕೃತಕೃತ್ಯರಾದರು. ವಚನಕಾರನಾದರೆ ಏಕನಾದವನ್ನು, ಹರಿದಾಸನಾದರೆ ತಂಬೂರಿಯನ್ನು ಕೈಲಿ ಹಿಡಿದು ಮನೆಯಿಂದ ಮನೆಗೆ ಹಾಡುತ್ತಾ ಹೋಗುವ ದೃಶ್ಯಕಲ್ಪನೆ ರೋಮಾಂಚನಕಾರಿಯಾಗಿದೆ.[57]

ಶಿವಶರಣ ವಚನ ವಾಙ್ಮಯದಲ್ಲಿ ಹೇಗೋ ಹಾಗೆ ಇಲ್ಲಿಯೂ ಕೃತಿಗೆ ಮೂಲಜೀವನ ಸಿದ್ಧಿ, ವ್ಯಕ್ತಿತ್ವ ಪರಿಣತಿ, ಇಲ್ಲದೆ ಕೇವಲ ಪಾಂಡಿತ್ಯದಿಂದ ಇಂತಹ ಸಹಜ ಸಂಪನ್ನ ಸಾಹಿತ್ಯ ನಿರ್ಮಾಣವಾಗದು ಎಂಬ ವಿಮರ್ಶಕರ ಮಾತು ದಾಖಲಾರ್ಹವಾಗಿದೆ.[58]

ವಚನಕಾರರು ಹಾಗೂ ದಾಸರು ತಮ್ಮ ಜನತೆಗೆ ಸಾಹಿತ್ಯಕ್ಷೇತ್ರದಲ್ಲಾದರೂ, ಸ್ವತಂತ್ರ ಆಲೋಚನೆ ದೊರೆಯುವಂತೆ ಮಾಡಿದರು. ಇದಕ್ಕೆ ಕಾರಣ ತತ್ವಗ್ರಂಥಗಳ ಭಾಷೆ ಜನಸಾಮಾನ್ಯರ ಭಾಷೆಯಾಗಿರದೆ ಸಂಸ್ಕೃತವಾಗಿದ್ದುದೇ ಮುಖ್ಯ ಕಾರಣವೆನಿಸುತ್ತದೆ. ಈ ಭಾಷಾ ಕಂದಕದ ಹಾಸುಬೀಸುಗಳನ್ನು ಅರ್ಥಮಾಡಿಕೊಂಡ ಬಸವಣ್ಣನವರು ಭಕ್ತಿ ತತ್ವಗಳನ್ನು ಕನ್ನಡದಲ್ಲಿ ಸರಳವಾಗಿ ಜನರ ಆಡುಮಾತುಗಳಲ್ಲಿ ಬೋಧಿಸಿದರು. ಜನ ಅದನ್ನು ಮುಕ್ತವಾಗಿ ಸ್ವಾಗತಿಸಿದರು. ಮೈಮರೆತು ಹಾಡಿದರು. ವರ್ಣಬೇಧ, ಜಾತಿ ಭೇದಗಳಿಲ್ಲದೆ ಸರ್ವಸಮಾನತೆಯನ್ನು ಸಾರುತ್ತಿದ್ದ ವಾತಾವರಣದಲ್ಲಿ ಉಸಿರಾಡಿದರು. ಇಡೀ ಕನ್ನಡ ನಾಡನ್ನೇ ತಮ್ಮ ಉದಾತ್ತ ಧಾರ್ಮಿಕ ತತ್ವಗಳ ಮೂಲಕ ಮುಟ್ಟಿದರು, ತಟ್ಟಿದರು. ಬಸವಾದಿ ಶಿವಶರಣರು ಅವರು ತೀರ ಪ್ರಾಮಾಣ್ಯವನ್ನು ಧಿಕ್ಕರಿಸಿದ್ದರಿಂದ ಕಸಿಬಿಸಿಗೊಂಡಿದ್ದ ಹರಪಾರಮ್ಯವನ್ನು ಒಪ್ಪದ ವೈದಿಕ ಧರ್ಮದವರು 13ನೇ ಶತಮಾನದಲ್ಲಿ ಹರಿಭಕ್ತಿಯನ್ನು, ಮಧ್ವಾಚಾರ್ಯರ ದ್ವೈತಸಿದ್ಧಾಂತವನ್ನು ಆತುಕೊಂಡರು.[59]

ಹರಿದಾಸ ಸಾಹಿತ್ಯ ಸಂಸ್ಕೃತ ಹಾಗೂ ತನ್ನದೇ ಭಾಷೆಯ ವಚನ ಸಾಹಿತ್ಯದಿಂದ ಮಾತ್ರ ಪ್ರೇರಣೆ ಪಡೆಯದೆ. ಅಕ್ಕಪಕ್ಕದ ಭಾಷೆಯಿಂದಲೂ ಪಡೆದಿದೆಯೆಂಬುದು ವಿದ್ವಾಂಸರ ಅಭಿಪ್ರಾಯ. ಶ್ರೀಪಾದರಾಯರು ಎಂಟನೆಯವರಾಗಿ ಶ್ರೀರಂಗಂ ಮಾಧ್ವಸಂಸ್ಥಾನದ ಅಧಿಕಾರ ವಹಿಸಿಕೊಂಡರು. ಆ ವೇಳೆಗಾಗಲೇ ಶ್ರೀರಂಗದಲ್ಲಿ ತಮಿಳಿನ ಆಳ್ವಾರರು ತಮ್ಮ ಆಡುಭಾಷೆ ತಮಿಳಿನಲ್ಲಿ ಪಾಶುರಗಳನ್ನು ರಚಿಸುವುದರ ಮೂಲಕ ಹರಿಭಕ್ತಿಯನ್ನು ಬಿತ್ತಿದ್ದರು. ಈ ಪರಿಸ್ಥಿತಿಯ ಸೂಕ್ಷ್ಮವರಿತ ಶ್ರೀಪಾದರಾಜರು ತಾವು ತಮ್ಮ ಪೂಜಾಕಾಲದಲ್ಲಿ ಸಣ್ಣ ಸಣ್ಣ ಕನ್ನಡ ಕೀರ್ತನೆಗಳನ್ನು ರಚಿಸಿ ಹಾಡತೊಡಗಿದರು. ಇದೇ ಕನ್ನಡ ಹರಿದಾಸ ಸಾಹಿತ್ಯಕ್ಕೆ ನಾಂದಿಯಾಯಿತು.[60]

ಕ್ರಿ. ಶ. 1280-1333ರವರೆಗೆ ಜೀವಿಸಿದ್ದ ಮಧ್ವಾಚಾರ್ಯರ ಶಿಷ್ಯರಾದ ಒರಿಸ್ಸಾದ ಗಜಪತಿರಾಜನಲ್ಲಿ ಸೇವೆ ಮಾಡುತ್ತಿದ್ದ, ನರಹರಿ ತೀರ್ಥರು ಹರಿದಾಸರ ಪಿತಾಮಹರಾಗಿದ್ದಾರೆ. ಸಂಸ್ಕೃತದಲ್ಲಿ ಉದ್ದಾಮ ಪಂಡಿತರಾದ ನರಹರಿ ತೀರ್ಥರು ಕನ್ನಡದಲ್ಲಿ ಪದಗಳನ್ನು ರಚಿಸಿ ದಾಸಕೂಟದ ಮೂಲಪುರುಷರೆಂದು ಪ್ರಸಿದ್ಧಿ ಪಡೆದಿದ್ದಾರೆ ಎಂಬ ಆರ್. ಎಸ್. ಪಂಚಮುಖಿ ಅವರ ಮಾತು ಉಲ್ಲೇಖಾರ್ಹ.[61]

ಮುಳಬಾಗಿಲು ಮಠದ ಶ್ರೀಪಾದರಾಜರು (ಕ್ರಿ. ಶ. 1450-1486) ಹರಿದಾಸ ಸಾಹಿತ್ಯಕ್ಕೆ ಭದ್ರ ಬುನಾದಿ ಹಾಕಿದರು. ಸಂಸ್ಕೃತದಲ್ಲಿಉದ್ದಾಮ ಪಂಡಿತರಾದ ಇವರು "ವಾಗ್ವಜ್ರ" ಎಂಬ ಗ್ರಂಥ ರಚಿಸಿದ್ದಾರೆ. ತಾವು ರಚಿಸಿದ ಭ್ರಮರಗೀತ, ವೇಣುಗೀತ, ಗೋಪಿ ಗೀತಗಳನ್ನು ವೇದ ಪಾರಾಯಣ ಮಾಡುವಂತೆ ದಾಸರಕೈಲಿ ನಿತ್ಯವೂ ದೇವರಪೂಜೆಯ ಸಮಯದಲ್ಲಿ ಹಾಡಿಸುತ್ತಿದ್ದಾರಂತೆ. "ಇವರು ಶ್ರೀಭಾಗವತದ ಕೃಷ್ಣಕತೆಯನ್ನು ಚಿಕ್ಕ ಚಿಕ್ಕ ಪದಗಳಲ್ಲಿ ಬಹುರಸವತ್ತಾಗಿ ಹಾಡಿದ್ದಾರೆ" ಎಂಬ ಆರ್. ಎಸ್. ಪಂಚಮುಖಿ ಅವರ ಮಾತುಗಳಿಂದ ದಾಸಸಾಹಿತ್ಯ ಗಂಗೋತ್ರಿ ಎಲ್ಲಿದೆಯೆಂಬುದನ್ನು ಊಹಿಸಬಹುದು[62] ಶ್ರೀಪಾದರಾಯರ ಪ್ರಿಯಶಿಷ್ಯರೂ ವ್ಯಾಸರಾಯರು (1530). ಸೋಮನಾಥ ಕವಿ 'ವ್ಯಾಸಯೋಗ ಚರಿತಂ' ಎಂಬ ಕಾವ್ಯ ರಚಿಸಿದ್ದಾನೆ. ಇದು ವ್ಯಾಸರಾಯರ ಅಪಾರ ವಿದ್ವತ್ತನ್ನು ಪರಿಚಯಿಸುತ್ತದೆ. ಹರಿದಾಸರಿಗೆ ಸಾಂಪ್ರದಾಯಿಕ ಶಿಕ್ಷಣ ಅತ್ಯುತ್ತಮವಾಗಿ ದೊರೆಯಿತು. ಅದರಲ್ಲೂ ಸಂಸ್ಕೃತದಲ್ಲಿದ್ದ ಆಧ್ಯಾತ್ಮಿಕ ಸಂಪತ್ತನ್ನು ತಮ್ಮದನ್ನಾಗಿಸಿಕೊಳ್ಳುತ್ತಿದ್ದರು. ಶ್ರೀಪಾದರಾಯರು ವೇದ ರಹಸ್ಯಗಳನ್ನೆಲ್ಲಾ ವ್ಯಾಸರಾಯರಿಗೆ ಉಪದೇಶಿಸಿದರು. ವೇದಗಳ ಗಹನವಾದ ಅಧ್ಯಯನ ಅಧ್ಯಾಪನದಲ್ಲಿ ಹನ್ನೆರಡು ವರ್ಷಗಳೇ ಗತಿಸಿದವು.[63] ವ್ಯಾಸರಾಯರು ವಿಜಯನಗರ ಅರಸರ ರಾಜಗುರುಗಳಾಗಿದ್ದರು. ಅದರಲ್ಲೂ ತುಳುವ ವಂಶದ ಮಹಾನ್‌ದೊರೆ ಶ್ರೀಕೃಷ್ಣದೇವರಾಯನಿಗೆ ಆಪ್ತ ಸಲಹೆಗಾರರಾಗಿದ್ದರು. ಉದಯಗಿರಿಯಿಂದ ದಿಗ್ವಿಜಯ ಮುಗಿಸಿ ಬರುತ್ತಿದ್ದಾಗ ಅಲ್ಲಿದ್ದ ಬಾಲಕೃಷ್ಣ ಮೂರ್ತಿಯನ್ನು ಕುರಿತು ವ್ಯಾಸರಾಯರು ಹೀಗೆ ಹಾಡಿದ್ದಾರೆ:

"ಧರೆಗಧಿಕವೆಂದೆನಿಪ ವಿದ್ಯಾನಗರ ಬಳಿತೆಂದು ಉದಯ
ಗಿರಿಯಿಂದ ಬಂದ ಮುದ್ದು ಬಾಲಕೃಷ್ಣನಮ್ಮ!"

ವ್ಯಾಸಕೂಟದಿಂದ ವಿದ್ವಾಂಸರ ವರ್ಗವನ್ನು ದೀಕ್ಷಾಬದ್ಧಯತಿಗಳ ಗುಂಪನ್ನು ಬೆಳೆಸಿದಂತೆ ದಾಸಕೂಟದಿಂದ ದೀಕ್ಷಾಬದ್ಧ ದಾಸರ ಗುಂಪನ್ನು ಕಟ್ಟಿ ಕನ್ನಡ ಸಾಹಿತ್ಯಕ್ಕೆ, ಕರ್ನಾಟಕ ಸಂಗೀತಕ್ಕೆ ಒಂದು ಹೊಸ ತಿರುವು ಕೊಟ್ಟವರು ವ್ಯಾಸರಾಯರು. ಕನಕ ಹಾಗೂ ಪುರಂದರರಂತಹ ಶಿಷ್ಯರನ್ನು ಪಡೆದ ವ್ಯಾಸರಾಯರು ಜಾತಿಮತ ಅಡ್ಡಗೋಡೆ ತೊಡೆದುಹಾಕಿ ಕನಕದಾಸರನ್ನು ಹತ್ತಿರಕ್ಕೆ ಕರೆದುಕೊಂಡರು. ತಮ್ಮ ಶಿಷ್ಯರ ಪ್ರತಿಭೆಯನ್ನು, ಅಂದರೆ ಪುರಂದರದಾಸರನ್ನೇ "ದಾಸರೆಂದರೆ ಪುರಂದರದಾಸರು" ಎಂದು ಹಾಡಿಹೊಗಳಿದ್ದಾರೆ. ಹೀಗೆ ವ್ಯಾಸರಾಯರು ದಾಸ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನ ಗಳಿಸಿದ್ದಾರೆ.

ತಮ್ಮ ಗುರುಗಳಾದ ವ್ಯಾಸರಿಂದಲೇ 'ದಾಸಶ್ರೇಷ್ಠ'ರೆಂದು ಹೊಗಳಿಸಿಕೊಂಡ ಪುರಂದರದಾಸರು ದಾಸ ಸಾಹಿತ್ಯಕ್ಕೆ ನಿಜವಾದ ಅರ್ಥದಲ್ಲಿ ತಳಹದಿ ಹಾಕಿದವರೆಂದು ಹೇಳಲಾಗಿದೆ. ವಿಜಯನಗರದ ಅರಸನಾದ ಶ್ರೀಕೃಷ್ಣದೇವರಾಯನ ಸಮಕಾಲೀನರು. ಪ್ರಾರಂಭದಲ್ಲಿ ಸಿರಿ ಪ್ರಭಾವದಿಂದ ಲೋಭಿಯಾಗಿದ್ದರು. ಹರಿಕೃಪೆ ಒದಗಿದ ನಂತರ ಜ್ಞಾನಿಯಾದರೆಂಬ

ದಂತಕತೆ ಇವರ ಹೆಸರಿನಲ್ಲಿದೆ. ಆದರೆ ಶ್ರೀಪುರಂದರದಾಸರು ಮಹಾಭಾರತ, ರಾಮಾಯಣ, ಭಗವದ್ಗೀತೆ, ಭಾಗವತ, ಪುರಾಣಗಳು ಇತ್ಯಾದಿ ಭಾರತೀಯ ಉದಾತ್ತ ತಾತ್ವಿಕ ಗ್ರಂಥಗಳನ್ನು ಆಳವಾಗಿ ಅಭ್ಯಸಿಸಿ ಅರಗಿಸಿಕೊಂಡಿದ್ದರು. ಅವರ ಕೀರ್ತನೆಗಳಲ್ಲಿ ಅವುಗಳ ಸಾರ ಮಾತ್ರ ಬಂದಿದೆ[64] ಎಂಬ ವಿದ್ವಾಂಸರ ಹೇಳಿಕೆ ಗುರುತಿಸಿದರೆ ಪುರಂದರದಾಸರ ವಿಶಾಲ ಓದಿನ ಅರಿವಾಗುತ್ತದೆ.

'ಪುರಂದರ ವಿಠಲ' ಎಂಬ ಅಂಕಿತದಲ್ಲಿ ಪುರಂದರದಾಸರು ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ. ಈಗ ಒಂದು ಸಾವಿರ ಕೀರ್ತನೆಗಳು ಮಾತ್ರ ಲಭ್ಯವಾಗಿದೆ. ಅವುಗಳನ್ನು ರಾಮಮಹಿಮೆ, ಹರಿಗುರುಗಳ ಸ್ಮರಣೆ, ಸ್ತುತಿ, ಅಂತರಂಗ ನಿವೇದನೆ, ಕೃಷ್ಣಲೀಲೆ, ಸಮಾಜ ವಿಮರ್ಶೆ, ಸಮಾಜ ಬೋಧನೆ- ಎಂಬುದಾಗಿ ವಿಂಗಡಿಸಬಹುದು. ಆಯಾಯ ವಿಭಾಗದಲ್ಲಿ ಪುರಂದರದಾಸರ ಕೀರ್ತನೆಗಳನ್ನು ಪ್ರತ್ಯೇಕ ಮಾಡಿಟ್ಟಿರೆ, ಅವರು ಪ್ರಾಚೀನ ಗ್ರಂಥಗಳಾದ ರಾಮಾಯಣ, ಮಹಾಭಾರತ ಹಾಗೂ ಭಾಗವತಗಳ ಅನುವಾದ ಮಾಡಿರುವುದನ್ನು ಗಮನಿಸಬಹುದು. ಅವರ ಗುರುಗಳೇ ಅಂದರೆ ವ್ಯಾಸರಾಯರೇ 'ಪುರಂದರ ಉಪನಿಷತ್ತು' ಎಂದು ಕರೆಯುವುದರ ಮೂಲಕ ಪುರಂದರದಾಸರ ಮೇಲೆ ಉಪನಿಷತ್ತಿನ ಪ್ರಭಾವವನ್ನು ಗುರುತಿಸಿದ್ದಾರೆ.

"ವರ ನಾಲ್ಕುವೇದಗಳುಂಟು ಅಲ್ಲ
ನರರುತ್ತಮರೆಲ್ಲ ನೋಡಿ ಹರುಷದಿಂದ
ಧರೆಯೊಳಗೆ ಪುರಂದರ ಉಪನಿಷತ್ತೆಂದರು."

ಪುರಂದರದಾಸರ ಸರ್ವಧರ್ಮ ಸಹಿಷ್ಣುತೆ ಆ ಕಾಲದ ಅಗತ್ಯ ಗುಣವಾಗಿತ್ತು. ಅವರು ತಮ್ಮ ಸ್ವಂತ ನಿಷ್ಠೆಯಲ್ಲಿ ಮಾಧ್ವರಾದರೂ, ಶಿವದರುಶನ ತಮಗಾಯಿತು ಎಂದು ಹಿಗ್ಗಿದರು. ಜಂಗಮರು ತಾವೆಂದು, ವೀರಭದ್ರ ಪ್ರಿಯಭಕ್ತರು ತಾವೆಂದು ಬಣ್ಣಿಸಿಕೊಂಡರು. ಸದ್ಗುರುವು ತಮ್ಮನ್ನು ಫಕೀರರನ್ನಾಗಿ ಮಾಡಿದುದನ್ನು ಜ್ಞಾಪಿಸಿಕೊಂಡರು. 'ತುರುಕರು ಕರೆದರೆ ಉಣಬಹುದೆಂದು' ಮಾರ್ಮಿಕವಾಗಿ ಸೂಚಿಸಿದರು. 'ಧ್ರುವಗೊಲಿದು ಪದವಿ ಏನನ್ನು ಕವಿಮೊರೆ ಕೇಳಿದ ಶ್ರೀಶನನ್ನು ಹುಸ್ಸೇನ್ ಎಂದು ಕರೆದು ಅರಿತು ಬಂದೆನಲ್ಲಿ ಪುರಂದರ ವಿಠ್ಠಲನಲ್ಲ ವಿಲ್ಲವಲ್ಲಾ' ಎಂದು ಹೇಳಿದರು.[65]

ಹರಿದಾಸರು ಸಂಸ್ಕೃತ ಸಾಹಿತ್ಯದಂತೆ ಜಾನಪದ ಸಾಹಿತ್ಯದಿಂದಲೂ ಪ್ರಭಾವಿತರಾಗಿದ್ದಾರೆಂದು ವಿದ್ವಾಂಸರ ಅನಿಸಿಕೆ. ಮಂಗಳದ ಹಾಡುಗಳು, ಉದಯರಾಗ, ಲಾಲಿ, ಜೋಗುಳ, ಎಚ್ಚರಿಕೆ, ಶೋಭನ, ಸುವ್ವಿ, ಧವಳ ನಿವಾಳಿಸುವ ಪದಗಳು ಮೊದಲಾಗಿ ಹಲವು ಗೇಯ ಪ್ರಕಾರಗಳನ್ನು ಜಾನಪದ ನಡೆಯಿಂದ ಎತ್ತಿಕೊಂಡು ಅದಕ್ಕೆ ಮಾರ್ಗದರ್ಶನ ನೀಡಿ ಸಂಗೀತದ ಕಳೆಯನ್ನು ಅಳವಡಿಸಿದರು.[66]

ಹರಿದಾಸರ ರಚನೆಗಳಲ್ಲಿ ಕೃಷ್ಣಲೀಲೆಯ ವರ್ಣನೆ ಮುಖ್ಯವಾಗಿ ಬರುವ ವಿವರ. ಕೃಷ್ಣನ ಅದ್ಭುತ ರಮಣೀಯ ಕಥೆಗಳಿಗೆ ಭಾಗವತ ಪುರಾಣ, ವಿಷ್ಣು ಪುರಾಣ, ಹರಿವಂಶ ಇವೇ ಆಕರ. ಪುರಂದರದಾಸರು ಕೃಷ್ಣಲೀಲೆಗಳನ್ನು ಕುರಿತು ರಚಿಸಿರುವ ಪದಗಳಿಗೆಲ್ಲಾ ಭಾಗವತ ಪುರಾಣವೇ ಆಕರ.[67]

ಶಿವಶರಣರ ಸಾಲಿನಲ್ಲಿ ಬಸವಣ್ಣ ಹೇಗೋ ಹಾಗೇ ಹರಿದಾಸರ ಸಾಲಿನಲ್ಲಿ ಪುರಂದರದಾಸರು ಅಗ್ರಗಣ್ಯರು." ಎಂಬ ಸಾಹಿತ್ಯ ಚರಿತ್ರಕಾರರ ಮಾತು ತುಂಬಾ ಮಾರ್ಮಿಕವಾಗಿದೆ. ದಾಸಸಾಹಿತ್ಯ ವಚನ ಸಾಹಿತ್ಯದಿಂದ ಪ್ರೇರಣೆ ಪಡೆದಿರುವುದನ್ನು ಗಮನಿಸಬಹುದು. ವಿಶೇಷವಾಗಿ ಬಸವಣ್ಣ ಅಕ್ಕಮಹಾದೇವಿಯವರ ವಚನಗಳಿಂದ ಪುರಂದರದಾಸರು ಪ್ರೇರಣೆ ಪಡೆದಿದ್ದಾರೆ. ಬಸವೇಶ್ವರ ಮತ್ತು ಪುರಂದರದಾಸ ಇವರೀರ್ವರು ಮಾನವತಾವಾದಿಗಳು, ಬಸವೇಶ್ವರ ಹಾಗೂ ಪುರಂದರದಾಸರು ಇಬ್ಬರೂ ಶ್ರೇಷ್ಠ ಭಕ್ತರು, ಇಬ್ಬರ ನುಡಿಗಳಲ್ಲಿಯೂ ದಯೆ, ಅನುಕಂಪ, ಮಾನವೀಯತೆ, ವಿನಯ, ಅಂತಃಕರಣ ಈ ಮುಂತಾದ ಗುಣಗಳಲ್ಲಿ ಸಾಮ್ಯವಿದೆ. ದೇವರ ಧ್ಯಾನಿಸುವಲ್ಲಿ ಅಹಂಭಾವ ಹೋಗಿ, ಕಿಂಕರಭಾವ ಇಬ್ಬರಲ್ಲೂ ವ್ಯಾಪಿಸಿರುವುದನ್ನು ಕಾಣಬಹುದಾಗಿದೆ. ಇಬ್ಬರೂ ತಮ್ಮನ್ನು ತಾವೇ ಆತ್ಮವಿಮರ್ಶೆ ಮಾಡಿಕೊಂಡಿದ್ದಾರೆ. ತಮ್ಮೊಳಗೆ ತಮ್ಮನ್ನು ಕಾಣಲು ಪ್ರಯತ್ನಿಸಿದ್ದಾರೆ, ದೇವರನ್ನು ಪ್ರಾರ್ಥಿಸುವಲ್ಲಿಯೂ ಇಬ್ಬರ ದಾರಿಗಳು ಒಂದೇ ಆಗಿದೆ. [69]

ಬಸವಣ್ಣ ಹಾಗೂ ಪುರಂದರರ ನಡವೆ ಇರುವ ಸಾಮ್ಯತೆ ಹಾಗೂ ಪ್ರೇರಣೆಗೆ ಅವರ ಮಾತುಗಳನ್ನೇ ಉದಾಹರಣೆ ತೆಗೆದುಕೊಡಬಹುದು. ಸಮಾಜದಲ್ಲಿನ ಮೂಢ ನಂಬಿಕೆ, ಅಂಧ ಸಂಪ್ರದಾಯಗಳ ಬಗ್ಗೆ ಬಸವಣ್ಣನವರ ಪ್ರತಿಕ್ರಿಯೆ ಹೀಗಿದೆ:

''ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನರಯ್ಯಾ
ರಾಶಿ ಕೂಟ ಗಣ ಸಂಬಂಧವುಂಟೆಂದು ಹೇಳಿರಯ್ಯಾ
ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯ
ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯ.

ಇದೇ ವಿಚಾರವಾಗಿ ಪುರಂದರದಾಸರ ಹೇಳಿಕೆ ನೋಡಿ -

ಇಂದಿನ ದಿನವೇ ಶುಭದಿನವು
ಇಂದಿನ ವಾರ ಶುಭವಾರ
ಇಂದಿನ ತಾರೆಯೇ ಶುಭ ತಾರೆ
ಇಂದಿನ ಯೋಗವೇ ಶುಭ ಯೋಗ......

ಬಸವ-ಪುರಂದರರಿಬ್ಬರೂ ವೇದಶಾಸ್ತ್ರ ಪುರಾಣಗಳನ್ನು ಅರ್ಥೈಸುವ ರೀತಿಯಲ್ಲೂ ಸಾಮ್ಯತೆ ಕಂಡುಬರುತ್ತದೆ. ಬಸವಣ್ಣನವರ ಹೇಳಿಕೆ ಹೀಗಿದೆ -

''ವೇದಕ್ಕೆ ಬಲೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನ್ನಿಕ್ಕುವೆ
ತರ್ಕದ ಬೆನ್ನು ಭಾರನೆತ್ತುವೆ, ಆಗಮದ ಮೂಗ ಕೊಯ್ಯುವೆ ನೋಡಯ್ಯಾ''

ಈ ಬಗ್ಗೆ ಪುರಂದರರ ಮಾತು ಹೀಗಿದೆ -

ಪರಿ ಪರಿ ಶಾಸ್ತ್ರವನೇಕವನೋದಿ ವ್ಯರ್ಥವಾಯ್ತು ಭಕುತಿ
ಆರುಶಾಸ್ತ್ರಗಳೋದಿದರೇನು? ನೂರಾರು ಪುರಾಣ ಕೇಳಿದರೇನು

ಬಸವಣ್ಣನವರ ವಚನ ಹಾಗೂ ಪುರಂದರ ಉಗಾಭೋಗವನ್ನು ಪರಿಶೀಲಿಸಿದರೆ 'ದಾಸಸಾಹಿತ್ಯ'ದ ಮೂಲ ನೆಲೆ ಕಾಣಬರುತ್ತದೆ.

ಬಸವಣ್ಣನವರ ಮಾತು-

'ಹರಿವ ಹಾವಿಗಂಜೆ ಉರಿಯ ನಾಲಿಗೆಗಂಜೆ
ಸುರಿಗಿಯ ಮೊನೆಗಂಜೆ
ಒಂದಕ್ಕಂಜುವೆ ಒಂದಕ್ಕಳಿಸುವೆ
ಪರಸ್ತ್ರೀ ಪರಧನವೆಂಬೀ ಜೂಜಿಗಂಜುವೆ
ಮುನ್ನಂಜದ ರಾವಣನೇ ವಿಧಿಯಾದ
ಅಂಜುವೆನಯ್ಯಾ ಕೂಡಲ ಸಂಗಮದೇವಾ'

ಪುರಂದರ ದಾಸರ ಮಾತುಗಳು ಹೀಗಿವೆ -

ಉರಿಗಂಜೆ, ನೆರೆಗಂಜೆ, ಶರೀರದ ಭಯಕಂಜೆ
ಹಾವಿಗಂಜೆ, ಚೇಳಿಗಂಜೆ ಕತ್ತಿಯ ಧಾರೆಗಂಜೆ
ಇನ್ನೊಂದಕ್ಕಂಜುವೆ ಇನ್ನೊಂದಕ್ಕಳಿಸುವೆ
ಪರಧನ ಪರಸತಿಗೆರಡಕ್ಕಂಜುವೆನಯ್ಯಾ
ಹಿಂದೆ ಕೌರವ ರಾವಣರೇನಾಗಿ ಪೋದರು
ಮುಂದೆ ಸಲಹೋ ಪುರಂದರ ವಿಠಲ

ಪ್ರತಿಯೊಂದು ಚರಣ, ಪದ, ಅರ್ಥ, ಭಾವ, ಆಶಯ ಉದ್ದೇಶ ಎಲ್ಲವೂ ಇವರಿಬ್ಬರಲ್ಲಿಯೂ ಕಂಡುಬರುತ್ತವೆ.

ಬಸವಣ್ಣನವರ ಪ್ರಭಾವ ಪುರಂದರ ದಾಸರ ಮೇಲೆ ಎಷ್ಟೊಂದು ತೀವ್ರವಾಗಿತ್ತೆಂಬುದಕ್ಕೆ ಕೆಲವೊಂದು ಉದಾಹರಣೆಗಳು -

ತಂದೆ ನೀನು, ತಾಯಿ ನೀನು
ಬಂಧು ನೀನು, ಬಳಗ ನೀನು

ಪುರಂದರರ ಮಾತು -

ತಂದೆ ತಾಯಿಯು ನೀನೆ
ಬಂಧು ಬಳಗವು ನೀನೆ

ಬಸವಣ್ಣನವರ ನುಡಿ -

ಇಬ್ಬರೂ ಮೂವರು ದೇವರೆಂದು ಉಬ್ಬಿ ಮಾತನಾಡಬೇಡ
ಒಬ್ಬನೇ ದೇವ ಕಾಣಬೋ -

ಪುರಂದರರ ನುಡಿ -

ನಮ್ಮ ದೇವ, ನಿಮ್ಮ ದೇವ
ನೆನಬೇಡ ಬೊಮ್ಮನ ಪಡೆದ ದೇವನೊಬ್ಬನೇ ಕಾಣಿರೋ.

ಬಸವಣ್ಣನವರ ವಿಡಂಬನೆ ಹೀಗಿದೆ -

ಜಪವ ಮಾಡಿದರೇನು, ತಪವ ಮಾಡಿದಡೇನಯ್ಯಾ
ಏನು ಮಾಡಿದಡೇನು

ಪುರಂದರದಾಸರ ವಿಡಂಬನೆ ಹೀಗಿದೆ -

ಜಪವ ಮಾಡುವೆನೆನುತಾ ಕಪಟಬುದ್ಧಿಯ ಬಿಡದೆ
ಕುಪಿತದಿಂದಲಿ ನೀನು ಕುಳಿತು ಫಲವೇನು?

ಬಸವಣ್ಣನವರ ಆತ್ಮವಿಶ್ವಾಸದ ಸೊಗಸು ನೋಡಿ -

ನಾಳೆ ಬಪ್ಪುದು ನಮಗಿಂದೇ ಬರಲಿ
ಇಂದು ಬಪ್ಪುದು ನಮಗೀಗಲೆ ಬರಲಿ
ಇದಕ್ಕಾರಂಜುವರು, ಇದಕ್ಕಾರಳುವರು.

ಪುರಂದರದಾಸರು ಈ ಮಾತಿನಿಂದ ಸ್ಫೂರ್ತಿ ಪಡೆದು ಹೀಗೆ ಉಲ್ಲೇಖಿಸಿದ್ದಾರೆ -

''ಅಂದು ಬಾಹೋದು ನಮಗಿಂದೇ ಬರಲಿ
ಇಂದೆ ಬಾಹೋದು ನಮಗೀಗಲೇ ಬರಲಿ
ಈಗ ಬಾಹೋದು ನಮಗೀಕ್ಷಣ ಬರಲಿ''

ಬಸವಣ್ಣನವರಂತೆ ಪುರಂದರದಾಸರು ಇತರ ಶರಣರಿಂದಲೂ ಸ್ಫೂರ್ತಿ ಪಡೆದಿದ್ದಾರೆ.

ಉದಾ -

**ಅಕ್ಕಮಹಾದೇವಿ ವಚನ**

ನಂಬಿದೆ ಗುರುವೇ ನಂಬಿದೆ ನಂಬಿದೆ ಸ್ವಾಮಿ
ನಂಬಿದೆ ಅಂಬಿಕಾರಮಣ ನೀನಂಬಿಗ ॥ಪ॥
ಹೊಳೆಯ ಬರವ ನೋಡಂಬಿಗ
ಸೆಳವು ಬಹಳ ಕಾಣಂಬಿಗ
ಸುಳುಹಿನೊಳಗೆ ಎದ್ದೆನಂಬಿಗಾ ಎನ್ನ
ಸೆಳೆದುಕೊಳ್ಳೋ ನೀನಂಬಿಗಾ ॥

**ಪುರಂದರದಾಸರ ಕೀರ್ತನೆ**

ಅಂಬಿಗಾ ನಾನಿನ್ನ ನಂಬಿದೆ ಜಗ
ದಂಬಾರಮಣ ನಿನ್ನನಂಬಿದೆ ॥ಪ॥
ತುಂಬಿದ ಹರಿಗೋಲಂಬಿಗ ಅದ
ಕ್ಕೊಂಬತ್ತು ಚಿದ್ರಗಳಂಬಿಗಾ
ಸಂಭ್ರಮದಿಂದ ನೋಡಂಬಿಗಾ - ಅದ
ರಿಂಬು ತಿಳಿದು ನಡೆಸಂಬಿಗಾ ॥

ವಚನ ಹಾಗೂ ದಾಸಸಾಹಿತ್ಯಗಳೆರಡೂ ಸಮಾನ ಆಸಕ್ತಿಯನ್ನು ಹೊಂದಿದ್ದವು. ಅದೆಂದರೆ ಜನರನ್ನು ಸಂಸ್ಕೃತ ಬಿಗಿಹಿಡಿತದಿಂದ ತಪ್ಪಿಸಿ ಅವರಲ್ಲಿ ಜ್ಞಾನೋದಯ ಉಂಟುಮಾಡುವುದು. ಬಸವಣ್ಣ ಹಾಗೂ ಪುರಂದರರು ಈ ಕಾರ್ಯದಲ್ಲಿ ತಮ್ಮ ಸಾಹಿತ್ಯ ಪ್ರಕಾರದಲ್ಲಿ ಮುಂದಾಳುಗಳಾಗಿ ಈ ಕೆಲಸ ನೆರವೇರಿಸಿದ್ದಾರೆ. ಸಂಸ್ಕೃತ ಭಾಷೆಯಲ್ಲಿನ ಸಾಹಿತ್ಯ ಹಾಗೂ ಪ್ರಸಂಗಗಳನ್ನು ಮನನ ಮಾಡಿದ್ದಾರೆ. ಕೊನೆಗೆ ಕನ್ನಡ ಭಾಷೆಯ ಜಾನಪದ ಹಾಗೂ ಪೂರ್ವದ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸಿ ಹೊಸದನ್ನು ಸೃಷ್ಟಿಸಿದ್ದಾರೆ. ಈ ಕಾರ್ಯ ಅವರ ಅನುಯಾಯಿಗಳಿಗೆ ಸ್ಫೂರ್ತಿ ನೀಡಿದೆ. ಕನ್ನಡದ ಸಾಹಿತ್ಯಕ್ಕೆ ಹೊಸ ತಿರುವು ನೀಡಿದೆ. ಅದರಲ್ಲೂ 'ಭಾಷಾಂತರ' ಕ್ಷೇತ್ರಕ್ಕೆ ಹೊಸ ವ್ಯಾಖ್ಯೆಯೊಂದನ್ನು ಕೊಟ್ಟಿದೆ.

ಪುರಂದರದಾಸರ ಸಮಕಾಲೀನರೂ, ವ್ಯಾಸರಾಯರ ಶಿಷ್ಯರೂ, ವಿಜಯನಗರ ಸಾಮ್ರಾಜ್ಯ ಮಹಾನ್ ಚಕ್ರವರ್ತಿ ಶ್ರೀ ಕೃಷ್ಣದೇವರಾಯನ ಸಮಕಾಲೀನರೂ ಆದ ಕನಕದಾಸರು ದಾಸಸಾಹಿತ್ಯದಲ್ಲಿ ಕೆಲಸ ಮಾಡುವುದರ ಜೊತೆಗೆ ಅಮೂಲ್ಯ ಕೃತಿಗಳನ್ನು ರಚಿಸಿದ್ದಾರೆ. ಮಾಧ್ವ ಹಾಗೂ ಶ್ರೀವೈಷ್ಣವ ಸಂಪ್ರದಾಯಗಳೆರಡನ್ನೂ ಸಮೀಕರಿಸಿ ತಮ್ಮದೇ ಆದ ವಿಶಿಷ್ಟ ತತ್ವಗಳನ್ನು ಪ್ರಚುರಪಡಿಸಿದವರು ಕನಕದಾಸರು. ತಾವು ಬೆಳೆದಂತೆ ಎಲ್ಲಾ ಮತದ ಸಂಸ್ಕೃತಿಗಳಿಗೆ ಒಳಗಾಗಿ ನಿಷ್ಪಕ್ಷಪಾತವಾದ ಭಾಗವತ ದೃಷ್ಟಿಯನ್ನು ಸ್ಥಿರಪಡಿಸಿಕೊಂಡರು. ನಮ್ಮ ದೃಷ್ಟಿಯಲ್ಲಿ ಅವರು ಯಾವುದೊಂದು ಮತದ ಪಡಿಯಚ್ಚಿನಲ್ಲಿ ಮಾತ್ರ ಬೆಳೆಯದೆ ಎಲ್ಲ ಮತದ ಸಾರಗ್ರಾಹಿಯಾದ ಪರಮಭಕ್ತರಾಗಿದ್ದರು.[70]

ನೀತಿ ಹಾಗೂ ತತ್ವ ಇವು ಮುಖ್ಯವಾಗಿ ಅವರ ಕೀರ್ತನೆಗಳ ಸಾರವಾಗಿದೆ. ಕನಕದಾಸರದಲ್ಲಿ ವಿಚಾರ ಸ್ವಾತಂತ್ರ್ಯ ಹೆಚ್ಚು. ಜನಜೀವನದ ಭಾಷೆಯ ಅರಿವು ಹೆಚ್ಚು. ಬೋಧನಪರ ಕೀರ್ತನೆಗಳಲ್ಲಿ ಉಚಿತವಾದ ಉಪಮೆ-ರೂಪಕಗಳಿಂದ ತತ್ವ ನೀತಿಗಳಿಗೆ ಪವಿತ್ರದ ಪರಿವೇಷ ಕಟ್ಟಿದ ಸೊಗಸುಗಾರಿಕೆ ಇದೆ. ಭಾಗವತ ಪುರಾಣ ಹಾಗೂ ಮಹಾಭಾರತ ಪ್ರಸಂಗಗಳನ್ನು ಕನಕದಾಸರು ಬಳಸಿಕೊಂಡಿದ್ದಾರೆ. ಅವುಗಳಿಗೆ 'ತಮ್ಮತನದ' ಲೇಪನವನ್ನು ಹಚ್ಚಿದ್ದಾರೆ.

''ಧನುಜೆಯಾಳ್ದನಣ್ಣನಣ್ಣನ ಪಿತನಮುತ್ತಿ ಕೌರವೇಶನ
ಅನುಜೆಯಾಳಿದನ ಶಿರವನ್ನ ಛೇದಿಸಿ - ತನ್ನ
ಅನುಜೆಯಾಳಿದವನ ಬೆಂಕಿ ತಿನ್ನದಂತೆ ಕಾಯ್ದ ರುಕ್ಮನ
ನುಜೆಯಾಳಿದವನ ಮೂರ್ತಿಯನ್ನು ನೋಡಿರೋ
ಕ್ರೂರವಾದ ಫಣಿಪ ಬಾಣ ಭೋಗುನುಡಿಸುತಿರಲು ಜಗಕೆ
ವೀರನನ್ನು ಮುಸುಕಿ ಒಪ್ಪದನ್ನು ಕಾಣುತ
ಭೂರಮಣಿಯನ್ನೊತ್ತಿ ಅಡಿಗೆ ಬೀಗದ ಶಿರನನ್ನು ಕಾಯ್ದ

ಇಲ್ಲೆಲ್ಲಾ ಕನಕದಾಸರಿಗಿದ್ದ ಪುರಾಣ ಮಹಾಕಾವ್ಯಗಳ ಪಾಂಡಿತ್ಯವನ್ನು ತಿಳಿಯಬಹುದು. ಶ್ರೀಸಾಮಾನ್ಯರಿಗೆ ಭಾರತ ಮಹಾಕಾವ್ಯದ ತಿರುಳನ್ನು ಆಡುಭಾಷೆಯ ಮೂಲಕ ಗೇಯತೆಯೊಡನೆ ಕೊಡುವುದೇ ದಾಸರ ಮಹೋನ್ನತ ಉದ್ದೇಶವಾಗಿತ್ತು.

ಕನಕದಾಸರು ಉತ್ತಮ ಕವಿಗಳು ಆಗಿದ್ದರು. ಷಟ್ಪದಿ ಹಾಗೂ ಸಾಂಗತ್ಯಗಳನ್ನುನುಸರಿಸಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅದೆಂದರೆ 'ಹರಿಭಕ್ತಿಸಾರ' 'ರಾಮಧಾನ್ಯಚರಿತೆ' 'ನಳಚರಿತೆ' 'ಮೋಹನ ತರಂಗಿಣಿ' ಹಾಗೂ ನರಸಿಂಹಸ್ತೋತ್ರ ಎಂಬ ಕೃತಿಗಳನ್ನು ರಚಿಸಿದ್ದಾರೆ.

'ಹರಿಭಕ್ತಸಾರ'ವು ಭಾಮಿನಿಷಟ್ಪದಿಯಲ್ಲಿದ್ದು 110 ಪದ್ಯಗಳನ್ನು ಒಳಗೊಂಡಿದೆ. ಭಕ್ತರ ಎದೆತುಂಬಿದ ಮೊರೆ ತಿಳಿಯುವ ಸರಣಿಯಲ್ಲಿದೆ. ಭಾಗವತ ಹಾಗೂ ಪುರಾಣ ಪ್ರಸಂಗಗಳ ಉಲ್ಲೇಖವಿದೆ.

'ರಾಮಧಾನ್ಯ ಚರಿತೆ' ಕನ್ನಡದಲ್ಲಿಅಪರೂಪವಾದ ಸ್ವಕಲ್ಪಿತವಾದ ಕಥಾವಸ್ತು. ಪ್ರಾಚೀನ ಕಾಲದಲ್ಲಿ ಯಾವುದೇ ಕವಿ ಎಂತಹುದೇ ಮಹತ್ವದ ವಿಷಯವನ್ನು ಹೇಳಬೇಕಾದರೂ ಆತ ಪ್ರಾಚೀನ ಮಹಾಕಾವ್ಯಗಳಿಗೆ ಶರಣಾಗಬೇಕಾಗಿತ್ತು. ಆ ಪಾತ್ರಗಳ ಮೂಲಕವೇ ಅವನ ವಿಚಾರಧಾರೆ ಬಿತ್ತಬೇಕಾಗಿತ್ತು.

ಕನಕದಾಸರ 'ರಾಮಧಾನ್ಯ ಚರಿತೆ' ಹಾಗೂ ನಂಜುಂಡಕವಿಯ 'ಕುಮಾರರಾಮನ ಚರಿತೆ' ಎರಡು ಕಾವ್ಯಗಳನ್ನು ಈ ಸಂದರ್ಭದಲ್ಲಿ ಉದಾಹರಿಸಬಹುದು. ಅಂದರೆ ಭಾಷಾಂತರ ಪ್ರಕ್ರಿಯೆ ನಡೆಯದೆ ಅವರುಗಳ ಕಾವ್ಯ ಮುಂದೆ ಸಾಗುವಂತೆಯೇ ಇರಲಿಲ್ಲ. ದೇವರ-ಬಡವರ ಪಕ್ಷಪಾತಿ ರಾಗಿ ಹಾಗೂ ಭತ್ತಗಳ ನಡುವೆ ವಾದ ನಡೆದು ಕೊನೆಗೆ 'ನೆಲದಲಗ' ಅಂದರೆ ರಾಗಿಯೇ ಜಯಶೀಲವಾಗುತ್ತದೆ. ಅದಕ್ಕೆ ರಾಮ ತನ್ನ ಹೆಸರು 'ರಾಘವ' ಎಂದು ನಾಮಕರಣ ಮಾಡುತ್ತಾನೆಂಬುದು ಈ ಖಂಡ ಕಾವ್ಯದ ವಸ್ತು. ಅಂದರೆ ಸಾಮಾಜಿಕ ಸಮಸ್ಯೆಯನ್ನು ಪ್ರಚುರಪಡಿಸಲು ನಮ್ಮ ಕವಿಗಳು ಹೇಗೆ ಪುರಾಣ ಅಥವಾ ಮಹಾಕಾವ್ಯಗಳಿಗೆ ಶರಣಾಗಬೇಕಾಗುತ್ತದೆಂದು ಈ ಸಂದರ್ಭ ಸೂಚಿಸುತ್ತದೆ. ಇಷ್ಟಾದರೂ 'ರಾಮಧಾನ್ಯ ಚರಿತೆ'ಯಲ್ಲಿ ಕನಕದಾಸರು ಕುಮಾರವ್ಯಾಸನಿಗೆ ಅನೇಕ ವಿಷಯಗಳಲ್ಲಿ ಬಹುಮಟ್ಟಿಗೆ ಋಣಿ ಎನ್ನುವ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಪ್ರತ್ಯಕ್ಷವಾಗಿ ಕವಿ ಅವನ ಹೆಸರೆತ್ತದಿದ್ದರೂ ಅನುಕರಣದ ಮೂಲಕ ಪರೋಕ್ಷವಾಗಿ ಅವನಿಗೆ ಗೌರವ ಸಲ್ಲಿಸಿದ್ದಾನೆ.[71]

'ನಳಚರಿತೆ' ಕನಕದಾಸರ ಸುಪ್ರಸಿದ್ಧವಾದ ಕಾವ್ಯ. ನಳ-ದಮಯಂತಿಯರ ಕತೆಯನ್ನು ತುಂಬಾ ಸ್ವಾರಸ್ಯಕರವಾಗಿ ನಿರೂಪಿಸಿದ್ದಾರೆ. 'ಮಹಾಭಾರತ'ದಿಂದ ಮುಖ್ಯ ಕಥಾಂಶಗಳನ್ನು ಎತ್ತಿಕೊಂಡಿದ್ದಾರೆ. ಕುಮಾರವ್ಯಾಸ- ಕುಮಾರ ವಾಲ್ಮೀಕಿಗಳ ಪ್ರಭಾವ ಮೂಡಿದೆ. ಕುಮಾರವ್ಯಾಸನ ವರ್ಣನಾಮಿತಿ, ಕಲ್ಪನೆಯ ಬೆಡಗು, ಶೈಲಿಯ ಪ್ರಸನ್ನತೆ ಇಲ್ಲಿ ಕೆಲವಂಶದಲ್ಲಿ ಕಾಣಬರುತ್ತದೆ.

'ಮೋಹನ ತರಂಗಿಣಿ' ಕನಕದಾಸರ ಸಾಹಿತ್ಯಕೃತಿ. ಭಾರತ-ಭಾಗವತಗಳಲ್ಲಿ ಬಂದಿರುವ ಕಾಮದಹನ, ಉಷಾ-ಅನಿರುದ್ಧರ ಪರಿಣಯ, ಹರಿ-ಹರ ಸಮಾನತೆಯ ಸಂದೇಶ, ಕೃಷ್ಣ ಬಾಣಾಸುರ ಯುದ್ಧ ಈ ಕೃತಿಯಲ್ಲಿ ಬರುತ್ತದೆ. ಇದನ್ನು ಶ್ರೀ ಕೃಷ್ಣಚರಿತೆ ಎಂದು ಸಹ ಕರೆಯಲಾಗಿದೆ. 'ಶ್ರೀ ಕೃಷ್ಣದೇವರಾಯನ ಚರಿತೆ' ಎಂಬ ಅರ್ಥವೂ ಇದಕ್ಕಿರಬೇಕು. ಅನೇಕ ಸಮಕಾಲೀನ ವಿಷಯಗಳು ಈ ಕಾವ್ಯದಲ್ಲಿ ಬರುತ್ತವೆ.

ವಾದಿರಾಜರು, ಕ್ರಿ. ಶ. (1565) ಜಗನ್ನಾಥದಾಸರು, ಕ್ರಿ. ಶ. (1728-1809), ರಾಘವೇಂದ್ರ ತೀರ್ಥರು ಪ್ರಸನ್ನ ವೆಂಕಟದಾಸರು, ಕ್ರಿ. ಶ. (1680-1755) ಕಾಖಿಂಡಕಿ ಮಹೀಪತಿದಾಸರು, ಕ್ರಿ. ಶ. (1640-1710), ವಿಜಯದಾಸರು ಕ್ರಿ.ಶ. (1682-1755), ವ್ಯಾಸ ವಿಠಲ ಕ್ರಿ. ಶ. (1690) ಮೊದಲಾದ ಅನೇಕರು ದಾಸ ಪರಂಪರೆಯನ್ನು ಮುಂದುವರಿಸಿದ್ದಾರೆ. ಹೆಳವನಕಟ್ಟೆ ಗಿರಿಯಮ್ಮ 18ನೇ ಶತಮಾನದಲ್ಲಿ ಬರುವ ದಾಸಸಾಹಿತ್ಯಕ್ಕೆ ಸೇರಿದ ಮಹಿಳೆ. ಹೆಳವನಕಟ್ಟೆರಂಗ' ಎಂಬ ಅಂಕಿತದಲ್ಲಿ ಸಾಕಷ್ಟು ಕೀರ್ತನೆಗಳನ್ನು ರಚಿಸಿದ್ದಾಳೆ. ಮಧ್ವಾಚಾರ್ಯರ ದ್ವೈತಮತಕ್ಕೆ ಸಂಬಂಧಪಟ್ಟ ಗ್ರಂಥಗಳು, ಭಾಗವತ, ಮಹಾಭಾರತ, ರಾಮಾಯಣ, ವಿಷ್ಣುಪುರಾಣ, ಹರಿವಂಶ ಚರಿತೆ ಮೊದಲಾದ ವೈಷ್ಣವ ಗ್ರಂಥಗಳಿಗೆ ಭಾಷ್ಯ, ವ್ಯಾಖ್ಯೆ, ಟೀಕೆ, ಸರಳಾನುವಾದ, ಸಂಗ್ರಹಾನುವಾದ, ನೇರ ಅನುವಾದ, ರೂಪಾನುವಾದಗಳನ್ನು ದಾಸಸಾಹಿತ್ಯದಲ್ಲಿ ಕಾಣಬಹುದು. ಜನಸಾಮಾನ್ಯರು ಮೂಲವನ್ನು ಮರೆತರೂ ಅಥವಾ ಸಂಸ್ಕೃತ ಭಾಷೆ ಅಭ್ಯಾಸವಿಲ್ಲದ ಓದಲಾಗದಿದ್ದರೂ ಅವುಗಳ ಸಾರವನ್ನು ಹರಿದಾಸರು ತಮ್ಮ ಸಾಹಿತ್ಯದಲ್ಲಿ ಹಿಡಿದಿಟ್ಟಿದ್ದಾರೆ.

★ ★ ★

ಕುಮಾರವ್ಯಾಸ ಯುಗದಲ್ಲಿ 'ವೀರಶೈವ ಸಾಹಿತ್ಯ'ವೂ ಸರ್ವತೋಮುಖವಾಗಿ ಬೆಳೆದು ಉತ್ತಮ ಫಲಗಳನ್ನು ನೀಡಿದೆ. 12ನೇ ಶತಮಾನದ ಕಲ್ಯಾಣ ಕ್ರಾಂತಿ ಹಾಗೂ ವಚನಕಾರರ ಬದುಕು ಕಾವ್ಯದ ವಸ್ತುವಾಗಿದೆ. ಇದರ ಜೊತೆಗೆ ವೀರಶೈವ ಸಾಹಿತ್ಯ ನಿರ್ಮಾಣಕ್ಕೆ ಅಗಣಿತವಾದ ಪ್ರೋತ್ಸಾಹ ದೊರೆಯಿತು. ಪ್ರೌಢದೇವರಾಯನ ಕಾಲದಲ್ಲಿ ಈ ಸಮುದಾಯದಿಂದ ಪ್ರಮುಖ ಕವಿಗಳು ಬಂದರು. ಅನಂತರ ಕರ್ನಾಟಕವನ್ನಾಳಿದ ಕೆಳದಿ, ಮೈಸೂರು, ಚಿತ್ರದುರ್ಗ ಮೊದಲಾದ ಸಣ್ಣಪುಟ್ಟ ರಾಜಮನೆತನಗಳು ವೀರಶೈವ ಸಾಹಿತ್ಯಕ್ಕೆ ಗಣನೀಯವಾದ ಪ್ರೋತ್ಸಾಹಕೊಟ್ಟವು. ಪ್ರಾಚೀನ ವೀರಶೈವರ ಪುರಾತನ ನೂತನ ಪವಾಡ ಪುರುಷರು- ಇವರ ಜೀವನಗಳನ್ನು ಆಧಾರವಾಗಿಟ್ಟುಕೊಂಡು ಕೃತಿ ರಚಿಸುವುದೇ ಆ ಕಾಲದ ವೀರಶೈವ ಧರ್ಮದ ಕವಿಗಳ ಗುರಿಯಾಗಿತ್ತು.

12ನೇ ಶತಮಾನದ ವಚನಕಾರರು ತಮ್ಮ ಸಾಮಾಜಿಕ ಕೆಲಸ ಕಾರ್ಯಗಳಿಗೆ ಹಾಗೂ ಭಾವನೆಗಳ ಅಭಿವ್ಯಕ್ತಿಗೆ 'ವಚನ'ವನ್ನು ತಮ್ಮ ಮಾಧ್ಯಮವನ್ನಾಗಿ ಮಾಡಿಕೊಂಡರು. ಈ ಕಾಲದಲ್ಲಿ ಸ್ವತಂತ್ರವಾಗಿ ವಚನ ಬರೆಯುವುದರ ಜೊತೆಗೆ ಪ್ರಾಚೀನ ವಚನಗಳಿಗೆ ಟೀಕೆ ಬರೆದು ವೀರಶೈವ ಸಿದ್ಧಾಂತ ವಿವರಿಸುವ ಕ್ರಮವು ಮೊದಲಾಯಿತು. ಪ್ರೌಢದೇವರಾಯನ ಕಾಲದಲ್ಲಿ (ಕ್ರಿ. ಶ. 1400) ಮಹಾಲಿಂಗದೇವನು 'ಷಟ್ಸ್ಥಲ' ಸಿದ್ಧಾಂತದ ನೂರೊಂದು ನೆಲೆಗಳಲ್ಲಿ ವಚನಗಳನ್ನು ವಿಭಾಗಿಸಿ 'ಏಕೋತ್ತರ ಶತಸ್ಥಲ' ಎಂಬ ವಚನ ಸಂಕಲನವನ್ನು ರಚಿಸಿದನು.

ಜಕ್ಕಣಾರ್ಯ ತನ್ನ ಗುರು ಮಹಾಲಿಂಗನ 'ಏಕೋತ್ತರ ಶತಸ್ಥಲ'ವನ್ನು ಬರೆದಿದ್ದಾನೆ. ಅದೇ ರೀತಿ ಕಲ್ಲುಮಠದ ಪ್ರಭುದೇವ, ಸಂಪಾದನೆಯ ಚೆನ್ನಂಜೆದೇವ, ಸಿದ್ಧ ವೀರಣಾಚಾರ್ಯ, ಗೂಳೂರು ಸಿದ್ಧ ವೀರಣಾಚಾರ್ಯ ಪ್ರಮುಖರಾಗಿದ್ದಾರೆ. ವೀರಶೈವ ಸಿದ್ಧಾಂತದ ವ್ಯಾಖ್ಯಾನ ಸಂದರ್ಭದಲ್ಲಿ 'ಶೂನ್ಯ ಸಂಪಾದನೆ' ವಿಶಿಷ್ಟತೆ ಪಡೆದ ಗ್ರಂಥವಾಗಿದೆ. ಗೂಳೂರು ಸಿದ್ಧವೀರಣಾಚಾರ್ಯ ಮೊದಲಾದವರು ಇದನ್ನು ಸಂಗ್ರಹಿಸಿದ್ದಾರೆ. ಈ ಕಾಲದ ಬಹುತೇಕ

ವಚನಕಾರರು ಬಸವ, ಅಲ್ಲಮ ಹಾಗೂ ಅಕ್ಕಮಹಾದೇವಿಯರ ವಚನಗಳನ್ನು ಅನುವಾದಿಸಿರುವುದನ್ನು ಕಾಣಬಹುದು. ಉದಾಹರಣೆಗೆ ಎಡೆಯೂರು ಸಿದ್ಧಲಿಂಗೇಶ್ವರ ಯತಿಗಳ ವಚನ ''ಕರಣದ ಕತ್ತಲೆಯ ಸರಮಾಲದ ಬೆಳಗನುಟ್ಟು ಪರಿಹರಿಸಬೇಕು ನೋಡಿರೋ..........'' ಎಂಬ ವಚನ ಅಕ್ಕಮಹಾದೇವಿಯ ''ಕರಣದ ಕತ್ತಲೆಯ ಬೆಳಗನುಟ್ಟುಗಲಿದ'' ಎಂಬ ವಚನದ ಅನುವಾದದಂತಿದೆ.

ತೋಂಟದ ಸಿದ್ಧಲಿಂಗಯ್ಯನ ತರುವಾಯ ಅವನ ಶಿಷ್ಯಂದಿರಲ್ಲಿ ಒಬ್ಬನಾದ ಸ್ವತಂತ್ರ ಸಿದ್ಧಲಿಂಗೇಶ್ವರನು 400 ವಚನಗಳನ್ನು ಬರೆದಿದ್ದಾನೆ. ''ಹಾವಾಡಿಗ ಹಾವನಾಡಿಸುವಲ್ಲಿ ತನ್ನ ಕಾದುಕೊಂಡು ಹಾವನಾಡಿಸುವವನಂತೆ, ಆತ ಮಾತನಾಡಿದರೂ ತನ್ನ ಕಾದು ಆಡಬೇಕು'' ಎಂಬುದು ಅಕ್ಕಮಹಾದೇವಿಯ ಸುಪ್ರಸಿದ್ಧ ವಚನವನ್ನು ನೆನಪಿಗೆ ತರುತ್ತದೆ.

ಈ ಕಾಲದಲ್ಲಿ ವೀರಶೈವ ಪುರಾಣಗಳನ್ನು ವೇದಾಗಮೋಪನಿಷತ್‌ಗಳೊಡನೆ ಸಮನ್ವಯಗೊಳಿಸುವ ಕೆಲಸ ನಡೆದಿದೆ. ಮೊಗ್ಗೆಯ ಮಾಯಿದೇವನ 'ಶಿವಾನುಭವ ಸೂತ್ರ' ಸಂಸ್ಕೃತದಲ್ಲಿರುವ ಒಂದು ಪ್ರಮಾಣ ಗ್ರಂಥ. ಅದನ್ನು ಅನುಸರಿಸಿ ಕನ್ನಡದಲ್ಲಿ 'ಷಟ್‌ಸ್ಥಲ ಗದ್ಯ' ಹಾಗೂ 'ಶತಕ ತ್ರಯ'ಗಳೆಂಬ ವೀರಶೈವ ಶಾಸ್ತ್ರ ವಿಚಾರದ ಗ್ರಂಥಗಳನ್ನು ರಚಿಸಲಾಗಿದೆ.

ಕ್ರಿ. ಶ. 1410ರಲ್ಲಿದ್ದ ದೇವರಾಜ ಬುಕ್ಕರಾಯನ ಮಗ. ಈತನ 'ಅಮರ ಶತಕ'ವು ಸಂಸ್ಕೃತದ ಭಾಷಾಂತರ. ಪರಿವರ್ಧಿನಿ ಷಟ್ಪದಿಯಲ್ಲಿದೆ. ಈತನು ಕನ್ನಡದಲ್ಲಿ ಪ್ರಥಮ ಸಾಂಗತ್ಯ ಕಾವ್ಯ ರಚಿಸಿದನೆಂಬ ಕೀರ್ತಿಗೂ ಪಾತ್ರನಾಗಿದ್ದಾನೆ.

ವಿಜಯನಗರದ ಅರಸನಾದ ಪ್ರೌಢದೇವರಾಯನ ಮಹಾದಂಡನಾಯಕನಾಗಿ ಮಂತ್ರಿಯಾಗಿ ಆಪ್ತ ಸಚಿವನಾಗಿ ಅದ್ವಿತೀಯನಾದ ಅಧಿಕಾರ ಗೌರವ ಗಳಿಸಿದ್ದ ಲಕ್ಕಣ್ಣ ದಂಡೇಶ 'ಶಿವತತ್ವ ಚಿಂತಾಮಣಿ' ಎಂಬ ಕೃತಿ ರಚಿಸಿದ್ದಾನೆ. ಇವನ ಗುರಿ ಲಿಂಗಾಂಗ ಸಾಮರಸ್ಯ ರೂಪನಾದ ಶಿವನ ಪಂಚವಿಂಶತಿ ಲೀಲೆಗಳು, ಪುರಾತನ ಮತ್ತು ನೂತನ ಶರಣರ ಕತೆಗಳು, ಪಂಚಾಕ್ಷರಿ ವಿಭೂತಿ ರುದ್ರಾಕ್ಷಿಗಳ ಮಹಿಮೆ, ದೀಕ್ಷಾಕ್ರಮ - ಇತ್ಯಾದಿ. ಈ ಗ್ರಂಥ ವೀರಶೈವ ಧರ್ಮದ ಒಂದು ಕೈಪಿಡಿಯಂತಿದೆ. ಇದಕ್ಕೆ ವೀರಶೈವ ಸಾಹಿತ್ಯದ ಅನೇಕ ಕೃತಿಗಳು ಆಕರ ಗ್ರಂಥಗಳೆನಿಸಿವೆ.

ಈ ಯುಗದ ಪ್ರಮುಖ ಕವಿ ಕ್ರಿ. ಶ. 1430ರಲ್ಲಿದ್ದ ಚಾಮದಾಸರ. 'ಪ್ರಭುಲಿಂಗ ಲೀಲೆ' ಎಂಬ ಅಲ್ಲಮಪ್ರಭುವಿನ ಜೀವನ ಚರಿತ್ರೆಯನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದಾನೆ. ಅಲ್ಲಮ ಪ್ರಭುವಿನ ಚರಿತ್ರೆಯನ್ನು ಮೊಟ್ಟಮೊದಲಿಗೆ ಬರೆದವನು ಹರಿಹರ. ಚಾಮರಸ ಹರಿಹರನಿಂದ ಕಥಾವಸ್ತು ಪಡೆದಿದ್ದರೂ ತನ್ನದೇ ಆದ ವಿಶಿಷ್ಟತೆಯನ್ನು ಈ ಕೃತಿಯಲ್ಲಿ ತೋರಿಸಿದ್ದಾನೆ. ಅಲ್ಲಮ ಪ್ರಭುವಿನ ವ್ಯಕ್ತಿ ಚಿತ್ರಣವಲ್ಲಿಯೇ ತನ್ನೆಲ್ಲಾ ಶಕ್ತಿಯನ್ನು ಚಾಮರಸ ಕೇಂದ್ರೀಕರಿಸಿದ್ದಾನೆ. ಪುರಾಣ ಹಾಗೂ ಐತಿಹಾಸಿಕ ಅಂಶಗಳನ್ನು ಸಮೀಕರಿಸಿದ್ದಾನೆ. ಉಜ್ವಲ ವ್ಯಕ್ತಿಗಳ ಚರಿತ್ರೆಯನ್ನು ಅವರ ವ್ಯಕ್ತಿತ್ವಕ್ಕೆ ಕುಂದುಬಾರದ ರೀತಿಯಲ್ಲಿ ಬರೆಯಬೇಕೆನ್ನುವವರಿಗೆ ಚಾಮರಸನ ಮಾರ್ಗವು ಆದರ್ಶವಾಗಿದೆ ಎಂಬ ಪ್ರೊ. ಎಸ್. ಎಸ್. ಬಸವನಾಳರ ಮಾತುಗಳು ಅರ್ಥಪೂರ್ಣವಾಗಿದೆ.[72]

ವಿರೂಪಾಕ್ಷ ಪಂಡಿತನು (ಕ್ರಿ. ಶ. 1584) 'ಚನ್ನಬಸವ ಪುರಾಣ' ಎಂಬ ಕಾವ್ಯ ರಚಿಸಿದ್ದಾನೆ. ಚನ್ನಬಸವಣ್ಣನ ಜೀವನ ವೃತ್ತಾಂತವಷ್ಟೇ ಅಲ್ಲದೇ ಶಿವಲೀಲೆ, ಇತರ ಶರಣರ ಚರಿತೆ, ವೀರಶೈವ ಸಿದ್ಧಾಂತ ಸಂಪ್ರದಾಯಗಳನ್ನು

ಒಳಗೊಂಡಂತೆ ವೀರಶೈವ ಮತದ ಕೈಪಿಡಿಯಾಗಿದೆ. ಈತನು ತನಗಿಂತ ಮೊದಲಿನ ವೀರಶೈವ ಕವಿಗಳಿಗೆ ಋಣಿಯಾಗಿದ್ದಾನೆ. ಲಕ್ಷ್ಮೀಶನಿಂದಲೂ ನೆರವು ಪಡೆದಿದ್ದಾನೆ.

ಕ್ರಿ. ಶ. 1655ರಲ್ಲಿದ್ದ ಷಡಕ್ಷರ ಕವಿ ವೀರಶೈವ ಕವಿಗಳಲ್ಲಿ ಅತ್ಯಂತ ಪ್ರಮುಖನಾದ ಕವಿ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ತಿರುಮಲಾರ್ಯ, ಚಿಕ್ಕುಪಧ್ಯಾಯರಂತೆ ಷಡಕ್ಷರ ದೇವ ಕೂಡ ಚಂಪೂಮಾರ್ಗವನ್ನೇ ಆಶ್ರಯಿಸಿದ್ದಾನೆ. ಅವನ ಕನ್ನಡ ಗ್ರಂಥಗಳೆಂದರೆ 'ರಾಜಶೇಖರ ವಿಳಾಸ' 'ಶಬರ ಶಂಕರ ವಿಲಾಸ' 'ವೃಷಭೇಂದ್ರ ವಿಜಯ. ರಾಜಶೇಖರ ವಿಲಾಸ' ಕತೆಯು ಪಂಚಾಕ್ಷರಿ ಮಹಿಮೆಯ ಪ್ರಚಾರಕ್ಕಾಗಿ ತಮಿಳುನಾಡಿನಲ್ಲಿ ಬಹಳ ಹಿಂದಿನಿಂದ ಪ್ರಸಿದ್ಧವಾಗಿರುವ ಸತ್ಯೇಂದ್ರ ಚೋಳನ ಕಥೆಯೇ ಕನ್ನಡ ಕಾವ್ಯಗಳಿಗೆ ತಲಕಾವೇರಿ. ಗುಬ್ಬಿಯ ಮಲ್ಲಣಾರ್ಯ (1530) ವರ್ಣನಾತ್ಮಕವಾಗಿ ರಚಿಸಿದ 'ಭಾವ ಚಿಂತಾರತ್ನ' ಎಂಬ ಕಾವ್ಯವೇ ರಾಜಶೇಖರ ವಿಳಾಸ ಕಾವ್ಯಕ್ಕೆ ಮೂಲ. ಪಿಳ್ಳನೈನಾರರು ತಮಿಳಿನಲ್ಲಿ ಬರೆದ ಕತೆಯನ್ನು ಗುಬ್ಬಿ ಮಲ್ಲಿಣಾರ್ಯನು ಕನ್ನಡದಲ್ಲಿ ಹೇಳಿದ್ದನು. ತಮಿಳಿನ ಮೂಲದಿಂದ ಹೆಚ್ಚು ಮಾರ್ಪಾಟು ಮಾಡದ ಮಕ್ಕಿಕಾಮಕ್ಕಿಯಾಗಿ ಇರಿಸಿ ಮಲ್ಲಣಾರ್ಯ ಭಾವಚಿಂತಾರತ್ನವನ್ನು ರಚಿಸಿದ್ದಾನೆ. ಷಡಕ್ಷರ ದೇವನಿಗೆ ಭಾವಚಿಂತಾರತ್ನ ಮೂಲವಾದರೂ ಕಥೆಯ ಜಾಡು ಅದೇ ಆಗಿದೆ. ಆದರೂ - ತನ್ನಾಪ್ರತಿಭೆಗೆ ತನ್ನ ದರ್ಶಕ್ಕೆ ಹೊಂದುವಂತೆ ಅಲ್ಲಲ್ಲಿ ಅನೇಕ ಮಾರ್ಪಾಟುಗಳನ್ನು ಮಾಡಿಕೊಂಡು ತನ್ನ ಕಲ್ಪನಾ ವಿಲಾಸವನ್ನು ಮೆರೆದು ಇದೊಂದು ನವೀನ ಕೃತಿ ಎನ್ನುವಂತೆ ಕಾವ್ಯರಚನೆ ಮಾಡಿದ್ದಾನೆ.[73]

'ವೃಷಭೇಂದ್ರ ವಿಜಯ' ಷಡಕ್ಷರ ದೇವನ ಎರಡನೆಯ ಗ್ರಂಥ. ಇದೊಂದು ಭಕ್ತಿಪೂರ್ಣ ಕಾವ್ಯ. ಭೀಮ ಕವಿಯ 'ಬಸವ ಪುರಾಣ'ವನ್ನು ಈತ ತನ್ನ ಕಾವ್ಯಕ್ಕೆ ಆಕರ ಗ್ರಂಥವನ್ನಾಗಿ ಬಳಸಿಕೊಂಡಿದ್ದಾನೆ. ಹರಿಹರ ಕವಿಯ 'ಬಸವರಾಜ ದೇವರಗಳೆ'ಯನ್ನು ಈತ ಬಳಸಿಕೊಂಡಿದ್ದರೂ, ಅದು ಪುರಾಣವಲ್ಲವೆಂಬ ಭಾವನೆಯಿಂದ ಅದನ್ನು ಹೆಸರಿಸಿಲ್ಲ. ಬಸವಣ್ಣನವರ ಜೊತೆಗೆ ಅನೇಕ ಬಸವಣ್ಣನವರ ಸಮಕಾಲೀನರು ಹಾಗೂ ಪುರಾತನರ ಜೀವನ ಚರಿತ್ರೆ ಈ ಕಾವ್ಯದಲ್ಲಿ ಬರುತ್ತದೆ.

'ಶಬರಶಂಕರ ವಿಲಾಸಂ' ಶಿವನ ಜೀವನ ಚರಿತ್ರೆ ಲೀಲೆಗಳಲ್ಲೊಂದಾದ ಕಿರಾತ-ರುದ್ರಲೀಲೆಯ ವರ್ಣನೆಗಾಗಿ ರಚಿತವಾದ ಗ್ರಂಥ. ಇದು ಷಡಕ್ಷರ ದೇವನ ಮೂರನೆಯ ಕೃತಿ. ಈ ಕಾವ್ಯದ ವಸ್ತು ಸುಪ್ರಸಿದ್ಧವಾದುದು. ವ್ಯಾಸಭಾರತದಲ್ಲೇ ಈ ಕತೆ ಬರುತ್ತದೆ. ಸಂಸ್ಕೃತದಲ್ಲಿ ಭಾರವಿ, ಕನ್ನಡದಲ್ಲಿ ಪಂಪ, ಕುಮಾರವ್ಯಾಸ, ವಿರೂಪಾಕ್ಷ ಪಂಡಿತ, ಮೊದಲಾದ ಕವಿಗಳು ಈ ವಸ್ತುವನ್ನು ತಮ್ಮ ಕಾವ್ಯದಲ್ಲಿ ಬಳಸಿಕೊಂಡಿದ್ದಾರೆ. ಅರ್ಜುನ ತಪಸ್ಸು ಮಾಡಿ ಕಿರಾತಕನ ವೇಷದ ಈಶ್ವರನಿಂದ ಪಾಶುಪತಾಸ್ತ್ರ ಪಡೆದ ಕತೆಯೇ ಈ ಕಥೆಯ ವಸ್ತು, "ಶಬರಶಂಕರ ವಿಳಾಸಕ್ಕೂ ಕುಮಾರವ್ಯಾಸ ಭಾರತದ ಕಿರಾತ ಪ್ರಸಂಗಕ್ಕೂ ವಿಷಯ ವಿವರಣೆಯಲ್ಲಿ, ಸಂಗತಿಗಳ ಅನುಪೂರ್ವಿಯಲ್ಲಿ, ಅಷ್ಟೆ ಅಲ್ಲದೆ ಸಂಭಾಷಣೆಯ ತೆರದಲ್ಲಿಯೂ ಹಲಕೆಲವು ಹೋಲಿಕೆಗಳು ದೃಗ್ಗೋಚರವಾಗುವುದನ್ನು" ಇಲ್ಲಿ ಕಾಣಬಹುದು. ಕುಮಾರವ್ಯಾಸನ ಭಾವಗಳ ಇಲ್ಲವೆ ಶೈಲಿಗಳ ಮಕ್ಕಿಕಾಮಕ್ಕಿ ತೆರೆದ ಶುಷ್ಕಾನುಕರಣವಲ್ಲ- ವರ್ಣಕವನ್ನು ವಸ್ತುಕಕ್ಕೆ ತಿರುಗಿಸುವಲ್ಲಿ ಕಂಡುಬರುವುದು ಆತನ ಪರುಷ

ಹಸ್ತದ ಪ್ರಭಾವ.[74] ಷಡಕ್ಷರ ದೇವನ ಕಾವ್ಯದ ಮೇಲಿರುವ ಪ್ರಭಾವವನ್ನು ವಿಮರ್ಶಕರು ಹೀಗೆ ಗುರುತಿಸಿದ್ದಾರೆ. ವ್ಯಾಸ. ವಾಲ್ಮೀಕಿ, ಭಾಸ ಕಾಳಿದಾಸ, ಭಾರವಿ ಮೊದಲಾದ ಕನ್ನಡ ಕವಿಕುಲಶ್ರೇಷ್ಠರ ಕೃತಿಗಳ ಗಾಢ ಪರಿಚಯದಿಂದ ಲಬ್ಧವಾದ ಪಾಂಡಿತ್ಯದಿಂದ ಪ್ರತಿಭೆ ಕಲ್ಪನಾಚಾತುರ್ಯಗಳು ಸಂಸ್ಕಾರಗೊಂಡು ವಾಕ್ಶಕ್ತಿ ಹೊಸ ಮೆರಗು ಪಡೆದಿದೆ, ಅವರ ಕಾವ್ಯಗಳಲ್ಲಿ ಎನ್ನಬಹುದು.

ವಚನ ಹಾಗೂ ದಾಸ ಸಾಹಿತ್ಯಗಳಿಂದ ಪ್ರೇರಣೆ ಪಡೆದವನು ಕ್ರಿ. ಶ. 1700ರಲ್ಲಿದ್ದ ಸರ್ವಜ್ಞ ಕವಿ. ವ್ಯವಹಾರ ಜ್ಞಾನ ಹಾಗೂ ವಿವೇಕದ ಮೂರ್ತಿ ಆತ. ಸರ್ವಜ್ಞನ ತ್ರಿಪದಿಯೇ ಕಾವ್ಯ. ಅನುಭವ, ನೀತಿ. ತತ್ತ್ವ, ಭಕ್ತಿ ಎಲ್ಲವೂ ಇರುವ ಜೀವನದ ಸತ್ಯವೇ ಅವನ ಕಾವ್ಯವಾಗಿದೆ. ಸರ್ವಜ್ಞನ ವಚನಗಳು ಜನತೆಯ ಜ್ಞಾನಕೋಶ. ಸ್ಫೂರ್ತಿಯ ವಾಕ್ಯಗಳಾಗಿದೆ. ಈತನು ಎಲ್ಲಾ ಹಿರಿಯ ಕವಿಗಳಿಂದಲೂ ಪ್ರೇರಣೆ ಪಡೆದಿದ್ದಾನೆ.

ಕುಮಾರವ್ಯಾಸ ಯುಗದ ಜೈನ ಕವಿಗಳು ಪರಿಸ್ಥಿತಿಗೆ ಅನುಗುಣವಾಗಿ ಹೊಸ ಹೊಸ ವಿಷಯಗಳನ್ನು ಆರಿಸಿಕೊಂಡಿದ್ದಾರೆ. ತೀರ್ಥಂಕರ ಚರಿತೆ, ತತ್ತ್ವವಿವರಣೆಯಂಥ ಹಳೆಯ ವಿಷಯಗಳನ್ನು ಎತ್ತಿಕೊಂಡಾಗಲೂ ಹೊಸ ಛಂದಸ್ಸು ಭಾಷಾ ಶೈಲಿಗೆ ಶರಣು ಹೋಗಿದ್ದಾರೆ. ನೀತಿ ಬೋಧಕವಾದ ಕತೆಗಳನ್ನು ಹೇಳುವಲ್ಲಿ ಅವರು ಹೊಸದಾಗಿ ತುಳಿದಿದ್ದಾರೆ.

ಕ್ರಿ. ಶ. 1425ರಲ್ಲಿದ್ದ 'ಭಾಸ್ಕರ' ಎಂಬ ಜೈನಕವಿ 'ಜೀವಂಧರ ಚರಿತೆ' ಎಂಬ ಕೃತಿ ರಚಿಸಿದ್ದಾನೆ. ಇದು ಭಾಮಿನಿಷಟ್ಪದಿಯಲ್ಲಿದೆ. ವಾರೀಭ ಸಿಂಹಸೂರಿ ಸಂಸ್ಕೃತದಲ್ಲಿ ಬರೆದುದನ್ನು ಈತ ಕನ್ನಡಿಸಿದ್ದಾನೆ. ಭಾಸ್ಕರ ಮೂಲವನ್ನು ನಿಷ್ಠೆಯಿಂದ ಅನುಸರಿಸಿದ್ದಾನೆ. ಮೂಲದಲ್ಲಿ ಕಾಣಲು ಅವಶ್ಯಕವಾದ ಒಂದು ಮಹತ್ವದ ವ್ಯತ್ಯಾಸವೆಂದರೆ ಜಿನಸ್ತುತಿಯ ಪದ್ಯಗಳು ಬಂದಲ್ಲಿ ಉಪನಿಷತ್ತಿಗೂ ಭಕ್ತಿಪಂಥಕ್ಕೂ ಸರಿಹೋಗುವ ವಿಚಾರಗಳನ್ನು, ವಿಶೇಷಣಗಳನ್ನು ಅವನು ಪ್ರಯೋಗಿಸಿದ್ದಾನೆ. ಭಕ್ತಿಪಂಥವನ್ನು ಜೈನ ಮತದಲ್ಲೂ ಹರಡಬೇಕೆಂಬುದು ಭಾಸ್ಕರನ ಉದ್ದೇಶವಾಗಿರಬೇಕು. ಭಾಸ್ಕರ ಪೂರ್ವಕವಿಗಳ ಪ್ರಭಾವಕ್ಕೆ ಬೇಕಾಗಿಯೇ ಒಳಪಟ್ಟಿದ್ದಾನೆ. ಅವರ ಭಾವಗಳನ್ನು ಇದ್ದಕ್ಕಿದ್ದ ಹಾಗೆ ಅಂಗೀಕರಿಸಿದ್ದಾನೆ. ಪದ್ಯಗಳನ್ನು ಎತ್ತಿಕೊಂಡಿದ್ದಾನೆ. ತನ್ನ ಬಗೆಯಲ್ಲಿ ಅನುವಾದಿಸಿದ್ದಾನೆ. ಕಾಳಿದಾಸ, ನಾಗಚಂದ್ರ, ರಾಘವಾಂಕ, ವಿಶೇಷವಾಗಿ ಕುಮಾರವ್ಯಾಸ ಇವರ ಪ್ರಭಾವಗಳು ಅವನ ಗ್ರಂಥದಲ್ಲಿ ಸ್ಪಷ್ಟವಾಗಿ ಮೂಡಿವೆ.[75]

ಕ್ರಿ. ಶ. 1422ರಲ್ಲಿದ್ದ ಶಿಶುಮಾಯಣನೆಂಬುವನು 'ಅಂಜನಾಚರಿತ್ರೆ' ಹಾಗೂ 'ತ್ರಿಪುರ ದಹನ ಸಾಂಗತ್ಯ' ಎಂಬ ಕೃತಿಗಳನ್ನು ರಚಿಸಿದ್ದಾನೆ. 'ಅಂಜನಾಚರಿತ್ರೆ' ರವಿಶೇಣನು ಸಂಸ್ಕೃತದಲ್ಲಿ ಬರೆದಿರುವ ಜೈನ ರಾಮಾಯಣದಿಂದ ಅಂಜನೆ ಮತ್ತು ಅವಳ ಮಗ ಆಂಜನೇಯರ ಕಥೆಯನ್ನು ಎತ್ತಿಕೊಂಡು ಆರು ಸಹಸ್ರ ಪದ್ಯಗಳಷ್ಟು ವಿಸ್ತರಿಸಿರುವ ಬೃಹತ್ ಗ್ರಂಥ ರಚಿಸಿದ್ದಾನೆ. ಇವನ ಎರಡೂ ಗ್ರಂಥಗಳ ಶೈಲಿ ತುಂಬಾ ಸರಳವಾಗಿದೆ.

ಕ್ರಿ. ಶ. 1508ರಲ್ಲಿದ್ದ ಮೂರನೆ ಮಂಗರಸ ಕಲ್ಲಹಳ್ಳಿಯ ಅರಸ. ಅವನು ಬರೆದ ಗ್ರಂಥಗಳೆಂದರೆ 'ನೇಮಿಜಿನೇಶ ಸಂಗತಿ', 'ಜಯನೃಪಕಾವ್ಯ', 'ಸಮ್ಯುಕ್ತ ಕೌಮುದಿ', 'ಪ್ರಭಂಜನ ಚರಿತೆ'. 'ಸೂಪಶಾಸ್ತ್ರ'. 'ಶ್ರೀಪಾಲ ಚರಿತೆ'.

‘ನೇಮಿಜಿನೇಶ ಚರಿತೆ’ ನೇಮಿ ತೀರ್ಥಂಕರನ ಚರಿತೆ. ಇದರ ಜೊತೆಗೆ ಹರಿವಂಶ ಕುರುವಂಶಗಳ ಕತೆ ಇಲ್ಲಿದೆ. ನೇಮಿಚಂದ್ರನಂತೆ ಮಂಗರಸನು ಕಡೆಯದಾಗಿ ‘ಚಾವುಂಡರಾಯ ಪುರಾಣ’ವನ್ನು ಆಶ್ರಯಿಸಿದ್ದಾನೆ. ನೇಮಿಚಂದ್ರನ ಛಾಯೆಯೂ ಇಲ್ಲಿ ಕಾಣಬರುತ್ತದೆ. ಇವುಗಳ ಜೊತೆಗೆ ಪಂಪ, ಜನ್ನ, ಕುಮಾರವ್ಯಾಸ ಇವರ ಪ್ರಭಾವವನ್ನು ಗುರುತಿಸಬಹುದು. ಇವರ ‘ನೇಮಿಜಿನೇಶ ಚರಿತೆ’ ಯೋಗಭೋಗಗಳ ಸಮತೂಕ, ಮೃದು ಹಾಸ್ಯ ಮತ್ತು ವಿಶಾಲ ಜೀವನ ದೃಷ್ಟಿಯನ್ನು ನೋಡಿದರೆ ಮುಂದೆ ಬರಲಿರುವ ರತ್ನಾಕರವರ್ಣಿಯ ಭರತೇಶ ವೈಭವಕ್ಕೆ ಇದು ಪೂರ್ವ ಸೂಚನೆಯಂತಾಗಿದೆ. ಜಯನೃಪ ಕಾವ್ಯ, ಪ್ರಭಂಜನ ಚರಿತೆ, ಶ್ರೀಪಾಲ ಚರಿತೆ ಜೈನ ಕಾವ್ಯಗಳ ಪ್ರೇರಣೆ ಪಡೆದ ಕೃತಿಗಳಾಗಿವೆ.

ಪಾಕಶಾಸ್ತ್ರವನ್ನು ಕುರಿತು ದೇಸೀಯ ಛಂದಸ್ಸಿನಲ್ಲಿ ಬರೆದ ಮೊದಲನೆಯ ಗ್ರಂಥವಾದ ‘ಸೂಪಶಾಸ್ತ್ರ’ ಸಂಸ್ಕೃತ ಗ್ರಂಥದ ಅನುವಾದವಾಗಿದೆ ಎಂದು ತಿಳಿಯುತ್ತದೆ. ಅಂದರೆ ನಮ್ಮ ಕವಿಗಳು ಅಡುಗೆಯಂತಹ ವಿಚಾರಗಳನ್ನು ಬರೆಯುವಾಗಲೂ ಸಹ ಸಂಸ್ಕೃತದ ಮೂಲಗ್ರಂಥವನ್ನೇ ಆಧಾರವಾಗಿಟ್ಟುಕೊಂಡಿರುತ್ತಿದ್ದರೆಂಬುದು ದಾಖಲಾರ್ಹವಾದ ವಿಚಾರ.

ಈ ಯುಗದ ಪ್ರಮುಖಕವಿ ರತ್ನಾಕರವರ್ಣಿ. ಕನ್ನಡದ ಐಶ್ವರ್ಯವನ್ನು ಹೆಚ್ಚಿಸಿದ ಮಹಾಕವಿಗಳಲ್ಲಿ ಒಬ್ಬನು. ‘ಭರತೇಶವೈಭವ’ ‘ಅಪರಾಜಿತೇಶ್ವರ ಶತಕ’ ‘ತ್ರಿಲೋಕ ಶತಕ’ ‘ರತ್ನಾಕರಾಧೀಶ್ವರ ಶತಕ’ ಎಂಬ ಗ್ರಂಥಗಳನ್ನು ರತ್ನಾಕರ ವರ್ಣಿ ರಚಿಸಿದ್ದಾನೆ.

ರತ್ನಾಕರವರ್ಣಿಯ ‘ಭರತೇಶ ವೈಭವ’ ಸುಮಾರು ಹತ್ತುಸಾವಿರ ಪದ್ಯಗಳನ್ನೊಳಗೊಂಡ ಕಾವ್ಯ. ಈ ಕಾವ್ಯದ ವಸ್ತು ಜಿನಸೇನ ಮುನಿಯ ಸಂಸ್ಕೃತದ ‘ಪೂರ್ವ ಪುರಾಣ’ದಲ್ಲಿಯೂ, ಆತನನ್ನು ಅನುಸರಿಸಿ ಆದಿಕವಿ ಪಂಪನು ಕನ್ನಡದಲ್ಲಿ ‘ಆದಿಪುರಾಣ’ದಲ್ಲಿಯೂ ಇದೆ. ಜೈನ ಪುರಾಣಾಂತರ್ಗತವಾದ ಕಥೆಯ ಮೂಲರೇಖೆಗಳನ್ನು ರತ್ನಾಕರನು ತನ್ನ ಕಾವ್ಯದಲ್ಲಿ ಬಳಸಿಕೊಂಡಿರುವನಾದರೂ ಅವುಗಳಲ್ಲಿ ಅಲ್ಲಲ್ಲಿಯೇ ಕೆಲವು ವ್ಯತ್ಯಾಸಗಳನ್ನು ಮಾಡಿದ್ದಾನೆ. ಮೂಲಕಥೆ ಆಶಯಕ್ಕೆ ಭಂಗಬಾರದಂತೆ ಕವಿಯು ಹೊಸದಾಗಿ ಅನೇಕ ಅಂಶಗಳನ್ನು ಸೇರಿಸಿದ್ದಾನೆ. ಭರತೇಶ ವೈಭವ ತನ್ನ ಕಥಾನಾಯಕನಿಗೆ ಹಿರಿದಾದ ಸ್ಥಾನ ಕೊಡಲು ಕವಿ ಪ್ರಯತ್ನಿಸಿದ್ದಾನೆ. ಪೂರ್ವ ಕಾವ್ಯಗಳಲ್ಲಿ ಬಾಹುಬಲಿಯ ತ್ಯಾಗಕ್ಕೆ ಹಿರಿದಾದ ಸ್ಥಾನವಿತ್ತು. ಆದರೆ ರತ್ನಾಕರವರ್ಣಿ ಭರತೇಶನು ಶಸ್ತ್ರಾಭ್ಯಾಸದಿಂದ ತನ್ನ ಆತ್ಮೋನ್ನತಿಯನ್ನು ಸಾಧಿಸುವ ಚಿತ್ರಣವಿದೆ.

ಅನುವಾದದಲ್ಲಿ ಯಾರೂ ವಹಿಸದ ಸ್ವಾತಂತ್ರ್ಯವನ್ನು ರತ್ನಾಕರವರ್ಣಿ ವಹಿಸಿದ್ದಾನೆ. ಜೈನಪುರಾಣಗಳಲ್ಲಿ ಜಿನಸೇನ, ಪಂಪಾದ್ಯರ ಸಂಸ್ಕೃತ ಕನ್ನಡ ಕೃತಿಗಳಲ್ಲಿ ಪರಂಪರಾಗತವಾಗಿ ಬಂದಿದ್ದ ಭರತ ಚಕ್ರವರ್ತಿಯ ಕಥೆಯನ್ನು ಭರತ-ಬಾಹುಬಲಿ ವ್ಯಾಯೋಗ ಮೊದಲಾದ ಪ್ರಸಂಗಗಳಲ್ಲಿ ಗಮನಾರ್ಹವಾಗಿ ವ್ಯತ್ಯಾಸ ಮಾಡಿಕೊಂಡಿದ್ದು, ಕಥೆಗಳಲ್ಲಿ ಭೋಗ ನಿರಸನವನ್ನು ವೈರಾಗ್ಯ ಪ್ರತಿಪಾದನೆಯನ್ನು ಮಾಡದೆ, ಭೋಗವನ್ನು ವಿಶೇಷವಾಗಿ ಪುರಸ್ಕರಿಸಿ, ಭೋಗ-ಯೋಗಗಳ ಸಮನ್ವಯವೆಂಬ ಜೈನೇತರವಾದ ಹೊಸ ದೃಷ್ಟಿಯನ್ನು ಕಾವ್ಯಭಿತ್ತಿಯಾಗಿಟ್ಟುಕೊಂಡಿದ್ದಾನೆ[76] ಎಂಬ ವಿಮರ್ಶಕರ ಮಾತು ಮನನೀಯವಾಗಿದೆ.

★ ★ ★

ಮೈಸೂರು ಆಳಿದ ಒಡೆಯರ ಸಂತತಿ ವಿಯನಗರದಸರ ಪರಂಪರೆಯನ್ನು ಮುಂದುವರೆಸಿತು. ಈ ಕಾಲದಲ್ಲಿ ಲೌಕಿಕ ಕಾವ್ಯ ಪರಂಪರೆ, ಚಾರಿತ್ರಿಕ ವಸ್ತುಗಳ ಕಾವ್ಯ ಬೆಳಕಿಗೆ ಬಂದಿದ್ದುದು ಉಲ್ಲೇಖಾರ್ಹವಾದ ವಿಚಾರ. ಶ್ರೀ ವೈಷ್ಣವ ಸಂವಾದ, ತಾತ್ವಿಕ ಹಾಗೂ ಭಕ್ತಿ ಪುರಾಣಗಳ ಸಾಹಿತ್ಯ ಈ ಕಾಲದಲ್ಲಿ ನಿರ್ಮಾಣವಾಯಿತು.

ಚಿಕ್ಕದೇವರಾಯ, ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ಶೃಂಗಾರಮ್ಮ, ಸಂಚಿ ಹೊನ್ನಮ್ಮ, ವೇಣುಗೋಪಾಲ ವರಪ್ರಸಾದ, ತಿಮ್ಮಕವಿ,  ಮಲ್ಲಿಕಾರ್ಜುನ,  ಚಿದಾನಂದ ಕವಿ, ಮಲ್ಲರಸ ಮುಂತಾದವರು ಈ ಕಾಲದಲ್ಲಿ ಕಾವ್ಯ ರಚಿಸಿದ್ದಾರೆ.

ಈ ಕಾಲದ ಪ್ರಮುಖ ಕವಿ ತಿರುಮಲಾರ್ಯ ಮೈಸೂರು ಒಡೆಯರ್ ಸಂತತಿಯ ಪ್ರಸಿದ್ಧವಾದ ದೊರೆ ಚಿಕ್ಕದೇವರಾಜ ಒಡೆಯರರ ಆಪ್ತ ಸ್ನೇಹಿತ, ಸಹಪಾಠಿ ಹಾಗೂ ಮಂತ್ರಿ. ''ಅಪ್ರತಿಮ ವೀರ ಚರಿತ'' ''ಚಿಕ್ಕದೇವರಾಜ ವಿಜಯ'' ''ಚಿಕ್ಕದೇವರಾಯ ವಂಶಾವಳಿ'' ''ಚಿಕ್ಕದೇವರಾಯ ಶತಕ'' ಮೊದಲಾದ ಕಾವ್ಯಗಳನ್ನು ರಚಿಸಿದ್ದಾನೆ.

'ಅಪ್ರತಿಮ ವೀರಚರಿತೆ' ಗ್ರಂಥ 'ಕುವಲಯಾನಂದ'ವನ್ನು ಅನುಸರಿಸಿ ಬರೆದ ಅರ್ವಾಚೀನ ಅಲಂಕಾರ ಗ್ರಂಥ ಅಲಂಕಾರ ಶಾಸ್ತ್ರ ದೃಷ್ಟಿಯಿಂದ ಮಮ್ಮಟ, ವಾಮನ, ಕುವಲಯಾನಂದಲಂಕಾರ ಅನುಕರಣೆಯನ್ನು ಇಲ್ಲಿ ಕಾಣಬಹುದು.

'ಚಿಕ್ಕದೇವರಾಜ ವಂಶಾವಳಿ' ಮೈಸೂರು ರಾಜವಂಶದ ಪ್ರಸಿದ್ಧರಾಜರ ಚರಿತ್ರೆ. 'ಚಿಕ್ಕದೇವರಾಜ ವಿಜಯ'ಎಂಬ ಮತ್ತೊಂದು ಗ್ರಂಥವೂ ಮೈಸೂರು ಸಂಸ್ಥಾನದ ಇತಿಹಾಸ ತಿಳಿಸುತ್ತದೆ. ಚಿಕ್ಕದೇವರಾಜ ವಿಜಯ ಮತ್ತು ಚಿಕ್ಕದೇವರಾಜ ವಂಶಾವಳಿಗಳಲ್ಲಿ ಹೇಳಿರುವ ವಿಚಾರಗಳು ಶಾಸನಗಳಿಗೆ ಅನುಗುಣವಾಗಿದ್ದು, ಮೇಲಿನ ನಾಲ್ಕು ಗ್ರಂಥಗಳಲ್ಲಿ ಬಂದಿರುವ ಸಂಶಯಗಳನ್ನೆಲ್ಲಾ ಪರಿಹರಿಸಿ ವಸ್ತುಸ್ಥಿತಿಗೆ ಅತ್ಯಂತ ಸಮೀಪವಾಗಿದ್ದು ಯಥಾರ್ಥವಾದ ಮೈಸೂರು ಅರಸರ ಇತಿಹಾಸವನ್ನು ನಿರೂಪಿಸುತ್ತದೆ.[77]

ತಿರುಮಲಾರ್ಯನ 'ಗೀತಗೋಪಾಲ' ಕೃತಿಗೆ ಜಯದೇವ ಕವಿಯ 'ಗೀತ ಗೋವಿಂದ' ಪ್ರೇರಕಶಕ್ತಿಯಂತಿದೆ. ಪರಸ್ಪರ ನಾಮ, ವಸ್ತು, ರಚನೆಗಳಲ್ಲಿ ಸಾಮ್ಯವಿದೆ. ಇಬ್ಬರ ಕಾವ್ಯದಲ್ಲೂ ಕೃಷ್ಣ ಅಥವಾ ಗೋಪಾಲನೇ ನಾಯಕ. ಶೃಂಗಾರರಸಕ್ಕೆ ಪ್ರಾಧಾನ್ಯ. ಸಂಸ್ಕೃತದಲ್ಲಿ 'ಅಷ್ಟಪದಿ' ಎಂಬ ಛಂದಸ್ಸು ಉಪಯೋಗಿಸಿದಂತೆ ಕನ್ನಡದಲ್ಲಿ 'ಸಪ್ತಪದಿ' ಎಂಬ ನೂತನ ಛಂದಸ್ಸು ಬಳಕೆಯಾಗಿದೆ.

'ಗೀತಗೋಪಾಲ' ಪ್ರಬಂಧದ ಪೂರ್ವ ಭಾಗದಲ್ಲಿ ನಾಯಕ, ನಾಯಕಿಯರ ಸಂಬಂಧವನ್ನು ಪ್ರತ್ಯೇಕವಾಗಿ ನಿರೂಪಿಸಿದ್ದರೂ ಬಹುಶಃ ಜಯದೇವನ ಅಭಿಪ್ರಾಯಗಳೇ ಇಲ್ಲೂ ಹೇಳಲ್ಪಟ್ಟಿವೆ. ಒಟ್ಟಾರೆ ತಿರುಮಲಾರ್ಯ ಜಯದೇವ ಕವಿಯಿಂದ ವಸ್ತು ಹಾಗೂ ಕಾವ್ಯ ಮಾಧ್ಯಮವನ್ನು ಎರವಲಾಗಿ ಪಡೆದಿದ್ದಾನೆ.

ಚಿಕ್ಕದೇವರಾಜ ಒಡೆಯರ ಕಾಲದ ಪ್ರಮುಖ ಬರಹಗಾರರಲ್ಲಿ ಚಿಕ್ಕುಪಾಧ್ಯಾಯ ಒಬ್ಬನು. ಚಿಕ್ಕದೇವರಾಜ ಒಡೆಯರು ಅವರಿಗೆ ಈತ ಉಪಾಧ್ಯಾಯನಾಗಿದ್ದ ಕಾರಣ ಈತನಿಗೆ 'ಚಿಕ್ಕುಪಾಧ್ಯಾಯ'ನೆಂಬ ಹೆಸರು ಬಂದಿತು.  ಈತನ ಹೆಸರು

ಲಕ್ಷ್ಮೀಪತಿ. ಈತ ಒಟ್ಟು 32 ಗ್ರಂಥಗಳನ್ನು ರಚಿಸಿದನೆಂದು ಹೇಳಲಾಗಿದೆ. ಸಂಸ್ಕೃತ, ಕನ್ನಡ, ತಮಿಳು ಭಾಷೆಗಳಲ್ಲಿ ಪಂಡಿತನಾಗಿದ್ದನು. ಚಿಕ್ಕುಪಾಧ್ಯಾಯ ಸಾಮಾನ್ಯವಾಗಿ ತನ್ನ ಕೃತಿಗಳಲ್ಲಿ ಶ್ರೀವೈಷ್ಣವ ಮತದ ತತ್ವ, ಸಂಪ್ರದಾಯ, ಚರಿತ್ರೆ ಎಲ್ಲವನ್ನೂ ನಿರೂಪಿಸಿ ರಾಮಾನುಜ ಮತಕೋಶವೊಂದನ್ನು ರಚಿಸಿದ್ದಾನೆ ಎಂಬ ಡಾ॥ ರಂ. ಶ್ರೀ. ಮುಗಳಿ ಅವರ ಮಾತುಗಳು ಸಮಂಜಸವಾಗಿವೆ.[78]

ಚಿಕ್ಕುಪಧ್ಯಾಯ 'ರುಕ್ಮಾಂಗದ ಚರಿತೆ' ಏಕಾದಶಿ ವ್ರತ ಮಹಿಮೆಯನ್ನು ಒಳಗೊಂಡ ರುಕ್ಮಾಂಗದ ಕಥೆಯನ್ನು ಸಂಸ್ಕೃತದ ವಿಷ್ಣುಪುರಾಣದಿಂದ ಅನುವಾದ ಮಾಡಿದ್ದಾನೆ. 'ದಿವ್ಯಸೂರಿ ಚರಿತೆ' ಹಾಗೂ 'ಸಾತ್ವಿಕ ಬ್ರಹ್ಮವಿದ್ಯಾವಿಲಾಸ' ಕೃತಿಯನ್ನು ವಿಶಿಷ್ಟಾದ್ವೈತ ಗ್ರಂಥವಾದ ತಮಿಳಿನ 'ಅರ್ಥಕಂಚುಕ' ದಿಂದ ಅನುವಾದ ಮಾಡಿದ್ದಾನೆ. ಚಂಪೂವಿನಲ್ಲಿ 'ವಿಷ್ಣು ಪುರಾಣ'ವನ್ನು ಅನುವಾದ ಮಾಡಿದ್ದು ಸಾಲದೆಂಬಂತೆ ಗದ್ಯದಲ್ಲೂ ಆ ಗ್ರಂಥವನ್ನು ಮತ್ತೊಮ್ಮೆ ಬರೆದಿದ್ದಾನೆ. ಸಂಸ್ಕೃತದ 'ಶುಕ ಸಪ್ತಮಿ'ಯನ್ನು ಕನ್ನಡದಲ್ಲಿ ಭಾಷಾಂತರ ಮಾಡಿದ್ದಾನೆ.

ಈತನ 'ರುಕ್ಮಾಂಗದ ಚರಿತೆ'ಯಲ್ಲಿ ಬರುವ ಮೋಹಿನಿಯ ಸಂಗೀತ 'ಕರ್ನಾಟಕ ಕಾದಂಬರಿ'ಯಲ್ಲಿ ಬರುವ ಮಹಾಶ್ವೇತೆಯ ಸಂಗೀತವನ್ನು ಹೋಲುತ್ತದೆ. ವಿಷ್ಣುಪುರಾಣದ ಪದ್ಯಗಳಿಗೆ ರುದ್ರಭಟ್ಟನ 'ಜಗನ್ನಾಥ ವಿಜಯ' ಷಡಕ್ಷರ ಕವಿಯ 'ರಾಜಶೇಖರ ವಿಳಾಸ'ಗಳು ಆಕರವಾಗಿವೆ. ಪಂಪನ ಪ್ರಭಾವವು ಅಲ್ಲಲ್ಲಿ ಎದ್ದು ಕಾಣುತ್ತದೆ.[79]

ಚಿಕ್ಕದೇವರಾಜ ಒಡೆಯರ ಕಾಲದ ಮತ್ತೊಬ್ಬ ಪ್ರಮುಖ ಲೇಖಕ ಸಿಂಗಾರಾರ್ಯ. ಈತ ತಿರುಮಲಾರ್ಯನ ತಮ್ಮ. ಕನ್ನಡದಲ್ಲಿ ಮೊಟ್ಟಮೊದಲು ನಾಟಕ ಬರೆದ ಕವಿ ಎಂಬ ಹೆಗ್ಗಳಿಕೆ ಈತನದು. ಈತನ 'ಮಿತ್ರವಿಂದಾಗೋವಿಂದ' ಎಂಬ ಕೃತಿಯು ಕನ್ನಡದಲ್ಲಿ ದೊರಕಿದ ಮೊಟ್ಟ ಮೊದಲ ನಾಟಕವಾಗಿದೆ. ಇದು ಸಂಸ್ಕೃತದಲ್ಲಿ ಶ್ರೀಹರ್ಷಕವಿ ಬರೆದಿರುವ 'ರತ್ನಾವಳಿ' ನಾಟಕದ ಭಾಷಾಂತರ. ಆದರೆ ಸಿಂಗರಾರ್ಯ ಇದನ್ನು ಭಾಷಾಂತರವೆಂದು ಕರೆದುಕೊಂಡಿಲ್ಲ. ಹೆಚ್ಚಿನ ವ್ಯತ್ಯಾಸಗಳೇನೂ ಇಲ್ಲದೆ ಮೂಲವನ್ನು ಬಿಟ್ಟುಬಿಡದೆ ಕನ್ನಡಿಸಿದ್ದರೂ ಇದು ಸ್ವತಂತ್ರ ಕೃತಿಯೆಂದು ತೋರುವಂತೆ ಮಾಡಿದ್ದು ಮಾದರಿಯೇ ಸರಿ. ಕಥಾನಕದಲ್ಲಿ ಮಾಡಿಕೊಂಡ ಒಂದೆರಡು ವ್ಯತ್ಯಾಸಗಳಿಂದ ಭಾಷಾಂತರಕ್ಕೆ ಕಳೆಬರುವ ಬದಲು ಕಳಂಕವೇ ತಟ್ಟಿದೆ. ಭಾಷಾಂತರದ ದೃಷ್ಟಿಯಿಂದ ತಿರುಮಲಾರ್ಯನ ವರ್ಚಸ್ಸುಳ್ಳ ತಿಳಿಯಾದ ಹಳಗನ್ನಡದ ಶೈಲಿಯಲ್ಲಿದೆ. ಮೂಲವನ್ನು ಕನ್ನಡಿಸುವಲ್ಲಿ ಕೆಲವು ಕಡೆ ದೋಷಗಳಾಗಿವೆ. ಕ್ವಚಿತ್ತಾಗಿ ಮೂಲಕ್ಕಿಂತಾ ಹೆಚ್ಚಿನ ಸೊಗಸುಬಂದಿದೆ.[80]

ಚಿಕ್ಕದೇವರಾಜ ಒಡೆಯರ್ ಅವರ ಆಸ್ಥಾನದಲ್ಲಿ ಸಂಚಿಯ ಹೆಣ್ಣಾಗಿದ್ದ 'ಸಂಚಿಯ ಹೊನ್ನಮ್ಮ' ಸಿಂಗಾರಾರ್ಯರ ಶಿಷ್ಯೆ. 'ಹದಿಬದೆಯ ಧರ್ಮ' ಎಂಬ 468 ಸಾಂಗತ್ಯ ಪದ್ಯಗಳನ್ನೊಳಗೊಂಡ ಕೃತಿಯೊಂದನ್ನು ಈಕೆ ರಚಿಸಿದ್ದಾಳೆ. ಇದೊಂದು ನೀತಿ ಕಾವ್ಯ. ಇದರಲ್ಲಿ ಬಂದಿರುವ ಪತಿವ್ರತಾಧರ್ಮದ ನಿಯಮಗಳು, ಭಾರತೀಯ ಸ್ತ್ರೀಯರ ಸ್ಥಾನಮಾನದ ವರ್ಣನೆಗಳು, ಉದಾಹರಣೆ ರೂಪವಾದ ಕಥೆಗಳು, ಶ್ರೀ ವೈಷ್ಣವ ತತ್ವಗಳು ಇವನ್ನೆಲ್ಲಾ ಅವಳು ತಾನು ಓದಿದ ಗ್ರಂಥಗಳಿಂದ ಎತ್ತಿಕೊಂಡಿದ್ದಾಳೆ. ಆದರೆ ಅದನ್ನು ಅನುವಾದಿಸುವಾಗ ತನ್ನ ಅನುಭವ ಮತ್ತು ಶೈಲಿ ಮೆರೆದಿದ್ದಾಳೆ." ಸಂಚಿಹೊನ್ನಮ್ಮ ತನ್ನ 'ಹದಿಬದೆಯ ಧರ್ಮ'ದ ಒಂಬತ್ತನೆಯ ಅಧ್ಯಾಯವನ್ನು ಭಗವದ್ಗೀತೆಯಿಂದಲೂ, ಭಾಗವತ

ರಿಂದಲೂ ರಾಮಾಯಣ - ಮಹಾಭಾರತಗಳಿಂದಲೂ ಕೆಲವು ಭಾಗಗಳನ್ನು ಆರಿಸಿಕೊಂಡು ಕನ್ನಡದಲ್ಲಿ ಅರ್ಥವಿವರಣೆ ನೀಡುತ್ತಾಳೆ.[82]

19ನೆ ಶತಮಾನದ ಪ್ರಾರಂಭದಲ್ಲೇ ಕರ್ನಾಟಕದ ಮೇಲೆ ಅನ್ಯಭಾಷೆಗಳ ಅಂದರೆ ವಿದೇಶೀ ಭಾಷೆಗಳ ಪ್ರಭಾವ ಉಂಟಾಯಿತು. ಭೌಗೋಳಿಕವಾಗಿ ಕರ್ನಾಟಕ ಛಿದ್ರ ಛಿದ್ರವಾಗಿ ಒಡೆದುಹೋಯಿತು. ಮೈಸೂರು ಸಂಸ್ಥಾನದ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಕ್ರಿ. ಶ. 1794 ರಿಂದ 1868ರವರೆಗೆ ಬ್ರಿಟಿಷರ ಮಾರ್ಗದರ್ಶನದಲ್ಲಿ ಆಳ್ವಿಕೆ ನಡೆಸಿದರು. ಮುಂಬೈ- ಕರ್ನಾಟಕ, ಉತ್ತರ ಕನ್ನಡ ಜಿಲ್ಲೆಗಳು ಮುಂಬೈ ಪ್ರಾಂತ್ಯದ ಆಳ್ವಿಕೆಗೊಳಪಟ್ಟವು. ದಕ್ಷಿಣ ಕನ್ನಡ, ಬಳ್ಳಾರಿ ಹಾಗೂ ಕೊಡಗು ಜಿಲ್ಲೆಗಳು ಮದ್ರಾಸ್ ಪ್ರೆಸಿಡೆನ್ಸಿಯಲ್ ಆಳ್ವಿಕೆಗೆ ಒಳಗಾಯಿತು. ಹೈದ್ರಾಬಾದ್ ಕರ್ನಾಟಕವು ನಿಜಾಮರ ಆಳ್ವಿಕೆಗೆ ಒಳಪಟ್ಟಿತು. ಇಂತಹ ಅಗಣಿತ ಪ್ರಭಾವ ಭಾರತದ ಬೇರ್ಯಾವ ಭಾಷೆಯ ಮೇಲೂ ಆಗಿಲ್ಲವೆಂದರೆ ತಪ್ಪಿಲ್ಲ. ಆದ ಕಾರಣಕ್ಕಾಗಿ ಕನ್ನಡ ಭಾಷಾ ಸಂಪತ್ತು ಬೆಳೆಯಿತು. ಬೇರೆ ಬೇರೆ ಭಾಷೆಯ ಕೃತಿಗಳು ಸಹ ನೇರವಾಗಿ ಅನುವಾದಗೊಂಡವು. ಇದರ ಜೊತೆಗೆ ಕನ್ನಡ ಭಾಷೆಯಲ್ಲೇ ರಚಿತವಾದ ಸೃಜನಶೀಲ ಸಾಹಿತ್ಯದ ಮೇಲೂ ಗುಪ್ತವಾಹಿನಿಯಂತೆ ಇತರ ಭಾಷೆಗಳ ಕೃತಿಗಳು ಪ್ರಭಾವ ಬೀರಿರುವುದನ್ನು ಕಾಣಬಹುದು.

ಸ್ವತಃ ಮುಮ್ಮಡಿ ಕೃಷ್ಣರಾಜರು ಸಂಸ್ಕೃತ- ಕನ್ನಡ ಭಾಷೆಯಲ್ಲಿ ಐವತ್ತಕ್ಕೂ ಹೆಚ್ಚು ಗ್ರಂಥಗಳನ್ನು ಬರೆದಿದ್ದಾನೆಂದು ಹೇಳಲಾಗಿದೆ. ವಿಶೇಷವಾಗಿ ಗದ್ಯದ ಬೆಳವಣಿಗೆಗೆ ಈತನ ಕಾಣಿಕೆ ಹೆಚ್ಚು. ಈತನ 'ರಾಮಕಥಾ ಕಲ್ಪವೃಕ್ಷ' ಗ್ರಂಥಕ್ಕೆ ಶ್ರೀಮದ್ರಾಮಾಯಣ, ವಿಷ್ಣು ಪುರಾಣ, ಪದ್ಮಪುರಾಣ, ಕೂರ್ಮ ಪುರಾಣ, ಆಧ್ಯಾತ್ಮಿಕ ರಾಮಾಯಣ, ಶಿವಧರ್ಮೋತ್ತರ ಪುರಾಣ, ವಿಷ್ಣು ಧರ್ಮೋತ್ತರ ಪುರಾಣ, ಜೈಮಿನಿ ಭಾರತ ಆಕರ ಗ್ರಂಥಗಳಾಗಿವೆ. 'ಕೃಷ್ಣಕಥಾರತ್ನ' ಗ್ರಂಥಕ್ಕೆ 'ಭಾಗವತ', ವಿಷ್ಣು ಪುರಾಣ, ಹರಿವಂಶ, ಭಾರತಗಳು ಆಧಾರ ಗ್ರಂಥಗಳಾಗಿವೆ.

ಮುಮ್ಮಡಿ ಕೃಷ್ಣರಾಯನ ಕಾಲದಲ್ಲಿದ್ದ ಪ್ರಮುಖ ಜೈನಕವಿ ದೇವಚಂದ್ರ. ಇವನ 'ರಾಮಕಥಾವತಾರ' ಎಂಬ ಚಂಪೂಕಾವ್ಯಕ್ಕೆ ನಾಗಚಂದ್ರನ 'ರಾಮಚಂದ್ರ ಚರಿತ ಪುರಾಣ' ಪ್ರೇರಣೆ ನೀಡಿದೆ.

ಕ್ರಿ. ಶ. 1832ರಲ್ಲಿದ್ದ ಕೆಂಪನಾರಾಯಣನ 'ಮುದ್ರಾಮಂಜೂಷ'ವು ವಿಶಾಖದತ್ತನ 'ಮುದ್ರಾರಾಕ್ಷಸ' ನಾಟಕದ ಗದ್ಯರೂಪವಾದ ಭಾಷಾಂತರ ಎಂಬ ಅಭಿಪ್ರಾಯ ಕೂಡ ಇದೆ. ಇದರಲ್ಲಿನ ಮೊದಲಿನ 12 ಪ್ರಕರಣಗಳ ಕಥೆ ಸಂಸ್ಕೃತ ನಾಟಕದ ಉಪೋದ್ಘಾತದಲ್ಲಿ ಸೂಚನೆಯಿಂದ ಮಾತ್ರ ಬಂದಿದೆ. ಇನ್ನುಳಿದ ಪ್ರಕರಣಗಳಿಗೂ ನಾಟಕಕ್ಕೂ ಸಂಬಂಧವಿದ್ದರೂ ಒಂದು ಇನ್ನೊಂದರ ಭಾಷಾಂತರವಲ್ಲ ಎಂಬ ಅಭಿಪ್ರಾಯ ಸಹ ಇದೆ.[83]

ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಇಬ್ಬರು ಮಕ್ಕಳನ್ನು ಮದುವೆಯಾದ 'ಲಿಂಗರಾಜ'ನನ್ನು 'ಅಳಿಯ ಲಿಂಗರಾಜ'ನೆಂದೇ ಕರೆಯಲಾಗಿದೆ. ಚಂಪೂ, ಷಟ್ಪದಿ, ಸಾಂಗತ್ಯ ಶತಕ, ಯಕ್ಷಗಾನ ಹಾಡು ಇತ್ಯಾದಿ ರೂಪಗಳಲ್ಲಿ ಈತ ಐವತ್ತಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾನೆ.

19ನೆ ಶತಮಾನದ ಕಡೆಯ ಭಾಗದಲ್ಲಿ ಚಾಮರಾಜ ಒಡೆಯರ್ ಅವರ ಆಸ್ಥಾನ ಕವಿಯಾಗಿದ್ದ "ಬಸವಪ್ಪಶಾಸ್ತ್ರೀ" ಅನುವಾದ ಸಾಹಿತ್ಯದ ದೃಷ್ಟಿಯಿಂದ ಉಲ್ಲೇಖಾರ್ಹನಾದ ಕವಿ. ಈತನು 'ಸಾವಿತ್ರಿ ಚರಿತ್ರೆ'ಯನ್ನು ಭಾಮಿನಿ ಷಟ್ಪದಿಯಲ್ಲಿ, ಭರ್ತೃಹರಿಯ ಸುಭಾಷಿತವನ್ನು ವೃತ್ತದಲ್ಲಿಯೂ, ನೀತಿಪಾಠ ಸಂಗ್ರಹವನ್ನು ಕಂದದಲ್ಲಿಯೂ, ದಮಯಂತಿ ಸ್ವಯಂವರ ಹಾಗೂ ರೇಣುಕಾರ್ಯ ವಿಜಯ ಗ್ರಂಥಗಳನ್ನು ಚಂಪೂವಿನಲ್ಲಿಯೂ ಬರೆದಿದ್ದಾನೆ.

ಬಸವಪ್ಪಶಾಸ್ತ್ರೀ ಅವರ ಮಹತ್ವವಿರುವುದು ಅವರು ಸಂಸ್ಕೃತ ಹಾಗೂ ಇಂಗ್ಲಿಷಿನಿಂದ ಅನುವಾದಿಸಿದ ಗ್ರಂಥಗಳಿಂದ ಎನ್ನಲಾಗಿದೆ. 'ಚಾಮರಾಜೇಂದ್ರ ನಾಟಕ ಸಭೆ'ಗಾಗಿ 'ಶಾಕುಂತಲಾ' 'ವಿಕ್ರಮೋರ್ವಶಿಯ' 'ಚಂಡ ಕಾಳಿಕಾ' 'ಉತ್ತರ ರಾಮ ಚರಿತೆ' 'ರತ್ನಾವಳಿ' ಮಾಲತಿ ಮಾಧವ' ಶೂರಸೇನ ಚರಿತ್ರೆ' ಎಂಬ ಏಳು ನಾಟಕಗಳನ್ನು ಅನುವಾದಿಸಿದ್ದಾರೆ. ಇಂಗ್ಲಿಷ್ ಗೊತ್ತಿಲ್ಲದಿದ್ದರೂ ಬೇರೆಯವರಿಂದ ಓದಿಸಿ ಕೇಳಿ ಷೇಕ್ಸ್‌ಪಿಯರ್‌ನ 'ಒಥೆಲೋ' ನಾಟಕವನ್ನು 'ಶೂರಸೇನ ಚರಿತ್ರೆ' ಎಂಬುದಾಗಿ ಅನುವಾದಿಸಿದ್ದಾರೆ. ಆದ್ದರಿಂದ "ಇದು ಮೂಲರಸರಹಿತ ಛಾಯೆ ಮಾತ್ರವಾಗಿದೆ" ಎಂದು ಡಾ॥ ತ. ಸು. ಶಾಮರಾಯರು ಹೇಳಿದ್ದಾರೆ. ಇನ್ನುಳಿದ ನಾಟಕಗಳು ಸಂಸ್ಕೃತದ ನಾಟಕಗಳ ಅನುವಾದಗಳಾಗಿವೆ. ಕನ್ನಡದಲ್ಲಿ ಶಾಕುಂತಲಾದಂಥ ಉತ್ತಮ ನಾಟಕದ ಅನುವಾದವಾದದ್ದು ಬಸವಪ್ಪಶಾಸ್ತ್ರಿಯಿಂದಲೇ ಎನ್ನಲಾಗಿದೆ. ಮೊದಲೇ ವರಕವಿ ಕಾಳಿದಾಸನ ಅಂತರಂಗವನ್ನು ಹೊಕ್ಕು ಅವನ ಆಳ-ಔನ್ನತ್ಯಗಳನ್ನು ಅರಿತು ಅದನ್ನು ಇತರರಿಗೆ ದರ್ಶನ ಮಾಡಿಸುವಲ್ಲಿ ಕೃತಕೃತ್ಯನಾಗಿದ್ದಾನೆ ಕವಿ ಆತನ ನಾಟಕದಲ್ಲಿ ಮೂಲದ ನಯ, ನಾಜೋಕು, ಭಾಷೆಯ ಲಾಲಿತ್ಯ, ಮಾತಿನ ಬೆಡಗು ಕನ್ನಡಕ್ಕೆ ಇಳಿದುಬಂದಿದೆ.[84]

ಷೇಕ್ಸ್‌ಪಿಯರ್‌ನಂತಹ ಶ್ರೇಷ್ಠ ನಾಟಕಕಾರನ ಉತ್ತಮ ದುರಂತನಾಟಕವೊಂದರ ಅನುವಾದವೂ ಬಸವಪ್ಪ ಶಾಸ್ತ್ರಿಗಳಿಂದಲೇ ಆಗಿದ್ದು ಮೊದಲು ಹೊಸಗನ್ನಡ ಸಾಹಿತ್ಯಕ್ಕೆ ಇಂಗ್ಲಿಷ್ ಸಾಹಿತ್ಯ ಕೊಟ್ಟ ಸ್ಫೂರ್ತಿ ಇಲ್ಲಿ ಎದ್ದು ಕಾಣುತ್ತದೆ. ಬಸವಪ್ಪಶಾಸ್ತ್ರಿ ಅವರ ಕವಿತಾಶಕ್ತಿ ಮತ್ತು ಪದ್ಯರಚನಾ ಶಕ್ತಿ ಮೇಲಾದುದು. ಶಾಕುಂತಲಾದ ಪದ್ಯಗಳಲ್ಲಿ ಇದನ್ನು ಕಾಣಬಹುದು. ಅವರಿಗೆ 'ಅಭಿನವ ಕಾಳಿದಾಸ' ಎಂಬ ಬಿರುದು ಕಾಳಿದಾಸನ ಅನುವಾದಕಾರ ಎಂಬರ್ಥದಲ್ಲಿದ್ದರೆ ಮಾತ್ರ ಯಥೋಚಿತವಾದುದು.[85]

ಮುದ್ದಣ್ಣ ಅರ್ಥಾತ್ ನಂದಳಿಕೆ ಲಕ್ಷ್ಮೀನಾರಾಯಣಪ್ಪ (ಕ್ರಿ. ಶ. 1869-1907) ಕುಮಾರವ್ಯಾಸ ಯುಗಕ್ಕೂ ಹಾಗೂ ಆಧುನಿಕ ಯುಗಕ್ಕೂ ರಸಸೇತುವೆಯಾಗಿದ್ದಾನೆ. 'ರತ್ನಾವತಿ ಕಲ್ಯಾಣ' 'ಕುಮಾರ ವಿಜಯ' ಎಂಬ ಎರಡು ಯಕ್ಷಗಾನಗಳನ್ನು ಬರೆದಿದ್ದಾನೆ. 'ಅದ್ಭುತ ರಾಮಾಯಣ' 'ರಾಮಪಟ್ಟಾಭಿಷೇಕ' ಹಾಗೂ 'ರಾಮಶ್ವಮೇಧ' ಎಂಬ ಮೂರು ಸುಂದರ ಕೃತಿಗಳನ್ನು ರಾಮಾಯಣ ಮಹಾಕಾವ್ಯದ ಸಹಾಯದಿಂದ ರಚಿಸಿದ್ದಾನೆ. 'ಗೋದಾವರಿ' ಎಂಬ ಕಾದಂಬರಿಯು ಅರ್ಧದಲ್ಲಿಯೇ ನಿಂತಿದೆ. ಅಕಾಲಮೃತ್ಯುವಿಗೆ ಒಳಗಾದ ಮುದ್ದಣ್ಣ ತನ್ನ ಕಾದಂಬರಿಯನ್ನು ಪೂರ್ಣ ಮಾಡಲಾಗಲಿಲ್ಲ.

ಮುದ್ದಣ್ಣನ 'ಅದ್ಭುತ ರಾಮಾಯಣ' ಶಾಸ್ತ್ರ ಸಂಪ್ರದಾಯದ ರಾಮಾಯಣ ಕತೆಯನ್ನು ಗದ್ಯದಲ್ಲಿ ಸಂಗ್ರಹ ಗೊಳಿಸಲಾದುದು. ಇದರ ಮೂಲ ಬರಿಯ ಪುರಾಣದ ಬದನೆಕಾಯಿ. ನೀತಿ ನಿರೂಪಣೆ ಅಲ್ಲಿನ ಹೆಗ್ಗುರಿ. ಕವಿ ಅದರಿಂದ

ರಸ ನಿರೂಪಣೆಯನ್ನು, ಮನರಂಜನೆಯನ್ನು ಸಾಧಿಸಲು ಪ್ರಯತ್ನಪಟ್ಟಿದ್ದಾನೆ. ನೀರಸವಾದ ಕಂತೆ ಪುರಾಣವನ್ನು ಬಿಟ್ಟು ರಸವತ್ತಾಗಬಲ್ಲ ಸನ್ನಿವೇಶಗಳನ್ನು ಮಾತ್ರ ಆಯ್ದುಕೊಂಡಿದ್ದಾನೆ.[86]

'ರಾಮಪಟ್ಟಾಭಿಷೇಕ'ವು ವಾರ್ಧಕ ಷಟ್ಪದಿಯಲ್ಲಿದೆ. ಸಿಂಹಾವಲೋಕನ ಕ್ರಮವನ್ನು ಅನುಸರಿಸಿ ರನ್ನ ಮಹಾಕವಿ ತನ್ನ ಗದಾಯುದ್ಧದಲ್ಲಿ ಭಾರತವನ್ನೆಲ್ಲಾ ಹೇಳಿದಂತೆ, ಲಕ್ಷ್ಮೀನಾರಾಯಣ ಕವಿಯೂ ಅಂತಹದೇ ಒಂದು ಕೆಲಸ ನಡೆಸಿದ್ದಾನೆ. ಅಲ್ಲಿ ದುರ್ಯೋಧನನು ಯುದ್ಧರಂಗದಲ್ಲಿ ಹೋಗುತ್ತಿರುವಾಗಲೂ ಸತ್ತುಬಿದ್ದಿದ್ದ ಶವಗಳನ್ನು ಕಂಡಾಗಲೂ ಹಿಂದಿನ ಕತೆಯನ್ನೆಲ್ಲಾ ಜ್ಞಾಪಿಸಿಕೊಂಡರೆ ಇಲ್ಲಿ ಶ್ರೀರಾಮನು ಪುಷ್ಪಕ ವಿಮಾನದಲ್ಲಿ ಹಿಂದಿರುಗುತ್ತಾ ತಾವು ತಂಗಿದ್ದ ಸ್ಥಳಗಳನ್ನು ಸೀತೆಗೆ ತೋರಿಸುತ್ತಾ ಹಳೆಯ ಕಥೆಯನ್ನೆಲ್ಲಾ ನೆನಪಿಗೆ ತರುತ್ತಾರೆ.[87]

ಮುದ್ದಣ್ಣನ ಪ್ರಸಿದ್ಧ ಕಾವ್ಯ 'ಶ್ರೀರಾಮಾಶ್ವಮೇಧಂ' ಇದೊಂದು ಗದ್ಯಕಾವ್ಯ. ಈ ಕಥೆಗೆ ಮೂಲ ವಾಲ್ಮೀಕಿ ರಾಮಾಯಣದ ಉತ್ತರಕಾಂಡದ ಕಥೆ ಪ್ರೇರಣೆ. ಮುದ್ದಣ್ಣ-ಮನೋರಮೆಯಂತಹ ರಸಿಕ ದಂಪತಿಗಳ ಸಂಭಾಷಣೆ ಈ ಕೃತಿಯ ಜೀವಾಳ. ಇದರಿಂದಾಗಿಯೇ ಮುದ್ದಣ್ಣ ಅನುವಾದ ಮಾಡಿದ್ದರೂ ಅದೊಂದು ಸ್ವತಂತ್ರ ಕೃತಿ ಎಂಬಂತೆ ಭಾಸವಾಗುತ್ತದೆ. ಸಂಸ್ಕೃತ ಕನ್ನಡದ ಸಂಬಂಧ ಹೇಗಿರಬೇಕೆಂಬುದನ್ನು ಕೂಡ ಮುದ್ದಣ ಸೂಚ್ಯವಾಗಿಯೇ ಹೇಳಿದ್ದಾನೆ ಮುದ್ದಣ. ಕನ್ನಡ ತನ್ನ ಪ್ರಾಚೀನತೆಯೊಡನೆ ಹೊಸದೃಷ್ಟಿಯನ್ನು ಬೆಳಸಿಕೊಳ್ಳಬೇಕೆಂಬುದೇ ಅವನ ಸಂದೇಶವಾಗಿತ್ತು.

■

## ಅಡಿ ಟಿಪ್ಪಣಿ

1. ಪ್ರೊ. ಬಿ. ಎಂ. ಶ್ರೀಕಂಠಯ್ಯ - ಕನ್ನಡ ಕೈಪಿಡಿ, ಸಂಪುಟ 2, ಪುಟ 472
2. ಜಿ. ಎ. ಗ್ರೀಸನ್ - ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾ. ವಾಲ್ಯೂಮ್ 2. ಪುಟ 436-37
3. ಡಾ. ರಂ. ಶ್ರೀ.ಮುಗಳಿ - ಕನ್ನಡ ಸಾಹಿತ್ಯ ಚರಿತ್ರೆ, ಪುಟ 358
4. ಪ್ರೊ. ಕೆ. ವೆಂಕಟರಾಮಪ್ಪ - ಪ್ರಚಾರೋಪನ್ಯಾಸಮಾಲೆ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 1
5. ಡಾ. ರಂ. ಶ್ರೀಮುಗಳಿ - ಕನ್ನಡ ಸಾಹಿತ್ಯ ಚರಿತ್ರೆ - ಪುಟ 62
6. ಡಾ. ತ. ಸು.ಶಾಮರಾಯರು - ಕನ್ನಡ ಸಾಹಿತ್ಯ ಚರಿತ್ರೆ, ಪುಟ 11-12
7. ರಾಜಪ್ಪ ದಳವಾಯಿ, ಸಂಪಾದಕ, ಕನ್ನಡ ಸಾಹಿತ್ಯ ಕೋಶ, ಪುಟ 34
8. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 76-77
9. ಡಾ. ಹಂ. ಪ. ನಾಗರಾಜಯ್ಯ, ವಡ್ಡಾರಾಧನೆ, ಪುಟ 14.
10. ಡಾ. ಹಂ. ಪ. ನಾಗರಾಜಯ್ಯ, ವಡ್ಡಾರಾಧನೆ, ಪುಟ 34
11. ಪ್ರೊ. ತೀ. ನಂ. ಶ್ರೀಕಂಠಯ್ಯ, ಪಂಪ ಪ್ರಚಾರೋಪನ್ಯಾಸ ಮಾಲೆ. ಪುಟ 14-15
12. ಪ್ರೊ. ತೀ. ನಂ. ಶ್ರೀಕಂಠಯ್ಯ, ಪಂಪ ಪ್ರಚಾರೋಪನ್ಯಾಸಮಾಲೆ. ಪುಟ 37
13. ಪ್ರೊ. ತೀ. ನಂ. ಶ್ರೀಕಂಠಯ್ಯ ಪಂಪ ಪ್ರಚಾರೋಪನ್ಯಾಸಮಾಲೆ. ಪುಟ 38
14. ಡಾಂ ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 116.
15. 'ಎನ್. ಅನಂತರಂಗಾಚಾರ್, ಪೊನ್ನ, ಪ್ರಚಾರೋಪಾನ್ಯಾಸ ಮಾಲೆ. ಪುಟ 34
16. ಎನ್. ಅನಂತರಂಗಾಚಾರ್, ಪೊನ್ನ, ಪುಟ 24

17. ಎನ್. ಅನಂತರಂಗಾಚಾರ್, ಪೊನ್ನ, ಪುಟ 29
18. ಡಾ. ರಂ. ಶ್ರೀ. ಮುಗಳಿ, ಕನ್ನಡ ಕವಿರತ್ನ,ಪುಟ 19-20
19. ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ, ಚಾವುಂಡರಾಯ, ಪ್ರಚಾರೋಪನ್ಯಾಸಮಾಲೆ, ಪುಟ 9
20. ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ, ಚಾವುಂಡರಾಯ, ಪ್ರಚಾರೋಪನ್ಯಾಸಮಾಲೆ, ಪುಟ 23
21. ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ, ಚಾವುಂಡರಾಯ, ಪ್ರಚಾರೋಪನ್ಯಾಸಮಾಲೆ, ಪುಟ 23-24
22. ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ, ಚಾವುಂಡರಾಯ, ಪುಟ 31-32
23. ಕನ್ನಡ ಸಾಹಿತ್ಯ ಚರಿತ್ರೆ, ಪುಟ 132-133
24. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 135
25. ಪಿ. ವಿ. ಜೋಶಿ, ಒಂದನೇ ನಾಗವರ್ಮ, ಕರ್ನಾಟಕ ಕಾದಂಬರಿ ಪುಟ 6061
26. ಅದೇ.
27. ಡಾ. ರಂ.ಶ್ರೀ ಮುಗಳಿ, ಕನ್ನಡಸಾಹಿತ್ಯ ಚರಿತ್ರೆ, ಪುಟ 136
28. ಪ್ರೊ. ಎಂ. ಎಚ್. ಶಂಕರನಾರಾಯಣ, ಒಂದನೆ ನಾಗವರ್ಮ ಪುಟ 65
29. ಸಿ. ಪಿ. ಕೆ. ನಾಗಚಂದ್ರ ಪ್ರಚಾರೋಪನ್ಯಾಸಮಾಲೆ ಪುಟ 27-28
30. ಡಾ. ಡಿ.. ಎಲ್. ನರಸಿಂಹಾಚಾರ್ ಪಂಪರಾಮಾಯಣ ಸಂಗ್ರಹ, ಪೀಠಿಕೆ, ಪುಟ 114
31. ಡಾ. ರಂ. ಶ್ರೀ ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 148
32. ಪ್ರಚಾರೋಪನ್ಯಾಸ ಮಾಲೆ, ನೇಮಿಚಂದ್ರ, ಪುಟ 8
33. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ ಪುಟ 208
34. ಡಾ. ಸಿ. ಪಿ. ಕೆ., 'ಜನ್ನ' ಪ್ರಚಾರೋಪನ್ಯಾಸ ಮಾಲೆ, ಪುಟ 24
35. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯ ಕೋಶ, ಪುಟ 12
36. ಕನ್ನಡ ಸಾಹಿತ್ಯ ಚರಿತ್ರೆ, ಪುಟ 175
37. ಪ್ರೊ. ಎಂ.ಆರ್. ಶ್ರೀ., ವಚನಧರ್ಮಸಾರ, ಪುಟ 14-15
38. ಪ್ರೊ. ಎಂ.ಆರ್. ಶ್ರೀ., ವಚನಧರ್ಮಸಾರ, ಪುಟ 69
39. ಅಕ್ಕಮಹಾದೇವಿ, ಎಸ್. ವಿ. ಪರಮೇಶ್ವರಭಟ್ಟ, ಪುಟ 44
40. ಡಾ. ರಂ. ಶ್ರೀ., ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 193
41. ಪ್ರೊ. ಎಂ. ಆರ್. ಶ್ರೀ. ವಚನಧರ್ಮಸಾರ, ಪುಟ 234
42. ರಾಮೇಗೌಡ, ರಾಘವಾಂಕ ಪ್ರಚಾರೋಪನ್ಯಾಸ ಮಾಲೆ, ಪುಟ 31
43. ಡಾ. ಆರ್. ಸಿ. ಹಿರೇಮಠ, ಮಹಾಕವಿ ರಾಘವಾಂಕ, ಪುಟ 103
44. ಡಾ. ರಂ. ಶ್ರೀ ಮುಗಳಿ, ಕನ್ನಡ ಸಾಹಿತ್ಯಚರಿತ್ರೆ, ಪುಟ 203
45. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 237 38
46. ಡಾ. ಎಂ. ಚಿದಾನಂದಮೂರ್ತಿ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ-ಬಸವಪುರಾಣ ಒಂದು ಸಮೀಕ್ಷೆ-2 ಭಾಗ-1.
47. ಡಾ. ರಂ. ಶ್ರೀ ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 268
48. ಡಾ. ತ. ಸು. ಶಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 119
49. ಪ್ರೊ. ಸುಜನಾ ಕುಮಾರವ್ಯಾಸ, ಪುಟ 12
50. ಡಾ. ಎಸ್. ವಿ. ರಂಗಣ್ಣ, ಕುಮಾರವ್ಯಾಸ, ಪುಟ 17
51. ಪ್ರೊ. ಸುಜನಾ, ಕುಮಾರವ್ಯಾಸ, ಪುಟ 34-35
52. ಡಾ. ಎಸ್. ವಿ. ರಂಗಣ್ಣ, ಕುಮಾರವ್ಯಾಸ, ಪುಟ 78
53. ಡಾ. ಎಸ್. ವಿ.ರಂಗಣ್ಣ, ಕುಮಾರವ್ಯಾಸ, ಪುಟ 16-17
54. ಪ್ರೊ. ತ. ಸು. ಶಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ, ಪುಟ-128
55. ಪ್ರೊ. ಎನ್. ಅನಂತರಂಗಚಾರ್, ಲಕ್ಷ್ಮೀಶ, ಪುಟ 7-8
56. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 296
57. ಪ್ರೊ. ತ. ಸು. ಶಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 137

58. ಪ್ರೊ. ತ.ಸು. ಶಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 138
59. ಡಾ. ರಂ.ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 297
60. ಪ್ರೊ. ಎಸ್. ಕೆ. ರಾಮಚಂದ್ರರಾವ್, ಹರಿದಾಸ ಜನಪ್ರಿಯ ಹಾಡುಗಳು, ಪ್ರಸ್ತಾವನೆ, ಪುಟ 6
61. ಪ್ರೊ. ಎಸ್. ಕೆ. ರಾಮಚಂದ್ರರಾವ್, ಹರಿದಾಸ ಜನಪ್ರಿಯ ಹಾಡುಗಳು, ಪುಟ 6.
62. ಆರ್. ಎಸ್. ಪಂಚಮುಖಿ, ಹರಿದಾಸ ಸಾಹಿತ್ಯ, ಪುಟ 50
63 ಆರ್. ಎಸ್. ಪಂಚಮುಖಿ, ಹರಿದಾಸ ಸಾಹಿತ್ಯ, ಪುಟ 55
64. ಜಯತೀರ್ಥರಾಜ ಪುರೋಹಿತರು, ಶ್ರೀವ್ಯಾಸರಾಯರು, ಪುಟ 31
65. ಜಿ. ಡಿ. ನಾಡಕರ್ಣಿ, ಕನ್ನಡ ಸಾಹಿತ್ಯಕ್ಕೆ ಶ್ರೀ ಪುರಂದರದಾಸರ ಕೊಡುಗೆ, ಪುಟ 54
66. ಡಾ. ತ. ಸು. ಶಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 146
67. ಪ್ರೊ. ಎಸ್. ಕೆ. ರಾಮಚಂದ್ರರಾವ್, ಪುರಂದರ ಸಾಹಿತ್ಯ ದರ್ಶನ, ಪುಟ 7
68. ಪ್ರೊ.. ಎಸ್. ಕೆ. ರಾಮಚಂದ್ರರಾವ್, ಪುರಂದರ ಸಾಹಿತ್ಯ ದರ್ಶನ ಸಂಪುಟ 4, ಪುಟ 17
69. ಪ್ರೊ. ಎಸ್. ಕೆ. ರಾಮಚಂದ್ರರಾವ್, ಪುರಂದರ ಸಾಹಿತ್ಯ ದರ್ಶನ ಸಂಪುಟ 3, ಪುಟ 22.
70. ಡಾ. ಬಸವರಾಜ ಸಬರದ, ಬಸವೇಶ್ವರ ಮತ್ತು ಪುರಂದರದಾಸರು, ಪುಟ 240
71. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 307
72. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 309
73. ಪ್ರೊ. ಎಸ್. ಎಸ್. ಬಸವನಾಳ, ಪ್ರಭುಲಿಂಗಲೀಲೆ, ಪ್ರಸ್ತಾವನೆ, ಪುಟ 15
74. ಡಾ. ದೇ. ಜವರೇಗೌಡ, ಷಡಕ್ಷರದೇವ, ಪುಟ 10-11
75. ಡಾ. ದೇ. ಜವರೇಗೌಡ, ಷಡಕ್ಷರದೇವ, ಪುಟ 34-35
76. ಡಾ. ರಂ. ಶ್ರೀ ಮುಗಳಿ, ಕನ್ನನ ಸಾಹಿತ್ಯ ಚರಿತ್ರೆ, ಪುಟ 374
77. ಪ್ರೊ. ವಿ. ಸೀತಾರಾಮಯ್ಯ, ಸಂಪಾದಕರು, ರತ್ನಾಕರವರ್ಣಿ, ಪುಟ 172
78. ಪ್ರೊ. ವಿ. ಸೀತಾರಾಮಯ್ಯ, ಸಂಪಾದಕರು, ತಿರುಮಲಾರ್ಯ, ಪುಟ 59
79. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 326
80. ಡಾ. ತ.ಸು. ಶಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 163
81. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 326-28
82. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 328
83. ಪ್ರೊ. ವಿ. ಸೀತಾರಾಮಯ್ಯ, ಸಂಪಾದಕರು, ತಿರುಮಲಾರ್ಯ, ಪುಟ 131
84. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 397
85. ಡಾ. ತ.ಸು. ಶಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 220
86. ಡಾ. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪುಟ 398-99
87. ಡಾ. ತ. ಸು. ಶಾಮರಾಯ, ಮುದ್ದಣ, ಪುಟ 14.
88. ಡಾ. ತ. ಸು. ಶಾಮರಾಯ, ಮುದ್ದಣ, ಪುಟ 22.

# ಆಧುನಿಕ ಕನ್ನಡ ಸಾಹಿತ್ಯ ಹಾಗೂ ಅನುವಾದ

## (1850-1920)

### (ಸಂಸ್ಕೃತದಿಂದ ಕನ್ನಡಕ್ಕೆ ಬಂದ ಅನುವಾದ ಸಾಹಿತ್ಯ)

ನಮ್ಮ ಹಳೆಯ ಸಾಹಿತ್ಯದಲ್ಲಿರುವ ಸತ್ವದೊಡನೆ ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಬಂದ ನೂತನ ಭಾವನೆಗಳನ್ನು ಅಳವಡಿಸಿಕೊಂಡಿರುವುದೇ 'ಆಧುನಿಕ ಸಾಹಿತ್ಯ' ಎಂದು ಹೇಳಬಹುದು. ಇದನ್ನೇ ರಸಋಷಿ ಕುವೆಂಪು ಅವರ ಮಾತಿನಲ್ಲಿ ಹೇಳುವುದಾದರೆ ''ರಸಋಷಿಯಾದ ಕವಿ ಅರ್ವಾಚೀನ ಕವಿ ಶಿಖರೇಶ್ವರದಲ್ಲಿ ನಿಂತು ತನ್ನೊಂದು ಕೈಯನ್ನು ಮುಸುಗತ್ತಲೆ ಕವಿದ ಪ್ರಾಚೀನ ಗೋರಿಯೊಳಗೆ ನೀಡಿ ಹುಡುಕುತ್ತಿರುತ್ತಾನೆ. ಮತ್ತೊಂದು ಕೈಯನ್ನು ಅನಂತತೆಯ ಗಗನ-ನೀಲಿಮೆ ತುಂಬಿರುವ ಭವಿಷ್ಯತ್ತಿನ ಅವ್ಯಕ್ತ ಗರ್ಭದ ಕಡೆಗೆ ಚಾಚಿ ತಡಕುತ್ತಿರುತ್ತಾನೆ''[1] ಎಂದಿದ್ದಾರೆ. ಹಾಗಾಗಿ ಆಧುನಿಕತೆ ಎಂದರೆ ಪರಂಪರೆಯನ್ನು ಹಿಂದೆ ಬಿಟ್ಟು ಹೋಗುವಂತಹದಲ್ಲ. ಹಳತಾದದ್ದನ್ನೆಲ್ಲಾ ಹಿಂದೂಡಿ ಯಾವುದೇ ಅವ್ಯಕ್ತಕ್ಕೆ ಕೈಚಾಚುವುದಕ್ಕಿಂತ ಹೆಚ್ಚಾಗಿ ಆಧುನಿಕತೆ ಪರಂಪರೆಯನ್ನು ಮುಖಾಮುಖಿಯಾಗಿ ಸಂಧಿಸುವ ಹಾಗೂ ಪ್ರಶ್ನಿಸುವ ಪ್ರಯತ್ನ ಮಾಡುತ್ತದೆ. ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಕನ್ನಡ ಸಾಹಿತ್ಯದ ಮೇಲೆ ವಿಶಿಷ್ಟ ಪ್ರಭಾವವಾಯಿತೆನ್ನಬಹುದು.

ಹತ್ತೊಂಬತ್ತನೆಯ ಶತಮಾನದ ಅಂತ್ಯ ಹಾಗೂ ಇಪ್ಪತ್ತನೆಯ ಶತಮಾನದ ಆರಂಭ ಕಾಲವನ್ನು ''ಹೊಸಗನ್ನಡದ ಅರುಣೋದಯ'' ಕಾಲವೆಂದು ಡಾ: ಶ್ರೀನಿವಾಸ ಹಾವನೂರರೂ ''ಮುಂಜೆಳಗಿನ ಕಾಲ''ವೆಂದು ಪ್ರೊ. ಎಸ್. ಅನಂತನಾರಾಯಣರೂ 'ಉದಯಕಾಲ'ವೆಂದು ಡಾ: ರಾ. ಯ. ಧಾರವಾಡಕರರೂ ಕರೆದಿದ್ದಾರೆ. ಈ ಕಾಲದಲ್ಲಿ ಕನ್ನಡ ಸಾಹಿತ್ಯದ ಮೇಲೆ ಪಾಶ್ಚಾತ್ಯ ಸಾಹಿತ್ಯ ಹಾಗೂ ಭಾಷೆಗಳ ಪ್ರಭಾವವನ್ನು ಯಥೇಚ್ಛವಾಗಿ ಗುರುತಿಸಬಹುದು. ಹೊಸಗನ್ನಡದ ಅರುಣೋದಯದ ಈ ಅವಧಿಯಲ್ಲಿ ನಡೆದ ಭಾಷಾಂತರ ಮುಂದಿನ ಸ್ವೋಪಜ್ಞ ಸಾಹಿತ್ಯ ಸೃಷ್ಟಿಗೆ ಸ್ಫೂರ್ತಿ ಪ್ರೇರಣೆಗಳನ್ನೊದಗಿಸಿತು. ಸಾಹಿತ್ಯದ ಸತ್ವ ಹಾಗೂ ಮತಗಳ ದೃಷ್ಟಿಯಿಂದ ಭಾಷಾಂತರ ಕೃತಿಗಳು ಗಮನಾರ್ಹವಾಗಿರುವುದರಿಂದ ಸಾಹಿತ್ಯ ಚರಿತ್ರೆಯಲ್ಲಿ ಈ ಕಾಲ ಖಂಡವನ್ನು 'ಭಾಷಾಂತರ ಯುಗ' ಎಂದು ಕರೆಯುವುದು ಔಚಿತ್ಯಪೂರ್ಣ.

ಸಾಹಿತ್ಯದ ಜೊತೆಗೆ ಇತಿಹಾಸ, ಭಾಷಾಶಾಸ್ತ್ರ, ವ್ಯಾಕರಣ, ಸಮಾಜಶಾಸ್ತ್ರ ಮುಂತಾದ ಹತ್ತಾರು ವಿಷಯಗಳ ಮೇಲೆ ಪಾಶ್ಚಾತ್ಯ ಭಾಷೆಗಳ ಅನನ್ಯ ಪ್ರಭಾವವನ್ನು ಗುರುತಿಸಬಹುದು. ಅದೇ ರೀತಿ ಅನೇಕ ವಿದ್ವಾಂಸರು ಭಾರತೀಯ ಭಾಷೆಗಳನ್ನು

ಕುರಿತು ಗಣನೀಯ ಕೆಲಸ ಮಾಡಿದ್ದಾರೆ. ಇದರ ಜೊತೆಗೆ ಸಾಂಪ್ರದಾಯಿಕವಾಗಿ 'ಸಂಸ್ಕೃತ' ಭಾಷೆಯಿಂದ ಕೂಡ ಕನ್ನಡಕ್ಕೆ ಅನೇಕ ಕೃತಿಗಳು ಬರತೊಡಗಿದವು. ಸಾಮಾಜಿಕ ಜಾಗೃತಿಗೆ ಇಡೀ ದೇಶದಲ್ಲಿ ಮುಂದಿದ್ದ 'ಬಂಗಾಳಿ' ಭಾಷೆಯಿಂದಲೂ ಕನ್ನಡ ಭಾಷೆ ಪ್ರೇರಣೆ ಪಡೆದಿದ್ದನ್ನು ಮರೆಯುವಂತಿಲ್ಲ. ಕನ್ನಡನಾಡು ಈ ಸಂದರ್ಭದಲ್ಲಿ ಹರಿದು ಹಂಚಿಹೋಗಿತ್ತು. ತಮಿಳು, ಮರಾಠಿ, ಮಲೆಯಾಳ ಹಾಗೂ ತೆಲುಗು ಪ್ರಾಂತ್ಯಗಳಲ್ಲಿ ಕನ್ನಡಿಗರು ಬಲವಂತದಿಂದ ಆಶ್ರಯ ಪಡೆದಿದ್ದರು.

ಈ ಕಾಲದ ಲೇಖಕರು ಕನ್ನಡ ಏಳಿಗೆಯ ಬಗ್ಗೆ ತೀವ್ರವಾದ ಕಾಳಜಿ ವಹಿಸಿ ಸಂಸ್ಕೃತ, ಇಂಗ್ಲಿಷ್, ಮರಾಠಿ, ಬಂಗಾಲಿ ಭಾಷೆಗಳ ಉತ್ತಮ ಸಾಹಿತ್ಯವನ್ನು ಕನ್ನಡಕ್ಕೆ ತರುವ ಪ್ರಯತ್ನ ನಡೆಸಿದರು. ಕನ್ನಡ ಲೇಖಕರಲ್ಲಿ ಸ್ವಭಾಷೆ ಸಂಸ್ಕೃತಿಗಳ ಪ್ರಜ್ಞೆ ಸ್ಫುರಣಗೊಂಡುದೊಂದು ಕನ್ನಡ ನಾಡಿನ ಭಾಗ್ಯ ವಿಶೇಷ. ಹೊಸಗನ್ನಡದ ಅರುಣೋದಯದ ಈ ಅವಧಿಯಲ್ಲಿ ನಡೆದ ಭಾಷಾಂತರ ಕ್ರಿಯೆಯೇ ಮುಂದಿನ ಸೋಪಜ್ಞ ಸಾಹಿತ್ಯ ಸೃಷ್ಟಿಗೆ ಸ್ಫೂರ್ತಿ ಪ್ರೇರಣೆಯನ್ನು ನೀಡಿತು. ಭಾಷಾಂತರ ಯುಗವೆಂದು ಕರೆಯಬಹುದಾದ ಈ ಕಾಲದಲ್ಲಿ ಸತ್ವ ಹಾಗೂ ಮೊತ್ತದ ದೃಷ್ಟಿಯಿಂದ ಉತ್ತಮ ಕೃತಿಗಳು ಹೊರಬಂದು ಕನ್ನಡ ಕಣಜವನ್ನು ತುಂಬಿದವು.

ಸಂಸ್ಕೃತವು ಪ್ರಾಚೀನ ಕಾಲದಿಂದಲೂ ಭಾರತೀಯ ಭಾಷೆಗಳಿಗೆಲ್ಲಾ ಪ್ರೇರಕ ಶಕ್ತಿಯಾಗಿದೆ. ಅವುಗಳ ಬೆಳವಣಿಗೆಗೆ ಪೋಷಣೆ ನೀಡಿದೆ. ಭಾರತೀಯ ಸಾಮುದಾಯಿಕ ವಿಚಾರಧಾರೆಗೆ ಪ್ರಭಾವಿಯಾದ ಅಭಿವ್ಯಕ್ತಿಯನ್ನು ನೀಡಿದುದು ಸಂಸ್ಕೃತ ಭಾಷೆ. ಸಂಸ್ಕೃತ ಭಾರತೀಯ ಸಂಸ್ಕೃತಿಯ ಉದಾತ್ತ ಮೌಲ್ಯಗಳನ್ನು ಪ್ರೇರೇಪಿಸುವ ದಾರ್ಶನಿಕ ವೈಭವವನ್ನು ನಿರೂಪಿಸುವ ಉತ್ತಮ ಕೃತಿಗಳಿಗೆ ಜನ್ಮ ನೀಡಿರುವುದಲ್ಲದೆ ಆರ್ಯ ಭಾಷಾ ವರ್ಗದ ಸಾಹಿತ್ಯದ ಮೇಲೂ ದ್ರಾವಿಡ ವರ್ಗದ ಭಾಷೆಗಳ ಸಾಹಿತ್ಯದ ಮೇಲೂ ಗಾಢವಾದ ಪ್ರಭಾವ ಬೀರಿದೆ. ಈ ಕೃತಿಗಳ ಅನುವಾದದಿಂದಾಗಿ ಕನ್ನಡ ಭಾಷೆಯು ನೈಜ-ಸ್ಪಂದನ ವಿನ್ಯಾಸಗಳು ಮೈವೆತ್ತು ಸೋಪಜ್ಞತೆಯ ಸಂಚಾರವಾಗಿದೆ.

ಅನುವಾದ ಕೃತಿಗಳಿಂದ ಆಧುನಿಕ ಕನ್ನಡದ ನಿರ್ಮಾಣ ಕಾರ್ಯ ತ್ವರಿತಗತಿಯಲ್ಲಿ ನಡೆಯಿತು. ಗದ್ಯ ಪದ್ಯಗಳೆರಡರಲ್ಲೂ ಅನುವಾದ ಕಾರ್ಯ ನಡೆದವು. ಪದ್ಯದಲ್ಲಿ ದೇಶೀ ಸಂಗೀತ ವೈಭವವು ಸೂರೆಯಾಗಿದ್ದರೆ ಗದ್ಯದಲ್ಲಿ ದೇಶೀ ಪ್ರಚುರವಾದ ಭಾಷೆಯ ಹೇರಳ ಪ್ರಯೋಗ ನಡೆಯಿತು. ಗದ್ಯವು ಆಧುನಿಕ ಸಂವೇದನೆಗೆ ಯೋಗ್ಯವಾಹಕವಾದರೂ ಈ ಯುಗದ ಭಾಷಾಂತರಗಳಿಂದ ಕನ್ನಡಕ್ಕೆ ಸಂದ ಬಹುದೊಡ್ಡ ಉಪಕೃತಿ.

ಹತ್ತೊಂಬತ್ತನೇ ಶತಮಾನದ ಸಾಹಿತ್ಯದ ಬರಡು ಪರಿಸ್ಥಿತಿ ಬಗ್ಗೆ ತೀ.ನಂ.ಶ್ರೀ. ಯವರು ಹೀಗೆ ಹೇಳಿದ್ದಾರೆ : "ಕನ್ನಡದಲ್ಲಿ ಪ್ರೌಢಕಾವ್ಯ ರಚನೆ ಸುಮಾರು 1700ರ ವೇಳೆಗೆ ಚಿಕ್ಕದೇವರಾಜ ಒಡೆಯರ ಆಳ್ವಿಕೆಯ ಕೊನೆಯ ಹೊತ್ತಿಗೆ ನಿಂತುಹೋಗಿತ್ತು. ಅಲ್ಲಿಂದ ಮುಂದೆ ದೌರ್ಬಲ್ಯ, ಅಸಾರತೆ, ಅನ್ಯಾಕ್ರಮಣ ಮೊದಲಾದವು ರಾಜಕೀಯ ಪ್ರಪಂಚದಲ್ಲಿ ಕಾಣಿಸಿಕೊಂಡಂತೆಯೇ ಸಾಹಿತ್ಯ ಪ್ರಪಂಚದಲ್ಲಿಯೂ ಕಾಣಿಸಿಕೊಂಡವು" ಆ ಸಮಯದ ಸಾಹಿತ್ಯದ ಪರಿಸ್ಥಿತಿ ಬಗ್ಗೆ 'ಶ್ರೀ'ಯವರು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ: "ಈಚೀಚೆಗಂತೂ ಯಕ್ಷಗಾನ, ದೊಂಬಿದಾಸರಪದ, ಶುಕ ಸಪ್ತತಿ, ಹಲ್ಲಿಯ ಶಕುನ ಇವೇ ಜನಗಳಿಗೆ ಮಹಾಕಾವ್ಯಗಳು. ಏನು ಇಕ್ಕಟ್ಟಿನಲ್ಲಿ ಸಿಕ್ಕಿದೆವು! ಹಿಂದಿನ ಸಂಸ್ಕೃತದ ಪ್ರಾಬಲ್ಯವೂ, ಅದರ

ಕಾವ್ಯಮಾರ್ಗವೂ ಹೆಚ್ಚುವಂತೆ ತೋರುತ್ತದೆ. ಆದರೆ ಧೃಡವಾಗಿ ಇನ್ನೂ ಎಲ್ಲರ ಮನಸ್ಸಿಗೂ ಹತ್ತಿಲ್ಲ. ನಮಗೇನೋ ಇದು ಸ್ವತಃ ಸಿದ್ಧವಾಗಿ ಕಾಣುತ್ತದೆ. ಇಂಗ್ಲಿಷ್ ಸಾಹಿತ್ಯವೇ ಜೀರ್ಣವಾದ ನಮ್ಮ ಕಾವ್ಯಮಾತೆಯನ್ನು ಕೈಕೊಟ್ಟು ಎತ್ತಬೇಕು. ಇಂಗ್ಲಿಷ್ ಸಾಹಿತ್ಯವೇ ಸಂಸ್ಕೃತದಿಂದ ನಮ್ಮ ಕಾವ್ಯಮಾತೆಗೆ ಇಳಿದಿರುವ ದೋಷಗಳನ್ನು ಪರಿಹಾರ ಮಾಡಬೇಕು.'' ಸತ್ವಶೀಲತೆಯನ್ನು ಕಳೆದುಕೊಂಡು ನಿಸ್ಸಾರವಾದ ಕನ್ನಡ ಸಾಹಿತ್ಯಕ್ಕೆ ಹೊಸತನವನ್ನು ನೀಡಿ ಸತ್ವಶೀಲವನ್ನಾಗಿ ಮಾಡಲು ಅನೇಕರು ಬಯಸಿದ್ದರು ಎಂಬುದು ಈ ಮಾತುಗಳಿಂದ ಸ್ಪಷ್ಟವಾಗುತ್ತದೆ. 'ಏಕೀಕರಣ'ದ ಕೂಗು ಕೇಳಿ ಬಂದರೂ ಕನ್ನಡದ ಹಿರಿಯ ಸಾಹಿತಿಗಳು ದೇಶದ ಆಯಾಯ ಭಾಷೆಗಳ ಅತ್ಯುತ್ತಮ ಚಿಂತನೆಗಳನ್ನು ಕನ್ನಡದಲ್ಲಿ ಪ್ರತಿಮೂಡಿಸುವ ಪ್ರಯತ್ನನಡೆಸಿದ್ದರು. ಡಾ. ಎಂ. ಎಂ. ಕಲಬುರ್ಗಿ ಹೇಳುವಂತೆ-''ಕನ್ನಡ ಭಾಷೆ ಸಾಹಿತ್ಯಕವಾಗಿ ಸುದೈವಿ, ಆದರೆ ಸಾಮಾಜಿಕವಾಗಿ ದುರ್ದೈವಿ.'' ಹೊಸಕಾಲದಲ್ಲಿ ಅನುವಾದಕ್ಕೆ ಸ್ಪಷ್ಟ ದಿಕ್ಕನ್ನು ಸೂಚಿಸಿದವರು ಬಸವಪ್ಪಶಾಸ್ತ್ರಿಗಳೆಂದೇ ಹೇಳಬೇಕು. ಇಂಗ್ಲಿಷ್‌ನಿಂದ 'ಶೂರಸೇನ', ಸಂಸ್ಕೃತದಿಂದ 'ಅಭಿಜ್ಞಾನ ಶಾಕುಂತಲ' ಕಾವ್ಯವನ್ನು ಅನುವಾದಿಸಿದ ಬಸವಪ್ಪಶಾಸ್ತ್ರಿಗಳು ಮುಂದಿನ ಕನ್ನಡ ಸಾಹಿತ್ಯ ಹೇಗೆ ಬೆಳೆಯಬೇಕೆಂಬುದಕ್ಕೆ ದಿಕ್ಸೂಚಿ ತೋರಿಸಿದ್ದಾರೆ.

## 1. ಸಂಸ್ಕೃತದಿಂದ ಕನ್ನಡಕ್ಕೆ ಬಂದ ಅನುವಾದ ಸಾಹಿತ್ಯ

ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ ಈ ಕಾಲದಲ್ಲಿ ಅಪೂರ್ವ ಕೆಲಸ ಮಾಡಿದೆ. ಜಯರಾಯಚಾರ್ಯ, ಸುಬ್ಬಶಾಸ್ತ್ರಿ, ಅನಂತನಾರಾಯಣಶಾಸ್ತ್ರಿ ಮೊದಲಾದವರು ಅನುವಾದ ಕ್ಷೇತ್ರದಲ್ಲಿ ದುಡಿದಿದ್ದಾರೆ. ಚುರಮುರಿ ಶೇಷಗಿರಿರಾವ್ (1827-84) ಅವರು ಅನುವಾದಿಸಿದ ಕಾಳಿದಾಸನ 'ಅಭಿಜ್ಞಾನ ಶಾಕುಂತಲಾ' ನಾಟಕದಲ್ಲಿ ಜಾನಪದ ಸೊಗಡನ್ನು ಗುರುತಿಸಬಹುದು. ಇದರ ಜೊತೆಗೆ 'ತೋರುಗಲ್ಲು' 'ಮೃಚ್ಛಕಟಿಕ' ಎಂಬ ನಾಟಕಗಳನ್ನೂ ಅನುವಾದಿಸಿದ್ದಾರೆ. ಹೆಸ್ಸಿ ಸಿಲ್ಲಿಂಗ್ಸ್‌ನ ಕೃತಿಯೊಂದನ್ನು ಆಧರಿಸಿ 'ಸುಂದರ ನಾಟಕ' ಎಂಬ ಏಕಾಂಕ ನಾಟಕವನ್ನು ಅನುವಾದಿಸಿದ್ದಾರೆಂದು ಹೇಳಲಾಗಿದೆ. ಲಕ್ಷ್ಮೀಶ ಕವಿಯ 'ಜೈಮಿನಿ ಭಾರತ'ವನ್ನ ಮರಾಠಿ ಭಾಷೆಗೆ ಅನುವಾದಿಸಿದ್ದಾರೆ. ಕನ್ನಡದಿಂದ ಬೇರೆ ಭಾಷೆಯ ಜನರಿಗೆ ತಮ್ಮ ಸಾಹಿತ್ಯವನ್ನು ಪರಿಚಯ ಮಾಡುವುದು ಅನುವಾದದ ಕೆಲಸವೆಂಬುದು ಚುರುಮುರಿ ಶೇಷಗಿರಿರಾಯರ ಅಭಿಮತ.

ಧೊಂಡೋ ನರಸಿಂಹ ಮುಳಬಾಗಿಲು (1848-1898) ಇವರು ಕನ್ನಡ-ಸಂಸ್ಕೃತ ಭಾಷೆಗಳಲ್ಲಿ ಉದ್ದಾಮ ಪಂಡಿತರು ಇವರು 'ಭವಭೂತಿ'ಯ 'ಉತ್ತರರಾಮಚರಿತೆ', ಶೂದ್ರಕವಿಯ 'ಮೃಚ್ಛಕಟಿಕ' ಹಾಗೂ ಭಟ್ಟನಾರಾಯಣನ 'ವೇಣಿ ಸಂಹಾರ' ಕೃತಿಗಳನ್ನು ಅನುವಾದ ಮಾಡಿದ್ದಾರೆ. ಮೈಸೂರು ಚಾಮರಾಜೇಂದ್ರ ಒಡೆಯರ ಆಸ್ಥಾನದಲ್ಲಿದ್ದ ಸೋಸಲೆ ಅಯ್ಯಶಾಸ್ತ್ರಿ (1854-1934) ಶೇಷರಾಮಾಯಣ ಕೃತಿ ಅನುವಾದಿಸಿದ್ದಾರೆ. ಉತ್ತರ ರಾಮಾಯಣದ ರಾಮಶ್ವಮೇಧ ಇದರ ಕಥಾ ಭಾಗ. ಇದು ವಾರ್ಧಕ ಷಟ್ಪದಿಯಲ್ಲಿದೆ. ಅಲ್ಲದೆ ಅರಮನೆಯ ನಾಟಕ ತಂಡಕ್ಕೆ ನಾಟಕಗಳನ್ನು ರಚಿಸಿಕೊಟ್ಟಿದ್ದಾರೆ. ಇವರು ಕಾಳಿದಾಸನ 'ವಿಕ್ರಮೋರ್ವಶೀಯ' ಅನುವಾದಿಸಿದ್ದಾರೆ. ಈ ನಾಟಕ ಮೂರು ಗಂಟೆಯ ಕಾಲ ಆಡಲು ಅನುಕೂಲವಾಗಿದೆ. ಕೆಲವು ವರ್ಣನೆಗಳನ್ನು ಬಿಟ್ಟು ನಾಟಕದ ಸಂವಿಧಾನದಲ್ಲಿ ಕೆಡುಕಾಗದಂತೆ ಪದ್ಯಗಳನ್ನು ಸೇರಿಸಿ ರಚಿಸಲಾಗಿದೆ. ಅನುವಾದ ತಿಳಿಗನ್ನಡದಲ್ಲಿದೆ.

ಎಲೆ ಕೋಮಲಾಂಗಿ ನಿನ್ನಯ
ತಿಳಿವನೆ ಹಾರ್ಕೃತಿರ್ಪದಾಸವನ್ನುಂ
ತಿಳಿದಿಪ ಮನದಿಂ ನಿನ್ನಯ
ಲಲಿತಾಂಗನ ನೀತಿಂದೇಕೆ ಕಂಡಿವೆ ಮಗುವೆ (ಪುಟ 59)

ಅನುವಾದದ ಕೆಲವು ಪದ್ಯಗಳು ಸಂಸ್ಕೃತ ಭೂಯಿಷ್ಮತೆಯಿಂದ ಕೂಡಿವೆ :

ಎಲೆ ನೀಲಕಂಠ ನುಡಿನೀ
ನೆಲಸಿದೆ ಸೋತ್ಕಂಠೆಯಂ ಸೀತಾಪಾಂಗನದೀ
ರ್ಘಲಸದ ಪಾಂಗೆಯ ನೆನ್ನಯ
ಲಲನೆಯ ನೀವಸಿದೆ ಕಂಡೆಯೇಂ ದುಷ್ಟ್ರಿಯೆಯಂ (ಪುಟ 62)

ಕೆಲವೊಂದು ಕಡೆ ಶಾಸ್ತ್ರಿಗಳು ಸ್ವಂತ ವಿಚಾರಗಳನ್ನು ಸೇರಿಸಿದ್ದಾರೆ. ಉದಾಹರಣೆಗೆ ವಿದೂಷಕನ ಮಾತು- ''ಬ್ರಾಹ್ಮಣಾರ್ಥಕ್ಕೆ ಒಪ್ಪಿಕೊಂಡು ಎಲೆಯ ಮುಂದೆ ಕುಳಿತು ಬ್ರಾಹ್ಮಣನು ಚಪಲ ಪಡೆದ ಹಾಗೆ ತನ್ನ ನಾಲಗೆಯನ್ನು ಹೇಗೆ ಪಡೆದುಕೊಳ್ಳಲಾರನೋ ಹಾಗೇ, ಜನಸಂಘದಲ್ಲಿ ರಾಜ್ಯ ರಹಸ್ಯವನ್ನು ಹೊರಪಡಿಸದ ಹಾಗೆ, ಈ ನನ್ನ ನಾಲಿಗೆಯನ್ನು ತಡೆದುಕೊಳ್ಳಲಾರೆ'' (ಪುಟ 14) ಇವರ 'ಕರ್ನಾಟಕ ರಾಮಾಯಣ ನಾಟಕ' ಕಂದಪದ್ಯ ಹಾಗೂ ವೃತ್ತಗಳಲ್ಲಿದ್ದು ಗದ್ಯ ಪಕ್ವವಾಗಿದೆ. ಅರ್ಥಗರ್ಭಿತವಾದ ಸಂಭಾಷಣೆ ಇರುವ ಈ ಕೃತಿ ಒಂದು ಉತ್ತಮ ನಾಟಕವೆನ್ನಬಹುದು.

ಹಳೆಯ ಪೀಳಿಗೆಯ ಶ್ರೇಷ್ಠ ವಿದ್ವಾಂಸರಲ್ಲಿ ಎಸ್. ಜಿ. ನರಸಿಂಹಾಚಾರ್ (1802-1907) ಒಬ್ಬರು. ಅವರ ಪ್ರಮುಖ ಕೃತಿಗಳು 'ಅಜನೃಪ ಚರಿತೆ', 'ದಿಲೀಪ ಚರಿತೆ', 'ಪದ್ಯಸಾರ', 'ಆದಿಪುರಾಣ'. 'ಜಗನ್ನಾಥ ವಿಜಯ' ಇತ್ಯಾದಿ. 'ಅಜನೃಪಚರಿತೆ' ಕುಸುಮ ಷಟ್ಪದಿಯಲ್ಲಿದೆ. ಉದಾಹರಣೆಗೆ ಆ ಕೃತಿಯ ಪದ್ಯ ನೋಡಿ-

ಆಲದ ಸರವನು ತಳೆದು ಸುರ್ಕುಡೆ
ಸುಳಿಗೊಳುತೆ ತುಂಬಿಗಳ ಬಳಗದ
ಹೊಳಹೂರಣ ಕಿಸಿತೆಸೆವ ನಿನ್ನೀ ಕುರುಳ ಮಾಲೆಗಳ
ಅಲುಗಿಸುತಲಡಿಗಡಿಗೆ ಮೆಲ್ಲನೆ
ಸುಳಿವ ಮಾರುತ ನನ್ನ ಮನದೊಳು
ಮೊಳಕೆಯಿಡುವುದು ಮರಳಿ ಬಹೆ ನೀನೆಂಬ ಬಯಕೆಯನು.

''ಹಳೆಯ ಕಾವ್ಯದೋಷಗಳಲ್ಲೊಂದಾದ ಮತ್ತು ಅನುಚಿತ ವರ್ಣನೆಯನ್ನು ಎಸ್. ಜಿ. ನ. ಜೊಟ್ಟು ಮಾಡಿ ತೋರಿಸಿದ್ದಾರೆ. ಅವರು ಮಾಡಿರುವ ಅನುವಾದ ಸರಳತೆ, ಲಾಲಿತ್ಯಗಳು ಬೇರೆಯವರ ಅನುವಾದಗಳಲ್ಲಿ ಬಂದಿದೆಯೇ ಎಂಬುದು ಸಂದೇಹ.''[2]

ಅದೇ ಸಂದರ್ಭವಲ್ಲಿ ರಾಮಾಯಣ, ಮಹಾಭಾರತ, ಪುರಾಣಗಳನ್ನು ವಿವಿಧ ರೂಪಗಳಲ್ಲಿ ಅನುವಾದಿಸುವ ಕಾರ್ಯ ನಡೆದಿದೆ.

ಎಂ. ಎ. ರಾಮಾನುಜ ಐಯ್ಯಂಗಾರ್ (1864-1937)ಒಳ್ಳೆಯ ವಿದ್ವಾಂಸರು. ಸಂಸ್ಕೃತ ಹಾಗೂ ಕನ್ನಡದಲ್ಲಿ ಪ್ರೌಢಿಮೆಗಳಿಸಿದ ವ್ಯಕ್ತಿ. ಇವರು ಕೆಲವು ನಾಟಕಗಳ ವ್ಯಾಖ್ಯಾನುವಾದವನ್ನು ಮಾಡಿದ್ದಾರೆ. ರನ್ನನ 'ಗದಾಯುದ್ಧ' ಹರಿಹರನ 'ಗಿರಿಜಾ ಕಲ್ಯಾಣ' ಆಂಡಯ್ಯನ 'ಕಬ್ಬಿಗರ ಕಾವ್ಯ' ಜನ್ನನ 'ಯಶೋಧರ ಚರಿತೆ' ಮುಂತಾದ ಕಾವ್ಯಗಳನ್ನು ಸಂಪಾದಿಸಿ ಪ್ರಕಟಿಸಿದ ಕೀರ್ತಿ ಇವರದು.

ಸಿದ್ಧಾಂತಿ ಶಿವಶಂಕರ ಶಾಸ್ತ್ರಿ (1894-1942) ಒಳ್ಳೆಯ ವಿದ್ವಾಂಸರು. ಕನ್ನಡ, ಸಂಸ್ಕೃತ, ತೆಲುಗಿನಲ್ಲಿ ಪಾಂಡಿತ್ಯ ಗಳಿಸಿದ್ದರು. 'ಗಳಪುರೀಮಹಾತ್ಮ್ಯಂ' 'ಕರ್ನಾಟಕ ನಳೋಪಾಖ್ಯಾನ' 'ಅಭಿನವ ಕಾದಂಬರಿ' ಕರ್ನಾಟಕ ನರಕಾಸುರ ವಿಜಯವ್ಯಾಯೋಗಂ' 'ಶ್ರೀ ಶಂಕರ ಕಥಾಮೃತ' ಅವರ ಪ್ರಮುಖ ಕೃತಿಗಳು.

ನಂಜನಗೂಡು ಸುಬ್ಬಾಶಾಸ್ತ್ರಿ (1834-1906)ಯವರು ಸುಂದರಕಾಂಡದ ಸುಬ್ಬಾಶಾಸ್ತ್ರಿಗಳೆಂದು ಪ್ರಸಿದ್ಧರಾಗಿದ್ದರು. ಇವರ ಕಾವ್ಯ 'ಸೀತಾಚರಿತ್ರೆ' ಜೊತೆಗೆ ಶೂದ್ರಕನ 'ಮೃಚ್ಛಕಟಿಕ' ನಾಟಕವನ್ನು ಅನುವಾದಿಸಿದ್ದಾರೆ. ಸಂಸ್ಕೃತದಲ್ಲೂ ಕೃತಿ ರಚಿಸಿದ ಹೆಗ್ಗಳಿಕೆ ಇವರದು. ಇವರ ಜೊತೆ ನಿ. ಶಾಮಚಾರ್ಯರ 'ಮಹಾಭಾರತಂ' (1917) ಹಾಗೂ ಎಂ. ಕೃಷ್ಣಪ್ಪ (1913) ಅವರ 'ಶ್ರೀರಾಮಚರಿತೆ' ಅನುವಾದ ಕೃತಿಗಳನ್ನು ನೆನೆಯಬೇಕು.

ನಂಜನಗೂಡು ಅನಂತನಾರಾಯಣಶಾಸ್ತ್ರಿ : ಹರ್ಷನ 'ನಾಗಾನಂದ' ನಾಟಕವನ್ನು 'ಕರ್ನಾಟಕ ನಾಗಾನಂದ' ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. ನಾಟಕದ ವಸ್ತು, ಪಾತ್ರಗಳ ನಿರೂಪಣೆ, ಆರಂಭ, ಅಂತ್ಯಗಳು ಸಂಪೂರ್ಣವಾಗಿ ಶಾಸ್ತ್ರೀಯ ರೀತಿಯಲ್ಲಿ ವಿಂಗಡಿಸಲ್ಪಟ್ಟರೆ ಭಾಷೆ ಸಂಪೂರ್ಣವಾಗಿ ಹೊಸಗನ್ನಡವಲ್ಲ, ನಡುಗನ್ನಡವೆನ್ನಬಹುದು. ಜೀಮೂತವಾಹನ, ವಿಶ್ವಾವಸು, ಮಿತ್ರಾವಸು, ಮಲಯವತಿ ಮುಂತಾದ ಮನುಷ್ಯ ಪಾತ್ರಗಳ ಜೊತೆ ಗರುಡ, ಗೌರಿ ಮುಂತಾದ ಅತಿಮಾನುಷ ಪಾತ್ರಗಳನ್ನು ಸೃಷ್ಟಿಸಲಾಗಿದ್ದರೂ ಜೀಮೂತವಾಹನ ಕೊನೆಯಲ್ಲಿ ದೈವತ್ವಕ್ಕೆ ಏರುತ್ತಾನೆ. ಈ ನಾಟಕದಲ್ಲಿ ಕರುಣಾರಸವೇ ಪ್ರಧಾನವಾಗಿದೆ. ಮೂಲವನ್ನು ನಿಷ್ಠೆಯಿಂದ ಅನುಸರಿಸಲಾಗಿದೆ. ಎಂ. ಎಲ್. ಶ್ರೀಕಂಠೇಶ ಗೌಡರು (1901) 'ಜಾನಕಿ ಪರಿಣಯ' ಎಂಬ ಸಂಸ್ಕೃತ ನಾಟಕದ ಆಧಾರದ ಮೇಲೆ 'ಸೀತಾಸ್ವಯಂವರ' ಎಂಬ ಕೃತಿ ರಚಿಸಿದ್ದಾರೆ. ನಾಟಕದ ಪ್ರೇಕ್ಷಕರಿಗೆ ಮನರಂಜನೆಗಾಗಿ ಗದ್ಯದ ಜೊತೆ ಪದ್ಯಗಳನ್ನು ಹಳಗನ್ನಡ, ಹೊಸಗನ್ನಡದಲ್ಲಿ ಬರೆದಿದ್ದಾರೆ. 'ಅದ್ಭುತ ಕಲ್ಪನೆ'ಯನ್ನು ಮಾರ್ಮಿಕವಾಗಿ ಹೇಳುವುದಕ್ಕೆ ಇದು ಸಹಾಯಕವಾಗಿದೆ. ಐದು ಅಂಕಗಳಲ್ಲಿ ಈ ನಾಟಕ ಮೂಡಿ ಬಂದಿದೆ. ಈ ನಾಟಕದಲ್ಲಿ ಸಮಾಜದ ಅರೆ-ಕೊರೆಗಳನ್ನು ಹೇಳಲಾಗಿದೆ. ಭಾಷಾ ಶೈಲಿ ಆಧುನಿಕವಾಗಿದ್ದರೂ, ಕಂದ, ವೃತ್ತ, ಷಟ್ಪದಿಗಳ ಬಳಕೆಯಾಗಿದೆ. ನಾಟಕದ ತಂತ್ರ ಕೂಡಾ ಹೊಸದು. ಆಡುಮಾತಿನಲ್ಲಿದ್ದ ಇಂಗ್ಲಿಷ್ ಪದ ಬಳಕೆಯಾಗಿದೆ. ಉದಾಹರಣೆಗೆ 'ಸೀತಾಸ್ವಯಂವರ'ದ ಈ ಸಂಭಾಷಣೆ ನೋಡಿ

'ಆಚಾರಗಿರಿಯನ್ನೆಲ್ಲಾ ಸುತ್ತುಬಿಡುತ್ತೇನು ಮೊಸೆ ಬಿಟ್ಟು
ಬಿಡುವೇನು, ಈಚೆ ಮೂಲೆಯಿಂದ ಆಚೆ ಮೂಲೆಗೆ
ಬಿ ಭೀಮರಾವ್, ಎ.ಸ್ಕೆನು ಜಟಕಾಯಿ ಬಿಡುತ್ತೇನು (ಪುಟ 124)

ಎಸ್. ಜಿ. ನರಸಿಂಹಾಚಾರ್ಯರು ಕಾಳಿದಾಸನ ರಘುವಂಶದಿಂದ 'ಅಜನೃಪ ಚರಿತೆ' (1900) ಮತ್ತು 'ದಿಲೀಪ ಚರಿತೆ' (1897)ಗಳನ್ನು ಅನುವಾದಿಸಿ ಹೊಸತನವನ್ನು ತೋರಿದ್ದಾರೆ. ಕ್ರಮವಾಗಿ ಭಾಮಿನಿ ಹಾಗೂ ಕುಸುಮ ಷಟ್ಪದಿಯಲ್ಲಿರುವ ಈ ಎರಡೂ ಕಾವ್ಯಗಳಲ್ಲಿ ಬೇರೆ ಕಾವ್ಯಗಳಲ್ಲಿರುವಂತೆ ಕವಿಕಲ್ಪಿತವಾದ ವರ್ಣನೆ ಹೆಚ್ಚಾಗಿ ಇಲ್ಲ. ಅನುಭವಕ್ಕೆ ಬಾರದ ಅಲಂಕಾರ, ಆಡಂಬರಗಳು ಕಾಣದೆ, ಸ್ವಾಭಾವಿಕವಾದ ಸಂದರ್ಭೋಚಿತವಾದ ಹೃದಯಂಗಮ ವರ್ಣನೆ ಇದೆ. ಹಳೆಯ ಕಾವ್ಯಗಳಲ್ಲಿನ ದೋಷಗಳನ್ನು ನಿವಾರಿಸಿ ಹೊಸತನ್ನು ಕೊಡುವುದು ಅವರ ಉದ್ದೇಶ. ಅವರ ಅನುವಾದಗಳಲ್ಲಿ ಸರಳತೆ ಲಾಲಿತ್ಯಗಳನ್ನು ಕಾಣಬಹುದು.

''ಹಾಸಿಗೆಯೊಳೆಸಿದಿರ್ದ
ಕೂಸಿನೊಡಲಿನ ಬೆಳಗು
ಸೂಸಿ ಸುತ್ತಲುವಿರ್ದ ದೀಪಿಗೆಗಳ
ಭೂಸುರತೆಯನು ಮರೆಸಿ
ಮೂಸಿಸಲು ಬಣ್ಣದೊಳು
ಪೊಸಿರ್ದು ಸೊಡರುಗಳ ಪೋರುರ್ದುವು (ದಿಲೀಪ ಚರಿತೆ 1897 ಸಂ. 2 ಪದ್ಯ 14)

ಈ ಭಾಗವನ್ನು ಬೇರೊಬ್ಬ ಕವಿಗಳು ಅನುವಾದಿಸಿದ್ದು ಹೋಲಿಸಿದಾಗ ವ್ಯತ್ಯಾಸ ಕಾಣಸಿಗುವುದು-

''ಸ್ಫೂರ್ತಿತಾಗ್ರಹದಲ್ಲಿ ಸೊಡರಿನ
ಜ್ಯೋತಿಯಿರುಳಿನ ಕಾಲದಲಿ ಪ್ರ
ಖ್ಯಾತವಾದಾ ರಾಜಪುತ್ರನ ಕಾಂತಿಯಿಂದಾಗಿ
ಸೋತು ಸೂರ್ಯನು ತೇಜದಿಂಬ
ದ್ಯೋತ ಭಾತಲದಲ್ಲಿ ಬೆಳಗುವ
ರಾತಿಯಿಂ ವಿಸ್ತೇಜವಾಗಿವುರೇನು ಹೇಳುವೆನು (ಕನ್ನಡ ರಾಘವಾಂಕ : ಸರ್ಗ 2 ಶ್ಲೋಕ 15 ವಾಗ್ಭೂಷಣ ಮಾರ್ಚ್ 1921)

ಮೇಲ್ಕಂಡ ಪದ್ಯದಲ್ಲಿ ಎಸ್. ಜಿ. ನ. ರ ಪದ್ಯದಲ್ಲಿನ ಸರಳತೆ, ಲಾಲಿತ್ಯ ಕಾಣುವುದಿಲ್ಲ. ಎಸ್. ಜಿ. ನ. ರವರು ಸಾಧ್ಯವಾದಷ್ಟು ಮಟ್ಟಿಗೂ ಕನ್ನಡ ಪದಗಳನ್ನೇ ಬಳಸುತ್ತಿದ್ದುದನ್ನು ನೋಡಬಹುದು.

'ಅಜನೃಪಚರಿತೆ'ಯಲ್ಲಿ ಇಂದುಮತಿಯನ್ನು ಚಿತೆಯ ಮೇಲೆ ಇಡುವಾಗ ಆ ಚಿತೆಯ ಕಾಠಿಣ್ಯವನ್ನು ತೋರಿಸುವ ಪದ ಪ್ರಯೋಗ ಎಷ್ಟು ಚೆನ್ನಾಗಿ ಬಂದಿದೆ ಎಂದು ಕೆಳಗಿನ ಸಾಲುಗಳಲ್ಲಿ ವೇದ್ಯವಾಗಿದೆ :

ಮಲಗಿದವುದೆಂತಕ್ಕಟಕ್ಕಟ
ಕುಲಿಶಕರ್ಕಶ ಶುಷ್ಕ ಕಾಷ್ಠಾ
ವಳಿಯ ಭೀಕರ ಚಿತೆಯ ನಿಷ್ಠುರ ಸ್ಪಷ್ಟ ಭಾಗದಲಿ । (ಪುಟ 66)

ಎಂ. ಎಲ್. ಶ್ರೀಕಂಠೇಶಗೌಡ ಅವರ 'ರಾಮವರ್ಮ ಲೀಲಾವತಿ' ಹಾಗೂ 'ಪ್ರತಾಪರುದ್ರ ದೇವ' ಕ್ರಮವಾಗಿ ಷೇಕ್ಸ್‌ಪಿಯರ್‌ನ 'ರೋಮಿಯೋ ಅಂಡ್ ಜ್ಯೂಲಿಯಟ್' ಹಾಗೂ 'ಮ್ಯಾಕ್‌ಬೆತ್' ಕೃತಿಗಳ ಅನುವಾದಗಳು. 'ರಾಮನೃಪ

ಚಂದ್ರಪ್ರಭ' ಇವರ ಸ್ವತಂತ್ರ ಕೃತಿ. ಜಾನಪದ ದಾಟಿಯಲ್ಲಿ ಮಾತುಗಳನ್ನು ಬಳಸಿ ತುಂಬಾ ಜನಾನುರಾಗಿಯಾಗಿದ್ದರು. ಅವರ ಮಾತಿನ ದಾಟಿಯ ಈ ಪದ್ಯ ನೋಡಿ-

"ಹಂಗೂ ಕೆಟ್ಟ ಹಿಂಗೂ ಕೆಟ್ಟ ರಂಗಧಾಮ
ತಂಗಳಿಟ್ಟು ಹಳಸಿಹೋಯ್ತೋ ಪಂಗನಾಮ"

ಜಯರಾಯಾಚಾರ್ಯರ ಗ್ರಂಥ 'ಕರ್ನಾಟಕ ವೇಣಿ ಸಂಹಾರ' ಎಂಬ ನಾಟಕವೂ ಹಳಗನ್ನಡ ಪದ್ಯಗಳಿಂದ ಹಾಗೂ ಹೊಸಗನ್ನಡದ ಸಂಭಾಷಣೆಗಳಿಂದ ಕೂಡಿದೆ. ಮೈಸೂರು ಸೀತಾರಾಮ ಶಾಸ್ತ್ರಿಗಳವರು 'ಪಾರ್ವತಿ ಪರಿಣಯ' ಹಾಗೂ 'ಇಂದ್ರಶೀಲವಿಜಯ' ಎಂಬ ಎರಡೂ ನಾಟಕಗಳನ್ನು ಸಂಸ್ಕೃತದಿಂದ ಅನುವಾದಿಸಿದ್ದಾರೆ.

ಸಿ. ಹನುಮಂತಗೌಡರು (1914) ಹಿರಣ್ಯಕಶ್ಯಪು ಪ್ರಹ್ಲಾದರ ಕಥೆಯನ್ನು ಆಧರಿಸಿ 'ಭಕ್ತಿ ವಿಜಯ' ಎಂಬ ನಾಟಕ ರಚಿಸಿದ್ದಾರೆ. ತಮ್ಮ ಮುನ್ನುಡಿಯಲ್ಲಿ ಲೇಖಕರು "ನಾಟಕದ ಪ್ರೇಕ್ಷಕರು ಖೇದಾಂತ ನಾಟಕಗಳನ್ನಾಗಲೀ ಚರಿತ್ರಾಂಗ ನಾಟಕಗಳನ್ನಾಗಲಿ ನೋಡುವುದಕ್ಕೆ ಪ್ರೋತ್ಸಾಹ ಕೊಡದಿದ್ದುದರಿಂದ ಪುರಾಣ ಪ್ರಸಿದ್ಧ ನಾಟಕಗಳನ್ನು ಬರೆಯಬೇಕೆಂದು ಈ ಪ್ರಹ್ಲಾದ ಚರಿತ್ರೆಯನ್ನು ಬರೆದೆ" ಎಂದಿದ್ದಾರೆ.

ಶಾಂತಿರಾಜಯ್ಯನವರು (1915) 'ಧನಕೀರ್ತಿ' ಎಂಬ ನಾಟಕವನ್ನು ಜೈಮಿನಿ ಭಾರತದಲ್ಲಿ ಬರುವ 'ಚಂದ್ರಹಾಸ' ಪ್ರಸಂಗದಿಂದ ಆರಿಸಿಕೊಂಡು ರಚಿಸಿದ್ದಾರೆ. ಇದರ ಮೂಲದ ಬಗ್ಗೆ ಅವರಲ್ಲಿ ಉಲ್ಲೇಖವಿಲ್ಲ. ಈ ಕೃತಿ 'ಪೂರ್ವಾಚಾರ್ಯ ಪ್ರಣೀತ'. ಈ ನಾಟಕದ ಶ್ರೀದತ್ತ ಹಾಗೂ ಧನಕೀರ್ತಿಯರು ಕ್ರಮವಾಗಿ ದುಷ್ಟಬುದ್ಧಿ ಹಾಗೂ ಚಂದ್ರಹಾಸರನ್ನು ಪ್ರತಿನಿಧಿಸುತ್ತದೆ.

ದೇವಶಿಖಾಮಣಿ ಆಳಸಿಂಗರಾಚಾರ್ಯ (1877-1940) ಅವರು ಸಂಸ್ಕೃತ ಹಾಗೂ ಕನ್ನಡದಲ್ಲಿ ಮಹಾ ಪಂಡಿತರು. ಸಂಸ್ಕೃತದಿಂದ ಅನೇಕ ಉತ್ಕೃಷ್ಟ ಕೃತಿಗಳನ್ನು ಅನುವಾದಿಸಿದ್ದಾರೆ. ಅವರ ಕೃತಿಗಳೆಂದರೆ ಚಲ್ವ ನಾರಾಯಣ ಶತಕಂ' ಪದ್ಯಗ್ರಂಥ ಶ್ರೀಮದ್ರಾಮಯಣ, ಶ್ರೀಮನ್ಮಹಾಭಾರತ, ಶ್ರೀಮದ್ಭಗವದ್ಗೀತ, ಸ್ವಪ್ನ ವಾಸವದತ್ತ, ಪಂಚರಾತ್ರ ಇತ್ಯಾದಿ. 'ಶ್ರೀಮತಿ ಪರಿಣಯ' ಇವರ ಉತ್ತಮ ಹಾಸ್ಯ ನಾಟಕವಾಗಿದೆ. ನಾರದ ಹಾಗೂ ಪರ್ವತ ಋಷಿಗಳು ರಾಜ ಅಂಬರೀಶನ ಮಗಳಾದ ಶ್ರೀಮತಿಯನ್ನು ಮದುವೆ ಮಾಡಿಕೊಳ್ಳಲು ಹೋಗಿ ನಗೆಗೀಡಾವ ಪ್ರಸಂಗವೇ ಇದರ ಕಥಾವಸ್ತು. ರಂಗ ಪ್ರದರ್ಶನಕ್ಕೆ ಉತ್ತಮ ಕೃತಿಯಾಗಿದೆ.

ಶಾಂತಕವಿ (1856-1926) ಅರ್ಥಾತ್ 'ಸಕ್ಕರಿ ಬಾಳಾಚಾರ್ಯ' ಸಂಸ್ಕೃತ ವಿದ್ವಾಂಸರ ಮನೆಯಲ್ಲಿ ಜನನ. 1873ರಲ್ಲೇ ಅಂದರೆ ತಮ್ಮ ಹದಿನೇಳನೇ ವಯಸ್ಸಿನಲ್ಲೇ ಇವರು 'ಉಷಾಹರಣ' ಎಂಬ ನಾಟಕ ರಚಿಸಿದರು. 'ಕರ್ನಾಟಕ ಸಂಗೀತ ಹಾಗೂ ನಾಟಕ ಮಂಡಳಿ' ಸ್ಥಾಪಿಸಿ ಅದರ ಮೂಲಕ 'ಶ್ರೀಯಾಳ ಸತ್ವಪರೀಕ್ಷೆ' 'ಕೀಚಕ ವಧೆ' 'ಸುಂದೋಪಸುಂದ ವಧೆ' 'ವತ್ಸಲಾಹರಣ' 'ಸೀತಾರಣ್ಯ ಪ್ರವೇಶ' 'ಸುಧನ್ವ ವಧೆ' 'ಶಕುಂತಲೆ' ಮೊದಲಾದ ನಾಟಕ ಪ್ರದರ್ಶಿಸಿದ್ದರು. ಒಟ್ಟು ಇವರು 65 ನಾಟಕಗಳನ್ನು ರಚಿಸಿದ್ದಾರೆ.

ನಂಜನಗೂಡು ಶ್ರೀಕಂಠಶಾಸ್ತ್ರೀ (ಕ್ರಿ. ಶ. 1884-1958) ಕನ್ನಡ, ಸಂಸ್ಕೃತ ಹಾಗೂ ತೆಲುಗು, ಭಾಷೆಗಳಲ್ಲಿ ಅಪಾರ ವಿದ್ವತ್ತು ಗಳಿಸಿದವರು. 'ಸೀತಾಪರಿಣಯ' 'ಸೀತಾಸ್ವರ್ಣಮೃಗ' 'ಅಭಿಜ್ಞಾನ ಪ್ರದಾನ' 'ಧ್ರುವವಿಜಯ' 'ರಾಜಸೂಯಯಾಗ' ಮೊದಲಾದ ನಾಟಕಗಳನ್ನು ರಚಿಸಿದ್ದಾರೆ. ಇವುಗಳಿಗೆಲ್ಲಾ ಸಂಸ್ಕೃತ ನಾಟಕಗಳೇ ಮೂಲ. ಇವರು ಸಂಸ್ಕೃತದಿಂದ ಅಲ್ಲದ ತೆಲುಗಿನಿಂದಲೂ ಕನ್ನಡಕ್ಕೆ ಅನೇಕ ಕೃತಿಗಳನ್ನು ಅನುವಾದಿಸಿದ್ದಾರೆ.

ಸಂಸ್ಕೃತ ನಾಟಕಗಳನ್ನು ಕನ್ನಡ ಭಾಷೆಯಲ್ಲಿ ಅನುವಾದ ಮಾಡಿ ರಂಗಪ್ರದರ್ಶನಕ್ಕೆ ಅಣಗೊಳಿಸಿದವರಲ್ಲಿ ಬೆಳ್ಳಾವೆ ನರಹರಿಶಾಸ್ತ್ರಿ(1884-1940)ಗಳು ಒಬ್ಬರು. 'ಕೃಷ್ಣಲೀಲಾ', 'ರುಕ್ಮಿಣಿ ಸ್ವಯಂವರ', 'ಭೋಜ ಕುಮಾರ ಕಾಳಿದಾಸ' 'ಸತಿ ಸುಲೋಚನ' ಮೊದಲಾದ ನಾಟಕಗಳು ಸಂಸ್ಕೃತ ಪ್ರಭಾವದಿಂದಲೇ ಬಂದವು.

ಸಿ. ಕೆ. ವೆಂಕಟರಾಮಯ್ಯ (1896-1973) ಸಂಸ್ಕೃತ, ಇಂಗ್ಲಿಷ್ ಹಾಗೂ ಕನ್ನಡ ಸಾಹಿತ್ಯದಲ್ಲಿ ಅಪಾರ ವಿದ್ವತ್ತು ಪಡೆದವರು. 'ಭಾಸ ಮಹಾಕವಿ' 'ಕಾಳಿದಾಸ ಮಹಾಕವಿ' 'ಮಂಡೋದರಿ' 'ನಚಿಕೇತ' ಮೊದಲಾದ ಕೃತಿಗಳು ಸಂಸ್ಕೃತ ಸಾಹಿತ್ಯದಿಂದಲೇ ಪ್ರೇರಣೆ ಪಡೆದಿವೆ. ಇವರಿಬ್ಬರೂ ಉತ್ತಮ ಅನುವಾದಕರು.

ಸಂಸ್ಕೃತದಿಂದ ಕನ್ನಡಕ್ಕೆ ಕೃತಿಗಳನ್ನು ತಂದ ಆಧುನಿಕ ವಿದ್ವಾಂಸರಲ್ಲಿ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು (1890-1968) ಪ್ರಮುಖರು. ವಚನಭಾರತ, ಕಥಾಮೃತ, ಇದೆಲ್ಲಾ ನೇರವಾದ ಅನುವಾದಿತ ಕೃತಿಗಳು. ಇವರ ಅನುವಾದದಲ್ಲಿ ಅಚ್ಚ ಕನ್ನಡದ ಗದ್ಯಶೈಲಿಯ ಸೊಗಸನ್ನು ನೋಡಬಹುದು.

ಇತ್ತೀಚಿಗೆ ಸಂಸ್ಕೃತದಿಂದ ಕನ್ನಡಕ್ಕೆ ಶ್ರೇಷ್ಠ ಅನುವಾದ ಮಾಡಿದ ಅನುವಾದಕರಲ್ಲಿ ಡಾ: ಕೆ. ಕೃಷ್ಣಮೂರ್ತಿಯವರನ್ನು ಹೆಸರಿಸಲೇಬೇಕು. ಸಂಸ್ಕೃತದಿಂದ ಇಂಗ್ಲಿಷ್‌ಗೂ ಕನ್ನಡಕ್ಕೂ ಆನಂದವರ್ಧನನ 'ಧ್ವನ್ಯಾಲೋಕ' ಕೃತಿಯನ್ನು ಅನುವಾದಿಸಿದ್ದಾರೆ. ಕನ್ನಡಕ್ಕೆ ಸಂಸ್ಕೃತದಿಂದ 'ಉತ್ತರರಾಮ ಚರಿತೆ' 'ಕನ್ನಡ ಶಾಕುಂತಲ' ಮೊದಲಾದ ಕೃತಿಗಳನ್ನು ತಂದಿದ್ದಾರೆ.

ಪ್ರೊ. ಎಸ್. ವಿ. ಪರಮೇಶ್ವರಭಟ್ಟ ಅವರು ಕನ್ನಡಕ್ಕೆ ಕಾಳಿದಾಸ ಮಹಾ ಸಂಪುಟಗಳನ್ನು ಕೊಟ್ಟವರು. ಸಂಸ್ಕೃತದಿಂದ ಮೂಲವನ್ನು ಅಚ್ಚುಕಟ್ಟಾಗಿ ಕನ್ನಡಿಸಿದ ಕೀರ್ತಿ ಇವರದು. ಸುಲಲಿತವಾದ ಕನ್ನಡದಲ್ಲಿ ಶ್ರೇಷ್ಠರೀತಿಯಲ್ಲಿ ಅನುವಾದಿಸುವ ಕಲೆ ಇವರಿಗೆ ಸಿದ್ಧಿಸಿದೆ.

ಆರ್. ಕೆ. ಹಾನಗಲ್ಲರ (1877) 'ಪ್ರೇಮವಿಜಯ' ಅಥವಾ 'ಸೀತಾಪರಿತ್ಯಾಗ' 'ಹನುಮದ್ವಿಲಾಸ' ಶಾಂತಕವಿ (1881)ಯಿಂದ ವಿರಚಿತ 'ವತ್ಸಲಾ ಹರಣ', ಹಣಮಂತ ನರಸಿಂಹರಾಮದುರ್ಗಕರ ಅವರ 'ರಾಸಕ್ರೀಡಾನಾಟಕ', ಶಿವಕವಿಯ 'ಶಶಿರೇಖಾ ಪರಿಣಯ', ಲಕ್ಷ್ಮೀನರಸಿಂಹಚಾರ್ಯರ 'ಶ್ರೀ ಕೃಷ್ಣ ಲೀಲಾವಿನೋದ', ಶಾ. ವೆಂಕಟರಾಮಯ್ಯ (1909)ನವರ 'ಯಾಯತಿ ಚಾರಿತ್ರ್ಯಂ' ಮುಂತಾದ ಕೃತಿಗಳಲ್ಲಿ ಸಮಕಾಲೀನ ಸಮಾಜದ ಭಾಷೆ ಹಾಗೂ ವಿಚಾರಗಳನ್ನು ಪ್ರತಿಬಿಂಬಿಸುವ ಪ್ರಯತ್ನ ನಡೆದಿದೆ.

ಗಂಗಾಧರ ಮಡಿವಾಳೇಶ್ವರ ತುರಮರಿ (1827-1877) ಅವರು ಬಾಣನ ಕಾದಂಬರಿಯನ್ನು ಸಂಗ್ರಹಾನುವಾದ ಮಾಡಿದ್ದಾರೆ. ಬಾಣನ 'ಕಾದಂಬರಿ' ಕನ್ನಡಿಗರಿಗೆ ಪ್ರಿಯವಾದುದು. ಮೂಲ ಸಂಸ್ಕೃತದಿಂದಲ್ಲ, ಗಂಗಾಧರಯ್ಯನವರ ಕನ್ನಡ ಅನುವಾದದಿಂದ ಎಂದು ಹೇಳಿದರೆ ಅತಿಶಯೋಕ್ತಿಯೇನಲ್ಲ! ಗಂಗಾಧರಯ್ಯನವರ ಶೈಲಿಯಲ್ಲಿ ವೈಶಂಪಾಯನ ವೃತ್ತಾಂತದ ಭಾವುಕತೆ ಇದೆ. ಮಹಾಶ್ವೇತೆಯ ನೈರ್ಮಲ್ಯವಿದೆ. ಅಚ್ಛೋದ ಸರೋವರದ ತಂಪಿದೆ. ಗಂಗಾಧರ ಮಡಿವಾಳೇಶ್ವರ ತುರಮರಿ ಎಂಬುದು ಈ ಲೋಕದ ಹೆಸರಲ್ಲ. ಗಂಧರ್ವ ಲೋಕದ ಹೆಸರು ಎಂದು ಆರ್. ರಾ.ಯ. ಧಾರವಾಡಕರ ಅವರು ಹೇಳುವ ಮಾತು ಉಲ್ಲೇಖಾರ್ಹವಾಗಿದೆ: "ಬಾಣ ಕಾದಂಬರಿಯಲ್ಲಿ ಮೂಡಿನಿಂತ ಆದರ್ಶ ಶೃಂಗಾರ, ಸ್ವಪ್ನ ಸಾದೃಶ್ಯ ಲೋಕವನ್ನು ಹೊಸಗನ್ನಡದಲ್ಲಿ ಕಡೆದು ನಿಲ್ಲಿಸಿ ಕಲಾವಂತಿಕೆಯನ್ನು ಮೆರೆದ ತುರಮರಿ ಅವರು ಎಲ್ಲಾ ಪ್ರಶಂಸೆಗೆ ಅರ್ಹವಾಗಿದ್ದಾರೆ. ಕನ್ನಡದಲ್ಲಿ ಸಂಸ್ಕೃತ ಭಾಷೆಯಿಂದ ಅನುವಾದಗೊಂಡು ಚಿರಂತನವಾಗಿ ಉಳಿಯಬಹುದಾದ ಕೃತಿಗಳಲ್ಲಿ 'ಬಾಣ ಕಾದಂಬರಿ'ಯೂ ಒಂದೆಂದು ಹೇಳಿದರೆ ಅತಿಶಯೋಕ್ತಿಯಲ್ಲ."

ವೆಂಕಟರಂಗೋಕಟ್ಟಿ (1864) ಅವರು 'ಅರೇಬಿಯನ್ ನೈಟ್ಸ್' ಎಂಬ ಅರಬ್ಬಿ ಭಾಷೆಯಲ್ಲಿದ್ದ ಪುಸ್ತಕವನ್ನು 'ಸುರಸ ಕಥೆಗಳ ಸಂಗ್ರಹವು' ಎಂಬ ಹೆಸರಿನಲ್ಲಿ ಭಾಷಾಂತರಿಸಿದ್ದಾರೆ.

ಹೊಸಗನ್ನಡದ ಆರಂಭದಲ್ಲಿ 45ಕ್ಕೂ ಹೆಚ್ಚು ಸಂಸ್ಕೃತ ನಾಟಕಗಳು ಅನುವಾದಿತವಾಗಿವೆ. ಕಾಳಿದಾಸನ 'ಅಭಿಜ್ಞಾನ ಶಾಕುಂತಲಾ' ನಾಟಕವನ್ನು ಅನೇಕರು ಅನುವಾದಿಸಿದ್ದಾರೆ. ಸಂಸ್ಕೃತ ನಾಟಕಗಳನ್ನು ಅನೇಕರು ಅನುವಾದಿಸುವಾಗ ಮೂಲದ ಭಾವವನ್ನು ಹಾಗೆಯೇ ಕನ್ನಡಕ್ಕೆ ತರಲು ಪ್ರಯತ್ನಿಸಲಾಗಿದೆ. ಅನುವಾದದ ಭಾಷೆಯಲ್ಲಿನ ಸರಳತೆ. ಆಡುಮಾತಿನ ಪ್ರಯೋಗ. ಜಾನಪದ ಹಾಡಿನ ಧಾಟಿಗಳನ್ನು ಅಂದಿನ ಭಾಷಾಂತರಕಾರರು ತಮ್ಮ ಕೃತಿಗಳಲ್ಲಿ ಹಿಡಿದಿಟ್ಟಿದ್ದಾರೆ. ಚುರುಮರಿ ಶೇಷಗಿರಿರಾಯರು, ನಂಜನಗೂಡು ಅನಂತನಾರಾಯಣಶಾಸ್ತ್ರಿ ಹಾಗೂ ಸೋಸಲೆ ಅಯ್ಯಾ ಶಾಸ್ತ್ರಿಗಳ ಕೃತಿಗಳಲ್ಲಿ ಇದು ಹೆಚ್ಚಾಗಿ ಕಂಡುಬರುತ್ತದೆ. ಇದರ ಜೊತೆಗೆ ಶ್ರೀಕಂಠೇಶಗೌಡರ ಅನುವಾದಗಳಲ್ಲಿ ಹೊಸಗನ್ನಡದ ಪ್ರಯೋಗದ ಜೊತೆಗೆ ಸಮಕಾಲೀನ ಸ್ಪಂದನ, ಅದ್ಭುತಕಲ್ಪನೆ, ಪ್ರಯೋಗಶೀಲತೆ ಇಂಗ್ಲಿಷ್ ನಾಟಕಗಳ ಮಾದರಿ ಹಾಸ್ಯ, ವಿಡಂಬನೆ, ಪ್ರಹಸನಗಳ ಪ್ರಯೋಗ ಮೊದಲ ಬಾರಿಗೆ ಕನ್ನಡಕ್ಕೆ ಹರಿದು ಬಂದಿದೆ. ಸಂಸ್ಕೃತ ಭೂಯಿಷ್ಠತೆ ಹಾಗೂ ಲಕ್ಷಣಬದ್ಧತೆಯನ್ನು ಮೈಸೂರು ಸೀತಾರಾಮಶಾಸ್ತ್ರಿಗಳ ಕೃತಿಗಳಲ್ಲಿ ಕಾಣಬಹುದು. ಸೋಸಲೆ ಅಯ್ಯಾ ಶಾಸ್ತ್ರಿಗಳು ಸಾಮಾಜಿಕ ವಿಡಂಬನೆಗೆ ಹೆಚ್ಚಿನ ಆದ್ಯತೆ ಕೊಟ್ಟಿದ್ದಾರೆ. ಭಾಷೆ ಸರಳವಾಗಿದ್ದು ಜನಸಾಮಾನ್ಯರಿಗೆ ರಂಜನೆ ನೀಡಬೇಕೆಂಬುದು ಧೋಂಡೋ ನರಸಿಂಹ ಮುಳಬಾಗಿಲು ಹಾಗೂ ನಂಜನಗೂಡು ಅನಂತನಾರಾಯಣಶಾಸ್ತ್ರಿ ಅವರುಗಳ ಅಭಿಪ್ರಾಯ. ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳ ಕೃತಿಗಳಲ್ಲಿ ಹಳಗನ್ನಡ ಹಾಗೂ ನಡುಗನ್ನಡದ ಪ್ರಯೋಗವಾಗಿದೆ. ಕನ್ನಡ ಸಾಹಿತ್ಯದಲ್ಲಿ 1900 ರಿಂದ 1920ರ ತನಕ ಹೆಚ್ಚು ನಾಟಕಗಳ ರಚನೆ ಆಗಿರುವುದು ಕಂಡುಬರುತ್ತದೆ.

ಸೋಮಸುಂದರಶೆಟ್ಟಿ ಅವರ 'ಬೇತಾಳ ಪಂಚವಿಂಶತಿ ಕಥೆಗಳು', ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳ 'ಶ್ರೀ ವಿಷ್ಣುದಶಾವತಾರ' 'ಕಥಾಸಂಗ್ರಹ', ಕೊಣ್ಣೂರು ವೆಂಕಟರಮಣಶಾಸ್ತ್ರಿಗಳ 'ಸಚಿತ್ರ ಶ್ರೀ ಭಾಗವತ ಕಥಾ ಸಂಗ್ರಹ' ಜನ್ನ ಕವಿಯ 'ಯಶೋಧರ ಚರಿತೆ' ಆಧಾರಿತ ಹೆಚ್. ವಿ. ಶ್ರೀನಿವಾಸಮೂರ್ತಿ ಅವರ 'ಸುವ್ರತ ಕರ್ಮಫಲ', ಮುಳಿಯ

ತಿಮ್ಮಪ್ಪಯ್ಯನವರ 'ಚಂದ್ರಲೀಲಾ ವಿಲಾಸಂ' ಮೊದಲಾದ ಕೃತಿಗಳು ಪುರಾಣಾಧಾರಿತ ಹಾಗೂ ಸಂಸ್ಕೃತ ಕೃತಿಗಳ ಪ್ರಭಾವದಿಂದ ರಚಿತವಾದ ಕೃತಿಗಳಾಗಿವೆ.'ವಡ್ಡಾರಾಧನೆ' 'ಪಂಚತಂತ್ರ' 'ಶುಕಸಪ್ತತಿ' ಹಾಗೂ ಮಹಾಭಾರತದ ಆಯ್ದ ಕಥೆಗಳ ಸಂಗ್ರಹಗಳನ್ನು ಈ ಕಾಲದಲ್ಲಿ ನೋಡಬಹುದು.

ಕೆ. ವಾಸುದೇವಭಟ್ಟ, ಮಲ್ಲಪ್ಪಯ್ಯ, ಆನವಟ್ಟಿ ರಾಮರಾವ್, ಎ. ಕೇಶವಯ್ಯ, ರಾಮಸ್ವಾಮಿ ಐಯ್ಯಂಗಾರ್, ಶಿವರಾಮದಾಸ್ ಮೊದಲಾದವರು ಕವಿ, ತತ್ವಜ್ಞಾನಿ ಹಾಗೂ ಸಾಧುಸಂತರ ಜೀವನ ಸಾಧನೆ ಹಾಗೂ ಧಾರ್ಮಿಕ ವಿಚಾರ ಕುರಿತು ಗ್ರಂಥ ರಚಿಸಿದ್ದಾರೆ. ಇವುಗಳ ಮೇಲೂ ಸಂಸ್ಕೃತ ಸಾಹಿತ್ಯದ ಅಪರಿಮಿತ ಪ್ರಭಾವವನ್ನು ಗುರುತಿಸಬಹುದು. ಸಂಸ್ಕೃತ ಕಾವ್ಯ ಹಾಗೂ ನಾಟಕಗಳ ಭಾಷಾಂತರ ರೂಪಾಂತರಗಳನ್ನು ಮಾಡುವಲ್ಲಿ ಬಸವಪ್ಪಶಾಸ್ತ್ರಿ, ಚುರಮರಿ, ಮುಳಬಾಗಲ ಇವರುಗಳ ಕೊಡುಗೆ ಅಪಾರವಾದುದೆಂದು ಇಲ್ಲಿಯವರೆಗೆ ನಾವು ಗಮನಿಸಿದ್ದೇವೆ. ಷಡಕ್ಷರಿಯ ಯುಗದಿಂದ ಷೇಕ್ಸ್‌ಪಿಯರ್ ಯುಗಕ್ಕೆ ಸೇತುಪ್ರಾಯರಾಗಿದ್ದವರಲ್ಲಿ ಬಸವಪ್ಪಶಾಸ್ತ್ರಿಗಳು ಅಗ್ರಗಣ್ಯರಾಗಿದ್ದರೆ, ತುರುಮರಿಯವರು ಹಳಗನ್ನಡದ ಸಂಕೋಲೆಯನ್ನು ಕಿತ್ತೊಗೆದು ಸಹಜತೆ, ಸುಭಗತೆ, ಲಾಲಿತ್ಯಗಳನ್ನು ಹೊಂದಿದ ಹೊಸಗನ್ನಡ ಗದ್ಯಶೈಲಿಯನ್ನು ಕನ್ನಡಕ್ಕೆ ಕೊಟ್ಟರು. ಹಾಗೆಯೇ ಚುರಮರಿಯವರ ಕೃತಿಗಳಲ್ಲಿ ಉತ್ತರ ಕರ್ನಾಟಕದ ದೇಶೀ ಪ್ರಚುರವಾದ ಶೈಲಿ, ಆಡುನುಡಿಯ ಸೊಗಡು, ಕನ್ನಡ ಗ್ರಾಮೀಣ ಭಾಷೆಯ ನೈಜ ಜಾಯಮಾನವಿದ್ದರೆ ಮುಳಬಾಗಲರ ಕೃತಿಗಳಲ್ಲಿ ಆಧುನಿಕ ಅಚ್ಚಗನ್ನಡ ಶೈಲಿ, ಸಮಾಜ ಜೀವನದ ನಾನಾಸ್ತರಗಳ ವ್ಯಕ್ತಿಗಳ ಪಾತ್ರ ಚಿತ್ರಣವನ್ನು ಕಾಣಬಹುದು. ಶಾಸ್ತ್ರಿಗಳ ಭಾಷಾಂತರದಲ್ಲಿ ಮೂಲದ ಸೊಗಸು, ಛಂದೋಗಾಂಭೀರ್ಯಗಳೆರಡರ ಜೊತೆಗೆ ಕನ್ನಡದ ತೊಡುಗೆ ತೊಟ್ಟ ಅರ್ಥ ಹಾಗೂ ಮೂಲಕ್ಕೆ ಸಂಪೂರ್ಣ ನಿಷ್ಠವಾಗಿದ್ದರೆ, ಚುರಮರಿಯವರು ಮೂಲದಲ್ಲಿ ಸೂಚ್ಯವಾಗಿ ಸೂತ್ರರೂಪದಲ್ಲಿ ಹೇಳಿದ ಮಾತುಗಳನ್ನು ವಿಕಾಸಗೊಳಿಸಿ ಹೇಳುವ ಭಾಷ್ಯಕಾರನ ಕೆಲಸ  ಮಾಡಿದ್ದಾರೆ. ಶಾಸ್ತ್ರಿಗಳ ಭಾಷಾಂತರದಲ್ಲಿ ಮೂಲದ ಭಾಷೆ, ಭಾವ, ರೀತಿ, ರಸಗಳೊಂದಿಗೆ ಭಾಷಾಂತರದ ಗುಟ್ಟೇಗೊತ್ತಾಗದಂತೆ ಸರಳ ಹಾಗೂ ಲಲಿತವಾಗಿದ್ದರೆ, ಚುರಮರಿಯವರು ಸಂಸ್ಕೃತದ ಪದ್ಯಭಾಗಗಳನ್ನು ಕಂದ ಮತ್ತು ವೃತ್ತದೊಂದಿಗೆ ಭಾಷಾಂತರಿಸುವುದರೊಂದಿಗೆ ದೇಶಿಯ ಹಾಡಿನ ಮಟ್ಟುಗಳಲ್ಲಿಯೂ ಪರಿವರ್ತಿಸಿದ್ದಾರೆ. ಚುರಮರಿಯವರ ಗದ್ಯ ಶೈಲಿಯಲ್ಲಿ ವೈಶಂಪಾಯನ ವೃತ್ತಾಂತದ ಭಾವುಕತೆ, ಮಹಾಶ್ವೇತೆಯ ನೈರ್ಮಲ್ಯ, ಅಚ್ಛೋದ  ಸರೋವರದ ತಂಪುಗಳೊಂದಿಗೆ ಶೃಂಗಾರದ ಸ್ವಪ್ನಸದೃಶಲೋಕವಿದ್ದರೆ ಮುಳಬಾಗಲರ ಕೃತಿಗಳು ಮೂಲಕ್ಕೆ ನಿಷ್ಠವಾಗಿದ್ದು, ಸುಲಭತೆ, ಲಾಲಿತ್ಯಗಳನ್ನು ಮೈಗೂಡಿಸಿಕೊಂಡು ಕನ್ನಡದ ಪ್ರೌಢ ಮಾರ್ಗೀಯ ಶೈಲಿಯಲ್ಲಿ ಮೂಡಿಬಂದಿವೆ. ಮುದ್ದಣ್ಣನ ಕೃತಿಗಳಲ್ಲಿ ಆಧುನಿಕ ಯುಗದ ಸಂವೇದನೆಗೆ ಪ್ರತಿಸ್ಪಂದಿಸುವ ಹೊಸಗನ್ನಡ ಶೈಲಿಯ ಲಕ್ಷಣಗಳು ಹೇರಳವಾಗಿದ್ದರೂ ಹಳಗನ್ನಡದ ಅಂತೆ, ವೊಲ್, ಅತ್ತಿಯಂತಹ ಪ್ರತ್ಯಯ ಸೇರಿ ಶೈಲಿಯಲ್ಲಿ  ಕೃತ್ರಿಮತೆ  ಕಂಡುಬಂದರೆ, ಮುಳಬಾಗಲರ ಕೃತಿಗಳಲ್ಲಿ ಧಾರವಾಡದ ಸಮಕಾಲೀನರಂತೆ ಆಧುನಿಕ ಅಚ್ಚಗನ್ನಡ ಶೈಲಿ ಎದ್ದು ಕಾಣುತ್ತದೆ.

ಒಟ್ಟಿನಲ್ಲಿ ಈ ಎಲ್ಲಾ ಮಹನೀಯರು ಅನುವಾದಿಸಿದ, ಪರಿವರ್ತಿಸಿದ ಸಂಸ್ಕೃತ ಕೃತಿಗಳಲ್ಲಿ ಕೇವಲ ಅನುಕರಣೆಯನ್ನು ಮಾತ್ರ ನಾವು ಕಾಣದೆ ಕನ್ನಡ ಭಾಷೆಯ ನೈಜ ಸ್ಪಂದನ - ವಿನ್ಯಾಸಗಳು ಮೈವೆತ್ತು ಸ್ವೋಪಜ್ಞತೆಯ ಸಂಚಾರವಾಗಿರುವುದನ್ನು ಕಾಣುತ್ತೇವೆ. ಈ ಅನುವಾದಿತ ಕೃತಿಗಳಿಂದಾಗಿ ಆಧುನಿಕ ಕನ್ನಡದ ನಿರ್ಮಾಣ ಕಾರ್ಯ ತ್ವರಿತಗತಿಯಲ್ಲಿ ನಡೆಯಿತು.

## ಇಂಗ್ಲಿಷ್‌ನಿಂದ ಕನ್ನಡಕ್ಕೆ ಬಂದ ಅನುವಾದ ಸಾಹಿತ್ಯ

ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಕನ್ನಡ ಸಾಹಿತ್ಯ ಜಗತ್ತಿನ ಬರಡಾದ ಪರಿಸ್ಥಿತಿಯಲ್ಲಿ ಕನ್ನಡ ಸಾಹಿತ್ಯಕ್ಕೆ ಹೊಸತನ್ನು ಬರಮಾಡಿಕೊಳ್ಳಬೇಕೆಂಬ ಕಾಳಜಿ ಅಂದಿನ ಅನೇಕ ಲೇಖಕರಲ್ಲಿ ಮೂಡಿಬಂದಿದ್ದು ಇದಕ್ಕೆ ಪ್ರೇರಣೆ ಇಂಗ್ಲಿಷ್ ಸಾಹಿತ್ಯದಿಂದಾಗಿರುವುದು ಕಂಡುಬರುತ್ತದೆ. ಕನ್ನಡದಲ್ಲಿ ಗ್ರಂಥಗಳು ಹೆಚ್ಚಬೇಕು, ಅನ್ಯ ಭಾಷೆಗಳಿಂದ ಉತ್ತಮ ಕೃತಿಗಳನ್ನು ತರಬೇಕು ಎಂಬುದು ಅವರ ತುಡಿತವಾಗಿತ್ತು. ಇಂಥ ಸಂದರ್ಭದಲ್ಲಿ ಆಂಗ್ಲ ಸಾಹಿತ್ಯದಲ್ಲಿನ ಅರ್ಥ ಸಂಪತ್ತು, ವಸ್ತು ವೈವಿಧ್ಯತೆ, ಉಕ್ತಿ ವೈಚಿತ್ರ್ಯಗಳನ್ನು ಕನ್ನಡಕ್ಕೆ ತರಲು ಈ ಲೇಖಕರು ಪ್ರಯತ್ನಿಸಿದರು. ಕನ್ನಡ ಸಾಹಿತ್ಯದ ಮೇಲೆ ಆದ ಇಂಗ್ಲಿಷ್ ಸಾಹಿತ್ಯದ ಪ್ರಭಾವದ ಕುರಿತು ಇ. ಪಿ. ರೈಸ್‌ರವರು ಹೀಗೆ ಹೇಳಿದ್ದಾರೆ. "ಪಾಶ್ಚಾತ್ಯ ವಿಚಾರಗಳ ಮಹಾ ಪ್ರಭಾವದಿಂದ ಕನ್ನಡ ಸಾಹಿತ್ಯವಾಹಿನಿ ಬಹಳ ಬದಲಾಯಿಸಿದೆ ಮತ್ತು ವಿಶಾಲವಾಗಿದೆ."[3] ಈ ಕುರಿತು ಬಿ. ಎಂ. ಶ್ರೀ. ರವರ ಅಭಿಪ್ರಾಯ ವಿಚಾರಪೂರ್ಣವಾಗಿದೆ. "ಈಗ 19ನೆ ಶತಮಾನದಲ್ಲಿ ಇಂಗ್ಲಿಷರ ಆಳ್ವಿಕೆಯಲ್ಲಿ ಪಾಶ್ಚಾತ್ಯರ ನಾಗರೀಕತೆ, ಐಹಿಕ ಸಾಧನ ಸಂಪತ್ತು, ರಾಜ್ಯಶಾಸ್ತ್ರಕಲೆ, ಸಾಹಿತ್ಯ ಮತ ಮುಂತಾದುವುಗಳಿಗೆ ಸಂಬಂಧಪಟ್ಟ ನವೀನ ಜ್ಞಾನದ ಸೆಳೆತಕ್ಕೆ ಮಿಕ್ಕ ದೇಶ ಭಾಷೆಗಳಂತೆಯೇ ಕನ್ನಡವು ಸಿಕ್ಕಿ ಒಂದು ಹೊಸ ದೇಶಾಭಿಮಾನವನ್ನೂ ಹೊಸರುಚಿಯನ್ನು ಕಲಿತು, ಹೊಸರೀತಿಗಳಲ್ಲಿ ಕಾವ್ಯಸೃಷ್ಟಿಯ ಅಭ್ಯಾಸ ಮಾಡುತ್ತಿದೆ. ಭಾಷಾಂತರಗಳೂ, ಅನುಕರಣಗಳೂ, ಸ್ವಂತಕವಿತೆಗಳೂ ಹೊಸ ಕಾವ್ಯ ರೂಪಗಳೂ, ಹೊಸ ಛಂದಸ್ಸುಗಳೂ, ಹೊಸ ಅಭಿಪ್ರಾಯಗಳೂ ಸಂಪ್ರದಾಯವನ್ನು ಲಕ್ಷ್ಯಕ್ಕೆ ತಾರದೆ, ಸ್ವಾತಂತ್ರ್ಯಪ್ರಿಯರಾದ ಗ್ರಂಥಕರ್ತರಿಂದ ದೇಶದಲ್ಲೆಲ್ಲಾ ಸುಲಭವಾದ ವ್ಯವಹಾರ ಭಾಷೆಗಳಲ್ಲಿ ಹರಡಿಕೊಳ್ಳುತ್ತಿವೆ."[4]

## ಇಂಗ್ಲಿಷ್ ಕಾವ್ಯದ ಅನುವಾದ

ಕನ್ನಡದಲ್ಲಿ ಇಂಗ್ಲಿಷ್ ಕವಿತೆಗಳ ಅನುವಾದ ಪ್ರಾರಂಭವಾದುದು ಕ್ರೈಸ್ತರ ಪ್ರಾರ್ಥನಾ ಪದ್ಯಗಳಿಂದ. ಕ್ರಿಶ್ಚಿಯನ್ ಮಿಷನರಿಗಳು ತಮ್ಮ ಧರ್ಮ ಪ್ರಚಾರಕ್ಕಾಗಿ ಪ್ರಾರ್ಥನಾ ಪದ್ಯಗಳನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಿಸಿದರು. 1845ರಲ್ಲಿ ಬಾಸೆಲ್ ಮಿಷನ್ನಿನವರು ಭಾಷಾಂತರಿಸಿದ ಒಂದು ಪದ್ಯಹೀಗಿದೆ:

"ಇಲ್ಲಿ ನಮ್ಮ ಸುಖ ಕಷ್ಟ
ಇಲ್ಲಿ ನಮ್ಮ ಲಾಭ ನಷ್ಟ
ನಮ್ಮ ಕ್ಷೇಮ ತಾಪವು"

ಬಾಸೆಲ್ ಮಿಷನ್ನಿನ ಜಿ. ಜೆಚ್. ವೈಗಲ್, ರೀಡ್ ಎಂಬುವನ ಜೊತೆಗೆ ಅನೇಕ ಹಾಡುಗಳನ್ನು ಇಂಗ್ಲಿಷ್ ಹಾಡುಗಳ ಮಟ್ಟುವಿನಲ್ಲಿ ರಚಿಸಿದ್ದು, 1847ರಲ್ಲಿ ಮೊಗ್ಲಿಂಗ್ ಜೊತೆಗೆ "ಕ್ರೈಸ್ತ ಗೀತೆಗಳು" ಎಂಬ ಪುಸ್ತಕವನ್ನೂ, 1862ರಲ್ಲಿ "ಪ್ರಾರ್ಥನೆಗಳು" ಎಂಬ ಸಂಕಲವನ್ನು ಹೊರತಂದಿದ್ದು, ಚಾಸರನ "ಯಾತ್ರಿಕನ ಸಂಚಾರ" (1847)ದ ಹೆಚ್ಚಿನ ಭಾಗವನ್ನು ಅವನೇ ಅನುವಾದಿಸಿರುತ್ತಾನೆ. ಹಾಗೆಯೇ ಕಿಟಲ್ ಮತ್ತು ಬಿ. ಲೂಫ್ ಅನೇಕ ಪ್ರಾರ್ಥನಾ ಪದ್ಯಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. "ಕನ್ನಡ ಸಂಗೀತಗಳು" ಎಂಬ ಲಂಡನ್ ಮಿಷನ್ ಸಂಸ್ಥೆಯ ಸಂಕಲನದಲ್ಲಿ ಬಿ. ಹೆಚ್. ರೈಸ್‌ನ ಅನೇಕ ಅನುವಾದ ಕೃತಿಗಳಿದ್ದು, ಅರುಣೋದಯ ಪತ್ರಿಕೆಯಲ್ಲೂ ಅವನ ಗೀತೆಗಳು ಪ್ರಕಟಗೊಂಡಿವೆ. ಮಿಸ್ ಅನ್ಸ್ಲೇಯ

"ಕೀರ್ತನೆಗಳು" (1869) ಅಬ್ಬೆಜನ 'ಜ್ಞಾನಕೀರ್ತನೆಗಳು' (1871), ಜಿ. ವರ್ತ್‌ನ 'ಪ್ರಾರ್ಥ್ಯಾವ್ಯಮಾಲಿಕೆ' (1868) ಇವು ಆ ಸಮಯದಲ್ಲಿ ಕನ್ನಡಕ್ಕೆ ಬಂದ ಪ್ರಮುಖ ಅನುವಾದಿತ ಗೀತೆಗಳು. ಇವುಗಳಲ್ಲಿನ ಪ್ರಾರ್ಥನಾ ಗೀತೆಗಳು ಇಂಗ್ಲಿಷ್ ಹಾಗೂ ಜರ್ಮನ್ ಭಾಷೆಗಳ ಛಂದೋಮಾದರಿಯ ರಚನೆಗಳಾಗಿದ್ದು ಇವುಗಳನ್ನು ಕನ್ನಡದಲ್ಲಿ ಹೇಗ ಬಳಸಬಹುದೆಂದು ಈ ಲೇಖಕರು ತೋರಿಸಿಕೊಟ್ಟರು. ಈ ಪದ್ಯಗಳಲ್ಲಿ ಅಂತ್ಯಪ್ರಾಸ ಎರಡೆರಡು ಸಾಲುಗಳಿಗ ಪ್ರವರ್ತಿಸಿದೆ. ಈ ಗೀತ ರಚನೆಯ ಮುಖ್ಯ ಉದ್ದೇಶ ಧರ್ಮ ಪ್ರಚಾರ. ಹಾಗಾಗಿ ಇವು ಕನ್ನಡದಲ್ಲಿ ಹೊಸಕವಿತೆಯ ಹುಟ್ಟಿಗೆ ಹೆಚ್ಚು ಸಹಕಾರ ನೀಡಲಿಲ್ಲ.

ಇಂಗ್ಲಿಷ್ ಕವಿತೆಗಳ ಅನುವಾದದ ಕಾರ್ಯದಲ್ಲಿ ಮೊದಲು ಕೈ ಹಾಕಿದವರು ಎಸ್. ಜಿ. ನರಸಿಂಹಾಚಾರ್ಯರು (1862-1911). ಕನ್ನಡ ಪತ್ರಿಕೆಗಳಲ್ಲಿ ಸೇರಿದ ಇಂಗ್ಲಿಷ್ ಅನುವಾದಿತ ಪದ್ಯಗಳಾದ 'ನಕ್ಷತ್ರ', 'ಕೋಗಿಲೆ', 'ಮಾತೃಭಕ್ತಿ', 'ಉತ್ತಮರಾಜ್ಯ' ಇವುಗಳ ಅನುವಾದಕರ ಹೆಸರು ಉಲ್ಲೇಖಿಸದ್ದರೂ ಅವುಗಳ ಕರ್ತೃ ನರಸಿಂಹಾಚಾರ್ಯರೇ ಆಗಿರಬೇಕೆಂದು ತೀ.ನಂ.ಶ್ರೀ. ಊಹಿಸಿದ್ದಾರೆ. ಹೆಚ್ಚಾಗಿ ಶಾಲಾ ಪತ್ರಿಕೆಗಳಿಗಾಗಿಯೇ ಅವರು ಬರೆದರೂ ಅವರು ನೀಡಿದ ಕೊಡುಗೆಯಿಂದ ಅವರ ಬಹುಮುಖ ಪ್ರತಿಭೆ ವ್ಯಕ್ತವಾಗುತ್ತದೆ.

ಎಸ್. ಜಿ. ನ. ರವರು ವರ್ಡ್ಸ್‌ವರ್ತ್ ಕವಿಯ "To The Cockoo" ಕವಿತೆಯನ್ನು ಅನುವಾದಿಸಿದ್ದು ಇದರ ಛಂದಸ್ಸು, ಸಾಂಗತ್ಯ ಭಾಷೆ ಹೊಸಗನ್ನಡದಲ್ಲಿರುವುದನ್ನು ನಾವು ಗಮನಿಸಬಹುದು.

ಮೂಲ : Thrice welcome, darling of spring
Even yet thou art to me
No bird, but an invisible thing
A voice, a mystery"

ಅನುವಾದ : ಬಾರೋ ಬಸಂತದ ಕಂದ ಬಾ ಬಾ ಬಾರೋ
ಹಾರುವ ಹಕ್ಕಿ ನೀನಲ್ಲ
ಸಾರುವ ದನಿ ಮಾಯದ ಗಂಟು ಕಣ್ಣಿಗೆ
ತೋರದ ಹುರುಳಾಗಿ ಸುಳಿವೆ"

ಈ ಅನುವಾದದ ಭಾಷೆಯಲ್ಲಿ ಸರಳತೆಯನ್ನೂ, ಅಭಿವ್ಯಕ್ತಿಯಲ್ಲಿ ಒಂದು ಬಗೆಯ ಮಾಧುರ್ಯವನ್ನೂ ನಾವು ಕಾಣಬಹುದು. 'ಬಾ ಬಾ ಬಾರೋ' ಎಂಬ ಪುನರಾವರ್ತನೆಯಲ್ಲಿ "Thrice welcome" ಎಂಬುದರ ಸರಿಯಾದ ಭಾಷಾಂತರ ಕಾಣಬಹುದು. ಉಳಿದಂತೆ ಅನುವಾದದಲ್ಲಿ "ಶ್ರೀ"ಯವರ ಅನುವಾದದಲ್ಲಿದ್ದಂತಹ ಸಂಗೀತ ಅಷ್ಟಾಗಿ ತೋರುವುದಿಲ್ಲ. 'Twinkle Twinkle Litter Star' ಕವಿತೆಯ ಅನುವಾದ ಶರಷಟ್ಪದಿಯಲ್ಲಿದ್ದು ಹೊಸಗನ್ನಡದಲ್ಲಿ ಮೂಲದ ಭಾವ ಹಳೆಯ ರೂಪವನ್ನು ಗಮನಿಸಬಹುದು.

ಮೂಲ : Twinkle Twinkle little star
How I wonder what you are
up above the world so high
like a diamond in the sky

ಅನುವಾದ : "ಮಿರು ಮಿರುಗೆಲೆ ಹಾ ಕಿರುತಾರಗೆಯೆ
ಅರಿಯನು ನಾನೆಲೆ ನೀನಾರೋ
ಧರೆಗಿಳಿಯದೆ ನೀನಿರುತಿರೆ ದೂರದಿ
ನೆರೆಹೊಳೆಯುವ ವಜ್ರದ ತೆರದಿ"

ಇಲ್ಲಿ ಅನುವಾದದಲ್ಲಿ ಲಾಲಿತ್ಯ ತುಂಬಿಕೊಂಡಿದ್ದು ಪಂಜೆಯವರ ಇದೇ ಪದ್ಯದ ಅನುವಾದಕ್ಕಿಂತ ಒಂದು ರೀತಿಯ "ಹೊಸತನ" ಕಾಣಬಹುದು. 'ಮಿರು ಮಿರುಗೆಲೆ ಹಾ ಕಿರುತಾರಗೆಯೆ' ಎಂಬ ಸಾಲಿನಲ್ಲಿರುವ "ರ" ಕಾರದಲ್ಲಿ ಒಂದು ರೀತಿಯ ನಾವೀನ್ಯತೆ 'ಹಾ'ನಲ್ಲಿ ವ್ಯಕ್ತವಾಗಿರವ ಮೂಲ ಭಾವನೆ, ಪಂಜೆಯುವರ "ಮಿನುಗೆಲೆ ಮಿನುಗೆಲೆ ನಕ್ಷತ್ರ"ದ 'ನ' ಕಾರದಲ್ಲಿ ಕಾಣುವುದಿಲ್ಲ. 'ನಕ್ಷತ್ರ'ಕ್ಕಿಂತ 'ಕಿರುತಾರಗೆ' ಒಳ್ಳೆಯ ಅನುವಾದ. 'ಶ್ರೀ' ಯವರ ಈ ಪದ್ಯದ ಅನುವಾದ ಎಸ್. ಜಿ. ನ. ಮತ್ತು ಪಂಜೆಯವರ ಅನುವಾದವನ್ನು ಮೀರಿನಿಂತಿದೆ.

ಎಸ್. ಜಿ. ನ.ರವರು ಅನುವಾದಿಸಿದ 'ಮರಳಿಯತ್ನವ ಮಾಡು' (Try, Try, Try again) 'ಉತ್ತಮ ರಾಜ್ಯ (The better land) ಗಳಲ್ಲಿ ಹೊಸ ಭಾಷೆ, ಭಾವಗಳಿದ್ದರೂ ಕನ್ನಡದ ಛಂದೋರೂಪವನ್ನು ಬಳಸಲಾಗಿದೆ. ಅವರ 'ಜಿತುವು' 'ಗೋಳಿನ ಬಾಳು' 'ಚಂದ್ರ' 'ಕಾವೇರಿ' 'ನೇಗಿಲು' ಮುಂತಾದ ಶಿಶುಗೀತೆಗಳ ಅನುವಾದದಲ್ಲಿ ಮಕ್ಕಳ ಭಾವವ ಮಿಡಿಯುತ್ತವೆ. ಎಸ್. ಜಿ. ನ. ರವರು ಆ ಕಾಲದ ಅನೇಕ ಕೃತಿಗಳಿಗೆ ಪದ್ಯಗಳನ್ನು ಬರೆದುಕೊಟ್ಟಿರುವುದು "ಟೆಂಪೆಸ್ಟ್"ನ ಅನುವಾದ 'ಚಂಡಮಾರುತ' (1892) ದಲ್ಲಿನ ಎರಡು ಪದ್ಯಗಳಿಂದ ತಿಳಿಯುತ್ತದೆ. ಬಿ. ಸುಬ್ಬರಾವ್ ಅವರು ಬರೆದ ಈ ಪುಸ್ತಕದಲ್ಲಿ ಈ ಎರಡು ಪದ್ಯಗಳನ್ನು ಎಸ್. ಜಿ. ನರಸಿಂಹಾಚಾರ್ಯ ಕೃತ: 'ಜಿ' ಎಂದು ಅಡಿ ಟಿಪ್ಪಣಿಯಲ್ಲಿ ನಿರ್ದೇಶಿಸಿದೆ. ನಮಗೆ ತಿಳಿದಿರುವಂತೆ ಅವರ ಹೆಸರು ಸೂಚಿತವಾಗಿ ನಿಷ್ಪಷ್ಟವಾಗಿ ಅವರದೇ ಎಂದು ಹೇಳಬಹುದಾದ ಕವಿತೆಗಳು ಇವೆರಡೇ."[5]

ಮೂಲ : Full fathon five thy father lies,
of his bones are coral made:
those are pearls that were his eyes;
Nothing of him that doth Fade
But doth suffer a sea-change
into something rich and strange;
Sea-nymyphs hourly ring his knell
Ding - Ding
Hark ; now hear them, ding - dong bell
(Ariel's song, Tempset Act I, Scene II)

ಅನುವಾದ : "ಕಡಲ ತಳದೊಳು ನಿನ್ನ ತಂದೆಯು।
ಕಡೆದಿಹನು ಮೇಣವನ ಮೂಳೆಯು
ಗಡಣವಿದೆ ಹವಳಂಗಳಾದವು ಕಣ್ಣು ಮುತ್ತಾಯ್ತು॥

ಒಡಲೊಳಗೆ ಕೆಡುವೆಲ್ಲ ವಸ್ತುಗ ।
ಳೊಡನೆ ಕಡಲ್ಮೆಸಿರಿಗೆ ಸಲ್ವುವು ।
ಪಡೆದಪುವು ಪೊಸತಪ್ಪ ಸಂಪದೊಂದು ಬೆರ್ಚುಗೆಯಾ ॥

ಅವನ ಚರಮ ಶ್ಲೋಕವನು ಪಾ ।
ಡುವುದಿದೆ । ನಾಗಾಂಗನಾ ಜನ ।
ವವಿರತಂ ಭಾಜಿಸುವ ಗಂಟೆಯ ಘಣ ಘಾಣರಾವ ॥

ಕವಿಯೊಳಗೆ ಜಿನುಗುವುದು ನಾನಾ ।
ರವವನಿಗೆ ಕೇಳುವೆನು ಕೇಳ್ ಕೇಳ್।
ಕವಿದು ಮುತ್ತುವ ಘಂಟೆಗಳ ಘಣ ಘಣ ಘಣ ಧ್ವನಿಯಂ॥

ಈ ಅನುವಾದದ ವಿಶೇಷತೆ ಭಾಮಿನಿ ಷಟ್ಪದಿಯಲ್ಲಿರುವ ನಡುಗನ್ನಡದ ವಿಶೇಷಾಂಶಗಳಿರುವ ಹೊಸಗನ್ನಡ ಹಾಗೂ ಸಂಸ್ಕೃತ ಕೃತಿಯ ಆತ್ಮ ಹಳೆಯ ರೂಪದಲ್ಲಿರುವುದು. ಮೂಲವನ್ನು ಕವಿ ಮೀರಿ ಹೋಗಿರುವುದನ್ನೂ, ಸ್ವತಂತ್ರ ರಚನೆಯೋ ಎಂಬಷ್ಟು ಸ್ವಾತಂತ್ರ್ಯ ವಹಿಸಿರುವುದನ್ನು ಇಲ್ಲಿ ನಾವು ನೋಡಬಹುದು. ಅವರ ಅನುವಾದದಲ್ಲಿ ಅನೇಕ ಓರೆಕೋರೆಗಳಿದ್ದರೂ. ಹೊಸ ವಸ್ತು, ಹೊಸ ಭಾವ, ಹೊಸ ಭಾಷೆಗಳ ತ್ರಿವೇಣಿ ಸಂಗಮವಾಗಿದ್ದು, ಅವರ ಪ್ರತಿಭೆ ಮತ್ತು ಸಾಧನೆಗೆ ನಿದರ್ಶನಗಳಾಗಿವೆ.

ಹಟ್ಟಿಯಂಗಡಿ ನಾರಾಯಣರಾಯರು (1863-1921) ಇಂಗ್ಲಿಷ್ ಪದ್ಯಗಳ ಅನುವಾದವನ್ನು 1919ರಲ್ಲಿ 'ಆಂಗ್ಲ ಕವಿತಾವಳಿ' ಎಂಬ ಪುಸ್ತಕ ರೂಪದಲ್ಲಿ ಹೊರತಂದರು. ಇದರಲ್ಲಿ ವರ್ಡ್ಸ್‌ವರ್ತ್, ಶೆಲ್ಲಿ, ಶೇಕ್ಸ್‌ಪಿಯರ್ ಮೊದಲಾದವರ ಕವಿತಾ ಅನುವಾದಗಳಿವೆ. ಇವರು 1895ರಿಂದಲೇ ಅನುವಾದ ಕಾರ್ಯ ಪ್ರಾರಂಭಿಸಿದ್ದು, ಇವು ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರು ಪದ್ಯಗಳನ್ನು ಅನುವಾದಿಸುತ್ತಿದ್ದ ಬಗ್ಗೆ ಪಂಜೆಯವರು 1898ರಲ್ಲಿ ಗೋವಿಂದ ಪೈಯವರಿಗೆ ಹೇಳಿದ್ದರಂತೆ. ಆದರೆ ಅವು ಬೆಳಕಿಗೆ ಬಂದುದು ಬಹಳ ತಡವಾಗಿ. 1919ರ ಜನವರಿ ಪರಿಷತ್ಪತ್ರಿಕೆಯಲ್ಲಿನ 'ಕವಿತಾವರ್ಧನ' ಮತ್ತು 'ಕನ್ನಡ ಕವಿತೆಯ ಭವಿತವ್ಯ' ಎಂಬ ಲೇಖನಗಳಲ್ಲಿ ಅವರ ಕೆಲವು ಅನುವಾದಗಳನ್ನು ಉದಾಹರಣೆಯಾಗಿ ನೀಡಿದ್ದಾರೆ. ''ಹೊಸ ಕಾವ್ಯ ಪ್ರಯೋಗದಲ್ಲಿ ದಕ್ಷಿಣ ಕನ್ನಡ ಬರಹಗಾರರಲ್ಲೇ ಅಷ್ಟೇ ಏಕೆ ಅಖಂಡ ಕರ್ನಾಟಕ ಬರಹಗಾರರಲ್ಲೇ ಹ.ನಾ.ರಾ. ಅವರಿಗೆ ಹೆಚ್ಚಿನ ಸ್ಥಾನವಿದೆ. ಪಂಜೆಯವರಿಗಿಂತ ಮೊದಲೇ ಇಂಗ್ಲಿಷ್ ಕವಿತೆಗಳನ್ನು ಅನುವಾದ ಮಾಡಿದ ಇವರು ತಮ್ಮ 'ಕವಿತಾವರ್ಧನ'ದಲ್ಲಿ ಪ್ರಾಸದ ಅವಶ್ಯಕತೆಯ ಬಗ್ಗೆ ವಿಶ್ಲೇಷಿಸಿದ್ದಾರೆ. ಇವರ 'ಆಂಗ್ಲ ಕವಿತಾವಳಿ'ಯ ಮುನ್ನುಡಿಯಲ್ಲಿ ನವೋದಯ ಪಂಥದ ಮುಂಬೆಳಗು ಕಾಣುತ್ತದೆ''.[6]

'ಆಂಗ್ಲ ಕವಿತಾಸಾರ'ದಲ್ಲಿ 22 ಪುಟಗಳಿದ್ದು 16 ಕವಿತೆಗಳಿವೆ. ಕೃತಿಯ ಮೊದಲ ಮಾತಿನಲ್ಲಿ ಅವರು ಹೀಗೆ ಹೇಳಿದ್ದಾರೆ. ''ಈ ಪದ್ಯಗಳಲ್ಲಿ ಆಂಗ್ಲರ ಕೆಲವು ಪ್ರಸಿದ್ಧ ಕೃತಿಗಳನ್ನು ಅನುವಾದಿಸಿ ಹಾಕಿದೆ. ಯುಕ್ತವಾಗಿ ಕಂಡಂತೆ ಅಲ್ಲಲ್ಲಿ ಕೆಲವು ಅಂಶಗಳನ್ನು ಲೋಪಿಸಿ. ಇನ್ನು ಕೆಲವನ್ನು ಬದಲಿಸಿದೆ. ಕನ್ನಡದ ಛಂದಸ್ಸಿನಲ್ಲಿ ಪೂರ್ವಿಕರು ಅಗಾಗ್ಗೆ ನೂತನ

ರೀತಿಗಳನ್ನು ಹುಟ್ಟಿಸಿದರು. ಈಗಲೂ ಹೊಸ ಮಾರ್ಗಗಳನ್ನೇಕೆ ತೆರೆಯಬಾರದೆಂದು ಸರಳ ಕಾವ್ಯ ಪ್ರಿಯರು ಕೇಳುತ್ತಾರೆ. ಈ ಪದ್ಯಗಳಲ್ಲಿ ಪ್ರಾಸವನ್ನು ತೊರೆಯದಿದ್ದರೂ, ಪೂರ್ವ ಕವಿಗಳ ನಿಯಮಗಳನ್ನು ಸೂಕ್ಷ್ಮವಾಗಿ ಅನುಸರಿಸಿಲ್ಲ. ಆದಕಾರಣ ವೃತ್ತಗಳಿಗೆ ಹೆಸರು ಹಾಕಿಲ್ಲ. ಬೇಕಾದರೆ ಶಿಥಿಲ ಕಂದ, ಶಿಥಿಲ ರಗಳೆ ಎಂಬಂತೆ ಹೆಸರುಗಳನ್ನು ನಿರ್ಮಿಸಬಹುದು.''[7] ಹ.ನಾ.ರಾ.ರವರು ಪ್ರಾಸ ತ್ಯಾಗ ಮಾಡದೇ ಮೂಲದ ಛಂದಸ್ಸು ಯಾವುದಿದ್ದರೂ ಕನ್ನಡ ಛಂದಸ್ಸನ್ನು ಬಳಸಿ. ಅಲ್ಲಿ ಇಲ್ಲಿ ಕೆಲವೊಂದು ಬದಲಾವಣೆ ಮಾಡಿ ಅನುವಾದಿಸಿದುವುದನ್ನು ಈ ಪದ್ಯಗಳಲ್ಲಿ ನಾವು ಕಾಣಬಹುದು. ಇವರ ಅನುವಾದದಲ್ಲಿ ಕೆಲವೆಡೆ ಸರಳತೆಯೂ ಕೆಲವೆಡೆ ಜಟಿಲತೆಯೂ ಇದೆ. ಉದಾಹರಣೆಗೆ -

1. Full many a flower is born to blush unseen
and waste its sweetness in the desert air
ಮಾನವ ದೃಷ್ಟಿಗೆ ಕಾಣದೆ ಕುಸುಮಗಳೆಷ್ಟೋ ಬೆಳೆಯುವುದು
ಕಾನನದಲ್ಲಿ ಹಂಜಿಸಿ ಪರಿಮಳವನು ಒಂದೇ ಬೀರುವುವು (ಥಾಮಸ್ ಗ್ರೇ 'ಎಲಿಜಿ')
2. And as imagination bodies forth
The forms of things unknown, the poets pen
ಆ ವಿಷಯದ ಕಲ್ಪನೆಯು ರೂಪಿಸಲು ಲೇಖಣಿಕೆ
ಕವಿಧಾಮ ನಾಮಗಳನೊದಗಿಸುವುದು

ಇಲ್ಲಿ ಮೊದಲನೆಯದರಲ್ಲಿ ಅರ್ಥ ಸ್ಪಷ್ಟ ಹಾಗೂ ಸರಳವಾಗಿದ್ದರೆ ಎರಡನೆಯದರಲ್ಲಿ ಅನುವಾದ ಅಷ್ಟು ಸಮರ್ಪಕವಾಗಿ ಆಗಿಲ್ಲ.

ನಾರಾಯಣರಾಯರು ಹಿಂದಿನ ಕವಿಗಳ ಛಂದೋರೂಪವನ್ನೇ, ರಗಳೆ, ಚೌಪದಿಗಳನ್ನೇ ಬಳಸಿಕೊಂಡಿದ್ದರೂ ಅಲ್ಲಲ್ಲಿ ಬದಲಾಯಿಸಿ ನೂತನತೆ ನೀಡಿದ್ದಾರೆ. 'ಕವಿತಾ ವರ್ಧನ' ಎಂಬ ತಮ್ಮ ಲೇಖನದಲ್ಲಿ ''ನಾನೊಂದು ಸಾವಿರ ಚರಣಗಳನ್ನು ರಚಿಸಿರಬಹುದು. ಇದುವರೆಗೆ ಪ್ರಾಸ ಮುಂಡನಕ್ಕೆ ನನ್ನ ಕಿವಿ ಒಗ್ಗಲಿಲ್ಲ''[8] ಎಂದು ಪ್ರಾಸದ ಬಗ್ಗೆ ತಮಗಿರುವ ಅಭಿಮಾನವನ್ನು ತೋಡಿಕೊಂಡಿದ್ದಾರೆ. ''ಸುಭಾಷಿತ ಕಲಾಪ''ದಲ್ಲಿ ಶೇಕ್ಸಪಿಯರ್‌ನ ನಾಟಕಗಳ ಕಾವ್ಯಭಾಗಗಳನ್ನು ಆರಿಸಿ ಅನುವಾದಿಸಿ ಒಂದೇ ಪದ್ಯದಲ್ಲಿ ಇಟ್ಟಿದ್ದಾರೆ:

ಮೂಲ : All the world's a stage,
And all men and women merely players,
They have their exists and entrances
And one man in his time plays many parts,
(Shakespeare : As you like it : Act II Scene VII)

ಅನುವಾದ : ನರಲೋಕವೆಲ್ಲ ನಾಟಕಶಾಲೆಯಂತೆ
ಪುರುಷ ವನಿತೆಯರು ಬರಿಯಾಟದವರು
ಮೆರೆದವರು ನಿಷ್ಕ್ರಮಿಸಿ ಹೆರರು ಪ್ರವೇಶಿಸುತ
ಪರಿಪರಿಯ ವೇಷಗಳ ನಟಿಸುತಿಹರು

ಅನುವಾದ ಸಹಜವಾಗಿ ಮೂಡಿ ಬಂದಿದ್ದರೂ 'They have their exits and entrances' ಎಂಬುದನ್ನು 'ಮೆರೆದವರು ನಿಷ್ಕ್ರಮಿಸಿ ಹೆರರು ಪ್ರವೇಶಿಸುತ' ಎಂದು ಸಂಪೂರ್ಣ ಬದಲಾವಣೆ ಮಾಡಿದ್ದಾರೆ. ಇಲ್ಲಿ ನಮ್ಮ ಸಮಾಜದ ನೀತಿರೀತಿಗೆ ಹೊಂದಿಕೊಳ್ಳುವಂತೆ ಅನುವಾದ ಮಾಡುವ ಉದ್ದೇಶ, ಪ್ರಯತ್ನ ಕಾಣುತ್ತದೆ. ಕವಿ. ಪ್ರೇಮಿ. ಹುಚ್ಚ ಈ ಮೂವರು ಒಂದೇ ಎಂದು ಹೇಳುವ ಶೇಕ್ಸ್‌ಪಿಯರ್‌ನ ಲೋಕ ಪ್ರಸಿದ್ಧ ಮಾತುಗಳನ್ನು ಕವಿ ಹೀಗೆ ಅನುವಾದಿಸಿದ್ದಾನೆ:

"The lunatic, the lover and the poet
Age of imagination all compact,
One sees more devils than vast hell can hold
That is the mad man; the lover, all as Frantic,
See's Helen's beauty in brow of Egypt;
The poet's eye in a Frenzy rolling
Doth glance from heaven to earth from earth to heaven
And as imagination bodies forth
The forms things unknown, the poet's pen
Turns then to shapes and gives to airy nothing
A local habitation and a name"
(Shakespeare : A Midsummer Night's Dream, Act V. Scene - 1)

ಅನುವಾದ : ''ಮರುಳನೋಫನು ಸುಕವಿ ಕಲ್ಪನೆಯ ಮೂರ್ತಿಗಳು
ಇರದಮಿತ ಛಾಯೆಗಳು ಹುಚ್ಚಾಗಿಹವು
ಗರವಟಿಗೆಯೋಪನಿಗೆ ಬೇಡತಿಯ ಮೋರೆಯಲಿ
ಸುರರ ನಿಲ್ಕುಳಿಗೊಳುವ ರತಿಯ ಚೆಲುವು
ಕವಿಯ ಕಣ್ಣಂದದಾದೇಶದಿಂದುರುಳಾಡಿ
ದಿವದೊಳಗು ಭುಮಿಯೊಳಗು ತಿರುಗುತಿಹುದು
ಆ ವಿಷಯದ ಕಲ್ಪನೆಯು ರೂಪಿಸಲು ಲೇಖನಿಗೆ
ಕವಿಧಾಮನಾಮಗಳನೊದಗಿಸುವುದು''

ಅನುವಾದದಲ್ಲಿ ಮೂಲದ ಸೊಗಸು ಅಷ್ಟಾಗಿ ಮೂಡಿ ಬರಲಿಲ್ಲ. 'ಗರವಟಿಗೆಯೋಪ', 'ಬೇಡತಿಯ ಮೋರೆ'. 'ರತಿಯ ಚೆಲುವು', ಮುಂತಾದ ಬದಲಾವಣೆ ಕಾಣಬಹುದು. ಇಲ್ಲಿನ ಛಂದಸ್ಸು 'ವೀರಚೌಪದಿ' ಎಂದು ಹೇಳಲಾಗಿದ್ದರೂ 'ಅರ್ಧಸಮ ಚತುಷ್ಪದಿ'ಯ ಲಕ್ಷಣ ಗುರುತಿಸಬಹುದು. ಆದಿಪ್ರಾಸ ನಿಯತವಾಗಿದ್ದು, ಒಂದನೇ ಮತ್ತು ಮೂರನೇ ಪಾದಗಳಿಗೂ, ಹಾಗೂ ಎರಡನೇ ಮತ್ತು ನಾಲ್ಕನೇ ಪಾದಗಳಿಗೆ ಅಂತ್ಯಪ್ರಾಸ ಸಮಾನವಾಗಿದೆ.

ಥಾಮ್ಸನ್ ಕವಿಯ 'Rule Britannia' ಕವಿತೆಯನ್ನು ಹ.ನಾ.ರಾ. ಮತ್ತು ಬಿ.ಎಂ. ಶ್ರೀ ಇಬ್ಬರೂ ಅನುವಾದಿಸಿದ್ದು ಈ ಅನುವಾದಗಳಲ್ಲಿ ವ್ಯತ್ಯಾಸ ಕಾಣಬಹುದು. ಹ.ನಾ.ರಾ. ರವರ ಪದ್ಯವು ಮೂಲದಿಂದ ಸ್ವಲ್ಪ ದೂರಸರಿದಿದ್ದು ರಚನೆಯಲ್ಲಿ ವ್ಯತ್ಯಾಸ ತುಂಬಿದ್ದಾರೆ. ಶ್ರೀಯವರ ಪದ್ಯದಲ್ಲಿ ರಾಷ್ಟ್ರಪ್ರೇಮದ ಉತ್ಸಾಹ ಕುಗ್ಗಿದೆ.

ಮೂಲ : When Briton first Heaven's command
Arose from ant of azure main,
This was the character of the land,
And guardian angels sung this strain,
Rule Britannia ! rule the waves !
Britons never will be the slaves.

"ಬೀರತನೆ ದಿವೌಕನಾಥನಾಜ್ಞೆಯಿಂದ ಮೊದಲನೇ
ನೀರಧಿಯು ಸುನೀಲ ಕಾಯದಿಂದ ಹೊರಡುವಾಗಲೇ
ಅವಳ ರಾಷ್ಟ್ರಕಿತ್ತ ಶಾಸನೋಕ್ತಿಗಳನು ಹಾಡುತ
ದಿವಿಜರಿಂತು ಘೋಷಿಸಿದರು ಸದಯರಾಗಿ ನೋಡುತ
ಆಳು ಬೀರತನೇ ಆಳು ವೀಚಿನಿಷ್ಠ ರಾಷ್ಟ್ರವ
ತಾಳರೆಂದು ಬೀರತನಯರವನಿಯೊಳಗೆ ದಾಸ್ಯವ" (ಹ.ನಾ.ರಾ.)

"ಆದಿಯಲಿ ದೈವಾಜ್ಞೆಯಲಿ ಬ್ರಿಟನ್ ಭೂಮಾತೆ
ನೀಲ ಜಲರಾಶಿಯಿಂದುದ್ಭವಿಸಿದುದು
ಆದರಿಸಿ, ಅಭಿಮಾನ ದೇವತೆಗಳೊಲಿದು, ದಯ
ಪಾಲಿಸಿದರಾಕೆಗಿ ಶಾಸನವ ಹರಸಿ-
ಆಳೌ ಬ್ರಿಟಾನಿಯಾ, ಆಳು ತೆರೆಗಳನು,
ಎಂದಿಗೂ ಬ್ರಿಟನಡಿಯಾಳೆಂದೊಪ್ಪಿಕೊಳನು" (ಶ್ರೀ)

ಹ.ನಾ.ರಾ. ಅನುವಾದದಲ್ಲಿ 'ಬ್ರಿಟನ್ಸ್' 'ಬೀರತನಯ' ರಾಗುತ್ತಾರೆ. 'ಬ್ರಿಟಾನಿಯಾ' 'ಬೀರತನೆ'ಯಾಗುತ್ತಾಳೆ. ಅನುವಾದದಲ್ಲಿ ಮೂಲದ ಸೌಂದರ್ಯ ಹಾರಿಹೋಗಿದೆ. ಲಯದಲ್ಲಿ ಉತ್ಸಾಹ ತುಂಬಿದ್ದು ಮೂರು ಮಾತ್ರೆಯ ಏಳು ಗಣಗಳು ಮತ್ತು ಒಂದು ಗುರು ಇಲ್ಲಿದೆ. ಶ್ರೀಯವರ ಅನುವಾದ ಮೂಲಕ್ಕೆ ಸಮೀಪವಾಗಿದ್ದು, ಸರಳವೂ, ಮಾಧುರ್ಯದಿಂದಲೂ ಕೂಡಿದೆ.

ನಾರಾಯಣರಾಯರು ಕನ್ನಡ ಕವಿತೆಯ ಬೆಳವಣಿಗೆ ಬಗ್ಗೆ ತೀವ್ರವಾಗಿ ಯೋಚಿಸಿ ಛಂದಸ್ಸಿನಲ್ಲಿ ಹೊಸ ಮಾದರಿ, ವಸ್ತು, ರೂಪ, ಶೈಲಿ, ಭಾಷೆ ತರಲು ಬಯಸಿದ್ದರು 1918ರಲ್ಲಿ ಏಪ್ರಿಲ್‌ನ ಪರಿಷತ್ಪತ್ರಿಕೆಯಲ್ಲಿ 1918ರ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ 'ಕನ್ನಡ ಸಾಹಿತ್ಯ ಭವಿತೆಯು'ದ ಮೇಲೆ ಅವರು ಬರೆದು ಕಳುಹಿಸಿದ ಮಾತುಗಳ ಸಾರಾಂಶ ಪ್ರಕಟವಾಗಿದ್ದು ಅದರಲ್ಲಿ ಅವರ ತುಡಿತ ವ್ಯಕ್ತವಾಗಿದೆ. "ಇಂಗ್ಲಿಷ್ ಮಾರ್ಗಗಳ ಅನುಸರಣದಿಂದ ........ ಕವಿಗಳು ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರೀಯ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನ ಕೊಡುವರೆಂದೂ, ದೀರ್ಘ ಪುರಾಣಗಳ ಬದಲಾಗಿ ಲಘು ಕೃತಿಗಳನ್ನು ರಚಿಸುವರೆಂದೂ, ಛಂದಸ್ಸಿನಲ್ಲಿ ಹೊಸ ಮಾದರಿಗಳನ್ನು ಕಲ್ಪಿಸಬಹುದೆಂದೂ, ಅಲಂಕಾರದಲ್ಲಿ ಅಚೇತನ ಪದಾರ್ಥಗಳಿಗೆ ವಾಕ್‌ಶಕ್ತಿಯನ್ನು ಮಾನಸಿಕ ಭಾವಗಳಿಗೆ ಮೂರ್ತಿತ್ವವನ್ನು ಆರೋಪಿಸುವ ಉತ್ಪ್ರೇಕ್ಷೆಯು ರೂಢಿಯಾಗಬಹುದೆಂದೂ ಹಳಗನ್ನಡ ಬಿಟ್ಟು ನಡುಗನ್ನಡ ಹೆಚ್ಚಾಗಿ ಪ್ರಯೋಗಿಸುವರೆಂದೂ"

ಎಂದೂ ಈ ನೂತನ ಕಂದೋರೂಪಗಳನ್ನು ''ಶಿಥಿಲಕಂದ'' ''ಶಿಥಿಲ ರಗಳೆ'' ಎಂದೂ ಕರೆಯಬಹುದು ಮತ್ತು 'ಪೂರ್ವ ಕವಿಗಳ ನಿಯಮಗಳನ್ನು ಸೂಕ್ಷ್ಮವಾಗಿ ಅನುಸರಿಸಿಲ್ಲ' ಎಂಬ ಮಾತಿನಲ್ಲಿ ನಾರಾಯಣರಾಯರು ಮೂಲ ಭಾವಕ್ಕೆ ಹೆಚ್ಚು ಕುಂದುಬರದಂತೆ ಅನುವಾದ ಮಾಡಿ, ಮೂಲದ ಛಂದಸ್ಸು ಉಳಿಸಿಕೊಂಡರೂ ರಗಳೆ, ಚೌಪದಿ, ಆದಿಪ್ರಾಸಗಳ ಚೌಕಟ್ಟು ಮೀರಿ ಹೋಗಿಲ್ಲ. ಸಿದ್ಧಿ, ಕಾಲನಿಷ್ಠೆ, ಸಂಪ್ರದಾಯ ಬದ್ಧ ರೂಪಗಳು ಇಲ್ಲಿ ಎದ್ದು ಕಾಣುತ್ತವೆ. ಅವರ ನುಡಿಗಟ್ಟಿನಲ್ಲಿ ಲಾಲಿತ್ಯ, ಸರಳತೆ ಇದ್ದು ಹೊಸ ಕನ್ನಡ ನಡುಗನ್ನಡದ ನುಡಿ ಪ್ರಯೋಗವಿದ್ದರೂ ಹಳೆಯ ಹೆಜ್ಜೆ ಗುರುತು ಸ್ಪಷ್ಟವಾಗಿದೆ. ಅವರ ಅನುವಾದದ ಕೆಲವು ಉದಾಹರಣೆಗಳು ಇಲ್ಲಿವೆ:

ಬಾರೋ ವಸಂತದ ಕಂದ ಬಾ ಬಾ, ಬಾರೋ
ಹಾರುವ ಹಕ್ಕಿ ನೀನಲ್ಲ
ಸಾರುವ ದನಿ, ಮಾಮರ ಗಂಡು ಕಣ್ಣಿಗೆ
ತೋರದ ಹುರುಳಾಗಿ ಸುಳಿವೆ(ವರ್ಡ್ಸ್‌ವರ್ತ್)

ಅರಿತನಗೆ ಸಾಕಷ್ಟು ಸುಖಲಾಭದವಕಾಶ
ದೊರೆಯುವುದು ಮಣಿಪಣಿಯ ಶಿರಸಿನಲ್ಲಿ
ಮರಗಳಲಿ ಮೌತವನಿಗು ಫಲಗಳಲುಪದೇಶ
ಒರತೆಗಳಲೋದು ಶುಭ ನೋಡಿದಲ್ಲಿ (ಶೇಕ್ಸ್‌ಪಿಯರ್)

ವಾರಿಧಿ ನದಿಗಳಲೆದ್ದು ಕುಸುಮಗಳ
ಆರಿದ ಬಾಯಿಗೆ ಹೊಸ ಮಳೆಗರೆಯುವೆ
ನಡು ಹಗಲಲಿ ತೂಕಡಿಸುವ ಕುಡಿಗಳ
ಒಡಲಿನ ಹೊದಕೆಗೆ ನೆಳಲನು ಕವಿಸುವೆ (ಶೆಲ್ಲಿ)

ಬದುಕು ಬರಿ ಕನಸೆಂದು ಮರುಗುವುದು ಸರಿಯಲ್ಲ
ಆದರೆ ನಿದ್ರೆಯ ಮೃತ್ಯು ತೋರುವಂತಿರಲಿಲ್ಲ
ಬದುಕು ನಿಜರಕ್ಕಲ್ಲ ಮಸಣ ಮುಗಿಸುವುದಿಲ್ಲ
ಆದು ಚೇತ್ರ ಮಣ್ಣ ಸೇರುವುದಿಲ್ಲ (ಲಾಂಗ್‌ಫೆಲೋ)

ಇವರ ಪದ್ಯಗಳಲ್ಲಿ ಹೊಸಗನ್ನಡದ ಛಂದಸ್ಸು, ಸಾಂಗತ್ಯ, ಭಾಷೆ ಇದ್ದರೆ ನಡುಗನ್ನಡದ ಚೌಪದಿ, ಷಟ್ಪದಿ ಸಾಂಗತ್ಯಗಳೇ ಹೊಸ ಭಾವಕ್ಕೂ ಭಾಷೆಗೂ ಹೊಂದಿಕೆಯಾಗುವಂತಿದೆ. ಮುಂದೆ ಬಂದ ಹೊಸಗನ್ನಡ ಸಾಹಿತ್ಯಕ್ಕೆ ಸ್ವಲ್ಪಮಟ್ಟಿಗಾದರೂ ಮಾದರಿಯಾದುದು ಹಾಗೂ ಇವರ ಕೆಲವು ಲಯ ವಿಶೇಷಗಳು ನವೋದಯ ಕಾವ್ಯದಲ್ಲಿ ಹೆಚ್ಚು ಪ್ರಚಾರವಾಗಿದ್ದನ್ನು ಕಾಣಬಹುದು. ಇವರು ಎಸ್. ಸಿ. ಗೋವಿಂದರಾಜಯ್ಯಂಗಾರ್ಯರು ಅನುವಾದಿಸಿದ ಗ್ರೇ ಕವಿಯ 'ಎಲಜಿ'ಯನ್ನು ಭಾಷಾಂತರಿಸಿದ್ದಾರೆ.

ಅದೋ ಮಿಣುಗುಟ್ಟುತ ಭೂಮಿಯ ರೂಪವು ನೋಟಕೆ ಮುಸುಕುವುದು।
ಅದರಿಂದೆ ವಾತಾವರಣವು ಗಂಭೀರ ಶಾಂತತೆ ತಳೆವಿಹದು ॥

ಈ. ಸಾಲುಗಳಲ್ಲಿನ ಸರಳತೆ, ಸ್ಪಷ್ಟತೆ ಎದ್ದು ಕಾಣುತ್ತದೆ. ಜಯರಾಯಾಚಾರ್ಯರ ''ಅನುಕರಣ ಗೀತ ಲಹರಿ'' (1902)ಯಲ್ಲಿ ಮೂವತ್ತು ಕವಿತೆಗಳು ಇದ್ದು ಇದೊಂದು 34 ಪುಟಗಳ ಸಂಕಲನ. ಎಳೆಯ ಶಾಲಾ ಮಕ್ಕಳಿಗಾಗಿ ಬರೆದ ಈ ಕವಿತೆಗಳು ಸುಲಭ ಶೈಲಿಯಲ್ಲಿವೆ. ಆಟಪಾಟಗಳ ಮೂಲಕ ಐರೋಪ್ಯ ದೇಶದ ಮಕ್ಕಳ ಪುರೋಭಿವೃದ್ಧಿಗಾಗಿ ಸಾಧಿಸಿದ ಫ್ರೋಬಲ್ ಎಂಬಾತನ ಅನುಕರಣೆಯಿಂದ ನಮ್ಮ ಕವಿತೆಗಳಲ್ಲಿದ್ದ ಕೊರತೆಯನ್ನು ನೀಗಿಸುವುದು ಈ ಕವಿತೆಗಳ ಉದ್ದೇಶವಾಗಿದೆ. ಈ ಸಂಕಲನದಲ್ಲಿ 'ನವಿಲೆಂದು ಮಗುವನ್ನು ಆಡಿಸುವ ಹಾಡು' 'ಪಾಠಶಾಲೆಗೆ ಹೋಗುವ ಹಾಡು' 'ಬೆಕ್ಕನ್ನು ಕುರಿತು ಹೇಳು ಹಾಡು' 'ಮಾತಾಪಿತೃ ಭಕ್ತಿ' 'ರೈತರು' ಮುಂತಾದ ಕವಿತೆಗಳಿದ್ದು ಇವುಗಳು ಪ್ರಚಲಿತ ರಾಗ-ತಾಳಗಳಿಗನುಗುಣವಾಗಿ ರಚಿತವಾಗಿವೆ.

'ಮಾತಾಪಿತೃ ಭಕ್ತಿ' ಎಂಬ ಕವಿತೆ 'Mother" ಎಂಬ ಇಂಗ್ಲಿಷ್ ಕವಿತೆಯ ರೂಪಾಂತರವಾಗಿದ್ದು ಇದು ಸಾಂಗತ್ಯದಲ್ಲಿದೆ. ಇದು ಕನ್ನಡ ಬಾಲಬೋಧೆಯಲ್ಲಿ 'ಮಾತೃಭಕ್ತಿ' ಎಂದು ಬದಲಾಗಿದೆ :

ಹಾಲನೀಯುತಲೆನ್ನ
ಲೀಲೆಗೆ ಸಂತಸ
ದಾಳಿದರಾರ್ ಎನ್ನತಾಯಿ ॥
ಲಾಲಿಸುತ್ತಲಿ ತೋಳ
ಮೇಲೆ ಮಲಗಿಸಿಕೊಂಡು
ಪಾಲಿಸಿವರಾರು ? ತಾಯಿ ॥

ಇದೇ ಪದ್ಯ 1914ರಲ್ಲಿನ ಕನ್ನಡ ಎರಡನೇ ಪುಸ್ತಕದಲ್ಲಿ ಹೀಗೆ ಬದಲಾಗಿದೆ:

ಹಾಲನು ಕೊಡುತೆನ್ನ
ಲೀಲೆಗೆ ಒಲಿವನು
ತಾಳಿದಳಾರ್ ಎನ್ನ ತಾಯಿ
ಲಾಲಿಸಿ ತೊಡೆಯ
ಮೇಲೆನ್ನನು ಮಲಗಿಸಿ
ಪಾಲಿಸಿದವಳಾರು ತಾಯಿ

'ಈಯುತೆನ್ನ'ವು 'ಕೊಡುತೆನ್ನ'ವೆಂದೂ 'ತೋಳ ಮೇಲೆ ಮಲಗಿಸಿಕೊಂಡು' ಎಂಬುದು 'ತೊಡೆಯ ಮೇಲೆನ್ನನು ಮಲಗಿಸಿ' ಎಂದೂ ಬದಲಾಗಿದೆ. ಹೀಗೆ ಇಡೀ ಪದ್ಯವನ್ನು ಬದಲಿಸಲಾಗಿದೆ. ಈ ಬದಲಾವಣೆಯಲ್ಲಿ ಜಯರಾಯಾಚಾರ್ಯರು ತಮ್ಮ ಪದ್ಯಗಳಲ್ಲಿ ಹೊಸ ವಸ್ತು ಹಾಗೂ ಹೊಸ ಶಬ್ದಗಳಿಗೆ ಪ್ರವೇಶ ನೀಡಿದ್ದಾರೆ ಹಾಗೂ ಈ ಕವಿತೆಗಳಲ್ಲಿ ಛಂದಸ್ಸಿನ ನಡೆ, ಪದ ಪ್ರಯೋಗಗಳಲ್ಲಿ ಪರಿಣತಿಯನ್ನು ಗುರುತಿಸಬಹುದು.

ಓಡುತಿರ್ಪುದು ರೈಲು ॥ ಪಲ್ಲ ॥
ನೋಡು ಕೂಡಿರುವ ಜನರ
ಗಾಡಿಯನೆಳಕೊಂಡು ಬೇಗ ॥ ಅನುಪಲ್ಲ ॥

ಮುಂದಿನಿಂಜಿನಲ್ಲಿ ಬೆಂಕಿ
ಯೊಂದಡೆಯೊಳಗಾ ಬೆಂಕಿ
ಯಿಂದ ನೀರು ಕಾಯ್ದು ಹಬೆಯು
ಬಂದಪುದಾ ಹಬೆಯ ಬಲದಿ (ರೈಲುಗಾಡಿ, ಅನುಕರಣ ಗೀತಲಹರಿ, ಪುಟ 21)

**ಪಂಜೆ ಮಂಗೇಶರಾಯರು ( 1874-1937 )**

ಇವರು ಇಂಗ್ಲಿಷ್ ಪದ್ಯಗಳ ಅನುವಾದದ ಮೂಲಕ ತಮ್ಮ ಸಾಹಿತ್ಯ ಕೃಷಿ ಪ್ರಾರಂಭಿಸಿದರು. ಅವರ ಅನುವಾದಗಳು ಆ ಕಾಲದ 'ಸತ್ಯದೀಪಿಕೆ' 'ಸುವಾಸಿನಿ' ಮುಂತಾದ ಪತ್ರಿಕೆಗಳಲ್ಲಿ, ಅವರೇ ಸಂಪಾದಿಸಿದ ಪಠ್ಯ ಪುಸ್ತಕಗಳಲ್ಲಿ ಸೇರಿವೆ. ಇಂಗ್ಲಿಷ್ ಕವನಗಳ ವರ್ಚಸ್ಸು ಕೆಡದಂತೆ ಕನ್ನಡಕ್ಕೆ ತರುವುದರಲ್ಲಿ ಮೊದಲಿಗರು ಪಂಜೆಯವರು. ಅವರ 'ಅಣ್ಣನ ವಿಲಾಪ' 'O call my brother back to me' ಎಂಬ Mrs. Feman'sರ ಕವಿತೆಯ ರೂಪಾಂತರ. ಪಂಜೆಯವರ ತಮ್ಮ ತೀರಿಕೊಂಡಾಗ ಆದ ವೇದನೆಯನ್ನು ಈ ಪದ್ಯದ ಮೂಲಕ ತೋಡಿಕೊಂಡಿದ್ದಾರೆ. ತಾಯಿ ಮಕ್ಕಳ ಸಂವಾದದಂತಿರುವ ಈ ಪದ್ಯದಲ್ಲಿ ವಾತ್ಸಲ್ಯ, ಮಮತೆ, ಅನುಕಂಪ ಬಹಳ ಸೊಗಸಾಗಿ ಹರಿದು ಬಂದಿದೆ.

ನರಿಮೊಗರು ಜಾತ್ರೆಯಲಿ ನನ್ನನು ಕಂಡು
ಅರರೆ ! ತಮ್ಮನನೇಕೆ ನಾನು ಕರಕೊಂಡು
ಬರಲಿಲ್ಲ ? ಎಂದಾ ಗೆಳೆಯರೆನ್ನ ಕೇಳೆ.
ಮರುಮಾತು ನಾನೇನು ಕೊಡಲಮ್ಮ ನಾಳೆ ।
ಒಬ್ಬನೆ ತಿನಿಸುಣಿಸು ಬೇಡಲಾರೆ
ಇಬ್ಬರಿಲ್ಲದೆ ಈಗ ನಾನಾಡಲಾರೆ ॥

ಪಂಜೆಯವರೂ 'Twinkle Twinkle Little Star' ಅನುವಾದಿಸಿದ್ದು ಶಾಬ್ದಿಕ ನೆಲೆಯಲ್ಲಿ. ಇದು ಮೂಲಕ್ಕೆ ಹತ್ತಿರವಾಗಿದ್ದರೂ, ಎಸ್. ಜಿ. ನ. ಕವಿತೆಯ ಭಾವಪೂರ್ಣತೆ ಇಲ್ಲಿ ಕಾಣುವುದಿಲ್ಲ. ಎರಡೂ ಕಡೆ ಆದಿ, ಅಂತ್ಯ ಪ್ರಾಸ ಬಳಸಲಾಗಿದ್ದು, ಹೊಸ ವಸ್ತು, ಭಾಷೆಯಿಂದಾಗಿ ಎರಡೂ ಕೂಡ ಸ್ವತಂತ್ರ ರಚನೆಯಂತಿವೆ.

"ಮಿನುಗಲೆ ಮಿನುಗಲೆ ನಕ್ಷತ್ರ
ನನಗಿದು ಚೋದ್ಯವು ಬಲುಚಿತ್ರ
ಘನ ಗಗನದಿ ಬಲು ದೂರದಲಿ
ಮಿನುಗುವೆ ವಜ್ರಾಕಾರದಲಿ"

ಪಂಜೆಯವರ 'ತೆಂಕಣ ಗಾಳಿಯಾಟ' Wordsworth ಕವಿಯ The Frolic in the Wind ಕವಿತೆಯ ರೂಪಾಂತರವಾಗಿದ್ದು ಇದರಲ್ಲಿನ ಲಯ, ಭಾವ, ಪ್ರಾಸ, ಶೀಘ್ರಗತಿ, ತುಂಟಾಟ ಬಿರುಸುಗಳ ಬಗ್ಗೆ ರಂ.ಶ್ರೀ. ಮುಗಳಿಯವರು ಹೀಗೆ ಹೇಳಿದ್ದಾರೆ :

"The poem is a perfect piece of art with rhythm, word, speed rhythm and sound all meeting in harmony to produce the desired effect".

ಪಂಜೆಯವರು ತೆಂಕಣಗಾಳಿಯು ಬೀಸುವ ವೇಗವನ್ನು ಶಬ್ದಗಳ ಮೂಲಕ ಅಷ್ಟೇ ವೇಗವಾಗಿ ಹೇಳಿದ್ದಾರೆ :

ಬಂತೈ ಬಂತೈ ಇದೆ ಇದೆ ಬಂತೈ
ಗಿಡಗಿಡ ಗೊಂಚಲ ಮಿಂಚಲು
ಮಿಡಿಯನು ಹಣ್ಣನು ಉದುರಿಸಿ ಕೆದರಿಸಿ,
ಎಡದಲಿ ಬಲದಲಿ ಕೆಲದಲಿ ನೆಲದಲಿ
ಪಡುವಣ ಮೋಡವ ಬೆಟ್ಟಕೆ ಘಟ್ಟಕೆ
ಹೊಡೆದಟ್ಟುತ ಕೋಲ್‌ಮಿಂಚನು ಮಿರುಗಿಸಿ
ಸಿಡಿಲನು ತಾಳಿಗೆ ಬಾಳಿಗೆ ಎರಗಿಸಿ
ಜಡಿಮಳೆ ಸುರಿವೋಲ್ ಬರುಮಳೆ ಬರುವೋಳ್
ಕುಡಿನೀರನು ಒಣಗಿದ ನೆಲಕರವೋಲ್

ಬಂತೈ ಬೀಸುತ ಬೀಸುತ ಬಂತೈ
ತೆಂಕಣ ಗಾಳಿಯು ಕೊಂಕಣ ಸೀಮೆಗೆ
ಬಂತೈ ಬಂತೈ ಬಂತೈ ಬಂತೈ

ವರ್ಡ್ಸ್‌ವರ್ತ್ ಕವಿಯ The last of the Flock ನ್ನು 'ಕಡೆಕಂಜಿ'ಯಾಗಿ ಪಂಜೆಯವರು ರೂಪಾಂತರಿಸಿದ್ದು ದಕ್ಷಿಣ ಕನ್ನಡದ ಕಾರ್ಕಳದ ಪರಿಸರದಲ್ಲಿ ಬರಮಶೆಟ್ಟಿಯ ಕಥೆ ಬಹಳ ಸಮರ್ಥವಾಗಿ ಬಿಂಬಿತವಾಗಿದೆ.

His cheeks with tears were wet
shirdy be seemed though he was sad
And in his arms a lamb he had
ಕಂದು ಮೋರೆಯ ನೊಂದಕಣ್ಣಿನ ಮಂದ ಕಣ್ಣೀರು ಮಸಕಿನಾ
ಬಿಂದು ಹೊರಡುವ ಮೂಗು ಸುಯ್ಲಿನ ನೊಂದು ನೋಯುವ ಸೆಟ್ಟಿಯಾ
ದಿಟ್ಟ ಕೈಯಲಿ ಪುಟ್ಟ ಕರುವನು ಕಟ್ಟಿಕೊಂಡಿಹ ಸೆಟ್ಟಿಯು

"ಪಂಜೆಯವರ ಈ ಕವಿತೆಯಲ್ಲಿ ಅವರ ಕಲ್ಪನೆ, ವಿಚಾರಶೀಲತೆ ವಿಸ್ತಾರಗೊಂಡಿದ್ದು ಬರಮ ಶೆಟ್ಟಿಯು ತನ್ನ ದುಃಸ್ಥಿತಿಗೆ ಮರುಕಪಡುವ ಸನ್ನಿವೇಶ ಮೂಲಕ್ಕಿಂತ ಹೆಚ್ಚು ವಿವರವಾಗಿ ಮೂಡಿಬಂದಿದೆ. ಇದೊಂದು ಕಥನ ಕವನವಾಗಿದ್ದು ಭಾವನಾಭಿವ್ಯಕ್ತಿ, ಲಯಬದ್ಧತೆ, ಪದಪುಂಜಗಳು ಪರಿಣಾಮಕಾರಿಯಾಗಿ ಹೊಂದಿಕೊಂಡಿವೆ. ಭಾವಗೀತೆಯ ಮುಖ್ಯ ಅಂಶಗಳಾಗಿರುವ ಭಾವ ಮತ್ತು ಗೇಯತೆಗಳು ಪಂಜೆಯವರ ಆರಂಭಿಕ ಕಾವ್ಯ ಕೃತಿಯಲ್ಲಿ ಸಂಯೋಗವಾಗಿ ಹೊಸ ಬೆಳಕಿಗೆ ಕಾರಣವಾಯಿತು."[11]

ಮಂಜೇಶ್ವರ ಗೋವಿಂದ ಪೈ ಯವರು ಪ್ರಾಸ ತ್ಯಾಗದಂತಹ ಧೀರ ನಿರ್ಧಾರವನ್ನು ಮಾಡಿದ ಧೀಮಂತ ಕವಿ. ಇದಕ್ಕೆ ಅವರಿಗೆ ಪ್ರೇರಣೆ ಇಂಗ್ಲಿಷ್ ಕವಿಗಳು. 'ಸುನೀತ'ವನ್ನು ಕನ್ನಡಕ್ಕೆ ತಂದ ಮೊದಲಿಗರೂ ಅವರೇ. ಗೋವಿಂದ ಪೈ ಅವರು 1899ರಲ್ಲಿಯೇ ಶೇಕ್ಸ್‌ಪಿಯರ್‌ನ "Twelth night" ಎಂಬ ನಾಟಕದ ಮೊದಲ ಅಂಕದಿಂದ 'ಕೆಲವು ನೋಟಗಳನ್ನು' ಭಾಷಾ

ಕಂದಗಳಲ್ಲಿ ಕನ್ನಡಿಸಿ ಅವನ್ನು ನಂದಳಿಕೆ ನಾರಾಯಣಪ್ಪನವರಿಗೆ ಕಳಿಸಿದ್ದನ್ನು 'ಅವನ್ನು ಮುಂದುವರಿಸು' ಎಂದು ಅವರು ಹೇಳಿದುದನ್ನು ತಮ್ಮ 'ಸಾಹಿತ್ಯಜ್ಞರ ಆತ್ಮ ಕಥನದಲ್ಲಿ ಹೇಳಿಕೊಂಡಿದ್ದಾರೆ.[12] ಇವರು ಇಂಗ್ಲಿಷ್ ಮಾತ್ರವಲ್ಲದೆ ಜರ್ಮನ್ ಮತ್ತು ಉರ್ದುವಿನಿಂದಲೂ ಅನುವಾದಿಸಿದ್ದಾರೆ. 1903ರಲ್ಲಿ ವರ್ಡ್ಸ್‌ವರ್ತ್ ಕವಿಯ 'The Butterfly' ನ್ನು 'ಚಿಟ್ಟೆಗೆ' ಎಂದೂ 1906ರಲ್ಲಿ ಶೆಲ್ಲಿಯ 'To the sky lark'ನ್ನು 'ಬಾನಕ್ಕಿಗೆ' ಎಂದೂ ಕೀಟ್ಸ್‌ನ 'The ode to the Gracian Urn' ನ್ನು 'ಹಳೆಯ ನಾಣ್ಯ' ಎಂದೂ ಅನುವಾದಿಸಿದ್ದಾರೆ.

''ನಿಂದಿರು ಕುಲುಂಕದಿರೆರಂಕೆಗಳ ನಿನ್ನ
ಮುಂದು ಬಳಿಸಂದು ಕುಣಿಕಣ್ಣೆದುರೊಳಿನ್ನ
ನಿನ್ನ ನಿರುಕಿಸಲೊರೆವೆನೊಕಿನ ಕೆಳೆನುಡಿಯ
ನನ್ನೆಳೆಯ ಬಣ್ಣಿಸುವ ಚಿಣ್ಣ ಕವಿಯೊಡೆಯ (ಚಿಟ್ಟೆಗೆ)

ಸೊಗಯಿಸ್ಕೆ ಸುಖಜೀವಿ
ನಗೆವಕ್ಕಿ ನೀನಲ್ಲ.
ಗಗನದಿಂದಲೋ ಗಗನದರುಗಿನಿಂದಲೋ
ಮೊಗನೆ ತುಂಬೆಣೆಯ ಮುಂ
ಬಗೆದಿಲ್ಲದಿಹ ಭಿನ್ನ
ಹಣೆಯುಗುವುದಾದರೆ ಗಾಯನದ ಝುರಿಯಿಂ। (ಬಾನಕ್ಕಿಗೆ)

ಇನ್ನುಮೇತಕೆ ನಿನ್ನ ಮುಸುಕು ಮೌನವ ತೋರೆಯೆ
ಮುಚ್ಚಾಲೆ ಮಾಡಿದೊಲ್ಲಯಿಸುವೇಕೆನ್ನ?
ತಳದುಳಿವುದೆನ್ನಮನ ನಿನ್ನ ತೆರೆಯಂ ಹರಿಯೆ
ನಿಲುಕದೆಲೆ ತಡವೆ ಪುಲ್ಲವಿಸುವೇಕೆನ್ನ (ಹಳೆಯ ನಾಣ್ಯ)

'ಚಿಟ್ಟೆಗೆ'ಯಲ್ಲಿ ಪ್ರಾಸವಿದ್ದು, ಚೌಪದಿಯಲ್ಲಿರುವ ಈ ಕವಿತೆಯಲ್ಲಿ ಹಳಗನ್ನಡದ ಭಾಷಾ ವಿಶೇಷವಿದೆ. 'ಬಾನಕ್ಕಿಗೆ' ಕುಸುಮ ಷಟ್ಪದಿಯಲ್ಲಿದ್ದು, 'ಶ್ರೀ'ಯವರ ಸರಳವಾದ 'ಬಾನಾಡಿ'ಗೆ ಹೋಲಿಸಿದರೆ ಇದರದು ಪ್ರೌಢ ಹಾಗೂ ಗಂಭೀರ ಶೈಲಿ. ದ್ವಿತಿಯಾಕ್ಷರ ಪ್ರಾಸ ನಿರ್ಬಂಧ, ಷಟ್ಪದಿಯ ಛಂದೋರೂಪಗಳು ಪೈಗಳ ಅನುವಾದ ಅಷ್ಟು ಪರಿಣಾಮಕಾರಿಯಾಗದಿರಲು ಕಾರಣವಾಗಿದೆ. 'ಹಳೆಯ ನಾಣ್ಯ'ದಲ್ಲಿ ಇಂಗ್ಲಿಷ್ ಕವಿತೆಯ ಪ್ರಾಸ, ಪಂಡಿತ ಶೈಲಿಯನ್ನು ಕಾಣಬಹುದು.

ಕೆರೂರು ವಾಸುದೇವಾಚಾರ್ಯರು ಶೇಕ್ಸ್‌ಪಿಯರ್‌ನ 'ಎ ಮಿಡ್‌ಸಮರ್ ನೈಟ್ಸ್ ಡ್ರೀಮ್ಸ್'ನ್ನು 'ವಸಂತ ಯಾಮಿನೀ ಸ್ವಪ್ನ ಚಮತ್ಕಾರ ನಾಟಕ'ವೆಂದು ಭಾವಗೀತೆಯ ರೀತಿಯಲ್ಲಿ ಹೊಸಗನ್ನಡದಲ್ಲಿ ಅನುವಾದಿಸಿದ್ದಾರೆ.

ಪ್ರೇಮ ವಿಹ್ವಲೆ ನಾನು ಮರುಗುತೆ
ನೇಮದಲಿ ಕಂಬನಿಯ ಸುರಿಸುತೆ
ಭೂಮಾತೆಯ ಸೆರಗು ತೋಯೆ
ಸಮಾಮಹಿಮೆಯು ಕ್ಷಮಿಸುವಳು ನಿಮ್ಮನು (ಪುಟ 51)

ಅದೇ ರೀತಿ ಎಂ. ಎಸ್. ಪುಟ್ಟಣ್ಣನವರು ಅನುವಾದಿಸಿದ 'ಹೇಮಚಂದ್ರರಾಜವಿಲಾಸ' ಕೂಡ ಹೊಸಗನ್ನಡದಲ್ಲಿದೆ.

ಸೂತ್ರದ ಬೊಂಬೆ ಮಾಡಿತಾ
ಸೂತ್ರವಿಡಿದು ಕುಣಿದಾಡಿ
ಸೂತ್ರ ಕಿತ್ತೀತು ತಂತಿ ಮುರಿಯಿತು
ಆಟ ಕೆಟ್ಟಿತು ನೋಟ ನಿಂತಿತು
ಬೈಲಿಗೆ ಬೈಲಾಯಿತು
ಬೈಲೊಳಗೆ ವೋಡಾಡಿತು (ಪುಟ 27)

ಎಸ್. ಜಿ. ಗೋವಿಂದ ರಾಜ ಅಯ್ಯಂಗಾರರು ಎಸ್. ಜಿ.ನ. ರವರ ತಮ್ಮ. ಇವರು ಅನೇಕ ಇಂಗ್ಲಿಷ್ ಕವಿತೆಗಳನ್ನು ಅನುವಾದಿಸಿದ್ದರೂ ಅವುಗಳಲ್ಲಿ ಕೃತಕತೆ ಹೆಚ್ಚಾಗಿದ್ದು ಹೊಸತನವಾಗಲೀ, ಸರಳತೆಯಾಗಲೀ ಇಲ್ಲ. "ಅರ್ಥ ಮಾಡಿಕೊಳ್ಳುವುದಕ್ಕೆ ಕಷ್ಟವಾದ ಶಬ್ದಗಳನ್ನು ಬಳಸಿ, ಯಾರಿಗೂ ಅರ್ಥವಾಗದಂತೆ ಹೇಳಬೇಕೆಂಬ ಅಪ್ರಜ್ಞಾಪೂರ್ವಕವಾಗಿ ಮಾಡಿದ ಪ್ರಯತ್ನದಂತೆ ಕಾಣುತ್ತದೆ" ಎಂದು ಎಸ್. ಅನಂತನಾರಾಯಣರವರು ಅವರ ಕೃತಿಗಳ ಬಗ್ಗೆ ಹೇಳಿದ್ದಾರೆ. ಎಸ್. ಜಿ. ಗೋ. ರವರ ಅನುವಾದಿತ ಕವಿತೆಗಳಲ್ಲಿ ಹಳಗನ್ನಡ ಮತ್ತು ಹಳೆಯ ಪ್ರಯೋಗ ಕಾಣುತ್ತದೆ.

"ಅರಸರ ಕೂರ್ಮೆಯಾಯ್ತು ಪಿರಿದೆನ್ನೊಳಗಂದೆಲೆ। ಬಿಂಕವೇಕೆ? ರಾ।
ಜರ ದಯೆ ನಿನ್ನೊಳಂಕುರಿಸಿ। ಪಲ್ಲವಮಾಂತಪುದಿಂದು। ಪಣ್ಗಳಂ
ಧರಿಪುದು ನಾಳೆ; ನಾಡಿದಕಟಾ। ಸಕೃದುತ್ಥಿತ ಶಂಖಮೆಂತು ಭೂ।
ಧರಮನೆ ಸೀಳ್ದುಮಾತೆರದೆ, ಸೀಳ್ದಪುರಾರಯೆ, ನಿನ್ನ ಪೆರ್ಮೆಯಂ ॥

(ಯತಿರಾಜ ವಿಂಶತಿ)

'ಗ್ರೇ' ಕವಿಯ 'ಎಲಜಿ'ಯನ್ನು 'ಸ್ಮಶಾನ ಶೋಕ'ವೆಂಬ ಹೆಸರಿನಲ್ಲಿ ಇವರು ಅನುವಾದಿಸಿದ್ದು ಮೂಲದ ಗಾಂಭೀರ್ಯವಿದ್ದರೂ ಹಳೆಯ ರೂಪ ಬಳಕೆಯಾಗಿದೆ:

"ಕುಲದಭ್ಯುನ್ನತಿ, ರಾಜ್ಯಭಾರವಿಭವಂ, ಸೌಂದರ್ಯಸಂಪತ್ತಿ, ದೋ।
ರ್ವಲದಾ ಪೆರ್ಚುಗೆಯಾತ್ತ ವಿದ್ಯೆಯೆಸಕಂ ಸಂಪತ್ತಿಯೊಳ್ಪೆಂಪು, ಬಿ।
ಗ್ವಲಯಕ್ಕೊಯ್ಯನೆ ಬೆಳ್ಪನೀವ ಜಸದೊಂದಾಟೋಪಮಿಾಯೆಲ್ಲಮುಂ।
ನೆಲದೊಳ್ ಶಾಶ್ವತಮಲ್ಲ ಪೆಲ್ಲಮಳಿಗುಂ, ದೇಹಾಂತದೊಳ್ ದೇಹಿಯಾ॥

(ಸ್ಮಶಾನಶೋಕ)

ಎಂ. ಡಿ. ಅಳಸಿಂಗರಾಚಾರ್ಯರು (1877-1940) ಶೇಕ್ಸ್‌ಪಿಯರ್‌ನ 'Seven Ages of man' ಕವಿತೆಯ 'All the words a stage' ನ್ನು 'ಸ್ವದೇಶ ಮರ್ಯಾದೆಗೆ ತಕ್ಕಂತೆ' ಎಂದು ಅನುವಾದಿಸಿದ್ದು ಅನುವಾದ ಎಷ್ಟು ಪೇಲವವಾಗಿದೆ ಎಂದು ಹ.ನಾ.ರಾ. ರವರ ಅನುವಾದಕ್ಕೆ ಹೋಲಿಸಿ ನೋಡಿದರೆ ಗೊತ್ತಾಗಬಹುದು.

'ಕರದೋಳ್ ಬಿರ್ಚಿರ್ಟ್ಟ ಕೋಶಾವಳಿಯ ಮರೆ ವಿವಾಹಾತುರಾ ಚಿತ್ತದೊಳ್ಪಂ
ದಿರೆ ಮೇಣ್ ಪಾಠಾಕ್ಷರಂಗಳ್ತುಟಿಯಾಳುದಿರೆ ಶೃಂಗಾರ ವಾರ್ತಾಶ್ರವಕ್ಕಾ

ತುರಿಸಲ್ ಕರ್ಣದ್ವಯಂ, ಭೋಗದೊಳಧಿಕಾಸಕ್ತಿಯುಂ ವಿದ್ಯೆಯೊಳ್ಕೇ
ಸರಮುಂ ಮೇಲ್ಮೇಲೆ ಪೆರ್ಚುತ್ತಿರಲದೆ ಧರೆಯೋಳ್ ತತ್ತ್ವತೀಯಾಂಕ ಕೃತ್ಯಂ।

ಕೆರೋಡಿ ಸುಬ್ಬರಾಯರು 'Little drops of water' ಎಂಬ ಸರಳ ಪದ್ಯವನ್ನು ಕ್ಲಿಷ್ಟವಾಗಿ ಅನುವಾದಿಸಿದ್ದಾರೆ:

| | |
|---|---|
| ತುಂತುರ್ನೀರ್ವನಿಯ ಬಲ | "Little drops of water |
| ವಂತಾಂಬುಧಿಯಕ್ಕುಮಲ್ಲ ಸೈತಕಣದಿಂ | Little grains of sand |
| ಸಂತಸದಿಳೆಯಕ್ಕುಜನ | Make a mighty ocean |
| ಮಿಂತಿಹುದೇ ಸಂಘಶಕ್ತಿ ಕಲಿಯುಗಕಕ್ಕುಂ | And a pleasant land |
| | That unity is strength |
| | Men will understand". |

ಇಂಗ್ಲಿಷ್ ಕವಿತೆಯಲ್ಲಿ ಸರಳತೆ ಇದ್ದರೆ, ಅನುವಾದದಲ್ಲಿ ಗಡಸುತನವಿದೆ. ಇಂಗ್ಲಿಷ್ ಮೂಲದಲ್ಲಿಲ್ಲದ 'ಕಲಿಯುಗಕಕ್ಕುಂ' ಕಂದಪದ್ಯದ ನಾಲ್ಕನೆಯ ಪಾದ ಪೂರೈಸಲು ಬಂದಿದ್ದು ''ಸಂಘೇಶಕ್ತಿ ಕಲೌಯುಗೇ'' ಎಂಬ ಉಕ್ತಿಯನ್ನು ಸೇರಿಸಲಾಗಿದೆ. ವೃತ್ತ, ಕಂದ, ಆದಿಪ್ರಾಸ, ಮುಂತಾದ ಹಳೆಯ ರೂಪಗಳ ಬಳಕೆ ಇಲ್ಲಿದೆ.

ಈ ಶತಮಾನದ ಮೊದಲ ದಶಕದಲ್ಲಿ ಬಂದ 'ಶ್ರೀ ಕೃಷ್ಣ ಸೂಕ್ತಿ' 'ಸುವಾಸಿನಿ' ಮೊದಲಾದ ಪತ್ರಿಕೆಗಳಲ್ಲಿ ರಾಜಗೋಪಾಲ್, ನೃಸಿಂಹಸೂನು ಮುಂತಾದವರ ಅನುವಾದ ಕವಿತೆಗಳು ಬಂದಿದ್ದರೂ ಇವು ಕನ್ನಡ ಸಾಹಿತ್ಯದ ದಿಕ್ಕು ಬದಲಿಸುವುದರಲ್ಲಿ ಹೆಚ್ಚಿನ ಪಾತ್ರ ವಹಿಸಲಿಲ್ಲ. 'ಶ್ರೀ'ಯವರ 'ಇಂಗ್ಲಿಷ್ ಗೀತಗಳು'ದಿಂದಾಗಿ ಕನ್ನಡ ಕಾವ್ಯದ ದಿಕ್ಕೇ ಬದಲಾಯಿತು.

*ಬಿ. ಎಂ. ಶ್ರೀಕಂಠಯ್ಯನವರ 'ಇಂಗ್ಲಿಷ್‌ಗೀತ'ಗಳಲ್ಲಿ ಶೆಲ್ಲಿಯ-9, ಬರ್ನ್ಸ್‌ನ-7, ವರ್ಡ್ಸ್‌ವರ್ತನ-5. ಬ್ರೌನಿಂಗ್‌ನ-3, ಟೆನಿನ್‌ಸನ್‌ನ-3, ಉಳಿದವರದ್ದು ಒಂದೊಂದು ಹೀಗೆ ಅನುವಾದಿತ ಹಾಗೂ ಕೆಲವು ಸ್ವತಂತ್ರ ಕವಿತೆಗಳಿವೆ. ಇವುಗಳನ್ನು ದೇಶಭಕ್ತಿ ಗೀತೆ, ಪ್ರೇಮಗೀತೆ, ತಾತ್ವಿಕ ಗೀತೆ, ಪ್ರಕೃತಿ ಗೀತೆ, ನೀತಿ ಪ್ರಧಾನ ಗೀತೆ, ಪಾಶ್ಚಾತ್ಯ ಗೀತೆ- ಹೀಗೆ ವಿಭಾಗಗಳಾಗಿ ವಿಂಗಡಿಸಿದ್ದು ಸರಳ, ಸುಂದರ ಧಾಟಿಯಲ್ಲಿ ಪದ ಲಾಲಿತ್ಯ ಹೊಸ ಛಂದಸ್ಸಿನ ರೂಪವನ್ನು ಹೊಂದಿ ಭಾರತದ ನೆಲಕ್ಕೆ ಅನ್ವಯಿಸಿ ರಚಿಸಲಾಗಿದೆ. ''ಕನ್ನಡ ಜಾಯಮಾನವನ್ನು ಮೀರದೆ ಎಷ್ಟು ಮಟ್ಟಿಗೆ ಇಂಗ್ಲಿಷ್ ಛಂದಸ್ಸುಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ''[13] ಎಂದು ಶ್ರೀಯವರೇ ಹೇಳಿದ್ದಾರೆ. ಅವರು ಮುಂದುವರಿದು ''ಸಂಪ್ರದಾಯ ಮಾರ್ಗವನ್ನೇ ಛಲಹಿಡಿಯದೆ ವಿಶ್ವ ಕವಿತಾ ವಿಷಯಗಳಾದ ಯುದ್ಧ ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯವಸ್ತುಗಳನ್ನು ಇತರ ದೇಶದ ಕವಿಗಳು ಯಾವ ರೀತಿಯಲ್ಲಿ ಪುಷ್ಟಿಗೊಳಿಸಿ ಸಹಜ ಭಾಷೆಯಲ್ಲಿ ಸೌಂದರ್ಯ ರಚನೆಯನ್ನು ಮಾಡಿರುವರೋ ಅದನ್ನೆಲ್ಲಾ ಶ್ರದ್ಧೆಯಿಂದ ಪರಾಮರ್ಶಿಸಿ, ಬರೆಯಬೇಕೆಂದು ಇವನ್ನು ಬರೆದಿದ್ದೇನೆ''[14]

* ಈ ಬಗ್ಗೆ ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ಆದ್ದರಿಂದ ಇಲ್ಲಿ ವಿವರ ನೀಡಿಲ್ಲ.

ಎಂದಿದ್ದಾರೆ. ಅನುವಾದಕ್ಕಾಗಿ ಕವನಗಳನ್ನು ಆರಿಸಿಕೊಳ್ಳುವುದರಲ್ಲಿಯೂ ಶ್ರೀಯವರ ಕಲಾಭಿಜ್ಞತೆ, ಅಭಿರುಚಿ, ರಸಪ್ರಿಯತೆಗಳು ವ್ಯಕ್ತವಾಗಿವೆ. ವಸ್ತುವಿನಲ್ಲೂ ನಾವೀನ್ಯ, ವೈವಿಧ್ಯವನ್ನು ನಾವು ಕಾಣಬಹುದು. ಪ್ರೇಮದ ವಿವಿಧ ರಾಗ ಛಾಯೆಗಳನ್ನು ಕನ್ನಡಿಗರಿಗಾಗಿ ಹಾಡಿ ತೋರಿಸಿದರು. ಪ್ರಖರವಾದ ದೇಶಭಕ್ತಿ ಕನ್ನಡಿಗರ ಹೃದಯದಲ್ಲಿ ಉಕ್ಕಿ ಹರಿಯುವಂತೆ ಮಾಡಲು ಪ್ರಯತ್ನಿಸಿದರು. ವೈಯುಕ್ತಿಕ ಭಾವನೆಗಳಿಗೆ ಉಕ್ತಿ ನೀಡಿದರು. ಛಂದೋ ವೈವಿಧ್ಯತೆ, ಕಾವ್ಯ ವಸ್ತು ವೈವಿಧ್ಯತೆಗಳ ಪ್ರಯೋಗ ನಡೆಸಿದರು. ಮೂಲವನ್ನು ಪ್ರತಿಬಿಂಬಿಸಿ, ಪದ ಪ್ರಯೋಗ, ಶೈಲಿ, ಛಂದಸ್ಸು, ಭಾವ, ರಸ, ಇವೆಲ್ಲವುಗಳಲ್ಲಿ ಮೂಲಕವಿಯ ವ್ಯಕ್ತಿತ್ವವನ್ನೇ ಅನುಸರಿಸಲು ಪ್ರಯತ್ನಿಸಿದರು.

ಅನುವಾದಕನಿಗೆ ಆಗತ್ಯವಾದ ಪರಿಕರಗಳು ಎರಡು - ಸ್ವಭಾಷೆ ಮತ್ತು ಛಂದಸ್ಸುಗಳ ಮೇಲೆ ಪೂರ್ಣಪ್ರಭುತ್ವ ಮತ್ತು ಮೂಲದ ಹೃದಯ ಪರಿಚಯ. ಶ್ರೀಯವರು ಇವೆರಡರಲ್ಲೂ ಸಿದ್ಧ ಹಸ್ತರಾಗಿದ್ದರು. ಅವರ 'ಅಡವಿ ಮರದಡಿಯಲ್ಲಿ' 'ಮುಪ್ಪುಯೌವನ' 'ವಸಂತ' 'ರಾವುತರಳಿ' 'ಕನಕಾಂಗಿ' 'ಮುದಿಯ ರಾಮಗೌಡ' 'ದುಃಖಸೇತು' 'ಚೋಳ ಕನ್ಯೆಯರು' 'ನಿರಾಶೆ' 'ಕರುಣಾಳು ಬಾ ಬೆಳಕೆ' ಇವೇ ಮೊದಲಾದ ಕವಿತೆಗಳು ಅನುವಾದಗಳಂತೆ ತೋರದೆ ಮೂಲದ ಸೊಗಸಿನ ವೈಭವ ಹೊಂದಿವೆ. ''ಹೊಸಗನ್ನಡವನ್ನು ಕಾವ್ಯಕ್ಕೆ ಪಳಗಿಸುವ ಮುಂಬೆಳಗಿನ ಕವಿಗಳು, ಪಂಜೆಯವರು, ಗೋವಿಂದ ಪೈಯವರು, ಎಸ್. ಜಿ. ನ. ರವರು, ಹಟ್ಟಂಗಡಿ ನಾರಾಯಣರವರು ಮುಂತಾದವರು ತಮಗೆ ತಾವೇ ಹಾಕಿಕೊಂಡ ಅವರಣದಲ್ಲಿಯೇ ಆ ಕೆಲಸ ಮಾಡಿದರು. ಆಗ ಅವರೆಲ್ಲರೂ ಮಾಡಿದ ಕೆಲಸ ಶ್ರೀಯವರ ಸಮಗ್ರ ಹೊಸತನಕ್ಕೆ ಪೋಷಕ ಶಕ್ತಿಯಾಗಿ ಬಂತು''[15] ಶ್ರೀಯವರಲ್ಲಿ ಸಮಗ್ರವಾಗಿ ಹೊಸತನ ಕಾಣಿಸಿಕೊಳ್ಳಲು ಎಸ್.ಜಿ.ನ. ರವರ ಕವಿತೆಗಳಲ್ಲಿನ ಹೊಸತನ ಒಂದು ಮಜಲು ಎನ್ನಬಹುದು.

ಇಂಗ್ಲಿಷ್ ಕಾವ್ಯಾನುವಾದಗಳಲ್ಲಿ ಹೊಸಗನ್ನಡದ ಬಳಕೆಯಾಗಿದ್ದು ಪಶ್ಚಿಮದ ಪ್ರೇರಣೆಯಿಂದ ಬಂದ ವಸ್ತು - ಭಾವಗಳನ್ನು ಹಳೆಯ ಛಂದೋರೂಪದಲ್ಲಿಡಲಾಗಿದೆ. ದ್ವಿಪದಿ, ಚೌಪದಿ, ಷಟ್ಪದಿಗಳು, ಗೋವಿನ ಹಾಡಿನ ಮಟ್ಟುಗಳನ್ನು ಬಳಸಲಾಗಿದ್ದು, ಭಾವವನ್ನು ಸಂಗ್ರಹಿಸುವ ಅಥವಾ ವಿಸ್ತೃತಗೊಳಿಸುವ ಕಾರ್ಯ ನಡೆಯಿತು. ಇಂಗ್ಲಿಷಿನ 'ಸುನೀತ' ಮತ್ತು ಪ್ರಾಸ ತ್ಯಾಗ ಕನ್ನಡಕ್ಕೂ ಇಳಿದು ಬಂತು. ಈ ಅನುವಾದಕರಿಗೆ ಕನ್ನಡ ಬಲ್ಮೆಯೇ ಮುಖ್ಯವಾದುದರಿಂದ ಕನ್ನಡಕ್ಕೆ ಹೊಸತನ ನೀಡುವುದು ಅವರ ಉದ್ದೇಶವಾಗಿತ್ತು. ಈ ಯಜ್ಞದಲ್ಲಿ ಅನೇಕ ಪುರೋಹಿತರು ಭಾಗವಹಿಸಿದರೂ ಮುಖ್ಯ ಪೌರೋಹಿತ್ಯ ಶ್ರೀಯವರದಾಗಿತ್ತು.

### 2. ಇಂಗ್ಲಿಷ್ ನಾಟಕಗಳ ಹಾಗೂ ಕಾದಂಬರಿಗಳ ಅನುವಾದಗಳು

ಹೊಸಗನ್ನಡದ ಅರುಣೋದಯ ಕಾಲದಲ್ಲಿ ಅನುವಾದ ಕ್ರಿಯೆ ಹೆಚ್ಚಾಗಿ ನಡೆಯಿತು. ಇದು ಸ್ವತಂತ್ರ ಕಾವ್ಯ ಕೃಷಿಗೆ ನಡೆದ ಉಳುಮೆ ಕೆಲಸ. ಇದು 1851ರಿಂದ 1880ರ ವರೆಗೆ ಹೆಚ್ಚಾಗಿ ನಡೆಯಿತು. ಅನಂತರ ಸ್ವತಂತ್ರ ಕೃತಿಗಳ ಬಂದವು. 19ನೆಯ ಶತಮಾನದ ಅಂತ್ಯದಲ್ಲಿ ಹಾಗೂ 20ನೆಯ ಶತಮಾನದ ಆದಿಯಲ್ಲಿ ಅನೇಕ ಇಂಗ್ಲಿಷ್ ನಾಟಕಗಳು ಕನ್ನಡಕ್ಕೆ ಬಂದವು. ಶೇಕ್ಸ್‌ಪಿಯರ್‌ನ ನಾಟಕಗಳನ್ನು ಕನ್ನಡ ರಂಗಭೂಮಿಗೆ ಸುಲಭವಾಗಿ ಅಳವಡಿಸಿಕೊಳ್ಳಬಹುದೆಂಬ ವಿಚಾರದಿಂದ ಆ ಸಾಹಸಕ್ಕೆ ಅನೇಕರು ಕೈ ಹಾಕಿದರು. ಅಲ್ಲದೆ 1882ರಲ್ಲಿ ಮೈಸೂರಲ್ಲಿ ಪ್ರಾರಂಭವಾದ 'ಚಾಮರಾಜೇಂದ್ರ ಕರ್ನಾಟಕ

ನಾಟಕ ಸಭಾ' ಅನೇಕ ಇಂಗ್ಲಿಷ್ ಹಾಗೂ ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ತಂದು ಆಡಿಸಲು ಪ್ರೇರಕವಾಯಿತು. ಶೇಕ್ಸ್‌ಪಿಯರ್‌ನ 'ಒಥೆಲೋ' ಕನ್ನಡದಲ್ಲಿ 'ಶೂರಸೇನ ಚರಿತ್ರೆ'ಯಾಯಿತು. 'ರೋಮಿಯೋ ಅಂಡ್ ಜೂಲಿಯಟ್' ರೂಪಾಂತರಗೊಂಡು 'ರಾಮವರ್ಮ ಲೀಲಾವತಿ'ಯಾಯಿತು 'ದಿ ಟೇಮಿಂಗ್ ಆಫ್ ದಿ ಶ್ರೂ' 'ಚಂಡೀಮರ್ದನ'ವಾಯಿತು. ನಾಟಕಗಳನ್ನು ಹಾಗೆಯೇ ನೇರವಾಗಿ ಅನುವಾದಿಸುವುದಕ್ಕೆ ಸಂಪ್ರದಾಯ ಅಡ್ಡ ಬಂದಿತ್ತು. ವ್ರತವನ್ನು ಕೆಡಿಸದೆ, ಸುಖವನ್ನು ಬಿಡದೆ ಈ ನಾಟಕಗಳನ್ನು ಕನ್ನಡೀಕರಿಸಿದರು. ಹಾಡುಗಳನ್ನು ಕಂದ, ವೃತ್ತಗಳಲ್ಲಿ ಬರೆದು, ಪಾತ್ರಗಳ ಹೆಸರನ್ನು ಬದಲಿಸಿ ನಮ್ಮ ಸಂಸ್ಕೃತಿಗೆ ಹೊಂದಿಕೊಳ್ಳುವಂತೆ ಪರಿವರ್ತಿಸಲಾಯಿತು. ಒಂದು ವಿಮರ್ಶೆ ಹೀಗಿದೆ: ''ಸುಂದರಳಾದ ನಿಮ್ಮ ಗೃಹಿಣಿಯನ್ನು ಕುರೂಪಿ ಎಂದು ಕೂಗಿ ನೋಡಿ. ನಾವು ಹಾಗೆ ಮಾಡಲಾರೆವು. 'ನಾವು ರೋಮಿಯೋ ಮತ್ತು ಜೂಲಿಯಟ್' ಎಂಬ ಆಂಗ್ಲೇಯ ನಾಟಕಕ್ಕೆ 'ರಾಮವರ್ಮ ಲೀಲಾವತಿ' ಎಂದು ಕನ್ನಡ ಭಾಷಾಂತರ ಮಾಡಿ ಹದಿನೆಂಟು ವರ್ಷದ ಲೀಲಾವತಿ 'ಕನ್ಯಾವಸ್ಥೆ'ಯಲ್ಲಿ ಮುಖಕ್ಕೆ ಪರದೆ ಹಾಕಿಕೊಂಡು ಇಪ್ಪತ್ತೈದು ವರ್ಷದ ರಾಮವರ್ಮನ ಜೊತೆಯಲ್ಲಿ ಕುಣಿಯುವುದನ್ನು ನೋಡಲಾರೆವು. ಲೀಲಾವತಿಯ ಶಯನಗೃಹಕ್ಕೆ ವಯಸ್ಕನಾದ ರಾಮವರ್ಮನಿಂದ ರಾತ್ರಿ ಕಾಲದಲ್ಲಿ ನೂಲೇಣಿಯನ್ನು ಹಾಕಿಸಲಾರೆವು. ಅವಿವಾಹಿತಳಾದ ಹಿಂದೂ ಹುಡುಗಿಯು ಕ್ರೈಸ್ತ ದೇವಾಲಯಕ್ಕೆ ಹೋಗಿ ಸಂಕೇತ ವಿವಾಹ ಮಾಡಿಕೊಳ್ಳುವುದನ್ನು ನೋಡಿ ಸಹಿಸಲಾರೆವು''[16] ಈ ಧೋರಣೆಯ ಹಿನ್ನೆಲೆಯಲ್ಲಿ ಇಂಗ್ಲಿಷ್ ನಾಟಕಗಳು ರೂಪಾಂತರವಾದವು. ಮೂಲದಿಂದ ದೂರ ಸರಿದ, ಸಾಹಿತ್ಯಕವಾಗಿ ಅಷ್ಟೇನೂ ಉತ್ಕೃಷ್ಟವಾಗಿರದ ಕೇವಲ ರಂಗಭೂಮಿಯ ದೃಷ್ಟಿಯಿಂದ ಸೃಷ್ಟಿಯಾದ ಕೃತಿಗಳಿವು. ಪಾತ್ರಗಳ ಹೆಸರುಗಳನ್ನು ಬದಲಾಯಿಸಿ ಭಾರತೀಯ ಚೌಕಟ್ಟಿನಲ್ಲಿಟ್ಟರೂ, ಆಚಾರ, ವಿಚಾರ, ಮೌಲ್ಯಗಳು ಪಶ್ಚಿಮವಾಗಿಯೇ ಉಳಿಯುವುದು ಈ ನಾಟಕಾನುವಾದಗಳ ವೈಚಿತ್ರ. ''ಮೇಲೆದ್ದು ನಿಂತ ಭವ್ಯ ಸೌಧಗಳು ನಮಗೆ ಕಾಣುತ್ತವೆ. ನೆಲದಡಿಯಲ್ಲಿರುವ ಅವುಗಳ ತಳಹದಿ ಕಾಣುವುದಿಲ್ಲ. ಆ ತಳಹದಿಗಳಿಲ್ಲದೆ ಈ ಕಟ್ಟಡಗಳಿಲ್ಲ. ಇಂದಿನ ಕನ್ನಡ ನಾಟಕ ಸಂಪತ್ತಿಗೆ ಕಳೆದ ಶತಮಾನದ ಮತ್ತು ಈ ಶತಮಾನದ ಆದಿಯ ಇಂಗ್ಲಿಷ್, ನಾಟಕಾನುವಾದಗಳು, ಅವುಗಳ ಮಾನ್ಯತೆಗಳೇನೇ ಇರಲಿ ಸಮರ್ಥ ಪೀಠಿಕೆಗಳಾದುವು ಎಂಬುದು ಮರೆಯಬಾರದ ಸಂಗತಿ.''[17]

ನಾಟಕ ಕ್ಷೇತ್ರದಲ್ಲಿ ಇಂಗ್ಲಿಷ್‌ನಿಂದ ಕನ್ನಡಕ್ಕೆ ಬಂದ ಅನುವಾದ ಕೃತಿಗಳ ಸಂಖ್ಯೆ ಹೆಚ್ಚು. ಅದರಲ್ಲೂ ಶೇಕ್ಸ್‌ಪಿಯರ್‌ನ ನಾಟಕಗಳು ಹೆಚ್ಚಾಗಿ ಅನುವಾದಗೊಂಡಿವೆ.

ಧಾರವಾಡದ ಚೆನ್ನಬಸಪ್ಪನವರ 'ಮ್ಯಾಕ್‌ಬೆತ್' (1871) ಕನ್ನಡದಲ್ಲಿ ಬಂದ ಮೊದಲ ನಾಟಕ. ಇವರು ಶೇಕ್ಸ್‌ಪಿಯರ್‌ನ 'ಕಾಮಿಡಿ ಆಫ್ ಎರರ್ಸ್'ನ್ನು ಅನುವಾದಿಸಿದ್ದಾರೆ. ಗುಂಡೋಕೃಷ್ಣ ಚುರಮರಿಯವರ ರಾಘವೇಂದ್ರ ರಾವ್ ನಾಟಕ (1885 ಮೂಲ : ಒಥೆಲೋ) 1885ರಲ್ಲಿ ಧಾರವಾಹಿಯಾಗಿ 1988ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಗೊಂಡಿತು. ಚುರಮರಿಯವರು ಡೆಸ್ಡಿಮೊನಾಳನ್ನು ವೆಂಕೂಬಾಯಿಯಾಗಿ ಪರಿವರ್ತಿಸಿ ಕಥೆಯನ್ನು ಭಾರತೀಯ ಹಿನ್ನೆಲೆಗೆ ರೂಪಾಂತರಿಸಿದುದರಿಂದ ಅದರ ಮೂಲದ ಸ್ವಾರಸ್ಯ ಇಲ್ಲಿಲ್ಲದಂತಾಗಿದೆ.

“ರಾಘವೇಂದ್ರರಾವ್ ನಾಟಕದ ಕಥಾವಸ್ತು ಮತ್ತು ಘಟನೆಗಳು ಐತಿಹಾಸಿಕವಾಗಿದ್ದರೂ ಪರಿಸರ ಪಾತ್ರ ಕಲ್ಪನೆ ಹಾಗೂ ಭಾಷೆ ಇವುಗಳ ವಿಚಾರದಲ್ಲಿ ಅದು ಸಮಕಾಲೀನ ನಾಟಕವಾಗಿದೆ. ಇದೊಂದು ಈ ನಾಟಕದ ಕುಂದು ಎನ್ನಬಹುದು. ಸಂಭಾಷಣೆಯಲ್ಲಿ ಮಾತ್ರ ನಾಟಕದುದ್ದಕ್ಕೂ ಉತ್ತರ ಕರ್ನಾಟಕದ ದೇಸಿಯು ಎದ್ದು ಹೊಡೆಯುತ್ತದೆ. ಅದರಲ್ಲಿ ಬರುವ ಕೃತಪುರವೆಂದರೆ ಗದಗು, ತಿರುಮಲರಾವ್, ದೇವಜಿಸಂತ, ಮುತಾಲಿಕ, ವೆಂಕೂಬಾಯಿ ಎಂಬ ಹೆಸರುಗಳು ಅಪ್ಪಟ ಧಾರವಾಡದವು. ಬಳಕೆಮಾತನ್ನು ಆದ್ಯಂತವಾಗಿ ತಂದದ್ದರಿಂದ ಪಾತ್ರಗಳು ಜೀವಂತಿಕೆಯಿಂದ ಕೂಡಿವೆ. ದೇಸಿಯನ್ನು ತರಬೇಕಾದಾಗ, ಮೂಲದಲ್ಲಿಲ್ಲದ ಅಂಶಗಳು ಸಹಜವಾಗಿ ಸಂಭಾಷಣೆಯಲ್ಲಿ ಸೇರಿಕೊಂಡಿವೆ”[18] ಚುರಮರಿಯವರ ಭಾಷೆ ‘ಗಂಡು ಕನ್ನಡ’ವಾದರೂ ವಿದೇಶಿ ಕಥೆ ಕಟ್ಟನ್ನು ದೇಶೀಯ ಹಿನ್ನೆಲೆಗೆ ಅಳವಡಿಸುವ ಅವರ ಪ್ರಯತ್ನ ಹೆಚ್ಚು ಫಲಕಾರಿಯಾಗಲಿಲ್ಲ.

ಶೇಕ್ಸ್‌ಪಿಯರ್‌ನ ‘ರೋಮಿಯೋ ಅಂಡ್ ಜೂಲಿಯಟ್’ನ್ನು ಅನೇಕರು ಅನುವಾದಿಸಿದ್ದಾರೆ. ಎ. ಆನಂದರಾಯರು ‘ರಾಮವರ್ಮ ಲೀಲಾವತಿ’ಯಾಗಿ (1889) ಕೆರೂರ ವಾಸುದೇವಾಚಾರ್ಯರು ‘ರಮೇಶ್-ಲಲಿತಾ’ ಆಗಿ, ಭಂಡೀವಾಡರವರು ‘ಕಮಲಾಕ್ಷ-ಪದ್ಮಗಂಧಿ’ಯಾಗಿ ಕನ್ನಡಕ್ಕೆ ತಂದಿದ್ದಾರೆ. ಆನಂದರಾಯರು ಶೇಕ್ಸ್‌ಪಿಯರ್‌ನ ‘ರೋಮಿಯೋ ಅಂಡ್ ಜ್ಯೂಲಿಯಟ್’ ಜೊತೆಗೆ ‘ಹ್ಯಾಮ್ಲೆಟ್’, ‘ಮರ್ಚೆಂಟ್ ಆಫ್ ವೆನಿಸ್’ ನಾಟಕಗಳನ್ನು ಅನುವಾದಿಸಿ ‘ಹ್ಯಾಮ್ಲೆಟ್’ ಹೊರತಾಗಿ ಉಳಿದ ಪಾತ್ರಗಳ ಹೆಸರನ್ನು ಅನುಭೂತಿ, ವೀರವರ್ಮ, ಚಿತ್ರಸೇತು, ಕಲಹಾಸಿ, ಇತ್ಯಾದಿಯಾಗಿ ಭಾರತೀಯಗೊಳಿಸಿದ್ದಾರೆ. ಆದರೆ ಊರುಗಳ ಹೆಸರನ್ನು ಮೂಲದಲ್ಲಿದಂತೆಯೇ ಉಳಿಸಿ ಒಂದು ರೀತಿಯ ಕಲಬೆರಕೆ ಮಾಡಿದ್ದಾರೆ. ಸಂಸ್ಕೃತ ನಾಟಕಗಳನ್ನು ಮಾದರಿಯಾಗಿಟ್ಟುಕೊಂಡು ಹಾಡುಗಳನ್ನು ನಡುವೆ ಸೇರಿಸಿ, ಮೂಲದ ಆಚಾರ, ವಿಚಾರ, ಸಂಪ್ರದಾಯಗಳನ್ನು ಯಥಾವತ್ತಾಗಿ ಉಳಿಸಿಕೊಂಡು ನಮ್ಮ ಜನರಿಗೆ ಒಪ್ಪುವ ರೀತಿಯಲ್ಲಿ ರೂಪಾಂತರ ಮಾಡಲು ಹೊರಟಿರುವುದರಿಂದ ಅನುವಾದ ಅಷ್ಟು ಯಶಸ್ವಿಯಾಗಲಿಲ್ಲ. ಅಲ್ಲದೆ ಕನ್ನಡ ಕೂಡ ಕಳೆಗಟ್ಟಲಿಲ್ಲ. ನಮ್ಮ ಜನಕ್ಕೆ ಒಗ್ಗದ ದುರಂತ ಮುಕ್ತಾಯದ ಬದಲಿಗೆ ಸುಖಾಂತ ಮಾಡಿದ್ದಕ್ಕೆ “ಭಾಷಾಂತರಕಾರರು ಹೀಗೆ ರಾಮವರ್ಮ ಲೀಲಾವತಿಯರನ್ನು ಬದುಕಿಸುವುದಕ್ಕೆ ಹೊರಟು ಶೇಕ್ಸ್‌ಪಿಯರ್ ಮಹಾಕವಿಯನ್ನು ಕಠೋರವಾಗಿ ಕೊಲೆ ಮಾಡಿದ್ದಾರೆ, ಅಷ್ಟೆ.”[19]

‘ರಾಮವರ್ಮ- ಲೀಲಾವತಿ’ಯಲ್ಲಿ ಆನಂದರಾಯರು ಪ್ರಾರಂಭದ ಕೆಲವೊಂದು ಸ್ವಾರಸ್ಯಕರ ಭಾಗಗಳನ್ನು ಕೈಬಿಟ್ಟು ಭಾರತೀಯ ಸಂಸ್ಕೃತಿಗೆ ಹೊಂದಿಕೊಳ್ಳುವಂತೆ ನಮ್ಮ ಜನಗಳು ಒಪ್ಪುವ ರೀತಿಯಲ್ಲಿ ರೂಪಾಂತರಗೊಳಿಸಿದ್ದಾರೆ. ಇದು ರಂಗ ಕೃತಿಯಾಗಿ ಯಶಸ್ವಿ ಆಗಬೇಕೆನ್ನುವುದು ಅದರ ಉದ್ದೇಶ. "The book is intended not only for the general public and scholors, but also for representation on the stage."[20]

ಈ ನಾಟಕದಲ್ಲಿ 5 ಅಂಕಗಳು, 24 ಸ್ಥಾನಗಳಿವೆ. ಭಾರತೀಕರಣಗೊಳಿಸುವ ಬಗ್ಗೆ ಲೇಖಕರು ಹೇಳುತ್ತಾ ಟ್ರಾಜಿಡಿ ಎಂಬ ನಾಟಕವೇ ನಮ್ಮಲ್ಲಿಲ್ಲವೆಂದು ಹೇಳಬಹುದು. ಆದ್ದರಿಂದಲೇ ನಮ್ಮ ಪದ್ಧತಿಗೆ ಅನುಸಾರವಾಗಿ ನಾಟಕ ನಿರ್ವಹಣಾ ಸಂಧಿಯ ಅಂತ್ಯ ಭಾಗದಲ್ಲಿ ಒಂದು ಸ್ಥಾನವನ್ನು ಹೊಸದಾಗಿ ಸೇರಿಸಿರುತ್ತೇನೆ. ಈ ಸ್ಥಾನದಲ್ಲಿ ಪೂಜ್ಯರಾದ ಯೋಗೀಶ್ವರರ

ಪ್ರಾರ್ಥನೆಗೆ ಪ್ರತ್ಯಕ್ಷವಾಗಿ ಶ್ರೀ ಮಹಾವಿಷ್ಣುವು ರಾಮವರ್ಮನ ಅನುರಾಗಕ್ಕೂ ಲೀಲಾವತಿಯ ಪಾತಿವ್ರತ್ಯ ಅಚಂಚಲಾನುರಾಗಗಳಿಗೂ ಸಂತೃಪ್ತನಾಗಿ ಆ ದಂಪತಿಗಳನ್ನು ಬದುಕಿಸಿ ಅದೃಶ್ಯನಾಗುವನೆಂದು ಹೇಳಿರುವುದು."[2] ಇದರ ಆರಂಭದಲ್ಲಿ ಶೇಕ್ಸ್‌ಪಿಯರ್‌ನ ಜೀವನ ಚರಿತ್ರೆ ಇದೆ. ಆಂಗ್ಲ ಕವಿಯೊಬ್ಬನ ಜೀವನ ಚರಿತ್ರೆ ಕನ್ನಡದಲ್ಲಿ ಬಂದುದು ಇದು ಮೊದಲು. ಆನಂದರಾಯರು ಈ ನಾಟಕವನ್ನು 1889ರಲ್ಲೇ ಬರೆದಿದ್ದರೂ ಹಸ್ತಪ್ರತಿ ಕಳೆದುಹೋದುದರಿಂದ ಅವರು ಮತ್ತೊಮ್ಮೆ ಭಾಷಾಂತರಿಸಬೇಕಾಯಿತು. ಕನ್ನಡದ ಪರಿಸರಕ್ಕೆ ಭಾಷಾಂತರಿಸುವಾಗ ಆದ ಅರ್ಥವ್ಯತ್ಯಾಸ ಹೀಗಿದೆ.

Romeo :

Give me that mattock and the wrenching oriron Hold, take this letter, early in the morning see thou deliver it to my lord and father give me the light, up an the life, I charge thee whatever thou hear'st or beest, stand all aloof, and do not interrupt me in my course, why I deserved into this bed of death. Is partly to behold my lady's face. But chitty to take thence from her dead finger. A precices ring, the ring that I must use in dear employment, therefore hence, be done, but if thou, jealous, dost return to pry, In what I farthersh all intend to do, By heaven. I will tear thee joint by joint. And strew this hungry church with thy limbs. The time and my intents are savage wild. More fierce and more explorable for then empty tigers or the roaring sea. (Complete Works of Shakespeare Romeo and Juliet p.624)

ರಾಮವರ್ಮ : ಆಯುಧಗಳನ್ನು ಕೊಡು, ಈ ಕಾಗದವನ್ನು ತೆಗೆದುಕೋ, ಪ್ರಾತಃಕಾಲವಾದ ಒಡನೆಯೇ ಇದನ್ನು ಪೂಜ್ಯರಾದ ನನ್ನ ತಂದೆಗೆ ಕೊಡು. ಬೆಳಕನ್ನು ಕೊಡು, ನಾನು ಏನನ್ನೂ ಕೇಳಿದರೂ ನೋಡಿದರೂ ನನ್ನ ಕಾರ್ಯಕ್ಕೆ ಭಂಗಪಡಿಸದೇ ಸುಮ್ಮನೆ ದೂರ ಹೋಗು. ನಾನು ನೆಲಮಾಳಿಗೆಯಲ್ಲಿ ನನ್ನ ಪ್ರಿಯಳ ದುಃಖವನ್ನು ನೋಡುವುದಕ್ಕೆ ಆಕೆಯ ಬೆಟ್ಟಿನಲ್ಲಿರುವ ನನಗೆ ಪ್ರಿಯವಾದ ಉಂಗುರವನ್ನು ತೆಗೆದುಕೊಳ್ಳುವುದಕ್ಕೆ ಹೋಗುತ್ತೇನೆ. ಆದ್ದರಿಂದ ನಾನು ಮಾಡುವುದನ್ನು ಹಣಕಿ ನೋಡದೆಯೇ ಹೊರಟು ಹೋಗು. ಹಾಗೆ ಮಾಡದೆ, ನಾನು ಏನು ಮಾಡುತ್ತೇನೋ ಅದನ್ನು ನೋಡಲು ಏನಾದರೂ ಬಂದರೆ, ಕ್ರೂರ ಸ್ವಭಾವದವನಾದ ನಾನು ನಿನ್ನನ್ನು ತುಂಡು ತುಂಡು ಮಾಡಿ ಈ ಸ್ಮಶಾನದ ನೆಲವನ್ನೆಲ್ಲಾ ನಿನ್ನ ದೇಹದಿಂದ ತುಂಬಿಬಿಡುತ್ತೇನೆ. (ರಾಮವರ್ಮ ಲೀಲಾವತಿ 1889 ಪು 117)

ಮೂಲಕ್ಕೆ ಹೋಲಿಸಿದಾಗ ಅನುವಾದ ಅಷ್ಟು ಅರ್ಥವತ್ತಾಗಿ ಬಂದಿರುವುದಿಲ್ಲ. ಹಾಗೂ ಮೂಲದಲ್ಲಿ ಬಂದ 'Bed of death' Dead finger, Tear thee by joint by joint, hungry church yard ಮುಂತಾದವು ಸರಿಯಾಗಿ ಅನುವಾದವಾಗಿಲ್ಲ. Then empty tigers or the roaring Sea ಇದನ್ನು ಪೂರ್ಣವಾಗಿ ಬಿಡಲಾಗಿದೆ.

ಆನಂದರಾಯರು ಕೆಲವೆಡೆ ತಮ್ಮ ಅನುಭವವನ್ನು ಹೊಸದಾಗಿ ಸೇರಿಸಿದ್ದಾರೆ.

Remeo :

And I'll stay to have thee still forget
Forgetting any other home but this
............................................................
............................................................
............................................................
..................... parting in such sweet sorrow
That I shall say good night, till it me morrow
(The Complete Works of Shakespeare 'Romeo & Juliet', page 533)

ರಾಮವರ್ಮ:

ಬಾಲಕರು, ಪಾಠಗಳನ್ನು ಓದಿದ ಬಳಿಕ ಪುಸ್ತಕಗಳನ್ನು ಅಲ್ಲಲ್ಲಿಯೇ ಬಿಟ್ಟು ಪಾಠಶಾಲೆಯಿಂದ ಮನೆಗೆ ಎಷ್ಟು ಸಂತೋಷವಾಗಿ ಹೋಗುತ್ತಾರೆಯೋ, ಹಾಗೆ ಪ್ರೇಯಸಿಯರ ಬಳಿಗೆ ಪ್ರಿಯರು ಹೋಗುವರು. ಅದೇ ಬಾಲಕರು, ಪುಸ್ತಕಗಳನ್ನು ತೆಗೆದುಕೊಂಡು ಪುನಃ ಪಾಠಶಾಲೆಗೆ ಸಂತೋಷರಹಿತವಾಗಿ ಹ್ಯಾಗೆ ಹೋಗುತ್ತಾರೆಯೋ ಹಾಗೆ ಪ್ರಿಯತಮರ ಆಗಲಿಕೆಯು ಸಂತೋಷ ರಹಿತವಾಗುವುದು (ರಾಮವರ್ಮ ಲೀಲಾವತಿ, ಪು 41) ಇಲ್ಲಿ ಮೂಲದ Sweet Sorrow ಅನ್ನುವುದಕ್ಕೆ ಸರಳ ಹೋಲಿಕೆ ಇದೆ.

ಶೇಕ್ಸ್‌ಪಿಯರ್‌ನ 'ಮರ್ಚೆಂಟ್ ಆಫ್ ವೆನಿಸ್'ನ್ನು ಅನಂದರಾಯರು 'ಪಾಂಚಾಲೀ ಪರಿಣಯ' ಎಂದು. ಶ್ರೀ ಕೆರೂರು ವಾಸುದೇವಾಚಾರ್ಯರು 'ಸುರತ ನಗರದ ಶ್ರೇಷ್ಠಿ' ಎಂದು ಅನುವಾದಿಸಿದ್ದಾರೆ. ಬಸವಪ್ಪ ಶಾಸ್ತ್ರಿಗಳು 'ಒಥೆಲ್ಲೋ'ವನ್ನು 'ಶೂರಸೇನ ಚರಿತ್ರೆ' (1895)ಯಾಗಿ ಅನುವಾದಿಸಿದ್ದಾರೆ. ಇದರಲ್ಲಿ ಶಾಸ್ತ್ರಿಗಳು ಕೇವಲ 48 ಪುಟಗಳನ್ನು ಮಾತ್ರ ಅನುವಾದಿಸಿದ್ದು ಉಳಿದ ಭಾಗವನ್ನು ಸಿ. ಸುಬ್ಬರಾಯರು ಪೂರ್ತಿಗೊಳಿಸಿದರು. ಭಾರತೀಯ ಸಂಸ್ಕೃತಿ ಹಿನ್ನೆಲೆಯಲ್ಲಿ ಪಾತ್ರ ಬದಲಾವಣೆ ಮಾಡಿದ್ದಾರೆ. ಒಥೆಲ್ಲೋ-ಶೂರಸೇನ, ಅಯಾಗೋ-ದೇವದತ್ತ, ಡೆಸ್ಡಿಮೋನಾ- ಮೋಹನೆ. ಎಮಿಲಿಯಾ-ವಿನೀತೆಯಾಗಿ ಬದಲಾಗಿದ್ದಾರೆ. ಅನುವಾದ ಕೆಲವೆಡೆ ಅರ್ಥವತ್ತಾಗಿ ಬಂದಿದೆ.

Iago :

I am about it, but indeed my invention
comes from my pale as bithhinee does from friye,
It plucks out brains and all, but my muse labours
And thus she is delivered
If she be fair and wire, fairness and
The one's for use, the other useth it (Act 11 S I)

ದೇವದತ್ತ :

ಅದನ್ನೇ ಯೋಚಿಸುವೆನು. ಅದರ ಸೋಕಿದ ಬಟ್ಟೆಯನ್ನು ಮಣಾವು ಕಿತ್ತುಕೊಂಡು ಬರುವಂತೆ ಕವಿತ್ವವು ತಲೆ

ಮಿದುಳನ್ನೆಲ್ಲಾ ಸೆಳೆಕೊಂಡು ಬರುವುದು. ಇದೋ ಹುಟ್ಟಿತು, ಸ್ತ್ರೀಗೆ ಸೌಂದರ್ಯವೂ ಚಾತುರ್ಯವೂ ಎರಡೂ ಇದ್ದ ಪಕ್ಷದಲ್ಲಿ ಸೌಂದರ್ಯವು ಅವಳ ಲಾಭಕ್ಕೆ ಚಾತುರ್ಯವು ಅದರ ಸಾಧನಕ್ಕೆ (ಶೂರಸೇನ ಚರಿತ್ರ, ಪುಟ 33)

Desdamona :

Men's natures wrange with inferior things
Though greatness are their object . In
order so far let our finger ache, and it
indues our other healthful members even to
that sense of pain, nay, we must think, men
are not gods nor of them look for such obser-
vancy as fits the bridal- Beshrews me much
Emilia. I was an handsome warrior as I am
Areenging his unkindness with my soul
But now I find, I had subbor'd and the witness
And he is indicted falseless

(III/IV - L 145)

ಮೋಹನ್:

ಓಹೋ, ನಿಜವಾಗಿ ಏನೋ ರಾಜಕೀಯದಿಂದ ನನ್ನ ಪತಿಯು ನಿರ್ಮಲವಾದ ಮನಸ್ಸು ಕ್ಷೋಭೆಯನ್ನು ಹೊಂದಿರುವುದು. ಇಂಥಾ ಸಮಯದಲ್ಲಿ ಅತನನ್ನು ನಿರ್ಬಂಧಪಡಿಸಿದ್ದು ನನ್ನ ತಪ್ಪು. ಲೋಕದಲ್ಲಿ ಪುರುಷರು ಒಂದೇ ರೀತಿಯಲ್ಲಿರುವುದಕ್ಕೆ ಅವರೇನು ದೇವತೆಗಳಲ್ಲ. ಸಖಿ, ಪುರುಷರಾದವರಿಗೆ ಸ್ತ್ರೀಯರನ್ನು ವರಿಸುವ ಕಾಲದಲ್ಲಿದ್ದ ಅನುರಾಗ ಯಾವಾಗಲೂ ಸ್ಥಿರವಾದ್ದೆಂದು ಎಣಿಸುವುದು ತಪ್ಪೆ ? (ಶೂರಸೇನ ಚರಿತ್ರೆ 3. 4 ಪುಟ 77)

ಇನ್ನೂ ಕೆಲವೆಡೆ ಶಾಸ್ತ್ರಿಗಳು ಅಶ್ಲೀಲವೆಂಬ ಕಾರಣಕ್ಕೆ ಪೂರ್ಣವಾಗಿ ಬಿಟ್ಟು ಕರವಸ್ತ್ರದ ಪ್ರಸ್ತಾಪ ಮಾತ್ರಮಾಡಿದ್ದಾರೆ.

Iago :

Or to be naked with her friend with her
friend in bed
An hour or more, net meaning
any harm?

Othello :

Naked in bed, Iago
And not mean harm ?
It is Hypocrasy against the devil (IV/IL 6)

Othello :

It is the cause, it is the cause, my soul
Let me not name it to you, you chaste stars
It is the cause, Yet I will not shed her blood
nor scar that white skin of hers than snow
And smooth as mommental alabstar
Yet she must die . . . . . . . . . (V/II 11)

ಶೂರಸೇನ :

ಪರಿಪರಿವುದು ನಿಶ್ಚಯಮಾ
ದುರ ಮಾ ಮೋಹನ ದೇಹದಿಂ ರಕ್ತವನಾಂ
ಪೊರಮಡಿಸಿ, ಚಂದ್ರಕಾಂತಕೆ
ಸರಿಯದ ಚರ್ಮವನ ಮಾತ್ರ ಕೆಡಿಸುವುದಿಲ್ಲಂ
ಆದರೂ ಅವಳು ಸಾಯಲೇ ಬೇಕು

(ಶೂರಸೇನ ಚರಿತ್ರೆ 5:2 ಪುಟ 108)

ಬಸಪ್ಪ ಶಾಸ್ತ್ರಿಗಳಿಗೆ ಇಂಗ್ಲಿಷ್ ಭಾಷೆ ಬರದಿದ್ದುದರಿಂದ ಸಿ. ಸುಬ್ಬರಾಯರ ನೆರವಿನಿಂದ 'ಒಥೆಲೋ'ವನ್ನು ಅನುವಾದ ಮಾಡಿದ್ದರಿಂದ ಭಾಷಾಂತರ ಅಷ್ಟು ಅರ್ಥವತ್ತಾಗಿ ಮೂಡಿರುವುದಕ್ಕೆ ಕಾರಣ. ಡಾ। ರಂ. ಶ್ರೀ. ಮುಗಳಿಯವರು ಇದನ್ನು ಪಾಶ್ಚಾತ್ಯ ಪ್ರಭಾವದಿಂದ ಪ್ರೇರಿತವಾದ ಕನ್ನಡದ ಪ್ರಥಮ ಕೃತಿ ಎಂದಿದ್ದಾರೆ.

ಶಾಸ್ತ್ರಿಗಳ 'ಶೂರಸೇನ ಚರಿತೆ' ಮೂಲ ನಾಟಕದ 'ರಸರಹಿತ ಛಾಯೆ'ಯಾಗಿದೆ. ಅದು ಬಸವಪ್ಪ ಶಾಸ್ತ್ರಿಗಳ ನಾಟಕಾನುವಾದಗಳಲ್ಲೆಲ್ಲ ಅಸಮರ್ಪಕವಾದದ್ದು ..... ಅದರ ಶೈಲಿ ತೀರ ಅಸಮ- ವಿಷಮವಾಗಿದೆ. ವಾಕ್ಯಗಳಲ್ಲಿ ಒಮ್ಮೆ ಅತಿ ಸಂಸ್ಕೃತವಿದ್ದರೆ ಮತ್ತೊಮ್ಮೆ ಗ್ರಾಮ್ಯವೆನ್ನುವ ಶಬ್ದಗಳು ನುಸುಳಿವೆ. ಪದ್ಯ ರಚನೆಯಲ್ಲಿಯೂ ಅದೇ ವಿಷಮತೆ ......... ಇದು ಬಸವಪ್ಪ ಶಾಸ್ತ್ರಿಯಿಂದ ರಚಿತವೆಂದು ನಂಬಲಿಕ್ಕೆ ಸಾಧ್ಯವಿಲ್ಲದಂತಿದೆ''[22]

ಎಂ. ಎಸ್. ಪುಟ್ಟಣ್ಣನವರು 'ಕಿಂಗ್ ಲಿಯರ್'ನ್ನು 'ಹೇಮಚಂದ್ರ ರಾಜವಿಲಾಸ'ವನ್ನು ಗದ್ಯದಲ್ಲಿ ಅನುವಾದಿಸಿ ಮೂಲದ ಭಾವವನ್ನು ಉಳಿಸುವ ಪ್ರಯತ್ನ ಮಾಡಿದ್ದಾರೆ. ಕನ್ನಡ ಸಂಸ್ಕೃತಿಗೆ ಅನುಗುಣವಾಗಿ ಪಾತ್ರಗಳಿಗೆ ನಾಮಕರಣ ಹಾಗೂ ಬದಲಾವಣೆ ಮಾಡಿಕೊಂಡಿದ್ದಾರೆ. 'ಕನ್ನಡ ಜನರ ಮತ್ತು ಕನ್ನಡ ಭಾಷೆಯ ತಿಳುವಳಿಕೆ ಮತ್ತು ರೀತಿಗೆ ಅನುಗುಣವಾಗಿರುವಂತೆ ಇಂಗ್ಲಿಷ್ ದೇಶದಲ್ಲಿ ರೂಢವಾಗಿರತಕ್ಕ ಪದಾರ್ಥಗಳಿಗೆ ಮತ್ತು ಪದ್ಧತಿಗಳಿಗೆ ಈ ದೇಶದಲ್ಲಿ ಅನುರೂಪವಾಗಿರತಕ್ಕವುಗಳನ್ನು ಬರೆದು ಕಂಡ ಹಾಗೇ ಮಾಡಿರತಕ್ಕ ವ್ಯತ್ಯಾಸ ಒಂದು. ಮೂಲಕ್ಕೆ ನಾನು ಅಚಾತುರ್ಯದಿಂದ ಅಪಾರ್ಥವನ್ನು ಕಲ್ಪಿಸಿಕೊಂಡು ನಾನು ಕಾಣದ ಹಾಗೆ ಮಾಡಿಕೊಂಡ ವ್ಯತ್ಯಾಸ ಒಂದು'[23]

ಪುಟ್ಟಣ್ಣನವರ ಅನುವಾದದಲ್ಲಿ ಕ್ಲಿಷ್ಟತೆಯನ್ನು ಕಾಣುತ್ತವೆ. ಭಾಷಾಂತರದ ಕಷ್ಟದ ಬಗ್ಗೆ ಅವರು ಹೇಳುತ್ತಾ "ಭಾಷಾಂತರ ಮಾಡತಕ್ಕ ಕಷ್ಟವನ್ನು ಬಲ್ಲ ಪುಣ್ಯಾತ್ಮರೆಲ್ಲರೂ ನನ್ನ ದೋಷಗಳನ್ನು ಕ್ಷಮಿಸಬೇಕು" (ಪೀಠಿಕೆ) ಎಂದಿದ್ದಾರೆ. ಅವರ ಭಾಷಾಂತರ ಶೈಲಿಗೆ ಉದಾಹರಣೆ -

ಇಂದುಕಲೆ : 'ಎಲ್ಲ ಈ ಭೂಮಿಯಲ್ಲಿ ಅಡಗಿಕೊಂಡಿರುವ ಹಿತನಾದ ರಹಸ್ಯಗಳಿರಾ, ಯಾರೂ ಅರಿಯದ ವನೌಷಧಿಗಳಿರಾ ನನ್ನ ಕಣ್ಣೀರು ಉಕ್ಕಿಬರುವಂತೆ ನೀವೂ ಉಕ್ಕಿಬಂದು ಆ ಸತ್ಪುರಷನ ಕಷ್ಟವನ್ನು ತೀವ್ರವಾಗಿ ನಿವಾರಿಸುವುದಕ್ಕೆ ನೀವು ಸಹಕಾರಿಗಳಾಗಿರಿ. ಹುಡುಕಿ ಆತನನ್ನು ಹುಡುಕಿ, ಇಲ್ಲದಿದ್ದರೆ ಪ್ರಾಣಧಾರೆಗೆ ಮಾರ್ಗವನ್ನು ತೋರಿಸುವ ಆ ಪ್ರಜ್ಞೆಯು ಇಲ್ಲದ ಹುಚ್ಚು ವಿಪರೀತವಾಗಿ ಪ್ರಾಣವೆಲ್ಲಾದರೂ ಹೋದಿತು'.

ಪುಟ್ಟಣ್ಣನವರ ಗದ್ಯ ಗಮನಾರ್ಹವಾದುದು. ಅದರಲ್ಲಿ ಸರಳತೆ ಹಾಗೂ ಲವಲವಿಕೆ ಇದೆ. ಆದರೂ ಅಲ್ಲಲ್ಲಿ ಶೈಲಿ ವಿಷಮತೆಯನ್ನು ತೋರುತ್ತದೆ. ಅಲ್ಲಲ್ಲಿ ತೋರುವ ನಾಟಕಕ್ಕೆ ಒಗ್ಗದ ಬಿಗಿ ಕ್ಲಿಷ್ಟ ಓಟಗಳು ಗದ್ಯವನ್ನು ಗ್ರಾಂಥಿಕವನ್ನಾಗಿಸಿದೆ.

'ಟೇಮಿಂಗ್ ಆಫ್ ದಿ ಷ್ರೂ' ನಾಟಕವನ್ನು ಕೆ. ಲಕ್ಷ್ಮಣರಾಯರು 'ಚಂಡೀಮದಮರ್ದನ'ವೆಂದೂ ಗದಿಗಯ್ಯ ಹುಚ್ಚಯ್ಯ ಹೊನ್ನಾಪುರಮಠರವರು ಮರಾಠಿ ಮೂಲದಿಂದ 'ತ್ರಾಟಿಕಾ ನಾಟಕ' (1920) ಎಂದೂ ಎಸ್. ಜಿ. ನರಸಿಂಹಾಚಾರ್ಯರು 'ಗಯ್ಯಾಳಿಯನ್ನು ಸಾಧು ಮಾಡುವಿಕೆ' ಎಂದೂ ಅನುವಾದಿಸಿದ್ದಾರೆ. 'ದಿ ಮರ್ಚಂಟ್ ಆಫ್ ವೆನಿಸ್'ನ್ನು ಬಿ. ವೆಂಕಟಾಚಾರ್ಯ (1906) ಹಾಗೂ ಜಯರಾಯಾಚಾರ್ಯರು ಅನುವಾದಿಸಿದ್ದರೆ. 'ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್' ನಾಟಕವನ್ನು ಬಾಪು ಸುಬ್ಬರಾವ್‌ರವರು 'ಮದನವ ಯಾಮಿನೀ ವಿನೋದ (1901) ಹಾಗೂ ಪಿ. ವೇದಮಿತ್ರರವರು 'ಮದನ ಯಾಮಿನಿ ಕಥೆಗಳು' (1905) ಎಂದು ಅನುವಾದಿಸಿದ್ದಾರೆ. 'ರೋಮಿಯೋ ಅಂಡ್ ಜ್ಯುಲಿಯಟ್'ನ್ನು ವೆಂಕಟೇಶ ಭೀಮರಾವ್ ಭಂಡಿವಾಡರವರು 'ಕಮಲಾಕ್ಷ ಪದ್ಮಗಂಧಿಯರ ಕತೆ' (1881) ಎಂದು ಅನುವಾದಿಸಿದ್ದಾರೆ. 'ದಿ ವಿಂಟರ್ಸ್ ಟೇಲ್' ನಾಟಕವನ್ನು ರಂಗಾಚಾರ್ಯ ಮುದ್ಗಲ್ 'ಮಂಜುಘೋಷ'ನೆಂದೂ ಶ್ರೀಕಂಠಶಾಸ್ತ್ರಿ 'ಮಂಜುವಾಣಿ' ಎಂದು ಅನುವಾದಿಸಿದ್ದಾರೆ. 'ಸಿಂಬಲೈನ್'ನನ್ನು ಸಿ. ಎನ್. ಮಲ್ಲಪ್ಪ (1902) ಕನ್ನಡಿಸಿದ್ದಾರೆ. 'ಹ್ಯಾಮ್ಲೆಟ್' ನಾಟಕವನ್ನು ಜಯರಾಮಾಚಾರ್ಯ, ಜೀವಾಜಿ, ವಿಷ್ಣುಗೋಡೆ, ಶಿವಲಿಂಗಸ್ವಾಮಿ ಸಾವಳಗಿಮಠ ಇವರೂ ಕನ್ನಡಕ್ಕೆ ತಂದಿದ್ದಾರೆ. ಇವುಗಳಲ್ಲಿ ಭಾಷಾಂತರ, ರೂಪಾಂತರಗಳು ಸೇರಿವೆ.

ಶೇಕ್ಸ್‌ಪಿಯರ್‌ನ 'ಮ್ಯಾಕ್‌ಬೆತ್'ನ್ನು 'ಪ್ರತಾಪರುದ್ರದೇವ' (1885) ವಾಗಿ ಅನುವಾದಿಸಿದ ಎಂ. ಎಲ್ ಶ್ರೀಕಂಠೇಶಗೌಡರು ನಾಟಕದಲ್ಲಿ ಹಲವಾರು ಬದಲಾವಣೆ ಮಾಡಿಕೊಂಡಿದ್ದಾರೆ. ಮೂಲ ನಾಟಕದಲ್ಲಿ ಡಂಕನ್ ದೊರೆಯನ್ನು ಲೇಡಿಮ್ಯಾಕ್‌ಬೆತ್ ಸ್ವಾಗತಿಸುತ್ತಾಳೆ. ಆದರೆ ಅನುವಾದದಲ್ಲಿ ಭಾರತೀಯ ಸಂಸ್ಕೃತಿಗೆ ಅನುಗುಣವಾಗಿ ರಾಜವಿಜಯಧ್ವಜನನ್ನು ಮಿತ್ರ ವೀರಸೇನನೇ ಎದುರುಗೊಳ್ಳುತ್ತಾನೆ. ನಾಟಕದಲ್ಲಿ ಸಂಗೀತವನ್ನು ಎಷ್ಟರ ಮಟ್ಟಿಗೆ ಬಿಡಬೇಕು ಎಂಬುದರ ಜಿಜ್ಞಾಸೆಯನ್ನು ಅವರು ಮಾಡಿದ್ದಾರೆ. ಅವರ ಶೈಲಿಗೆ ಉದಾಹರಣೆ -

Lady Macheth :

Out dammed spot; are two, why then it is time to do it.

Hell is murcy : fie, my Lord, fie, A soldier and a feared ; What need

We fear who knows it when none call our power to account? Yet,

Who waved have thought the old man to have so much blood in him?

ಚಂದ್ರವಲ್ಲಿ :

ಛೆ, ಛೆ, ಅಸಹ್ಯಕಲೆಯೇ, ತೊಲಗು ತೊಲಗು, ತೊಲಗೆಂದರೆ ತೊಲಗದಿರ್ಪೆ. ಒಂದು ಎರಡು ಹೊತ್ತಾಯಿತು. ಮಾಡಬೇಕು, ಇನ್ನೂ ಮಾಡಬೇಕು. ನರಕ ಕತ್ತಲಾಗಿದೆ, ಛೆ, ಛೆ, ಇವನೇನು ವಲ್ಲಭನೆ ಧುರಧೀರನಾಗಿಯೂ ಹೆದರುವೆ? ಇದಕ್ಕೆ ನಾವ್ಯಾಕೆ ಹೆದರಬೇಕು? ಯಾರು ತಾನೆ ಕಾಣುವರು? ಕಂಡರೆ ಭಯವೇನು? ಮಹತ್ವದ ಪದವಿಯಲ್ಲಿರತಕ್ಕ ನಮ್ಮನ್ನು ಆಕ್ಷೇಪಿಸಲು ಯಾರಿಗೆ ತಾನೇ ಧೈರ್ಯವುಂಟು? ಆದರೆ ಈ ವೃದ್ಧನಲ್ಲಿಷ್ಟು ರಕ್ತವಿತ್ತೆಂದು ಯಾರು ತಿಳಿದಿದ್ದರು?

ಗೌಡರು ತಮ್ಮ ಅನುವಾದದಲ್ಲಿ ರಂಗ ಪ್ರಯೋಗವನ್ನು ದೃಷ್ಟಿಯಲ್ಲಿಟ್ಟುಕೊಂಡು ಕೆಲವು ಕಡೆ ಭಾವಾನುವಾದವನ್ನು ಮಾಡಿದ್ದಾರೆ. ಇವರು ಅಚ್ಚಗನ್ನಡ ರಗಳೆಗಳನ್ನು ಹೆಚ್ಚಾಗಿ ಬಳಸಿದ್ದಾರೆ. ಯಕ್ಷಣಿಗಳ ಮಾತುಗಳನ್ನು ಹಳಗನ್ನಡದಲ್ಲಿ ಹೇಳಿರುವುದರಿಂದ ತಂತ್ರ ಹೆಚ್ಚು ಪರಿಣಾಮ ಬೀರುತ್ತದೆ. ಸಾಮಾನ್ಯ ಪಾತ್ರಗಳಲ್ಲಿ (ದ್ವಾರಪಾಲಕರು ಇತ್ಯಾದಿ) ಆಡುಮಾತುಗಳನ್ನು ಹೇಳಿಸಿದ್ದಾರೆ. ಬಳಸಲಾದ ಸನ್ನಿವೇಶ ಮತ್ತು ಹೆಸರುಗಳಲ್ಲಿ ಭಾರತೀಕರಣವಿದೆ.

ಷೇಕ್ಸ್‌ಪಿಯರ್‌ನ 'A Mid-summer Nights Dream' 'ಪ್ರಮೀಳಾರ್ಜುನೀಯ' (1896)ವಾಗಿ ಅನುವಾದಿಸಿದ ಗೌಡರು ಸೊಗಸಾದ ಭಾಷೆ ಜೊತೆಗೆ ಗಾದೆ ಮಾತುಗಳನ್ನು ಸೇರಿಸಿದ್ದಾರೆ -

ಸೂತ್ರದಾರ : ಹೀಗೇನಾದರೂ ಆದರೆ, ಮುಂದೆ ಆ ಕಂಕಭಟ್ಟನು ಕಂಕುಳಿಂದ ಕಡತ ತೆಗೆದು ಕೇಳತಕ್ಕವರ ಮುಂದೆ ಕರತಲವಾಡಿದರೆ ಕುದುರೆ ಬಂದು ಕಾರ್ಯ ಕೈಕೊಡುವುದೇ ?

(ಕಂಕಾರದ ಆವರ್ತನೆ ಪು : 124)

"ಕತ್ತಿ ಉರಿದರೆ ಕತ್ತರಿ ಆಯಿತೆ" (ಪುಟ 139)

ನಾಯಕಿ ಪ್ರಮೀಳೆಯ ಮಾತುಗಳಲ್ಲಿ ಗಾಂಭೀರ್ಯವಿದೆ.

ಪ್ರಮೀಳೆ : ಇವರುಗಳಿಗೆ ಸಂತೋಷಕರವಾದುದ್ದೇನೂ ಪ್ರತ್ಯೇಕವಾಗಿಲ್ಲದಿದ್ದರೂ, ಇವರ ಪ್ರಬಲವಾದ ಊಹಾಶಕ್ತಿಯು ಸಂತೋಷವನ್ನುಂಟುಮಾಡುವಂತಹದ್ದನ್ನು ಭಾವಿಸಿಕೊಂಡು ಸಂತೋಷಪಡುವುದು. ಭಯಕ್ಕೆ ಯಾವುದೊಂದು ಕಾರಣವಿಲ್ಲದ್ದಾಗ್ಯೂ ಕತ್ತಲಲ್ಲಿ ಕಾಣದ ನೆರಳುಗಳನ್ನು ಕಂಡು ಕರಡಿಗಳೆಂಬ ಭಾವನೆಯಿಂದ ಭಯಪಡುವುದು. (ಪುಟ 192)

ಶ್ರೀಕಂಠೇಶಗೌಡರ ಅನುವಾದ ಕಲೆಯ ಬಗ್ಗೆ ಶಾಸ್ತ್ರಿಯವರು ಹೇಳಿದ ಮಾತನ್ನು ಶ್ರೀನಿವಾಸ ಹಾವನೂರರು ಉಲ್ಲೇಖಿಸುತ್ತಾ ''ಷೇಕ್ಸ್‌ಪಿಯರ್‌ನನ್ನು ಕನ್ನಡಕ್ಕೆ ತರುವ ಯೋಜನೆ ಮಾಡುವುದಕ್ಕೆ ಪ್ರತಿಯಾಗಿ ಇವರು ಸ್ವತಂತ್ರ ನಾಟಕಗಳನ್ನು ಬರೆದಿದ್ದರೆ ಇವರ ಶಕ್ತಿ ಇದಕ್ಕಿಂತ ಹೆಚ್ಚು ಸಾರ್ಥಕವಾಗುತ್ತಿತ್ತು.''[24]

''ಪ್ರಮೀಳಾರ್ಜುನೀಯದಲ್ಲಿ ಕಟ್ಟುವ ಮಡಿವಾಳ ಮಾಚಯ್ಯ ಸಂಗಡಿಗರು ಸೀತಾ ಸ್ವಯಂವರದಲ್ಲಿ ಭೂರಿ ಭೋಜನದ ಬ್ರಾಹ್ಮಣರು ಇವು ಅತ್ಯಂತ ಹೃದ್ಯವಾಗಿದ್ದು, ಅವರ ಕಲ್ಪಕಥೆ ತಾನೆ ತಾನಾಗಿ ಅರಳಿದೆ. ಎರಡೇ ವರ್ಷದ ಅವಧಿಯಲ್ಲಿ ತಮ್ಮ ಹೆಚ್ಚಿನ ಕೃತಿಗಳನ್ನು ಬರೆದು ಮುಗಿಸಿದ ಶ್ರೀಕಂಠೇಶಗೌಡರ ಪ್ರತಿಭೆ, ನಿಸ್ಸಂಶಯವಾಗಿ ಮೇಲ್ಮಟ್ಟದ್ದು''[25] ಇದು ಗೌಡರ ಪಾಂಡಿತ್ಯ ಸ್ವಂತಿಕೆ ಬಗ್ಗೆ ಮೆಚ್ಚಿ ನುಡಿದ ಮಾತುಗಳು.

ಒಲಿವರ್ ಗೋಲ್ಡ್‌ಸ್ಮಿತ್‌ನ 'ಶಿ ಸ್ಟೂಪ್ಸ್ ಟು ಕಾನ್ಕರ್'ನ್ನು ಕೆರೂರು ವಾಸುದೇವಾಚಾರ್ಯರು 'ಪತಿವಶೀಕರಣ'ವೆಂಬುದಾಗಿ ಕನ್ನಡಿಸಿದ್ದಾರೆ. ಇದು ಕೆರೂರರ ಕೊನೆಯ ಕೃತಿಯಾಗಿದ್ದು ಕೊನೆಯ ಎರಡೂವರೆ ಪುಟಗಳನ್ನು ಮುದನೀಡು ಕೃಷ್ಣರಾಯರು ಸೇರಿಸಿದ್ದಾರೆ. ಈ ಹಾಸ್ಯ ನಾಟಕದಲ್ಲಿ ಕೆಲವು ಭೌತಿಕ ವಿಚಾರಗಳನ್ನು ವಿಡಂಬನಾತ್ಮಕವಾಗಿ ಹೇಳಿದ್ದಾರೆ. ಶ್ರೀರಾಮರವರು ಮೂಲದ ಈ ನಾಟಕವನ್ನು 'ನಿರ್ಮಲೆ' ಎಂದು ಅನುವಾದಿಸಿದ್ದಾರೆ. ಇವರು ಹಾಸ್ಯ ಶೈಲಿಯ ಬದಲು ಗಂಭೀರ ಶೈಲಿಯಲ್ಲಿ ಬರೆದಿದ್ದಾರೆ. ಎರಡೂ ಹೊಸಗನ್ನಡದಲ್ಲಿದ್ದು ಪಾತ್ರ ಚಿತ್ರಣ ಒಂದೇ ಆಗಿದೆ. ಅಲ್ಲಿಯ 'ಮಂಗಳ ಗೌರಿ' ಇಲ್ಲಿ 'ನಿರ್ಮಲೆ' ಆಗಿದ್ದಾರೆ.

ಷೇಕ್ಸ್‌ಪಿಯರ್‌ನ 'ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್'ನ್ನು ಕೆರೂರವರು 'ವಸಂತ ಯಾಮಿನೀ ಸ್ವಪ್ನ ಚಮತ್ಕಾರ ನಾಟಕ' ಎಂಬುದಾಗಿ ರೂಪಾಂತರಿಸಿದ್ದು, ನಾಟಕ ಪಾಂಡಿತ್ಯ ಪೂರ್ಣವಾಗಿದೆ. ಗದ್ಯ ಭಾಗ ಸರಳವಾಗಿದೆ. ಪಾತ್ರಗಳಿಗೆ ಭಾರತೀಯ ಹೆಸರುಗಳನ್ನು, ನೀಡಲಾಗಿದ್ದು ಅವುಗಳ ನಡೆ - ನುಡಿ ಭಾರತೀಯವಾಗಿದೆ. ಅವರ ಸಂಭಾಷಣೆ ಭಾಷಾ ಶೈಲಿಗೆ ಉದಾಹರಣೆ -

ಪ್ರಮದಾ ಮಣಿಯೇ ಇದೇನು ನೀ ಮಾಡಿದೆ ॥
ಬಾಲಕಿಯರು ನಾವು ಕೂಡಿ ಪ್ರೇಮದೋಳಾಡಿ
ಸಾಲದ ಸಂತೋಷ ಈ ಸುಹಾಸ ಕಾಲದ ಕಳೆದಿಲ್ಲವೆ ॥

ಅವರ ರೂಪಾಂತರ ಶೈಲಿಗೆ ಉದಾಹರಣೆ :

Hippolita : Four days will quickly stop themselves in night
Four nights will quickly dream away the time,
And then the noon like to a silver bow ne bent in
However, shall behold the night of our solemnitics

(Complete Works of Shakespeare P. 175)

ಪ್ರಗಲ್ಭಾ : (ಮಂದಹಾಸದಿಂದ) ಅಷ್ಟೇಕೆ ಆತುರತೆ? ಈ ನಾಲ್ಕು ಹಗಲುಗಳೂ ಬೇಗನೆ ರಾತ್ರಿಗಳಲ್ಲಿ ಮಸುಗಿಕೊಳ್ಳುವುವು. ಸುಖ ಸ್ವಪ್ನಗಳಲ್ಲಿ ನಾಲ್ಕು ರಾತ್ರಿಗಳಾದರೂ ಅರಿಯದೆ ಹೋಗುವುವು. ಬಳಿಕ ಬೆಳ್ಳಿಯ ಬಿಲ್ಲಿನಿಂದೊಪ್ಪುವ ಬಿದಿಗೆಯ ಚಂದ್ರನು ಗಗನ ಮಂಡಲದಲ್ಲಿ ಹೊಳೆಯಲಾರಂಭಿಸಿದನೆಂದರೆ, ನಮ್ಮ ವಿವಾಹ ಮಹೋತ್ಸವವು ಸ್ಸಂಗಾತಿಯನ್ನು ಹೊಂದುವುದಿಲ್ಲವೇ?

ಈ ನಾಟಕದ ಹಿನ್ನುಡಿಯಲ್ಲಿ ಕೆರೂರರು ಅನುವಾದ ಮತ್ತು ರೂಪಾಂತರಗಳ ವ್ಯತ್ಯಾಸ ಹೇಳಿದ್ದಾರೆ. ಅವರ ಪ್ರಕಾರ ಅನುವಾದವೆಂದರೆ ಮೂಲದ ಪಾತ್ರ ಪ್ರದೇಶಗಳ ಹೆಸರನ್ನು ಹಾಗೆಯೇ ಇಟ್ಟುಕೊಂಡು ಅಥವಾ ಬೇಕಾದಲ್ಲಿ ಬದಲಾವಣೆ ಮಾಡಿಕೊಂಡು ಉಳಿದ ಭಾಗವನ್ನು ಕನ್ನಡೀಕರಿಸುವುದು. ರೂಪಾಂತರವೆಂದರೆ ಮೂಲದ ಆಧಾರದ ಮೇಲೆ ನಮ್ಮ ಜನರ ನಡವಳಿಕೆ ಭಾಷೆಗೆ ತಕ್ಕಂತೆ ನಮಗೆ ಸ್ವಾಭಾವಿಕವಾಗಿ ತೋರುವ ಹಾಗೆ ಪರಕೀಯವಾದ ವಸ್ತುವನ್ನು ಸ್ವತಂತ್ರ ಕೃತಿಯೆಂಬ ಭ್ರಾಂತಿ ಉಂಟಾಗುವಂತೆ ಮಾಡುವುದು. ಶ್ರೀಕಂಠೇಶಗೌಡ, ಚುರಮರಿಯವರದ್ದು ರೂಪಾಂತರಗಳು. ಇನ್ನು ಕೆಲವರು ಮೂಲ ತತ್ವಕ್ಕೆ ಕುಂದುಬಾರದಂತೆ ಅನುವಾದಿಸಿದ್ದಾರೆ. ಇಲ್ಲಿ ಪದಶಃ ಅನುವಾದಕ್ಕಿಂತ ಮೂಲಸತ್ವದ ಅನುವಾದಕ್ಕೆ ಹೆಚ್ಚು ಪ್ರಾಮುಖ್ಯತೆ. ಬಹುಶಃ ಶೇಕ್ಸ್‌ಪಿಯರ್‌ನನ್ನು ಅನುವಾದಿಸುವ ಪರಿಣಾಮಕಾರಿ ಮಾರ್ಗವು ಇದೇ ಆಗಿರಬಹುದು.

"ಪದಶಃ ಅನುವಾದ ಯಶಸ್ವಿಯಾಗುವುದು ತುಂಬಾ ಕಠಿಣ. ಯಾಕಂದರೆ ಶೇಕ್ಸ್‌ಪಿಯರ್‌ನ ಮೂಲಪದಕ್ಕಿರುವ ಅರ್ಥ ವಿಸ್ತಾರ, ಧ್ವನಿ ಶಕ್ತಿ ನಿಘಂಟಿನಲ್ಲಿ ಸಿಗುವ ಅರ್ಥದಲ್ಲಿಯೇ ಇರುತ್ತದೆಂದು ಹೇಳಲಾಗುವುದಿಲ್ಲ. ಮೂಲಸತ್ವ ಪ್ರಕಟಿಸಲು ಬೇರೆಯೇ ಪದ ಬೇಕಾಗಬಹುದು. ಕೆಲವು ಕಡೆ ಸಾಧ್ಯವೇ ಆಗದಿರಬಹುದು. ಅಂದರೆ ಅನುವಾದಕ ಮೂಲ ಪದಗಳ ಅರ್ಥಹುಡುಕುವ ಕೆಲಸ ಮಾಡುವವನಲ್ಲ. ಮೂಲದ ಸತ್ವವನ್ನು ವೈಯಕ್ತಿಕ ಪ್ರತಿಭೆಯ ಬಲದಿಂದ ತನ್ನ ಭಾಷೆಯಲ್ಲಿ ಪುನಃಸೃಷ್ಟಿಸುವ ಕೆಲಸವನ್ನು ಒಳ್ಳೆಯ ಅನುವಾದಕ ಮಾಡುತ್ತಾನೆ. ಆದ್ದರಿಂದಲೇ ಆತ ಅನುವಾದಗೊಳ್ಳುವ ಭಾಷೆಯನ್ನು ಸೃಜನಶೀಲವಾಗಿ ಬಳಸಿ ಬೆಳೆಸುತ್ತಾನೆ. ಹೀಗಾಗಿಯೇ ಕನ್ನಡದಲ್ಲಿ ಬಂದ ಶೇಕ್ಸ್‌ಪಿಯರ್‌ನ ಒಂದು ಅನುವಾದ ಶೇಕ್ಸ್‌ಪಿಯರ್‌ನದ್ದೆಷ್ಟೋ ಅಷ್ಟೇ ಅನುವಾದಕನದ್ದೂ ಆಗಿರುತ್ತದೆ"[26]

"ಷೇಕ್ಸ್‌ಪಿಯರ್‌ನ ನಾಟಕದ ಅನುವಾದದಲ್ಲಿ ಬರುವ ಒಂದು ದೊಡ್ಡ ತೊಡಕೆಂದರೆ ಅದರಲ್ಲಿಯ ಕಾವ್ಯಮಯ ಅಂಶಗಳನ್ನು ಸರಳರಗಳೆಯ ಬಗೆಯಲ್ಲಿ ಸಮರ್ಪಕವಾಗಿ ಕನ್ನಡದಲ್ಲಿ ತರುವುದು. ಅವನ್ನು ಅಷ್ಟೇ ಭಾವಪೂರ್ಣವಾಗಿ ಅನುವಾದಿಸುವುದೊತ್ತಟ್ಟಿಗಿರಲಿ. ಪ್ರೇಕ್ಷಕರಿಗೆ ಬೇಸರ ಬರದಂತೆ ಕನ್ನಡದಲ್ಲಿ ತಂದಿದ್ದರೆ ಸಾಗಾಗಿತ್ತು. ಅನುವಾದಕನಿಗಂತೂ ಜಯಾರಾಮಾಚಾರ್ಯನು ಪದ್ಯಗಳನ್ನು ರಚಿಸಿಕೊಟ್ಟನು. ಶ್ರೀಕಂಠೇಶಗೌಡರಿಗೂ ಕಾವ್ಯಾನುವಾದವು ನೀಗದ ಕೆಲಸವಾಗಿದ್ದಿತು. ಹೀಗಾಗಿ ಮೂಲದ ದೀರ್ಘವಾದ ಸ್ವಗತ ಭಾಷಣಗಳನ್ನು ಅರ್ಧಪದ್ಯದಲ್ಲಿ ಅರ್ಧ ಗದ್ಯದಲ್ಲಿ ಹೇಳುವ ಪ್ರಯತ್ನವನ್ನು ಮಾಡಿದರೆಂದು ಕಾಣುತ್ತದೆ.[27]

''ಇಂಗ್ಲಿಷ್ ನಾಟಕಗಳ ಅನುವಾದಿತ ಕೃತಿಗಳು ಕನ್ನಡ ನಾಟಕ ಸಾಹಿತ್ಯದ ಬೆಳಸನ್ನು ಹೆಚ್ಚಿಸುವುದರಲ್ಲಿ ಯಶಸ್ವಿಯಾದರೂ ಉದ್ದೇಶಿತ ರಂಗ ಪ್ರದರ್ಶನಕ್ಕೆ ಈಡಾಗಿ ಬರಲಿಲ್ಲ. ಮುಖ್ಯವಾದ ಕಾರಣವೆಂದರೆ ನಮ್ಮ ಜೀವನಕ್ಕೆ ಹೊಂದಿಕೊಳ್ಳದ ಅಲ್ಲಿನ ಕಥಾವಸ್ತು. ಮನರಂಜನೆಗೆ ಅವಕಾಶವಿದ್ದರೂ, ಅಲ್ಲಿನವರೆಗಂತೂ ಪ್ರಚಲಿತವಾಗಿದ್ದ ನಮ್ಮ ಪೌರಾಣಿಕ ನಾಟಕಗಳಲ್ಲಿರುವಂತೆ ಅವು ನೀತಿ ಬೋಧಕವಾಗಲಿಲ್ಲ. ನಮ್ಮ ಇತಿಹಾಸದ ಏಳುಬೀಳುಗಳನ್ನು ಪ್ರತಿಧ್ವನಿಸಲಿಲ್ಲ. ನಮ್ಮದೇ ಸಾಮಾಜಿಕ ಸಮಸ್ಯೆಗಳನ್ನು ಪ್ರತಿನಿಧಿಸಲಿಲ್ಲ. ಎರಡನೆಯದಾಗಿ ಬಳಸಿದ ಭಾಷೆಯು ಸಮಸ್ಯೆ. ಕಥಾ ದ್ರವ್ಯ ಸಾಮಾಜಿಕವಾದರೂ, ಬಳಸಿದ ಭಾಷೆ ಗ್ರಾಂಥಿಕವಾಗಿ ಪೆಡಸಾಗಿ ಕೃತ್ರಿಮವೇ ಆದ ಉದಾಹರಣೆಗಳು ಹೆಚ್ಚು. ಹೀಗಾಗಿ ನಮ್ಮ ರಂಗ-ಸಂಸ್ಕೃತಿಗೆ ಕಥೆ ಬಂಧ ಮಾತು ಗೀತೆಗಳ ದೃಷ್ಟಿಯಿಂದ ಹೊರತಾಗಿ ನಿಂತುದರಿಂದಾಗಿ, ಮೂಲದಲ್ಲಿ ಈ ಎಲ್ಲಾ ಅನುವಾದಗಳು ರಂಗಕ್ಕೆಂದೇ ಮೀಸಲು ಎಂದಿದ್ದರೂ ವೃತ್ತಿ ಸಂಸ್ಥೆಗಳು ಆಡಲು ಹಿಂತೆಗೆದವು. 'ರಾಮವರ್ಮ - ಲೀಲಾವತಿ ಮತ್ತು ಶೂರಸೇನ ಚರಿತ್ರೆ' ಗಳಾದರೂ ಹಳೆಯ ಮೈಸೂರು ಕಡೆ ರಂಗದಲ್ಲಿ ಧ್ವಜ ಹಾಕಿ ನಿಂತಿದ್ದು ಮುಖ್ಯವಾಗಿ ಪರಿಣತ ನಾಟಕಕಾರರ ಸಾಹಸದ ಕಾರಣ. ಅಂತಹ ವೃತ್ತಿ ನಟರಿಂದಾಗಿ ನಾಟಕ ರಂಗದ ಮೇಲೆ ಬೆಳಗಿತು .... ಇಂಗ್ಲಿಷ್ ನಾಟಕಗಳ ಈ ಕೆಲವು ಕನ್ನಡ ರೂಪಾಂತರಗಳು ವಿಲಾಸೀ ರಂಗಭೂಮಿಯಲ್ಲಾದರೂ ಜನಪ್ರಿಯತೆ ಗಳಿಸಿದವು.''[28]

ಕಾದಂಬರಿ ಕ್ಷೇತ್ರದಲ್ಲಿ ಇಂಗ್ಲಿಷಿನಿಂದ ಬಂದ ಮೊದಲ ಗ್ರಂಥವೆಂದರೆ 1847ರಲ್ಲಿ ಆರ್. ವೈಗಲ್‌ರು ಬರೆದ (ಯಾತ್ರಿಕನ ಸಂಚಾರ Chaucer's piligrims progress)20 ಅಧ್ಯಾಯಗಳ ಈ ಕೃತಿಯಲ್ಲಿ ಕ್ರೈಸ್ತಧರ್ಮದ ಶ್ರೇಷ್ಠತೆ ಒತ್ತಿ ಹೇಳುವುದು ಉದ್ದೇಶವಾಗಿದೆ. 'ಕ್ರೈಸ್ತಯ್ಯ'ನೆಂಬ ಪ್ರಧಾನ ಪಾತ್ರದ ಮೂಲಕ ಭಾರತೀಯ ಆಚರಣೆ, ನಂಬಿಕೆ ಸಂಪ್ರದಾಯಗಳನ್ನು ಟೀಕಿಸಿ ಕ್ರೈಸ್ತಧರ್ಮ, ಶಿಲುಬೆಗಳನ್ನು ಪ್ರತಿಪಾದಿಸಲಾಗಿದೆ. ಕುರಾನ್‌ನನ್ನು ಇಲ್ಲಿ ಟೀಕಿಸಲಾಗಿದೆ. ಹಿಂದೂ ಪಾತ್ರಗಳಿಗೆ ಹೆಸರು ಕೊಡುವಾಗ ಅವುಗಳಲ್ಲಿರುವ ದೋಷಗಳಿಗನುಗುಣವಾಗಿ ಕೊಡಲಾಗಿದ್ದು ಹಾಗೂ ಕ್ರೈಸ್ತ ಪಾತ್ರಗಳಿಗೆ ಒಳ್ಳೆಯ ಗುಣವನ್ನು ಆರೋಪಿಸಲಾಗಿದೆ. ಉದಾ : ಭಾರತೀಯ ಪಾತ್ರಗಳು - ಕುಡುವಾಸಭಟ್ಟ, ಚಂಚಲಶೆಟ್ಟಿ, ಕಾಮಾಚಾರ್ಯ, ಅಧರ್ಮನಾಯಕ, ಕೋರಿಕೆಗೌಡ, ಅಲಿ ಭೋಗಾಖಾನ್ ಮುಂತಾದವು. ಕ್ರೈಸ್ತ ಪಾತ್ರಗಳು - ಕ್ರೈಸ್ತಯ್ಯ, ವಿಶ್ವಾಸಯ್ಯ, ಸುಮನ, ಸುವಾರ್ತ್ರಿಕ, ದಯಾಸಾಗರರಾಜ, ದಾವೀದ ಮುಂತಾದವು. ಚೌಪದಿ, ಷಟ್ಪದಿಗಳಲ್ಲಿ ವಿರಚಿತವಾದ ಈ ಗ್ರಂಥ ಕೃತಕತೆಯಿಂದ ಕೂಡಿದ್ದು ಅಷ್ಟಾಗಿ ಸಾಹಿತ್ಯಾಂಶ ಕಾಣುವುದಿಲ್ಲ. ವಿಗ್ರಹಾರಾಧನೆಯನ್ನು ಖಂಡಿಸುವ ಮಾತುಗಳು ಇಂತಿವೆ-

ಮನುಷ್ಯರು ಕಲ್ಪಿಸಿದ ದೇವರುಗಳನ್ನು ಆರಾಧಿಸಿ ವಿಗ್ರಹಗಳಿಗೆ ಪೂಜೆ ಮಾಡಿದರೆ ಸತ್ಯದೇವರ ಶಿಕ್ಷೆಯು ಮನುಷ್ಯರ ಮೇಲೆ ಬರುವುದೆಂದೂ, ವಿಗ್ರಹಾರಾಧಕರು ಪಾಪದ ಕೂಪದಲ್ಲಿ ಮುಳಗಿ ಹೋಗುತ್ತಾರೆಂದೂ ಹೇಳಿದ್ದಾನೆ. (ಪುಟ 107))

ಇಂಗ್ಲಿಷಿನಿಂದ ಸಣ್ಣ ಕಥೆಗಳು, ನೀತಿಕಥೆಗಳು, ಹಾಸ್ಯಕಥೆಗಳು, ಮಕ್ಕಳ ಕಥೆಗಳು 1854ರಿಂದ ಅನುವಾದವಾಗುತ್ತಾ ಬಂದಿವೆ. ಸಂಸ್ಕೃತದ 'ಪಂಚತಂತ್ರ' ಮೊದಲು ಇಂಗ್ಲಿಷಿಗೆ ಅನುವಾದಗೊಂಡು ನಂತರ ಕನ್ನಡಕ್ಕೆ ಬಂದಿತು. ಇಂಗ್ಲಿಷಿನಿಂದ ನೇರವಾಗಿ ಕನ್ನಡಕ್ಕೆ ಬಂದ ಕೃತಿಗಳಲ್ಲಿ ಕೃಷ್ಣಸ್ವಾಮಿ ಅಯ್ಯಂಗಾರ್ ಬರೆದ ರಾಬಿನ್‌ಸನ್ ಕ್ರೂಸೋ ವೃತ್ತಾಂತಗಳು (1854)

ವೆಂಕಟರಂಗೋಕಟ್ಟಿ ಬರೆದ ಅರಬ ಭಾಷೆಯಲ್ಲಿದ್ದ 'ಸುರಸಕಥೆಗಳ ಸಂಗ್ರಹ' (1893), ಹಾರಿಯರ್ ಬೀಚರ್ ಸ್ಟೋರ್ ಬರೆದ 'ಗಲಿವರನು ಲಿಲ್ಲಿಪುಟ್ ದೇಶಕ್ಕೆ ಹೋದ ಕಥೆ' (1873) ಪ್ರಮುಖವಾದವುಗಳು.

ಎಂ. ಎಸ್. ಪುಟ್ಟಣ್ಣನವರು ಷೇಕ್ಸ್‌ಪಿಯರ್‌ನ 'ಸಿಂಬೆಲೈನ್' 'ಜಯಸಿಂಹರಾಜಚರಿತ್ರೆ' (1881) ಯನ್ನಾಗಿ ರೂಪಾಂತರಿಸಿದರು. ಭಾರತೀಯ ಪಾತ್ರಗಳನ್ನು ಉಪಯೋಗಿಸಿಕೊಂಡು ಇಲ್ಲಿಯ ಸನ್ನಿವೇಶಕ್ಕೆ ತಕ್ಕಂತೆ ಅನುವಾದಿಸಿದ್ದು "ಜನಗಳು ಸಾಧಾರಣವಾಗಿ ಅರ್ಥಮಾಡಿಕೊಳ್ಳುವಂತೆ ಕನ್ನಡದಲ್ಲಿ ರೂಢವಾಗಿರುವ ಸಂಸ್ಕೃತ ಪದಗಳು ಉಪಯೋಗಿಸಲ್ಪಟ್ಟಿವೆ."[29] ಇವರದೂ ಪೌರಾಣಿಕ ಶೈಲಿ, ಕೃತ್ರಿಮವಾದ ಕೋಮಲವಾದ ಭಾಷೆ. 'Winking' ಎಂಬುದನ್ನು 'ಕಣ್ಣುಮುಚ್ಚಿಕೊಂಡು' ಎಂದು ಅನುವಾದಿಸಿದಾಗ ಅನುವಾದವೂ ಕಣ್ಣುಮುಚ್ಚಿಕೊಂಡಂತಾಗಿದೆ. ಪುಟ್ಟಣ್ಣನವರು ಇದರಲ್ಲಿ ಒಂದೊಂದು ರಂಗವನ್ನು ಪರಿಚ್ಛೇದವಾಗಿ ಪರಿವರ್ತಿಸಿಕೊಂಡು ಉದ್ದುದ್ದ ವಾಕ್ಯಗಳನ್ನು ಹಾಗೂ ಕೆಲವೆಡೆ ಆಡು ಮಾತುಗಳನ್ನು ಬಳಸಿದ್ದಾರೆ. ಉದಾಹರಣೆಗೆ-

"ಸ್ವಲ್ಪ ಹೊತ್ತಿನ ಮೇಲೆ ಮೃಗಯಾರ್ಥವಾಗಿ ಹೋಗಿದ್ದ ಆರ್ಯಮಿತ್ರನು ಜಯಧ್ವಜ ಶಾಂತಿಪ್ರಿಯರು ಹಿಂತಿರುಗಿ ಕರೆದುಕೊಂಡು ಬರುತ್ತಾ ಜಯಧ್ವಜನಂ ಕುರಿತು - ಎಲೈ ಬಾಲಕನೇ, ನೀನು ಬೇಟೆಯನ್ನು ಹೊಡೆದಿದ್ದರಿಂದ ನಾವು ಮೊದಲು ಒಪ್ಪಿದ ಪ್ರಕಾರ ನಾವಿಬ್ಬರೂ ನಿನಗೆ ಉಪಕಾರವಂ ಮಾಡುತ್ತಲಿದ್ದೇವೆ. ನಿಮ್ಮ ಶ್ರಮ ವ್ಯರ್ಥವಾಗಲಿಲ್ಲ. ಕ್ಷುಧೆ ಬಹುವಾಗಿ ಶ್ರಾಂತರಾದ ನಮಗೆ ಅಲ್ಪಾಹಾರವಾದ ಹಿಟ್ಟು ಸೊಪ್ಪು ಬಹು ಸವಿಯೂ ಆಗಿರುವುದು." (ಪುಟ 72)

ಮಕ್ಕಳಿಗೆ ನೀತಿ ಪಾಠವನ್ನು ಹಿತೋಪದೇಶವನ್ನು ಮಾಡುವ ದೃಷ್ಟಿಯಿಂದ ಪುಟ್ಟಣ್ಣನವರು ಥಾಮಸ್ ಡೇನ 'Samford and Merton' ಸುಮನ್ ಮದನ್ ಉಮಾರ್ ಚರಿತ್ರೆ (1893) ಎಂದು ಅನುವಾದಿಸಿದ್ದಾರೆ. ಹಾಗೆಯೇ ಈಸೋಪನ ನೀತಿಕಥೆಗಳು ಇಂಗ್ಲಿಷಿನಿಂದ ಅನುವಾದಗೊಂಡ ಮಕ್ಕಳ ನೀತಿ ಕಥೆಗಳಲ್ಲಿ ಮುಖ್ಯವಾದುದು. ಕೆ. ಮಾಧವಾಚಾರ್ಯರು ಆರ್ಯ ಬಾಲನೀತಿ (1916)ನ್ನು ಸುಬ್ರಮಣ್ಯಾಚಾರ್ಯ ಕಿತ್ತೂರರು ಹಾಕಿಮತಾಯಿಯ ಕಥೆ (1913)ಯನ್ನು ಮಕ್ಕಳಿಗಾಗಿ ಕನ್ನಡಕ್ಕೆ ಅನುವಾದಿಸಿದರು.

ಶ್ರೀ ಚಂಡೀವಾಡ ರವರು ಷೇಕ್ಸ್‌ಪಿಯರ್‌ನ ರೋಮಿಯೋ ಅಂಡ್ ಜೂಲಿಯಟ್‌ನ್ನು 'ಕಮಲಾಕ್ಷ ಪದ್ಮಗಂಧಿಯರ ಕಥೆ' ಎಂದು ಅನುವಾದಿಸಿದ್ದಾರೆ. ಇದೊಂದು ರೂಪಾಂತರಗೊಂಡ ಆಧಾರಿತ ಕಾದಂಬರಿ. ಮೂಲ ನಾಟಕವನ್ನು ಅನುವಾದಿಸಿದರೂ ಡಾ : ಶ್ರೀನಿವಾಸ ಹಾವನೂರರು ಇದನ್ನು ಕಾದಂಬರಿ ಎಂದು ಕರೆದಿದ್ದಾರೆ. ಮೂಲನಾಟಕದ ವಸ್ತುವಿನ ಆಧಾರದ ಮೇಲೆ ಸಾಕಷ್ಟು ಮಾರ್ಪಡನ್ನು ಇಲ್ಲಿ ಮಾಡಿಕೊಳ್ಳಲಾಗಿದೆ.

ಷೇಕ್ಸ್‌ಪಿಯರ್‌ನ ನಾಟಕಗಳ ಆಧಾರದ ಮೇಲೆ ಶ್ರೀ ಅಣ್ಣಾಜಿರಾವ್ ಮಲ್ಲೇಶ್ವರವರು 'ಕುಸುಮಾಕರ' (1905), ಶ್ರೀ ಕೆ. ಎಂ. ಕರಿಬಸವಯ್ಯನವರು 'ನಗದವರನ್ನು ನಗಿಸುವ ಕಥೆ' (1913) ಕಾಮಿಡಿ ಆಫ್ ಎರರ್ಸ್, ಶ್ರೀ ಎಸ್. ಜಿ. ನರಸಿಂಹಾಚಾರ್ಯರು 'ನಗೆಗಡಲು' (1898) ಮುಂತಾದ ರೂಪಾಂತರ ಕಥೆಗಳನ್ನು ಬರೆದಿದ್ದಾರೆ. ಶ್ರೀ ಹನುಮಂತಗೌಡರ 'ಪುರಿಯ ವರ್ತಕ' (ಮರ್ಚೆಂಟ್ ಆಫ್ ವೆನಿಸ್), ಶ್ರೀರಾಮರವರ 'ನಿರ್ಮಲೆ' (1918)

(A Midsummer Nights Dream) ಗಳು ಭಾರತೀಯರ ವ್ಯವಸ್ಥೆಗೆ ರೂಪಾಂತರಗೊಂಡ ಕೃತಿಗಳು. ಪ್ರಾಯಶಃ ಪಾಶ್ಚಾತ್ಯ ಸಂಸ್ಕೃತಿಯನ್ನು ಹಾಗೆಯೇ ಭಾರತೀಯ ಜನತೆಗೆ ಪರಿಚಯಿಸುವ ಧೈರ್ಯ ಈ ಲೇಖಕರುಗಳಿಗೆ ಇದ್ದಂತೆ ಕಾಣುವುದಿಲ್ಲ. ಎಸ್. ಜಿ. ನ. ರವರ ತಮ್ಮ ಎಸ್. ಜಿ. ಗೋವಿಂದರಾಜಯ್ಯಂಗಾರ್ ರವರು ಗೋಲ್ಡ್‌ಸ್ಮಿತ್‌ನ 'ದಿ ವಿಕಾರ್ ಆಫ್ ವೇಕ್‌ಫೀಲ್ಡ್'ನ್ನು 'ಪ್ರಿಂರೋಜ ವಿಜಯ' ಎಂದು ಅನುವಾದಿಸಿದ್ದಾರೆ. ಅದರ ಗದ್ಯಶೈಲಿಗೆ ನೀತಿ ನಿರೂಪಣೆಗೆ ಹಾಗೂ ನೀತಿ ಹೇಳುವಾಗ ದ್ವಿಪದಿ ಉಪಯೋಗಕ್ಕೆ ಇಲ್ಲಿದೆ ಉದಾಹರಣೆ -

"ಈ ಭೂಮಂಡಲದ ಪೂರ್ವಾರ್ಧಗೋಳದ ಪಶ್ಚಿಮ ದಿಕ್ಕಿನ ಸಮುದ್ರದಲ್ಲಿ ಸಂಯುಕ್ತ ರಾಜ್ಯವೆಂಬ ದ್ವೀಪ ಒಂದಿರುತ್ತದೆ. ಅದರಲ್ಲಿ ವೇಕ್‌ಫೀಲ್ಡೆಂಬ ಮನೋಹರವಾದ ಗ್ರಾಮವೊಂದಿದ್ದುದು ನಾನು ಈ ವೂರಲ್ಲಿ ಪೌರಾಣಿಕನಾಗಿಯೂ, ಮತಭೋಧಕವಾಗಿಯೂ ಇದ್ದೆನು. ಮದುವೆಮಾಡಿಕೊಂಡರೆ ಪ್ರಜಾವೃದ್ಧಿಯಾಗಿ ಕೋಟಲೆಗಳುಂಟಾಗುವುದೆಂದು ಹರಟುತ್ತಾ ಸ್ವಾರ್ಥತೆಯಿಂದ ಏಕಾಂಗಿಯಾಗಿರುವ ಮನುಷ್ಯನಿಗಿಂತಲೂ ಸಂಸಾರಿಯಾಗಿ ಮಕ್ಕಳನ್ನು ಹೆತ್ತು ಸತ್ಯಸಂಧನಾಗಿ ಬಾಳುವ ಗೃಹಸ್ಥನೇ ಶ್ರೇಷ್ಠನೆಂದು ನನ್ನ ಅಭಿಪ್ರಾಯ" (ಪುಟ 1)

ಅಲೆಕ್ಸಾಂಡರ್ ಡ್ಯೂಮನ್ 'ದಿ ಕೌಂಟ್ ಆಫ್ ಮೊಂಟ್ ಕ್ರಿಸ್ಟೋ'ನ್ನು ಶ್ರೀನಿವಾಸಚಾರ್ಯರು ರಾಜಾಮಲಯಸಿಂಹ (1915)ವೆಂದೂ ಉಳ್ಳಾಲ ಮಂಗೇಶರಾಯರು 'ವಿಧಿಯ ವೈಚಿತ್ರ್ಯ'ವೆಂದೂ ರೂಪಾಂತರಿಸಿದ್ದಾರೆ. ನಗರ ಹಣಮಂತರಾಯರು ಅಂತಃಪುರಂ ರಹಸ್ಯ (Love of Harens), ಉಳ್ಳಾಲ ಮಂಗೇಶರಾಯರು 'ನಿಷ್ಕಾಮ ಪ್ರೇಮ'ಗಳೆಂಬ ರೂಪಾಂತರಗಳನ್ನು ತಂದಿದ್ದಾರೆ. ಶ್ರೀನಿವಾಸಚಾರ್ಯರು ತಮ್ಮ 'ರಾಜಾಮಲಯಸಿಂಹ'ದ ಬಗ್ಗೆ ಹೇಳುತ್ತಾ "ಮೂಲ ಗ್ರಂಥದಲ್ಲಿ ಸಹಜವಾಗಿ ಫ್ರೆಂಚರ ಆಚಾರ ವ್ಯವಹಾರಗಳೂ ಯೂರೋಪ ಖಂಡದ ಹಲವು ಕಡೆಗಳ ವರ್ಣನೆಗಳಲ್ಲಿ ವಿಶೇಷವಾಗಿ ತುಂಬಿಹೋಗಿವೆ. ನಮ್ಮ ದೇಶ ಭಾಂದವರಿಗೆ ಅವುಗಳೆಲ್ಲಾ ಪ್ರಾಯಶಃ ಹಿಡಿಯಲಾರದೆಂದು ಭಾವಿಸಿ, ಕಥಾ ಸ್ವಾರಸ್ಯಕ್ಕೆ ಸ್ವಲ್ಪವೂ ಲೋಪಬರದಂತೆ ನಮ್ಮ ದೇಶೀಯರ ನಡುವಳಿಕೆಗೆ ಅನುಗುಣವಾಗುವಂತೆ ಸ್ಥಳಗಳನ್ನು ಪಾತ್ರಗಳನ್ನು ಯೋಚಿಸಿಕೊಂಡು "ರಾಜಾ ಮಲಯಸಿಂಹ" ಎಂಬ ಹೆಸರಿನ್ನಿಟ್ಟು ಈ ಗ್ರಂಥವನ್ನು ರಚಿಸಿದ್ದೇನೆ ಎಂದಿದ್ದಾರೆ."[45] ಇದರಲ್ಲಿ ಲೇಖಕರು ರೂಪಾಂತರಕ್ಕೆ ಕಾರಣ ನೀಡಿದ್ದಾರೆ. ಕೊನೆಯಲ್ಲಿ ಉಪಸಂಹಾರವನ್ನು ಸೇರಿಸಿ ಕಥೆಯನ್ನು ಆರ್ಯ ಸಂಪ್ರದಾಯದಂತೆ ಮಂಗಳಾಂತವನ್ನಾಗಿ ಮಾಡಿದ್ದಾರೆ. ಅದರ ಗದ್ಯದ ಶೈಲಿ ಹೀಗಿದೆ. "ಸುಮಾರು ಒಂದು ನಿಮಿಷದವರೆಗೆ ವೀರಸಿಂಹನು ಯಜಮಾನನನ್ನೇ ನೋಡುತ್ತಲಿದ್ದು ತರುವಾಯ ಗುಹೆಯನ್ನು ನೋಡಿದನು. ಗುಹೆಯನ್ನು ಇಂದ್ರಭವನವೆಂದು ಹೇಳಿದುದು ಕಡಿಮೆ ಎಂದು ತೋರಿತು. ಅದು ಸುಮಾರಾಗಿ ಅಗಲವಾಗಿದ್ದಿತು (ರಾಜಾಮಲಯಸಿಂಹ, ಪುಟ 243)"

ಎಸ್. ಕೆ. ದೊಡ್ಡವರು ಹಿಂದೂಸ್ಥಾನದ ಇತಿಹಾಸದೊಳಗಿನ ಸುಲಭವಾದ ಕಥೆಗಳು (1913)ನ್ನು ಆಧರಿಸಿ ರಚಿಸಿದ್ದಾರೆ. ಇದರಲ್ಲಿ ಭಾರತೀಯ ಇತಿಹಾಸ ವ್ಯಕ್ತಿಗಳು ಹಾಗೂ ಘಟನೆಗಳಿಗೆ ಸಂಬಂಧಿಸಿದಂತೆ 41 ಲೇಖನಗಳಿವೆ. ಎಂ. ವೆಂಕಟಕೃಷ್ಣಯ್ಯನವರ ಟೆಲಿಮಾಕಸ್ಸನ ಚರಿತೆ (1919)ಯಲ್ಲಿ ಟೆಲಿಮಾಕಸ್ಸನ ಸಾಹಸ ಕಾರ್ಯಗಳ ಚರಿತ್ರೆಯ 3 ಭಾಗಗಳಿವೆ. ಇವರ 'ವಾಷಿಂಗ್ಟನ್ನನ ಚರಿತೆ' ಎರಡು ಭಾಗಗಳಲ್ಲಿ ಪ್ರಕಟವಾಗಿದೆ.

ಆನವಟ್ಟಿ ರಾಮರಾಯರು 'ವಿಲಿಯಂ ಷೇಕ್ಸ್‌ಪಿಯರ್‌ನ ಚರಿತ್ರೆ' 'ಕ್ರಿಸ್ಟಾಫರ್ ಕೋಲಂಬಸ್‌ನ ಚರಿತ್ರೆ' 'ಜಾರ್ಜ್ ವಾಷಿಂಗ್ಟನ್ನನ ಚರಿತ್ರೆ' ಪ್ರಕಟಿಸಿದ್ದಾರೆ. ಗ.ಹು. ಹೊನ್ನಾಪುರಮಠರವರ 'ಅಬ್ರಹಾಂ ಲಿಂಕನ್ನನ ಚರಿತೆ' ವೈ. ಕೆ. ರಾಮಚಂದ್ರರಾಯರ 'ಜೈಮ್ಸ್ ಏಬ್ರಾಮ್‌ಗಾರ್ ಫೀಲ್ಡ್ ಚರಿತ್ರೆ' ಮುಂತಾದ ಅನೇಕ ಕೃತಿಗಳು ಕನ್ನಡಕ್ಕೆ ಬಂದಿವೆ.

ಗ.ಹು. ಹೊನ್ನಾಪುರಮಠ ರವರು ತಂದ 'ಚೆಂಬರ್ಸ್‌ನ ಮಾರಲ್ 'ಕ್ಲಾಸ್ ಬುಕ್' ಮಾಲಿಕೆಯ ಪುಸ್ತಕಗಳ ಮಾದರಿಯಲ್ಲಿ ರಚಿಸಿದ ಹಾಗೂ ಬಾಸೆಲ್ ಮಿಷನ್‌ನವರು ಪ್ರಕಟಿಸಿದ 'ಕನ್ನಡದ ಗದ್ಯ ಸಂಗ್ರಹ ನೀತಿ ಮಂಜರಿ'(1898)ರಲ್ಲಿ ಬಂದ ಮೊದಲ ಪ್ರಬಂಧ ಸಂಕಲನ. ಇದರಲ್ಲಿ 31 ಪ್ರಬಂಧಗಳಿವೆ. ಸದ್ವರ್ತನ, ಭಾಷಣ, ಪರೋಪಕಾರ, ನಗೆ, ವಾಚಾನಾಭಿರುಚಿ ಜೀವನ ಉಪಯೋಗ, ಆಶೆ, ಉದ್ಯೋಗ ಮೊದಲಾದ ವಿಷಯಗಳ ಮೇಲೆ ರಚಿಸಿದ ಸರಳ ಪ್ರಬಂಧಗಳನ್ನು ಇಲ್ಲಿ ಕಾಣಬಹುದು.

ಎಂ. ವೆಂಕಟಕೃಷ್ಣಯ್ಯನವರು ಜಾನ್ ಟಾಡ್‌ನ 'ಸ್ಟೂಡೆಂಟ್ಸ್ ಮ್ಯಾನುಯಲ್, ಕೃತಿಯ ಆಧಾರದ ಮೇಲೆ 'ವಿದ್ಯಾರ್ಥಿಕರ ಭೂಷಣ' ವೆಂಬ ದೀರ್ಘ ಪ್ರಬಂಧ ರಚಿಸಿದ್ದಾರೆ (1914) (2ನೇ ಮುದ್ರಣ). ಇದರಲ್ಲಿ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಉಪಾಧ್ಯಾಯರಿಗೆ ತಂದೆತಾಯಂದಿಗೆ ಉಪಯುಕ್ತವಾದ ಅನೇಕ ವಿಚಾರಗಳನ್ನು ತಿಳಿಸಲಾಗಿದೆ.

## 2. ಬಂಗಾಳಿಯಿಂದ ಕನ್ನಡಕ್ಕೆ ಬಂದ ಅನುವಾದಿತ ಕೃತಿಗಳು

ಬಂಗಾಳಿಯಿಂದ ಕನ್ನಡಕ್ಕೆ ಬಂದ ಕಾದಂಬರಿಗಳಲ್ಲಿ ಬಂಕಿಮಚಂದ್ರರ ಕೃತಿಗಳು ಪ್ರಧಾನವಾದವು. ಇವರ ಕೃತಿಗಳಲ್ಲದ ಕೃಷ್ಣವಿಹಾರಿ ಸೇನ್, ರಮೇಶ್‌ಚಂದ್ರದತ್ತ, ಬಿಂಕು ಬಿಹಾರಿಧರ್, ಹರಿಪ್ರಸಾದ್‌ಶಾಸ್ತ್ರಿ, ದಾಮೋದರ್ ಮುಖ್ಯೋಪಾಧ್ಯಾಯರು ಯೋಗಿಂದ್ರನಾಥ್ ಚಟ್ಟೋಪಾಧ್ಯಾಯ, ನನಿಲಾಲ ವಂದೋಪಾಧ್ಯಾಯ ಮೊದಲಾದವರ ಕೃತಿಗಳು ಕನ್ನಡಕ್ಕೆ ಬಂದವು.

ಬಿ. ವೆಂಕಟಾಚಾರ್ಯರು ಶ್ರೀ ಈಶ್ವರ ಚಂದ್ರ ವಿದ್ಯಾಸಾಗರ್‌ರವರು ಬರೆದ ಷೇಕ್ಸ್‌ಪಿಯರ್‌ನ 'ಕಾಮಿಡಿ ಆಫ್ ಎರರ್ಸ್'ನ ಬಂಗಾಳಿ ಭಾಷಾಂತರ 'ಭ್ರಾಂತಿ ವಿಲಾಸ್'ವನ್ನು (1876) ಕನ್ನಡಕ್ಕೆ ತಂದರು. ಇದು ಕನ್ನಡ ಕಾದಂಬರಿಗೆ ನಾಂದಿಯಾಯಿತು. ಇದರ ಪೀಠಿಕೆಯಲ್ಲಿ ವೆಂಕಟಾಚಾರ್ಯರು 'ಈ ದೇಶದ ಭಾಷೆಯಲ್ಲಿ ಇಂಥಾ ಪಾಠನೀಯವಾದ ಗ್ರಂಥಗಳು ಇಲ್ಲದೇ ಇರುವುದನ್ನು ದೊಡ್ಡ ಲೋಪವನ್ನಾಗಿಸಿದೆಯೆನಿಸಿದ್ದನ್ನು ಪೂರ್ತಿಗೈಯಬೇಕೆಂಬ ನನ್ನ ಉದ್ದೇಶಕ್ಕೆ ಪ್ರಕೃತ ಅಲ್ಪ ಪ್ರಯತ್ನವನ್ನು ಅಂಕುರಾರ್ಪಣವನ್ನಾಗಿ ವಹಿಸಿದೆನು' ಎಂದಿದ್ದಾರೆ. ಆಂಗ್ಲ ಸಂಪ್ರದಾಯವನ್ನು ನಮ್ಮ ಸಂಪ್ರದಾಯಕ್ಕೆ ಹೊಂದಿಸಿಕೊಳ್ಳಲಾಗದ ಮನಸ್ಥಿತಿಯನ್ನು ಲೇಖಕರು ಪೀಠಿಕೆಯಲ್ಲಿ ಹೇಳಿದ್ದಾರೆ - ''ಜೇಷ್ಠ ಸಂಜೀವಿಗೆ ಅತಿ ಹೇಯವಾದ ಸೂಳೆಯಮನೆಯಲ್ಲಿ ಭೋಜನ ಸನ್ನಿವೇಶವು ಉಚಿತವಾದರೂ ನಮ್ಮವರಿಗೆ ಅದು ಅಸಹ್ಯವಾದುದರಿಂದ ಅದರ ಪ್ರಸ್ತಾಪ ಇದರಲ್ಲಿ ಕೈಬಿಡಲಾಗಿದೆ''.

ವೆಂಕಟಾಚಾರ್ಯರ 'ದುರ್ಗೇಶ ನಂದಿನಿ' (1895) ಕನ್ನಡಕ್ಕೆ ಬಂಗಾಳಿಯಿಂದ ಬಂದ ಮೊದಲ ಐತಿಹಾಸಿಕ ಕಾದಂಬರಿ. ಇದರಲ್ಲಿ ದೇಶಪ್ರೇಮ, ತತ್ವಚಿಂತನೆ, ಧಾರ್ಮಿಕತೆ, ವೀರೇಂದ್ರಸಿಂಹನ ಮಗಳು ತಿಲೋತ್ತಮೆ- ಜಗತ್‌ಸಿಂಹನ

ಪ್ರೇಮ ಪ್ರಕರಣ, ವಿವಾಹಕ್ಕೆ ಒದಗಿದ ವಿಘ್ನ, ಅಕ್ಬರನು ರಾಜಪುತ್ರ ಹೆಣ್ಣನ್ನು ವರಿಸುವುದು ಮುಂತಾದ ವಿವರಗಳನ್ನೊಳಗೊಂಡ ಈ ಕಾದಂಬರಿ ಬಂಗಾಳಿಯಲ್ಲಿ 1865ರಲ್ಲಿ ರಚಿತವಾಗಿದ್ದು, 1893ಕ್ಕೆ 13 ಮುದ್ರಣಗಳನ್ನು ಕಂಡಿದೆ. ವೆಂಕಟಾಚಾರ್ಯರ ಅನುವಾದದ ಬಗ್ಗೆ ಮೈಸೂರು ಟೈಮ್ಸ್ ಪತ್ರಿಕೆ ಹೀಗೆಂದಿದೆ-

The translator is seen at his best when he enlists his discriptive faculty, Both passion and pang have been depicted in a most lively way. He has earned and deservedly, a high reputation as a canarese, writer, and the diction and style of the work under review are excellent and the copious admixture of sanskrit lends to it a dignity rarely to be excelled.[30]

ಬಂಕಿಮಚಂದ್ರರ ಒಟ್ಟು 8 ಐತಿಹಾಸಿಕ ಕಾದಂಬರಿಗಳನ್ನು ವೆಂಕಟಾಚಾರ್ಯರು ಕನ್ನಡಕ್ಕೆ ತಂದಿದ್ದಾರೆ. ಅದರಲ್ಲಿ 'ಆನಂದಮಠ' 'ದೇವಿಚೌಧುರಾಣಿ' 'ಸೀತಾರಾಮ' - ಈ ಮೂರು ಕಾದಂಬರಿಗಳು 'ಬಂಕಿಮತ್ರಯೀ' ಎಂದು ಬಂಗಾಳದಲ್ಲಿ ಹೆಸರುವಾಸಿಯಾಗಿದ್ದು, ಕನ್ನಡದಲ್ಲೂ ಖ್ಯಾತಿಗಳಿಸಿದೆ. 'ಕಪಾಲಕುಂಡಲ', 'ಮೃಣಾಳಿನಿ' 'ಚಂದ್ರಶೇಖರ' - ಈ ಮೂರು ಕೃತಿಗಳು ಪೂರ್ತಿಯಾಗಿ ಚಾರಿತ್ರಿಕ ಕಾದಂಬರಿಗಳಲ್ಲ. 'ಕಪಾಲಕುಂಡಲ'ದಲ್ಲಿ ಹೆಂಗಸರ ಪಾತಿವ್ರತ್ಯದ ಮಹತ್ವದ ಬಗ್ಗೆ ಹೇಳಿದ್ದಾರೆ. ಮೃಣಾಳಿನಿಯಲ್ಲಿ 'ಪ್ರೇಮ-ಪ್ರಣಯದ' ಬಗ್ಗೆ ಹೇಳಿದೆ. 'ಚಂದ್ರಶೇಖರ'ದಲ್ಲಿ ಕಥಾನಾಯಕಿ ಶೈವಲಿನಿಯನ್ನು ಅತ್ತ ಚಾರಿತ್ರಿಕ ವ್ಯಕ್ತಿಯೂ ಅಲ್ಲ ಇತ್ತ ಸಾಮಾಜಿಕ ವ್ಯಕ್ತಿಯೂ ಅಲ್ಲ ಎನ್ನುವಂತೆ ಚಿತ್ರಿಸಲಾಗಿದೆ. ಅವರ 'ರಾಜಸಿಂಹ' ಹಿಂದು ರಾಜರು ಇತರರಿಗಿಂತ ಏನೂ ಕಡಿಮೆ ಇಲ್ಲವೆಂದು ತೋರಿಸಿ ಹಿಂದುಗಳಲ್ಲಿ ಐಕ್ಯತೆ, ಧರ್ಮಜ್ಞಾನ, ದೇಶಪ್ರೇಮವನ್ನು ಪ್ರಚೋದಿಸಲು ರಚಿತವಾಗಿದೆ. ವೆಂಕಟಾಚಾರ್ಯರ ಅನುವಾದ ಶೈಲಿ ಹೀಗಿದೆ-

"………. ರಾಜಸ್ಥಾನದ ಪರ್ವತಪ್ರದೇಶದಲ್ಲಿ ರೂಪನಗರವೆಂಬ ಒಂದು ಚಿಕ್ಕದಾದ ರಾಜ್ಯವಿದ್ದಿತು. ರಾಜ್ಯ ಸಣ್ಣದಾಗಲಿ, ದೊಡ್ಡದಾಗಲಿ ಅದಕ್ಕೆ ರಾಜನೊಬ್ಬನು ಇರುವನಷ್ಟೆ. ರೂಪ ನಗರಕ್ಕೂ ರಾಜನೊಬ್ಬನು ಇದ್ದನು. ರಾಜ್ಯವು ಸಣ್ಣದಾದ ಮಾತ್ರಕ್ಕೆ ರಾಜನ ಹೆಸರು ದೊಡ್ಡದಾಗಿರುವುದಕ್ಕೆ ಯಾರ ಆಕ್ಷೇಪಣೆಯೂ ಇರಲಾರದು. ರೂಪನಗರದ ರಾಜನ ಹೆಸರು ವಿಕ್ರಮ ಸಿಂಹ. ವಿಕ್ರಮ ಸಿಂಹನ ಮಿಕ್ಕ ಪರಿಚಯವನ್ನು ಕಡೆಗೆ ವಿವರವಾಗಿ ಹೇಳುವೆವು."[31]

'ಆನಂದಮಠ'ದಲ್ಲಿ ವಂದೇ ಮಾತರಂ ಚಳುವಳಿ 1773-74ರ ಸನ್ಯಾಸಿ ವಿದ್ರೋಹ ವಿಸ್ತೃತವಾಗಿ ಮೂಡಿಬಂದಿದೆ. ಮುಸ್ಲಿಮರ ಆಳ್ವಿಕೆ ಬಗ್ಗೆ ತಿರಸ್ಕೃತಿ. ವಂಗ ದೊರೆಗಳ ಬಗ್ಗೆ ಅಭಿಮಾನ ಇಲ್ಲಿ ವ್ಯಕ್ತವಾಗಿದೆ. ಅನುವಾದದ ಭಾಷೆ ಕೃತಕವಾಗಿದ್ದು ಬರವಣಿಗೆ ಶಿಥಿಲವಾಗಿದೆ.

"ದೇವಿ ಚೌಧುರಾಣಿ" ಡಕಾಯಿತರ ಕುರಿತಾದ ಕತೆ. ಇದರಲ್ಲಿ ತತ್ವಜ್ಞಾನ, ಮಹಿಳೆಯರ ಕರ್ತವ್ಯದ ಬಗ್ಗೆ ಉಪದೇಶ, ಭಗವದ್ಗೀತೆಯ ಜ್ಞಾನ ಪ್ರತಿಪಾದಿಸಲಾಗಿದೆ. ಡಕಾಯಿತಿ ಕುರಿತಾಗಿರುವುದರಿಂದ ಓದುಗರು ಎಲ್ಲಿ ಲೇಖಕನನ್ನು ತಪ್ಪಾಗಿ ತಿಳಿಯುತ್ತಾರೋ ಎಂದು ವಿನಂತಿಸಿಕೊಳ್ಳುವ ಕ್ರಮ ಸ್ವಾರಸ್ಯವಾಗಿದೆ-

"ನಾವು ಮಾತು - ಮಾತಿಗೂ ಅರಣ್ಯದ ವಿಚಾರವನ್ನೇ ಹೇಳುತ್ತಿರುವೆವು. ಮಾತುಮಾತಿಗೂ ಡಕಾಯಿತಿಗಳನ್ನೇ ಹೇಳುತ್ತಿದ್ದೇವೆ. ಆದ್ದರಿಂದ ಪಾಠಕ ಮಹಾಶಯರು ನಾವು ಕೇವಲ ಅತ್ಯುಕ್ತಿಯನ್ನು ಹೇಳುತ್ತೇವೆ ಎಂದಾಗಲೀ ಅಥವಾ ಡಕಾಯಿತಿಯಲ್ಲಿ ಇಷ್ಟವುಳ್ಳವರೆಂದಾಗಲಿ ತಪ್ಪು ತಿಳಿಯಕೂಡದು. ನಾವಾವ ಕಾಲದ ಸಮಾಚಾರವನ್ನು ಹೇಳುತ್ತೇವೋ ಆ ಕಾಲದಲ್ಲಿ ದೇಶವೆಲ್ಲಾ ಅರಣ್ಯಮಯವಾಗಿದ್ದಿತು." (ಪುಟ 123)

'ಸೀತಾರಾಮ' ಒಬ್ಬ ಚಾರಿತ್ರಿಕ ವ್ಯಕ್ತಿಯ ಕುರಿತ ಕಾದಂಬರಿ. ಈ ಬಗ್ಗೆ 'ವೇಸ್ಟ್‌ಲ್ಯಾಂಡ್'ನ್ನು ಬರೆದ 'ಜೆಸ್ಸೂರ್' (ಯಶೋಹರ) ಕೃತಿಯಲ್ಲೂ ಸ್ಟಿವರ್ಟನು ಬರೆದ ಬಂಗಾಳದ ಇತಿಹಾಸದಲ್ಲಿ ಪ್ರಸ್ತಾಪವಿದೆ. ಇದೊಂದು ಭಾವ ಪ್ರಧಾನವಾದ ಕೃತಿ. ಕೃತಿಯಲ್ಲಿ ವ್ಯಾಕರಣ ವಿಚಾರ ಕುರಿತು ಲೇಖಕನ ವಿಶ್ಲೇಷಣೆ ವಿಡಂಬನಾತ್ಮಕವಾಗಿದೆ.

"......... ಯಥಾಕಾಲದಲ್ಲಿ ಸೀತಾರಾಮನು ಗೃಹಿಣಿಯ ಹತ್ತಿರ ಹೋದನು. ಗೃಹಿಣೀ ಎಂದು ಪ್ರಯೋಗ ಮಾಡಿದರೆ ಒಂದು ದೋಷಕ್ಕೆ ಕಾರಣವಾಗುವುದು. ಏತಕ್ಕೆಂದರೆ ಗೃಹಿಣೀ ಶಬ್ದವು ಏಕವಚನ. ಇತ್ತಲಾಗಿ ಗೃಹಿಣಿಯರು ಇರುವವರು ಇಬ್ಬರು. ಆದರೆ, ಕನ್ನಡ ಭಾಷೆಯಲ್ಲಿ ದ್ವಿವಚನವಿಲ್ಲ. ಅಲ್ಲದೆ ಗೃಹಿಣಿಯರಿಬ್ಬರನ್ನು ಒಂದೇ ತರವೇ ನೋಡಲು ಸಾಧ್ಯ ಇದು ಕಾರಣ ವೈಯಾಕರಣರಲ್ಲಿ ಕೈ ಮುಗಿದು ಕ್ಷಮಾ ಪ್ರಾರ್ಥನೆ ಮಾಡಿಕೊಂಡು ನಾವು ಗೃಹಿಣೀ ಎಂಬ ಶಬ್ದವನ್ನು ಪ್ರಯೋಗ ಮಾಡಿದ್ದೇವೆ"[32] ಕೃತಿಯಲ್ಲಿ ಪ್ರೇಮದ ಬಗ್ಗೆ ವ್ಯಾಖ್ಯಾನ, ಜ್ಯೋತಿಷ್ಯಶಾಸ್ತ್ರದ ಬಗ್ಗೆ ಪ್ರಾವಿಣ್ಯತೆ ವ್ಯಕ್ತವಾಗಿರುವುದು ಕಂಡುಬರುತ್ತದೆ.

ಬಿ. ವೆಂಕಟಾಚಾರ್ಯರು ರಮೇಶ್ ಚಂದ್ರದತ್ತರ 'ವಂಗವಿಜೇತ'ವನ್ನು ಕನ್ನಡಕ್ಕೆ ತಂದಿದ್ದಾರೆ. ಅಕ್ಬರನ ಆಡಳಿತ ಕಾಲದಲ್ಲಿ ಮಹಾಶ್ವೇತೆ ಎಂಬ ಸ್ತ್ರೀ ತನ್ನ ಗಂಡನ ಅನ್ಯಾಯವಾದ ಸಾವಿನ ವಿರುದ್ಧ ಸಿಡಿದೇಳುವುದು. ಆಕೆಗೆ ಸಹಾಯಕವಾಗಿ ಸುರೇಂದ್ರನಾಥನೆಂಬ ಸಾಹಸಿ ಬರುವುದು ಇದು 'ವಂಗ ವಿಜೇತ' ಕತೆ. ಇದು ಪೂರ್ಣ ಐತಿಹಾಸಿಕ ಕಾದಂಬರಿಯಲ್ಲ. ಅನುವಾದದಲ್ಲಿ ಕೆಲವೆಡೆ ನಡುಗನ್ನಡದ ಪ್ರಯೋಗವನ್ನು ದ್ವಿತೀಯಾ ವಿಭಕ್ತಿಯ ಹಳೆಯ ರೂಪವಾದ 'ಅಂ' ಪ್ರಯೋಗವನ್ನು (ಉದಾ : ಯುದ್ಧವಂ ಮಾಡಲು) ಪ್ರತಿ ಪರಿಚ್ಛೇದ ಆರಂಭದಲ್ಲಿ ಇಂಗ್ಲಿಷ್ ಕವಿಗಳ ಪದ್ಯವನ್ನು ಕಾಣಬಹುದು. ಈ ಪದ್ಯಗಳ ಭಾವನೆ ಆಯಾ ಪರಿಚ್ಛೇದದಲ್ಲಿ ಬಿಂಬಿತವಾಗಿದೆ.

ವೆಂಕಟಾಚಾರ್ಯರು ನವಿನಾಲ ಸಂದ್ಯೋಪಾಧ್ಯಾಯರ 'ಅಮೃತಪುಲಿನ' (1907)ನ್ನು ಅನುವಾದಿಸಿದ್ದಾರೆ. ಅಕ್ಬರ ಹಾಗೂ ರಜಪೂತ ಯೋಧ ಅಜಯಸಿಂಹರೊಳಗೆ ಹೆಣೆದ ಕತೆ ಇದು. ಇದು ಬಂಗಾಳಿಯಿಂದ ಕನ್ನಡಕ್ಕೆ ಬಂದ ಎರಡನೇ ಕೃತಿ. ಇಲ್ಲಿ ಚುಂಬನ, ಆಲಿಂಗನ ಇತ್ಯಾದಿ ಪದಗಳನ್ನು ಸುಲಭವಾಗಿ ಬಳಸಲಾಗಿದೆ. ಇದರ ಅನುವಾದ ಮೊದಲು 'ವಾಗ್ಭೂಷಣಾ' ಪತ್ರಿಕೆಯಲ್ಲಿ ಧಾರವಾಹಿಯಾಗಿ ಪ್ರಕಟವಾಗಿತ್ತು.

ವೆಂಕಟಾಚಾರ್ಯರು ದಾಮೋದರ ಮುಖ್ಯೋಪಾಧ್ಯಾಯರ 'ಮೃಣ್ಮಯಿ' 'ಶಾಂತಿ' 'ನವಾಬ ನಂದಿನಿ' 'ಸರದೆ' 'ನೀಳಾಗೀತ' 'ಮೃಣಾಳಿನಿ' 'ಮಾಲತಿ' 'ಮಂಗಳಾಂಗುಳೀಯ' 'ವೆನಿಸ್ ನಗರದ ಪತನ' ಕೃತಿಗಳನ್ನು ಅನುವಾದಿಸಿದ್ದಾರೆ. ಅನುವಾದ ಇಲ್ಲಿ ಅಲಂಕಾರಿಕವೂ ಕ್ಲಿಷ್ಟವೂ ಆಗಿದ್ದು ದೊಡ್ಡ ದೊಡ್ಡ ವಾಕ್ಯಗಳಿಂದಾಗಿ ಅರ್ಥ ಸ್ಪಷ್ಟತೆ ಇರುವುದಿಲ್ಲ.

''ವೆಂಕಟಾಚಾರ್ಯರು ಯಥಾವತ್ತಾಗಿ ತರ್ಜುಮೆ ಮಾಡಿದ್ದಾರೆ ಅಥವಾ ಅಲ್ಲಲ್ಲಿ ಒಂದೆರಡು ಮಾತುಗಳನ್ನು ಅಥವಾ ಅಲ್ಲಲ್ಲಿ ವಾಕ್ಯಗಳನ್ನು ಬದಲಾಯಿಸಿದ್ದರೂ, ಬಿಟ್ಟಿದ್ದರೂ, ಸೇರಿಸಿದ್ದರೂ ಬಂಕಿಂಮಚಂದ್ರರ ಗ್ರಂಥಗಳಿಗೂ ಇವರ ತರ್ಜುಮೆಗಳಿಗೂ ಒಟ್ಟು ಅಭಿಪ್ರಾಯಗಳಲ್ಲಿ ಅಥವಾ ಕಾವ್ಯ ಶೋಭೆಯಲ್ಲಿ ಹೆಚ್ಚು ವ್ಯತ್ಯಾಸವಾಗಲಾರದು.''[33]

ವೆಂಕಟಾಚಾರ್ಯರು ಬಂಗಾಳಿಯಲ್ಲಿ ಬರುವ ಬಹು ಸಂಸ್ಕೃತ ಶಬ್ದಗಳನ್ನು ತಮ್ಮ ಗ್ರಂಥಗಳಲ್ಲಿ ಉಪಯೋಗಿಸಿ ಕನ್ನಡ ಭಾಷೆಯನ್ನು ಪುಷ್ಟೀಕರಿಸಿದರು. ಈ ಮಧ್ಯೆ ಅವಶ್ಯವಲ್ಲದ ಪಡಸಾದ ಸಂಸ್ಕೃತ ಶಬ್ದಗಳೂ ಬಂದು ಸೇರಿಕೊಂಡವು. ಇದನ್ನು ಅವರ ಮಿತ್ರರು ಬಿ. ವೆಂಕಟಾಚಾರ್ಯರ ಗಮನಕ್ಕೆ ತಂದಾಗ ತಮ್ಮ ಮುಂದಿನ ಅನುವಾದಗಳಲ್ಲಿ ಹೆಚ್ಚಾಗಿ ಕನ್ನಡ ಪದಗಳನ್ನೇ ಉಪಯೋಗಿಸಲು ಪ್ರಯತ್ನಪಟ್ಟಂತೆ ತೋರುತ್ತದೆ. ಇದರಿಂದ ಕನ್ನಡ ಜಾಯಮಾನಕ್ಕೊಗ್ಗದ ಅನೇಕ ಪದಗಳು ಅವರ ಅನುವಾದಗಳಲ್ಲಿ ಕಂಡು ಬಂದವು.

''ಸ್ವತಂತ್ರ ಕಾದಂಬರಿಗಳನ್ನು ವೆಂಕಟಾಚಾರ್ಯರು ರಚಿಸಲಿಲ್ಲವಾದರೂ ತಮ್ಮ ಅಪಾರವಾದ ಅನುವಾದಗಳ ಮೂಲಕ ಕನ್ನಡಿಗರಲ್ಲಿ ಓದುವ ಹವ್ಯಾಸವನ್ನು ಬೆಳೆಸಿದರು. ಕನ್ನಡದಲ್ಲಿ ಕಾಂಬರಿಗಳಿಲ್ಲವೆಂಬ ಕೊರತೆಯನ್ನು ನೀಗಿಸಿದರು. ಭಾಷಾಂತರಕಾರರಾದರೂ 'ಕರ್ನಾಟಕ ಕಾದಂಬರಿ ಪಿತಾಮಹ'ರೆಂದು ಕರೆಯಲ್ಪಡಬಹುದಾದ ಬಿ. ವೆಂಕಟಾಚಾರ್ಯರು ತಮ್ಮ ಭಾಗ್ಯೋದಯದಿಂದಲೂ, ಕನ್ನಡಿಗರ ಭಾಗ್ಯೋದಯದಿಂದಲೂ ಬಂಗಾಳಿ ದೇಶದ ಕಾದಂಬರಿ ಖನಿಯಿಂದ ಇಂಥ ಅಮೋಘವಾದ ರತ್ನಗಳನ್ನು ಆರಿಸಿಕೊಂಡು ಬಂದು ಕನ್ನಡ ದೇಶದಲ್ಲಿ ಅವುಗಳನ್ನು ಪ್ರಚಾರ ಮಾಡಿದರು. ಒಟ್ಟಿನಲ್ಲಿ ವೆಂಕಟಾಚಾರ್ಯರು ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಒಂದು ಶಾಶ್ವತವಾದ ಸ್ಥಾನವನ್ನು ಪಡೆದು ಕನ್ನಡಿಗರ ಗೌರವಕ್ಕೆ ಪಾತ್ರರಾಗಿದ್ದಾರೆ.''[34]

ವೆಂಕಟಾಚಾರ್ಯರ ಬಂಗಾಳಿ ಕೃತಿಗಳ ಅನುವಾದದ ಬಗ್ಗೆ ಸಾಕಷ್ಟು ವಿಮರ್ಶೆಗಳು ಬಂದಿವೆ. ''ವೆಂಕಟಾಚಾರ್ಯರ ಕಾದಂಬರಿಗಳಲ್ಲಿ ಕಂಡುಬರುವ ಭಾಷೆ ನೋಡುವುದಕ್ಕೆ ಕನ್ನಡ, ಅದರ ಶೈಲಿ ವಂಗ ಭಾಷೆಯದು. ಅದು ಕನ್ನಡಕ್ಕೆ ಅನುವಾದಿತವಾದ ಬಂಕಿಮಚಂದ್ರರ ಶೈಲಿ ಅನ್ನಬೇಕು. ಆದ್ದರಿಂದ ಶೈಲಿಯ ಬಗ್ಗೆ ಏನನ್ನಾದರೂ ಹೇಳುವುದು ಬಂಕಿಂಚಂದ್ರರ ಶೈಲಿಯನ್ನು ಕುರಿತು ಮಾತಾಗಬಹುದು. ಆದರೂ ಸಂಸ್ಕೃತ ಮಿಶ್ರಿತವಾದ ಕನ್ನಡ ತನ್ನ ರಮ್ಯತೆಯಿಂದ ಮನಸ್ಸನ್ನು ಸೆರೆಹಿಡಿಯುತ್ತದೆ.''[35]

''ವೆಂಕಟಾಚಾರ್ಯರ 'ಆನಂದಮಠ' ಮೊದಲಾದ ಕಾದಂಬರಿಗಳಲ್ಲಿ ಪ್ರಕೃತಿ ವರ್ಣನೆ ಹಾಗೂ ಸ್ತ್ರೀ ವರ್ಣನೆಗಳು ಸಂಪ್ರದಾಯಬದ್ಧವಾಗಿ ಕೇವಲ ಶಬ್ದ ಪ್ರೌಢಿಮೆಯಿಂದಲೇ ಶೋಭಾಯಮಾನವಾಗಿವೆ. ಆದರೆ ಕುತೂಹಲಜನಕವಾದ ಕಥೆಯ ವಿಸ್ತಾರ, ಸನ್ನಿವೇಶಗಳ ಚಮತ್ಕೃತಿ, ಈ ಕಾದಂಬರಿಯ ಒಳ್ಳೆಯ ಲಕ್ಷಣಗಳಾಗಿವೆ. 'ದೇವಿ ಚೌಧುರಾಣಿ'ಯಂಥ ಕೃತಿಗಳು ಸ್ವತಂತ್ರವೆನ್ನುವಷ್ಟು ಜೀವಂತವಾಗಿವೆ. ಸಂಭಾಷಣೆ, ಪರಿಸರ ನಿರ್ಮಾಣ ಮುಂತಾದವುಗಳಲ್ಲಿ ವಿದೇಶೀಯತೆಯ ಪ್ರಭಾವ ಎಲ್ಲಾ ಕಾದಂಬರಿಗಳಲ್ಲಿಯೂ ಅನುಭವಕ್ಕೆ ಬರುತ್ತದೆ. ಕಥಾನಕದ ಹೊಸತನ, ಇತಿಹಾಸದ ಅದ್ಭುತ ರಮ್ಯತೆ, ಗದ್ಯಕ್ಕೆ ಸಹಜವಾಗಿರುವ ಆತ್ಮೀಯತೆ ಇವು ಜನರ ಮನಸ್ಸನ್ನು ಸೂರೆಗೊಂಡಿದ್ದರಿಂದ ಈ ಕೊರತೆಗಳು ಆಗಿನ ಕಾಲಕ್ಕೆ ಕಾಣಿಸಲಿಲ್ಲ.

ಪ್ರಮುಖ್ಯವಾಗಿ ಕಂಡುಬಂದಿರಲಿಕ್ಕಿಲ್ಲ.''[36] ''ವೆಂಕಟಾಚಾರ್ಯರ ಕಾದಂಬರಿಗಳಲ್ಲಿ ಆಕರ್ಷಣೆ ಪ್ರಮುಖ ಕಾರಣ ಅವುಗಳ ಕಥಾನಕ, ಪಾತ್ರಗಳು, ಸಂಭಾಷಣೆ, ವಾತಾವರಣ ಈ ಮೊದಲಾದವುಗಳಲ್ಲಿ ಕಂಡು ಬಂದ ವಿದೇಶಿಯ ರಮ್ಯತೆ''[37] ಎಂದು ಕಿತ್ತೂರರು ಎತ್ತಿ ಹಿಡಿದಿದ್ದಾರೆ. ''ಗಳಗನಾಥರ ಕಾದಂಬರಿಗಳಿಗಿಂತ ಸನ್ನಿವೇಶ ನಿರ್ಮಾಣ, ಚಿತ್ರಣ ವರ್ಣನೆಗಳು ವೆಂಕಟಾಚಾರ್ಯರಲ್ಲಿ ಹೆಚ್ಚು ರಮ್ಯತೆಯನ್ನು ಪಡೆದಿವೆ. ವೆಂಕಟಾಚಾರ್ಯರು, ಅನುವಾದಿಸುವಾಗ ಮೂಲವನ್ನು ಇದ್ದಕ್ಕಿದ್ದ ಹಾಗೆಯೇ ಕನ್ನಡಕ್ಕೆ ತಂದುದು ಅವರ ಶೈಲಿಯಿಂದ ಗೊತ್ತಾಗುತ್ತದೆ. ಕೆಲವೆಡೆ ಒಂದೆರಡು ಮಾತುಗಳು ಅಥವಾ ವಾಕ್ಯಗಳನ್ನು ಬದಲಾಯಿಸಿರಬಹುದು. ಗಳಗನಾಥರದ್ದು ಅಕ್ಷರಶಃ ಅನುವಾದವಲ್ಲ. ಕೆಲವೆಡೆ ಕಥಾವಸ್ತುವನ್ನು ಮಾತ್ರ ಆಯ್ದುಕೊಂಡು ತಮ್ಮದೇ ಕಲ್ಪನೆ ಹಾಗೂ ಭಾಷೆಗಳಲ್ಲಿ ವಿಸ್ತರಿಸಿದ್ದು ಗೊತ್ತಾಗುತ್ತದೆ.''[38]

ವೆಂಕಟಾಚಾರ್ಯರ ಕಾದಂಬರಿಗಳು ಭಾಷಾಂತರವಾದರೆ ಗಳಗನಾಥರ ಕಾದಂಬರಿಗಳು ಅನುವಾದವೆಂದು ಕರೆಯಬಹುದು. ಇಬ್ಬರ ಧೋರಣೆ ಜನರಲ್ಲಿ ವಾಚನಾಭಿರುಚಿ ಹುಟ್ಟಿಸುವುದು. ಬರವಣಿಗೆಯಲ್ಲಿ ವೆಂಕಟಾಚಾರ್ಯರು ಹಾಸ್ಯಕ್ಕೆ ಒತ್ತು ಕೊಟ್ಟಿದ್ದರೆ ಗಳಗನಾಥರು ನೈತಿಕ ಧಾರ್ಮಿಕ ಗುಣಗಳ ಬೋಧನೆಗೆ ಒತ್ತುಕೊಟ್ಟಿದ್ದಾರೆ, ಅದರಲ್ಲೂ ಮುಖ್ಯವಾಗಿ ದೇಶಾಭಿಮಾನಕ್ಕೆ ಹಾಗೂ ಭಾಷಾಭಿಮಾನಕ್ಕೆ ತನ್ಮೂಲಕ ಕನ್ನಡ ಸಾಹಿತ್ಯದ ಬೆಳವಣಿಗೆಗೆ.

ಕಾದಂಬರಿಕಾರರು ಸಾಮಾನ್ಯವಾಗಿ ವಿವರಣಾತ್ಮಕ ಶೈಲಿಯನ್ನು ಬಳಸಿಕೊಂಡಿದ್ದಾರೆ. ''ಹೇಳಿಕೆ''ಗಳ ಮೂಲಕ ಕಥೆ ಹೇಳುವ ಕ್ರಮವನ್ನು ವೆಂಕಟಾಚಾರ್ಯರು ಬಂಗಾಳಿಯಿಂದ ಕನ್ನಡಕ್ಕೆ ತಂದಿದ್ದಾರೆ. ಈ ಶೈಲಿ ಇಂಗ್ಲಿಷಿನಿಂದ ಬಂದುದು. ಇದರಿಂದ ಸಂಭಾಷಣೆ ನಾಟಕದ ಶೈಲಿಗೆ ಬಂದುದನ್ನು ಕಾಣಬಹುದು. ಇದರಿಂದಾಗಿ ಕಥೆ ಕಾದಂಬರಿ ಚೌಕಟ್ಟಿನಿಂದ ಜಾರಿದುದು ಗೋಚರವಾಗುತ್ತದೆ. ಈ ಶೈಲಿ ಕೃತಿಯ ಒಟ್ಟು ಬಂಧಕ್ಕೆ ಕುಂದುತಂದಂತೆ ಕಾಣುತ್ತದೆ.

ಭಾರತೀ ಸಂಪಂಗಿರಾಮರವರು ರಮೇಶ್‌ಚಂದ್ರದತ್ತರ 'ಮಾಧವೀ ಕಂಕಣ'ವನ್ನು (1914) ಅನುವಾದಿಸಿದ್ದು, ಬಂಗಾಳಿ ಭಾಷೆಯ ತಿಳುವಳಿಕೆ ಇಲ್ಲದೇ ಅನುವಾದ ಮಾಡಿರುವುದು ತಿಳಿದುಬರುತ್ತದೆ. (ಆಧಾರ : ಪೀಠಿಕೆ). ಇದು ಕೂಡ ಅಕ್ಬರನ ಕಾಲಕ್ಕೆ ಸಂಬಂಧಿಸಿದ್ದು ಇದನ್ನು ರಮೇಶ್‌ಚಂದ್ರ ದತ್ತರು ಇಂಗ್ಲಿಷಿನ 'ಸ್ಲೇವ್‌ಗರ್ಲ್ ಆಫ್ ಆಗ್ರಾ'ದಿಂದ ಬಂಗಾಳಿಗೆ ಅನುವಾದಿಸಿದ್ದಾರೆ.

ನಾ. ವೆಂ. ಕರಡಿ : ಐತಿಹಾಸಿಕ ಕೃತಿ ಪದ್ಮಿನಿ (1919)ಯನ್ನು ಬಂಗಾಳಿಯಿಂದ ಅನುವಾದಿಸಿದ್ದಾರೆ. ಇದರಲ್ಲಿ ಅಲ್ಲಾವುದ್ದೀನ್ ಖಿಲ್ಜಿ ಚಿತ್ತೂರನ್ನು ಮುತ್ತಿಗೆ ಹಾಕಿದಾಗ ರಾಣಿ ಪದ್ಮಿನಿ ತೋರಿಸಿದ ಅಪ್ರತಿಮ ಸಾಹಸದ ಕಥೆ ಇದೆ. ಪದ್ಮಿನಿಯ ಸಾಹಸದ ಜೊತೆಗೆ ಅವಳ ಉಜ್ವಲ ಗುಣಗಳು ಈ ಕಾದಂಬರಿಯಲ್ಲಿ ವರ್ಣಿತವಾಗಿದೆ.

ಎಂ. ಪಿ. ಪೂಜಾರ್‌ರವರು ಕೃಷ್ಣ ವಿಹಾರಸೇನ್‌ರವರ 'ಅಶೋಕ ಅಥವಾ ಪ್ರಿಯದರ್ಶಿಕೆ'ಯನ್ನು (1919 ರಲ್ಲಿ) ಅನುವಾದಿಸಿದರು. ಅಶೋಕನ ಕುರಿತಾದ ಕೃತಿ ಕನ್ನಡಕ್ಕೆ ಪರಿಚಯಿಸುವುದು ಲೇಖಕರ ಉದ್ದೇಶವಾಗಿತ್ತು (ಪ್ರಸ್ತಾವನೆ ಪುಟ 3). ಕೃತಿಯ ಕೊನೆಯಲ್ಲಿ ಮೌರ್ಯವಂಶದ ಉತ್ಪತ್ತಿಯ ಬಗ್ಗೆ ಬೇರೆ ಬೇರೆ ಲೇಖಕರು ಕೊಡುವ ಆಧಾರ

ಕೊಡಲಾಗಿದೆ (ಪುಟ 168-176). ಇದನ್ನು ಕಾದಂಬರಿ ಎನ್ನುವುದಕ್ಕಿಂತ ಐತಿಹಾಸಿಕ ದಾಖಲೆಗಳ ಸಂಶೋಧನೆ ಎನ್ನಬಹುದು.

ಹೊಸಗನ್ನಡದ ಆರಂಭದ ಕಾಲದಲ್ಲಿ ಸ್ವತಂತ್ರ ವಸ್ತು ವಿಚಾರಗಳನ್ನೊಳಗೊಂಡ ಕಾದಂಬರಿ ರಚನೆಗಿಂತ ಐತಿಹಾಸಿಕ ವಸ್ತುವನ್ನಾಧರಿಸಿಕೊಂಡು ಕೃತಿ ರಚಿಸುವುದು ಸುಲಭವೆಂದು ಅಂದಿನ ಲೇಖಕರು ಮನಗಂಡಿದ್ದರು. ಜನರ ಬೇಡಿಕೆ ಕೂಡ ಅದಾಗಿತ್ತು. ಹಾಗಾಗಿ ಹೆಚ್ಚಿನ ಕೃತಿಗಳು ಪೂರ್ಣ ಐತಿಹಾಸವೂ ಆಗದೆ ಕಾಲ್ಪನಿಕವೂ ಆಗದೇ ಇರುವುದು ಕಂಡುಬರುತ್ತದೆ. ಈ ಕೃತಿಗಳಲ್ಲಿ ಮುಖ್ಯವಾಗಿ ದೇಶಪ್ರೇಮ ಪ್ರಚೋದನೆ, ಸ್ತ್ರೀವಿದ್ಯಾಭ್ಯಾಸ ಮುಂತಾದವನ್ನು ಪ್ರತಿಪಾದಿಸುವುದು ಉದ್ದೇಶವಾಗಿದೆ. ಅನುವಾದದ ಭಾಷೆಯಲ್ಲಿ ಸಂಸ್ಕೃತ ಮತ್ತು ಪ್ರೌಢಿಮೆಗೆ ಒತ್ತುಕೊಡುವುದರಿಂದ ಜಟಿಲತೆ ಕಂಡು ಬರುತ್ತದೆ. ಲೈಂಗಿಕತೆಯನ್ನು ಚಿತ್ರಿಸಲು ಅಸಹ್ಯಪಟ್ಟುಕೊಂಡಿರುವುದು ದೇವಿ ಚೌಧುರಾಣಿಯಲ್ಲಿ ಕಾಣಬಹುದು.

ಯನ್. ರಾಜಗೋಪಾಲಕೃಷ್ಣ ರವರು ಹರಿಪ್ರಸಾದ್ ಶಾಸ್ತ್ರಿಗಳ ಪೌರಾಣಿಕ ಕಾದಂಬರಿ 'ಜಯ ವಾಲ್ಮೀಕಿ'ಯನ್ನು ಕನ್ನಡೀಕರಿಸಿದರು. ಕಡೆಯ ಪೂರ್ವಾರ್ಧದಲ್ಲಿ ವಾಲ್ಮೀಕಿ ಕಥೆಯು ಉತ್ತರಾರ್ಧದಲ್ಲಿ ವಿಶ್ವಾಮಿತ್ರನ ಕಥೆಯು ಇದ್ದು ಕೊನೆಯಲ್ಲಿ ಶ್ರೀರಾಮನು ಪ್ರತ್ಯಕ್ಷವಾಗಿ 'ಜಯ ವಾಲ್ಮೀಕೀ' ಆಗುತ್ತಾನೆ (ಪುಟ 100). ವಿಶ್ವಾಮಿತ್ರನ ಕಥೆಯ ಕೊನೆಗೆ 'ಜಯ ವಾಲ್ಮೀಕಿ' ಅನ್ನುವುದು ಯಾವ ರೀತಿ ಎಂದು ಎಲ್ಲೂ ವಿವರ ನೀಡಿಲ್ಲ. ಕನ್ನಡದೊಡನೆ ಸಂಸ್ಕೃತ ಬೆರೆಸಿ ಅನುವಾದ ಪ್ರೌಢವಾಗಿರಬೇಕೆಂಬುದು ಅವರ ವಾದ. ಅವರ ಅನುವಾದ ಹೀಗಿದೆ -

"ವರ್ಷಾ ನಿಶ್ಶೇಷಿತ, ಶರತೆ ಉಪಸ್ಥಿತ, ಆಕಾಶವು ಪರಿಷ್ಕಾರ, ಮೋಡ ಲೇಶ ಮಾತ್ರವು ಇಲ್ಲ. ಸರ್ವತ್ರ ನೀಲವರ್ಣ, ಘನನೀಲ, ಅತ್ಯಂತ ಪ್ರಗಾಢವಾದ ನೀಲವರ್ಣ; ವರ್ಣನಾತೀತವಾದ ಮನಮೋಹಕವಾದ ಅಗಾಧ ನೀಲವರ್ಣದ ಶೋಭಾರಾಶಿಯೊಳಗಿಂದ ದೊಡ್ಡ ದೊಡ್ಡ ನಕ್ಷತ್ರಗಳು ವಿಶೇಷವಾಗಿ ಪ್ರಭೆಯೊಂದಿಗೆ ಉಜ್ವಲವಾಗಿ ಜ್ವಲನ ಮಾಡುತ್ತಲಿದೆ" (ಪುಟ-1-2). ಅಲ್ಲದೆ ಲೇಖಕರು ಅವಂತಿಸಲ್ಪಟ್ಟು, ನಿಮ್ಮ ಬೆಂದಕ, ಅಂಬರದಾಗೆ, ಖಿಘು ಹಂಪಾಳ ಮುಂತಾದ ವಿಶಿಷ್ಟ ಪದಯೋಗಗಳನ್ನು ಮಾಡಿದ್ದಾರೆ.

ಚಿ. ವಾಸುದೇವಯ್ಯ ನವರ 'ಭೀಷ್ಮ ಚಿಂತೆ' ಬಂಗಾಳಿಯಿಂದ ಕನ್ನಡಕ್ಕೆ ಬಂದ ಪೌರಾಣಿಕ ಕಾದಂಬರಿ.

ಬಿ. ವೆಂಕಟಾಚಾರ್ಯರು ಅನುವಾದಿಸಿದ ವಾಂಚ ಕೊಡಿದೇ ರವರ 'ಪರಿಮಣಾ' (1902) ಕನ್ನಡಕ್ಕೆ ಬಂದ ಮೊದಲ ಪತ್ತೇದಾರಿ ಕಾದಂಬರಿ: ಕನ್ನಡದಲ್ಲಿ ಪತ್ತೇದಾರಿ ಕಾದಂಬರಿಗಳ ಕೊರತೆಯನ್ನು ನೀಗಿಸುವುದು ಅವರ ಉದ್ದೇಶ. ಕಥೆಯಲ್ಲಿ .5 ಭಾಗಗಳಿದ್ದು ಕುತೂಹಲಕಾರಿಯಾಗಿದೆ. ನಾಯಕಿ ವಿಮಲೆಯ ಕೊಲೆಗೆ ಸಂಬಂಧಿಸಿದಂತೆ ಹಣೆದ ಈ ಕಥೆ ಸುಖಾಂತವಾಗಿ ಮುಗಿಯುತ್ತದೆ. ಕಥೆಯಲ್ಲಿನ 'ಸಂಧ್ಯಾಕಾಲದ' ವರ್ಣನೆ ಸ್ವಾರಸ್ಯಕರವಾಗಿದೆ -

'ಸಂಧ್ಯಾಗೋಧೂಳಿ ಗಗನ ವ್ಯಾಪಿಯಾಗಿ ಕೊನೆಗೆಲ್ಲಾ ಕ್ರಮವಾಗಿ ವಿಲೀನವಾಗುತ್ತಾ ಬಂತು. ಎದುರಿಗೆ ರಾಕ್ಷಸಿಯಾದ ಯಾಮಿನಿಯು ಕೊನೆಗಾಣದ ಅಂದಕಾಣದ ವದನವನ್ನು ತೆರೆದುಕೊಂಡು ಅಪೂರ್ವಕಾಂತಿಯನ್ನು ಗ್ರಾಸ ಮಾಡುತ್ತಿದ್ದಳು.

ಮೃದುವಾದ ಸಮೀಕರಣವು ಬೀಸಿ ಬೀಸಿ ಬರುತ್ತಿದ್ದು ಮಧ್ಯೆ ಮಧ್ಯೆ ಯಾಮಿನಿಯು ಓಂಕಾಮಯವಾದ ಸಂಧ್ಯೆಯು ತನ್ನ ಸೊಬಗುಗಳೆಲ್ಲಾ ಕ್ಷಯವಾಗಿ ಹೋದುದನ್ನು ಕಂಡು ಮಲಿನವಾಗಲಾರಂಭಿಸಿ ಬಿಸು ಸುಯ್ದು ಅತ್ತಳು. ಬಿರುಗಾಳಿ ಎದ್ದಿತು. (ಪುಟ್ಟ 36).

ವೆಂಕಟಾಚಾರ್ಯರು ಪಂಚಗೋಡಿದೇ ರವರ 'ಮನೋರಮೆ' (1907) ಎಂಬ ಪತ್ತೇದಾರಿ ಕಾದಂಬರಿ ಅನುವಾದಿಸಿದ್ದಾರೆ. ಜಮಿಲೆ ಎಂಬ ಸ್ತ್ರೀಯ ಅಪಹರಣ, ಪತ್ತೇದಾರಿ ಮಾರುವೇಷದಿಂದ ಕೊನೆಗೆ ಅಪಹೃತರನ್ನು ಕಂಡು ಹಿಡಿಯುವುದು ಇದರ ಕಥಾವಸ್ತುವಾಗಿದೆ. ಕೆಲವಡೆ ಪತ್ತೇದಾರ ತತ್ವಜ್ಞಾನಿಯಂತೆ ಮಾತಾನಾಡುತ್ತಾನೆ. ದೀರ್ಘವಾಕ್ಯದ ಸಂಧ್ಯಾಕಾಲದ ವರ್ಣನೆ ಈ ಕಾದಂಬರಿಯಲ್ಲಿ ಬರುತ್ತದೆ-

'ಬಂಗಾರದ ಕಾಂತಿಯುಳ್ಳ ಬಿಸಿಲ ರಶ್ಮಿಯು ಮರಗಳ ಕಾಂಡದಲ್ಲಿಯೂ ಹಚ್ಚುವ ಹೊಸ ಹೊಸ ಚಿಗುರೆಲೆಗಳಲ್ಲಿಯೂ ದೊಡ್ಡ ದೊಡ್ಡ ಮಹಡಿಯ ಮೇಲಿನ ಬಿಳುಪಾದ ಗೋಡೆಯ ಮೇಲೂ ಸರ್ಪದ ಹಾಗೆ ನಲಿಯುತ್ತಲೂ ಅಲಗುಗಳ ಹಾಗೆ ಏರುತಗ್ಗಾಗಿ ಕುಣಿದಾಡುತ್ತಲು ಭ್ರಮರದ ಹಾಗೆ ಕಪ್ಪಾಗಿಯೂ ಸಂಜೆಯ ಮಾಗಾಳಿಯಲ್ಲಿ ಅಲ್ಪಸ್ವಲ್ಪ ಅಲುಗಾಡುತ್ತಲೂ ಇದ್ದ ಮುಸ್ತವೇಣಿಯುಳ್ಳವರಾಗಿ ಮಹಡಿಯ ಮೇಲೆ ನಾನಾವಿಧ ವಸ್ತುಗಳನ್ನಿಟ್ಟು ನಿಂತಿದ್ದ ಮೌನ ಸುಂದರಿಯವರ ಮುಂಗುರುಳ ಮೇಲೂ ಪಕ್ವವಾದ ಹೂವಿನ ಹೆಣ್ಣಿನ ಶಂಗಿ ಕಪೋಲಗಳ ಮೇಲೋ ಅವುಗಳ ಮಧ್ಯ ಇದ್ದ ಹೆಚ್ಚು ರಕ್ತ ವರ್ಣದ ತುಟಿಗಳಲ್ಲಿಯೂ ಮನ್ಮಥ ಸ್ವಪ್ನ ಶಯ್ಯೆಗೆ ಸಮನಾದ ಇಂಪಾದ ಕಣ್ಣುಗಳಲ್ಲಿಯೂ ಸಪ್ತಮಿಯ ಚಂದ್ರನ ಹಾಗಿದ್ದ ಹಣೆಯಲ್ಲಿಯೂ ಗ್ರಾಮಕ್ಕೆ ಒಂದು ಪಾರ್ಶ್ವದಲ್ಲಿ ಹರಿಯುತ್ತಿದ್ದ ಅಲೆಗಳಿಲ್ಲದ ಅನಂತವಾದ ಗಂಗಾನದಿಯ ನೀರಿನ ರಾಶಿಯ ಮೇಲೂ ಪ್ರಕಾಶಿಸುತ್ತಿದ್ದ ಸುಂದಿರಿಯಾದ ಸಂಧ್ಯಾ ಬಾಲೆಯನ್ನು ತಕ್ಕ ಉಡುಗೆ ತೊಡುಗೆಗಳಿಂದ ಅಲಂಕರಿಸಿತು.'' (ಪುಟ 50).

ಸಾಮಾಜಿಕ ಹಾಗೂ ಕಾಲ್ಪನಿಕ ಕೃತಿಗಳಲ್ಲಿ ವೆಂಕಟಾಚಾರ್ಯರು ಅನುವಾದಿಸಿದ ಜೋಗಿಂದ್ರನಾಥ್ ಚಟ್ಟೋಪಾಧ್ಯಾಯರ 'ಅಡವಿಯ ಹುಡುಗಿ' (1899), 'ಲೀಲೆ' (1901), 'ಹಜನಿ' (1898), 'ವಿಷವೃಕ್ಷ' ಮುಖ್ಯವಾದವು. 'ಅಡವಿಯ ಹುಡುಗಿ' ಮನೆಯ ಹುಡುಗಿ ಆಗುವುದು ಮೊದಲ ಕಾದಂಬರಿಯಾದರೆ ಸೋಮನಾಥನೆಂಬ ಶ್ರೀಮಂತ ಲೀಲೆ ಎಂಬ ಬಡವರ ಸುಸಂಸ್ಕೃತ ಹುಡುಗಿಯನ್ನು ಮದುವೆಯಾಗುವುದು 'ಲೀಲೆ'ಯಲ್ಲಿ ಕಂಡುಬರುತ್ತದೆ. ವೆಂಕಟಾಚಾರ್ಯರ ಶೈಲಿ ಕೂಡ ಇಲ್ಲಿ ಬದಲಾವಣೆಯಾಗಿದೆ.

''ನಮ್ಮ ಏಳಿಗೆಯನ್ನು ಕಂಡು ನಮ್ಮ ಊರವರಾರು ತಾಳಲಾರರು. ಪರರನ್ನು ಹಳಿಯುವುದಕ್ಕೆ ಅಮಿಲಿಕೆಯಾಗಿ ಇಲ್ಲದ ಮಾತುಗಳನ್ನು ಹವಣಿಸಿ ಆಡುವುದು ತಮ್ಮವರಿಗೆ ಸ್ವಾಭಾವಿಕವಾಗಿ ಬಂದುದು. ನಾವು ಹಳವಿಸುವಂತೆ ಮಾಡಲು ನಾನಾ ಜನರಿಗೆ ನಾನಾ ಮಾತುಗಳನ್ನು ಊಹೆಕಟ್ಟಿ ಹರಡುತ್ತಿರುವರು.'' (ಪುಟ 36)

ವಿಕ್ಕೀ ಕಾಲಿನ್ಸ್‌ರವರ 'ವುಮನ್ ಇನ್ ವೈಟ್' ಆಧಾರದ ಮೇಲೆ ಬರೆದ 'ರಜನಿ'ಯಲ್ಲಿ ಪಾತ್ರಗಳ ಮಾತುಗಳ ಮೂಲಕ ಕಥೆ ಮುಂದುವರಿಯುವ ಈ ತಂತ್ರ ಇಂಗ್ಲಿಷಿನಿಂದ ಬಂದಿದೆ. ಮೊದಲ 8 ಪರಿಚ್ಛೇದದಲ್ಲಿ ನಾಯಕಿ ರಜನಿಯು

ಹೇಳಿಕೆ ಇದ್ದರೆ ಉಳಿದ 7 ಪರಿಚ್ಛೇದಗಳಲ್ಲಿ ಅಮರನಾಥನ ಮಾತುಗಳಲ್ಲಿ ಕಥೆ ಮುಂದುವರಿಯುತ್ತದೆ. ವಿಷವೃಕ್ಷದಲ್ಲಿ ನಾಗೇಂದ್ರನೆಂಬ ಶ್ರೀಮಂತ ಯುವಕ ಕುಂದನಂದಿನಿ ಎಂಬ ಬಾಲ ವಿಧವೆಯನ್ನು ಪ್ರೇಮಿಸಿ ಮದುವೆಯಾಗುವುದು ದುರಂತದಲ್ಲಿ ಕೊನೆಯಾಗುವುದು. ಇದರ ಕಥಾವಸ್ತು. ಮಧ್ಯಮ ವರ್ಗದ ಜನರ ಜೀವನ, ವಿವಾಹದ ಬಗ್ಗೆ ಇರುವ ಜಿಜ್ಞಾಸೆ ಇಲ್ಲಿ ಚಿತ್ರಿತವಾಗಿದೆ.

ಎಂ. ವೆಂಕಟಾದ್ರಿಶಾಸ್ತ್ರಿಗಳು ಬಿಂಕ ಬಿಹಾರಿಧರರ 'ವಿಷ ವಿವಾಹ'ವನ್ನು 'ವಿಷವಲ್ಲರಿ' ಎಂಬ ಕಾದಂಬರಿಯಾಗಿ ಅನುವಾದಿಸಿದ್ದಾರೆ. ಅನುವಾದದಲ್ಲಿ ವೆಂಕಟಾಚಾರ್ಯರ ಅನುಕರಣೆ ಕಾಣುತ್ತದೆ.

(1) 'ಮುಂದೆ ಬರೆಯುವುದು ಸಾಧ್ಯವಿಲ್ಲ, ಲೇಖನಿಯು ಕಂಪಿಸುತ್ತಾ ನಿಲ್ಲುತ್ತದೆ. ಷಷಾಂಡನು ಅಕಸ್ಮಾತ್ ಕೋಮಲೆಯನ್ನು ಬಲವಾಗಿ ಒದ್ದನು' (ಪುಟ - 48)

(2) 'ಮುಂದೆ ಬರೆಯಬಾರದೆಂದೂ ಇದನ್ನು ಇಲ್ಲಿಗೇ ನಿಲ್ಲಿಸಬೇಕೆಂದೂ ಸಂಕಲ್ಪವಿದ್ದಿತು. ಆದರೆ ವಿಮಲನ ಚರಿತ್ರ ಬರೆಯುವುದಕ್ಕೆಂದು ಕುಳಿತ ಮೇಲೆ ಅವರ ಪರಿಣಾಮ ವಿಚಾರವನ್ನು ಬರೆಯದಿರುವುದು ಯುಕ್ತವಾಗಿ ತೋರಲಿಲ್ಲ.' (ವಿಷವಲ್ಲರಿ ಪುಟ 55-56)

'ವಿಷವಲ್ಲರಿ'ಯು ಸಾಮಾಜಿಕ ಕಾದಂಬರಿಯಾಗಿದ್ದು ನೀತಿಬೋಧಕವಾಗಿದೆ. ನಿರ್ಮಲನೆಂಬ ಯುವಕ ಕಲಕತ್ತೆಗೆ ವಿದ್ಯಾಭ್ಯಾಸಕ್ಕೆ ಹೋದಾಗ ಕೆಟ್ಟ ಸ್ನೇಹಿತರ ಸಹವಾಸದಿಂದ ದುಶ್ಚಟಗಳಿಗೆ ಬಲಿಯಾಗಿ ಹುಚ್ಚನಾಗುವುದು ಇದರ ಕಥಾವಸ್ತು. ಇದರಲ್ಲಿ ಕೆಲವು ಇಂಗ್ಲಿಷ್ ಪದಗಳಿಗೆ ಸಂವಾದಿ ಕನ್ನಡ ಪದಗಳು ಬರುತ್ತವೆ. ಪಂಚಾಯತರ (ಜೂರಿ), ವ್ಯವಹಾರದೇವಿ (ಲಾಯರ್), ಪಾಟಿಸವಾಲು (ಕ್ರಾಸ್ ಕ್ವಶ್ಚನ್), ಬಹುಪಕ್ಷ (ಮೆಜಾರಿಟಿ), ಕರಮರ್ದನ (ಷೇಕ್‌ಹ್ಯಾಂಡ್ಸ್).

ವೆಂಕಟಟಾದ್ರಿ ಶಾಸ್ತ್ರಿಗಳು 'ಮುತ್ತಿನ ಸರ' (1920)ವೆಂಬ ಸಣ್ಣಕಥೆಗಳ ಸಂಕಲನವನ್ನು ಹೊರತಂದಿದ್ದು ಅದರಲ್ಲಿ ಪ್ರಿಯನಾಥ ಮುಖ್ಯೋಪಾಧ್ಯಾಯರ 'ಅನಾಥ ಪ್ರೇತ, ಸ್ವರ್ಣಕುಮಾರಿ ಘೋಷಾಲರ 'ಸನ್ಯಾಸಿನಿ', ಕಾಳೀ ಪ್ರಸನ್ನ ದಾಸಗುಪ್ತರ 'ಸುಷಾಮಾ' ಹಾಗೂ ಬಿಂಕ್ ಬಿಹಾರಿಧರ ಮೊದಲಾದವರ ಸಣ್ಣ ಕಥೆಗಳು ಇಲ್ಲಿವೆ. ಇವೆಲ್ಲವೂ ಮಂಗಳೂರಿನ 'ಕಂಠೀರವ' ವಾರಪತ್ರಿಕೆಯಲ್ಲಿ, ಉಡುಪಿಯ 'ಶ್ರೀ ಕೃಷ್ಣಸೂಕ್ತಿ' ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿದೆ. 'ಅನಾಥಪ್ರೇತ' ಒಂದು ಪತ್ತೆದಾರಿ ಕತೆಯಾದರೆ, 'ಸನ್ಯಾಸಿನಿ' ಒಂದು ಐತಿಹಾಸಿಕ ಕಥೆ, 'ವಿಷವಿವಾಹ' ಒಂದು ಸಾಂಕೇತಿಕ ಕಥೆ. ಶಾಸ್ತ್ರಿಗಳ ಕಥಾಶೈಲಿಯಲ್ಲಿ ಆಧುನಿಕ ಕನ್ನಡದ ಗದ್ಯವನ್ನು ಗಮನಿಸಬಹುದು.

''ಭಾದ್ರಪದಮಾಸ, ವಿಪರೀತ ಚಳಿ, ನದಿಯ ನೀರು ಈ ದಡದಿಂದ ಆ ದಡದವರೆಗೂ ಕೋಡಿ ಹರಿಯುತ್ತಿದೆ. ಈಚೆಗೆ ಕೆಲದಿನಗಳಿಂದಲೂ ಎಡೆಬಿಡದ ಗಾಳಿ ಮತ್ತು ಮಳೆ ಪೂರ್ಣ ಪ್ರವಾಹಿನಿಯಾದ ನದಿಯು ತರಂಗ ಭಂಗಗಳಿಂದ ಕುಣಿದಾಡುತ್ತಾ, ತೀವ್ರಾವೇಗದಿಂದ ಸಾಗರಾಭಿಮುಖವಾಗಿ ಓಡುತ್ತಲಿದೆ.

ಬಂಗಾಳಿಯಿಂದ ಕನ್ನಡಕ್ಕೆ ಬಂದ ನಾಟಕ 'ಕೃಷ್ಣ ಕುಮಾರಿ' ಮಧುಸೂದನದತ್ತರು ಟಾಡ್ (Todd) ಬರೆದ ರಾಜಸ್ಥಾನದ ಇತಿಹಾಸ (Annals of Rajasthan) ಆಧಾರದ ಮೇಲೆ ಬಂಗಾಳಿಯಲ್ಲಿ ಬರೆದ 'ಕೃಷ್ಣಕುಮಾರಿ'ಯನ್ನು ಬಿ. ರಾಮರಾಯರು ಕನ್ನಡಕ್ಕೆ ಅನುವಾದಿಸಿದ್ದಾರೆ. ಇತಿಹಾಸದ ಆಧಾರದ ಮೇಲೆ ರಚಿತವಾದ ಈ ಕೃತಿ ನಾಯಕಿ ಕೃಷ್ಣಕುಮಾರಿಯ ಆತ್ಮಹತ್ಯೆಯಲ್ಲಿ ಮುಕ್ತಾಯವಾಗುತ್ತದೆ. ಗದ್ಯಪದ್ಯಗಳನ್ನು ಉಪಯೋಗಿಸಿ ರಚಿಸಲಾದ ಈ ಕೃತಿಯಲ್ಲಿ ಹೊಸ ಪ್ರಯೋಗವೇನೂ ಇಲ್ಲ. ನಾಟಕ ಕೊನೆಯವರೆಗೂ ಕುತೂಹಲ ಉಳಿಸಿಕೊಂಡು ಹೋಗುತ್ತದೆ.

ಆರ್. ವ್ಯಾಸರಾಯರು ದ್ವಿಜೇಂದ್ರಲಾಲ್‌ರಾಯ್‌ರವರ 'ದುರ್ಗಾದಾಸ'(1914)ವನ್ನು ಕನ್ನಡಕ್ಕೆ ತಂದಿದ್ದಾರೆ. ಹಿಂದೂ ಮುಸ್ಲಿಂ ಮೈತ್ರಿಯನ್ನು ತೋರಿಸುವ ಈ ನಾಟಕ ಕನ್ನಡದ ಮೊದಲ ಅನುವಾದಿತ ಐತಿಹಾಸಿಕ ನಾಟಕ. ಭಾಷೆ, ತಂತ್ರ, ಗಾಂಭೀರ್ಯದ ದೃಷ್ಟಿಯಿಂದ ಇದು ಒಂದು ಉತ್ತಮ ನಾಟಕ. ಔರಂಗಜೇಬನಿಗೂ, ಮಾರವಾರದ ಸೇನಾಪತಿಯಾದ ದುರ್ಗಾಸನಿಗೂ ನಡೆದ ರಾಜಕೀಯ ಪೈಪೋಟಿ, ಮುಸ್ಲಿಂ ಕನ್ಯೆ ರಜೀಯಾಳು ದುರ್ಗಾಸನ ಮಗ ಅರ್ಜಿತನನ್ನು ಪ್ರೇಮಿಸಿ ಭಗ್ನಪ್ರೇಮಿಯಾಗುವುದು, ಔರಂಗಜೇಬನ ಮಕ್ಕಳ ಆಷಾಢಭೂತಿತನ ಈ ನಾಟಕದ ಮುಖ್ಯ ಕಥಾವಸ್ತು. ಇದರಲ್ಲಿ ರಾಜಕೀಯ ಕುಟಿಲತೆ ಚೆನ್ನಾಗಿ ಚಿತ್ರಿತವಾಗಿದೆ. ಉತ್ತಮ ಪಾತ್ರ ಪರಿಪೋಷಣೆ ಇದೆ. ಈ 'ದುರ್ಗಾದಾಸ' ನಾಟಕವನ್ನು ಪಿ. ಎಸ್. ರಾಮಪ್ಪ 1954ರಲ್ಲಿ ಪುನಃ ಹಿಂದಿಯಿಂದ ಅನುವಾದಿಸಿದ್ದಾರೆ. ಇವರು ವ್ಯಾಸರಾಯರ ಅನುವಾದದ ಬಗ್ಗೆ ಏನೂ ಹೇಳಿಲ್ಲ.

ಜೀವನ ಚರಿತ್ರೆ ಕ್ಷೇತ್ರದಲ್ಲಿ ಚ. ವಾಸುದೇವಯ್ಯ ನವರು ಸತ್ಯಚರಣಶಾಸ್ತ್ರಿಗಳ 'ಆರ್ಯಕೀರ್ತಿ'ಯ ಮೊದಲ ಭಾಗವನ್ನು 1896ರಲ್ಲಿ, ಎರಡನೇ ಭಾಗವನ್ನು 1989ರಲ್ಲಿ ಕನ್ನಡಕ್ಕೆ ತಂದಿದ್ದಾರೆ. ಶಿವಾಜಿಯ ಜೀವನ ಚರಿತ್ರೆಯ ಹಿನ್ನೆಲೆಯಲ್ಲಿ ಮೊಗಲ್ ಸಾಮ್ರಾಜ್ಯದ ಏಳಿಗೆ ಹಾಗೂ ಅವನತಿ ಬಗ್ಗೆ ಇದರಲ್ಲಿ ಹೇಳುತ್ತಾರೆ. 15 ಅಧ್ಯಾಯಗಳಲ್ಲಿ ಇತಿಹಾಸದ ಅನೇಕ ಮುಖ್ಯ ಸಂಗತಿಗಳು ಪ್ರಸ್ತಾಪಿತವಾಗಿದೆ. ಕೃತಿಯ ಧಾಟಿ ಬುದ್ಧಿವಾದ ಹೇಳುವ ಕ್ರಮದಲ್ಲಿದೆ.

### 3. ತಮಿಳಿಂದ ಕನ್ನಡಕ್ಕೆ ಬಂದ ಸಾಹಿತ್ಯ ಕೃತಿಗಳು

ಕವಿತಾ ಕ್ಷೇತ್ರದಲ್ಲಿ ತಮಿಳಿನಿಂದ ಅನೇಕ ಕೃತಿಗಳು ಕನ್ನಡಕ್ಕೆ ಬಂದಿವೆ. ಆರ್. ನರಸಿಂಹಚಾರ್ ರವರು ಅವ್ವೈಯರ್ ಮೊದಲಾದವರ ಕೃತಿಗಳನ್ನು ತಮ್ಮ 'ನೀತಿ ಮಂಜರಿ' (1896)ಯ ಮೊದಲ ಭಾಗದಲ್ಲಿ, ವಳ್ಳುವರ್ ರವರ 'ಕುರುಳ್'ನ್ನು 'ನೀತಿಮಂಜರಿ'ಯ ಎರಡನೆಯ ಭಾಗದಲ್ಲೂ (1911) ಅನುವಾದಿಸಿದ್ದಾರೆ. ಈ ಪದ್ಯಗಳ ಛಂದಸ್ಸು ಕಂದ ಪದ್ಯವಾಗಿದ್ದು ಸಂಸ್ಕೃತ ಮಿಶ್ರಿತ ಹಳಗನ್ನಡ ಭಾಷೆಯನ್ನು ಇವುಗಳಲ್ಲಿ ಕಾಣಬಹುದು. ಆರ್ ತಾತಾ ರವರು 'ನಾಲಾಡಿ' (1915)ಯನ್ನು ಅನುವಾದಿಸಿದ್ದಾರೆ. ಇದರಲ್ಲೂ ಕಂದಪದ್ಯ, ಹಳಗನ್ನಡ ಕಾಣಬಹುದು. ತಮಿಳು ಅನುವಾದಗಳಿಗೆ ಕನ್ನಡದಲ್ಲಿ ಹೆಚ್ಚು ಪ್ರೋತ್ಸಾಹ ದೊರೆಯಲಿಲ್ಲ.

### 4. ತೆಲುಗಿನಿಂದ ಕನ್ನಡಕ್ಕೆ ಬಂದ ಕೃತಿಗಳು

ಲಕ್ಷ್ಮೀಪತಿ ಧೂರ್ಜಟಿಯವರ 'ಹಂಸವಂಶಿಕ ಕಥೆಗಳು' ಕನ್ನಡಕ್ಕೆ ಮೊದಲು (1871) ಅನುವಾದವಾಗಿ ಬಂದ ಕೃತಿ.

ಅನಂತಾಚಾರ್ಯರುಲುರವರ 'ಉತ್ತಮ ಹರಿಶ್ಚಂದ್ರ ಕಥೆ' ನಂತರ (1898) ಬಂದಿತು. ಚಿನೆಗಲ್ ರಾಮರಾಯರು ತೆಲುಗಿನ ಮೊದಲ ಕಾದಂಬರಿಕಾರರಾದ ವಿಶೇಷ ಲಿಂಗಂ ಪಂತಲು (1880) ರವರ 'ಸತ್ಯರಾಜ ಪೂರ್ವದೇಶ ಯಾತ್ರೆಗಳು' 'ರಾಜಶೇಖರ ಚರಿತ್ರೆ', 'ಸತ್ಯವತೀ ಚರಿತ್ರೆ' ಮುಂತಾದ ಕಾದಂಬರಿಗಳನ್ನು ಕನ್ನಡಕ್ಕೆ ತಂದರು. 'ಸತ್ಯರಾಜ ಪೂರ್ವದೇಶಯಾತ್ರೆ'ಯಲ್ಲಿ ಕುತೂಹಲಕಾರಿಯಾದ ಕಥೆಯಿದ್ದು ಅಲ್ಲಲ್ಲಿ ತೆಲುಗು, ತಮಿಳು, ಸಂಸ್ಕೃತ ಭಾಷೆಗಳು ಉಪಯೋಗವಾಗಿವೆ. ಕಥೆ ಉತ್ತಮ ಪುರುಷದಲ್ಲಿದ್ದು ಸಮುದ್ರಯಾನ ನಿಷಿದ್ಧ ಮುಂತಾದ ಮಡಿವಂತಿಕೆ ಮಾತುಗಳು ಅಲ್ಲಲ್ಲಿ ಬರುತ್ತವೆ. ಜೊತೆಗೆ ದಕ್ಷಿಣ ಕನ್ನಡದಲ್ಲಿ ಪ್ರಚಲಿತವಿದ್ದ ವಿಶಿಷ್ಟ ನುಡಿಕಟ್ಟುಗಳು, ಪ್ರಾದೇಶಿಕತೆ, ಕ್ರಿಯಾಪದಗಳ ಪ್ರಯೋಗ ಗದ್ಯಶೈಲಿಯಲ್ಲಿದೆ.

ರೆಂಟಾಲ ಸುಬ್ಬರಾಯರ 'ಆನಂದ ದೀಪಿಕೆ' ಹಾಗೂ 'ಕೇಸರಿ ವಿಲಾಸ'(1895)ವನ್ನು ಕನ್ನಡಕ್ಕೆ ತರಲಾಗಿದೆ. ಕೇಸರಿವಿಲಾಸ ವಿಚಿತ್ರ ನೂತನ ಪ್ರಬಂಧವೆಂದು ಕರೆಯಲಾದ ಜಾನಪದ ಕತೆಯ ಹಂದರವಿರುವ ಸಂಭಾಷಣೆ ರೂಪದ ಕಥೆ. ಕೇಸರಿರಾಜ ಧನಕೋಟಿಯ ಮಗಳು ಶಿರೋಮಣಿ ಎಂಬ ಯುವಕನನ್ನು ಪ್ರೀತಿಸಿ ತಂದೆಯ ಸಮ್ಮತಿ ಸಿಗದಿದ್ದರಿಂದ ಪ್ರಿಯತಮನಿಂದ ಅಪಹರಿಸ್ಪಟ್ಟಳು ಎಂಬ ಕಥಾವಸ್ತು ಇದರದು. ಕಥೆ ಕುತೂಹಲಕರ ಸನ್ನಿವೇಶವನ್ನು ಹೊಂದಿದೆ. ರೂಢಿಯಲ್ಲಿಲ್ಲದ ಬಾಕಲು, ಕುರಿಚೇ ಉರಲದಂಡೆ, ಪಟ್ಟಿನಂತೆಮಣಿ, ಗುಟ್ಟುವ ವಾಲ್ಯಸಬೇಕು ಮುಂತಾದ ನುಡಿಗಟ್ಟುಗಳು ಕಂಡುಬರುತ್ತವೆ.

ಬಿ. ಕೃಷ್ಣಪ್ಪನವರು ಕೇತವರಪು ವೆಂಕಟಶಾಸ್ತ್ರಿಗಳ 'ರಾಯ್ಚೂರು ವಿಜಯಂ' (1919) ಎಂಬ ಐತಿಹಾಸಿಕ ಕಾದಂಬರಿಯನ್ನು ಕನ್ನಡಕ್ಕೆ ತಂದಿದ್ದಾರೆ. ವಿಜಯನಗರರಾಜನಾದ ಕೃಷ್ಣದೇವರಾಯ ರಾಯಚೂರನ್ನು ಗೆದ್ದುದು ಇದರ ಕಥಾವಸ್ತು. ಇದರ ಎರಡನೇ ಭಾಗ 1921ರಲ್ಲಿ ಪ್ರಕಟವಾಯಿತು.

ಟಿ. ಎನ್. ಶರ್ಮರವರು ಬಿ. ನಾರಾಯಣ ಮೂರ್ತಿಯವರ 'ವಿಮಲಾದೇವಿ' ಎಂಬ ಇತಿಹಾಸಿಕ ಕಾದಂಬರಿಯನ್ನು ಅನುವಾದಿಸಿದರು. ರಾಜಪೂತ ರಾಜಕುಮಾರ ಶಿವಸಿಂಹ ಹಾಗೂ ರಾಜಕುಮಾರಿ ವಿಮಲಾದೇವಿಯರ ಕಥೆ ಇದು. ವಿಮಲಾದೇವಿ ಔರಂಗಜೇಬ ರಾಜಪೂತ ಸ್ತ್ರೀಯರನ್ನು ವಿವಾಹವಾಗುವುದನ್ನು ವಿರೋಧಿಸುವುದು, ಕೊನೆಗೆ ಮೊಗಲರ ಸಂಚನ್ನು ದುರ್ಗಾದಾಸ ಹಾಗೂ ಶಿವಸಿಂಹರು ಸಂಚಿನಿಂದಲೇ ಕಿತ್ತುಹಾಕುವ ಅನೇಕ ಸ್ವಾರಸ್ಯಕರವಾದ ಸನ್ನಿವೇಶಗಳು ಈ ಕಾದಂಬರಿಯಲ್ಲಿವೆ. ಕಾದಂಬರಿ ಹೊಸಗನ್ನಡದಲ್ಲಿ ಸರಳ ಗದ್ಯಶೈಲಿಯಲ್ಲಿದೆ.

''ಪುತ್ರೋತ್ಸವದ ಶುಭವರ್ತಮಾನವನ್ನು ಕೇಳಿ ಇಂದಿರಾ ಚಕ್ರವರ್ತಿಯರೂ ದಾಸ ದಾಸೀ ಜನಗಳೂ ಆನಂದ ಪರವಶರಾಗಿ, ತಮ್ಮ ದುಃಖಗಳನ್ನು ಮರೆತರು.'' (ಪುಟ 65)

ತೆಲುಗಿನಲ್ಲಿ ಆ ಕಾಲದಲ್ಲಿ ಬಂದ ಸಾಮಾಜಿಕ ಕಾದಂಬರಿಗಳನ್ನು ಕನ್ನಡಕ್ಕೆ ಯಾರೂ ಅನುವಾದ ಮಾಡಿಲ್ಲ.

ಕಮಲಾಂಬಾರವರು ಭಂಡಾರು ಅಚ್ಚಮಾಂಬರು ಬರೆದ ಜೀವನ ಚರಿತ್ರೆ ಸಂಕಲನ 'ಅಬಲಾ ಸಚ್ಚರಿತ್ರ ರತ್ನಮಾಲಾ ವಿದುಷೀ ಮಣೀಲು'ನ್ನು 'ಅಬಲಾ ಸಚ್ಚರಿತ್ರೆ ರತ್ನಮಾಲೆ' ಎಂದು (1918) ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಜೀವನ

ಚರಿತ್ರೆ ಸಂಕಲನದಲ್ಲಿ 3 ಭಾಗಗಳಿದ್ದು ಮೊದಲ ಭಾಗದಲ್ಲಿ ಬಂಡಾರು ಅಚ್ಚಮಾಂಬ, ಅಹಲ್ಯಾಬಾಯಿ ಹೋಳ್ಕರ್, ಎರಡನೇ ಭಾಗದಲ್ಲಿ ಮುಕ್ತಾಬಾಯಿ ಮೊದಲಾದ 55 ಮಂದಿ ಮಹಿಳೆಯರ ಹಾಗೂ 3 ನೇ ಭಾಗದಲ್ಲಿ ಮದಾಲಸ, ಊರ್ವಶಿ, ವಾಗ್ದೇವಿ, ಗಾರ್ಗಿ ಮೊದಲಾದ ಪೌರಾಣಿಕ ಮಹಿಳೆಯ ಜೀವನ ಚರಿತ್ರೆಗಳಿವೆ. ಕಮಲಾಂಬಾರ ಶೈಲಿಗೆ ಒಂದು ಉದಾಹರಣೆ-

''ಪ್ರತಿಯೊಂದು ಕೆಲಸದಲ್ಲಿಯೂ ತೋರುದತ್ತನ ಸೂಕ್ಷ್ಮ ಬುದ್ಧಿಯು ಪ್ರಕಾಶವಾಗುತ್ತ ಇತ್ತು. ಗೋವಿಂದ ಚಂದ್ರನು ಪುತ್ರಿಯ ಸೂಕ್ಷ್ಮ ಬುದ್ಧಿಯನ್ನು ಜ್ಞಾಪಕ ಬುದ್ಧಿಯನ್ನು ನೋಡಿ ಆಶ್ಚರ್ಯವನ್ನು ಹೊಂದುತ್ತಾ ಇದ್ದನು.'' (ತೋರುದತ್ತ ಅಬಲಾ ಸಚ್ಚರಿತ್ರ ರತ್ನಮಾಲೆ 1918 ಪುಟ 127)

ಎ. ವೆಂಕಟರಾಯರು 'ಚಂದ್ರಗುಪ್ತ ಚಕ್ರವರ್ತಿ' (1919)ಯನ್ನು ತೆಲುಗಿನಿಂದ ಅನುವಾದಿಸಿದರು. ಇದರಲ್ಲಿ ಮಗಧ ರಾಜ್ಯದ ವರ್ಣನೆ, ಚಂದ್ರಗುಪ್ತನ ರಾಜ್ಯ ಪರಿಪಾಲನೆ ಮುಂತಾದ ವಿವರಗಳಿವೆ. ಅವರ ಅನುವಾದ ಒಂದು ವರದಿಯಂತಿದ್ದು ಅದಕ್ಕೆ ಉದಾಹರಣೆ ಹೀಗಿದೆ -

''ಅಲೆಗ್ಸಾಂಡರ್‌ನಿಂದ ಬಯಸಲ್ಪಟ್ಟ ಸ್ವಲ್ಪಕಾಲ ಆತನ ಪಾಲನೆಗೊಳಗಾಗಿದ್ದು ಆತನ ಮರಣಾ ನಂತರದಲ್ಲಿ ದಿಕ್ಕಾಪಾಲಾಗಿ, ಚದುರಿಹೋಗಿದ್ದ ರಾಜ್ಯ ಶಕಲಗಳನ್ನು ಚಂದ್ರಗುಪ್ತನು ಭರತಖಂಡದಲ್ಲಿ ಏಕಚ್ಛತ್ರಾಧಿಪತ್ಯದ ಕೆಳಗೆ ತರುತ್ತಿದ್ದು ಕಾಲದಲ್ಲಿಯೂ, ಏಕಚ್ಛತ್ರಾದಿಪತ್ಯಕ್ಕೆ ತಾನೂ ಸೇರಲು ಪ್ರಯತ್ನಿಸಿ, ಜಯವನ್ನು ಹೊಂದಿ, ಚಂದ್ರಗುಪ್ತನನ್ನು ಇದು ನಿಲ್ಲಿಸಲಾರದೆ, ಆತನಿಗೆ ಮಗಳನ್ನು ಕೊಟ್ಟು ಸಖ್ಯವನ್ನು ಮಾಡಿಕೊಂಡ ಮಹಾವೀರನು ಈ ಸೆಲ್ಯೂಕಸನು'' (ಚಂದ್ರಗುಪ್ತ ಚಕ್ರವರ್ತಿ 1919 ಪುಟ 141)

### 5. ಮರಾಠಿಯಿಂದ ಕನ್ನಡಕ್ಕೆ ಬಂದ ಸಾಹಿತ್ಯ ಕೃತಿಗಳು

ಮರಾಠಿಯಲ್ಲಿ ಬಾಬಾಪದ ಮಂಜಿಯವರು ಬರೆದ 'ಯಮನ ಪರ್ಯಟನ' (1857) ಮೊದಲ ಕಾದಂಬರಿ. ಇದನ್ನು ಭಾಸ್ಕರ ಸೊಲೆಮನ್ 'ಯಮುನಾ ಬಾಯಿಯ ಸಂಚಾರ' ಎಂದು ಕನ್ನಡಿಸಿದ್ದಾರೆ. ಇದು ಮರಾಠಿಯಿಂದ ಕನ್ನಡಕ್ಕೆ ಬಂದ ಮೊದಲ ಕಾದಂಬರಿ. ಇದರಲ್ಲಿ ವಿಧವೆಯವರ (1869) ಪರಿಸ್ಥಿತಿ, ಅವರ ಸುಧಾರಣೆ, ಕೊನೆಯಲ್ಲಿ ಕ್ರೈಸ್ತರಾಗಿ ಮತಾಂತರ ಹೊಂದುವುದು ಮುಂತಾದ ವಿವರಗಳಿವೆ.

ಕನ್ನಡ ಸಾಹಿತ್ಯದಲ್ಲಿ ಗಳಗನಾಥ (1864-1942)ರೆಂದು ಖ್ಯಾತರಾದ ಲೇಖಕರ ನಿಜವಾದ ಹೆಸರು ವೆಂಕಟೇಶ ತಿರಕೋ ಕುಲಕರ್ಣಿ. ಇವರು ಧಾರವಾಡ ಜಿಲ್ಲೆಯ ಗಳಗನಾಥ ಗ್ರಾಮದವರು. ಮೂಲತಃ ಶಿಕ್ಷಕರಾಗಿದ್ದ ಗಳಗನಾಥರು ಸಾಹಿತ್ಯ ಹಾಗೂ ಪತ್ರಿಕೋದ್ಯಮದಲ್ಲಿ ಆಸಕ್ತಿ ಹಾಗೂ ಪರಿಣತಿ ಬೆಳೆಸಿಕೊಂಡರು. ಒಟ್ಟು 50 ಗ್ರಂಥಗಳನ್ನು ಅವರು ಪ್ರಕಟಿಸಿದ್ದಾರೆ. ಅವರ ಕೃತಿಗಳಲ್ಲಿ 22 ಕಾದಂಬರಿಗಳಿವೆ. ಗಳಗನಾಥರ ಸ್ವತಂತ್ರ ಕಾದಂಬರಿಗಳಿಗಿಂತ ಅವರ ಅನುವಾದಿತ ಕಾದಂಬರಿಗಳು ಹೆಚ್ಚು ಮಹತ್ವ ಪಡೆದಿವೆ. ಆದ್ದರಿಂದಲೇ ಬಹುಶಃ ಗಳಗನಾಥರಿಗೆ ಕನ್ನಡವನ್ನು ಬಿಟ್ಟರೆ ಮರಾಠಿ ಭಾಷೆಯೂ

ಪರಿಚಿತವಾದುದು. ಆ ಕಾಲಕ್ಕೆ ಪ್ರಸಿದ್ಧರಾದ ಹರಿನಾರಾಯಣ ಅವರ ಕಾದಂಬರಿಗಳನ್ನು ಓದಿ ಸವಿಯುವ ಸುಸಂಧಿ ದೊರೆಯಿತು. ಅದುವೇ ಮುಂದೆ ಈ ಮರಾಠಿ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸುವ ಪ್ರೇರಣೆ ನೀಡಿತು.

ಐತಿಹಾಸಿಕ ಕಾದಂಬರಿಗಳು ಹೆಚ್ಚಾಗಿ ಮರಾಠಿಯಿಂದ ಕನ್ನಡಕ್ಕೆ ಅನುವಾದವಾಗಿ ಬಂದಿವೆ. ಗಳಗನಾಥರು ಹರಿನಾರಾಯಣ ಆಪಟೆಯವರ ''ಗಡ ಆಲಾಪಣ ಸಿಂಹಗೇಲಾ''ನ್ನು ಕಮಲಾಕುಮಾರಿ ಎಂದೂ ಉಷಃಕಾಲವನ್ನು ಮರಾಠರ ಅಭ್ಯುದಯ (1918)ವೆಂದು, ರೂಪನಗರಚಿ ರಾಜ್ಯಕನ್ಯಾ(ಸು. 1902)ರ ಆಧಾರದ 'ಕ್ಷಾತ್ರ ತೇಜ' (1914) ಅವರ ವಜ್ರಾಘಾತ ಪ್ರೇರಿತವಾದ ವೈಭವ (1912) ಕರ್ಮಕಥೆ (1916)ಯನ್ನು ನಾ.ವಿ. ಬಾಪಟೆ ಯವರ ಪಾಣಿಪತ್ ಮಹಿಮೆ ಆಧರಿಸಿ 'ಕುರುಕ್ಷೇತ್ರ' (1919), ಶಿವಪ್ರಭುವಿನ ಪುಣ್ಯ (1918), ಛತ್ರಪತಿ (1919), ಗೃಹಕಲಹ (1921), ತಿಲೋತ್ತಮೆ ಅಥವಾ ಸರಸಪ್ರೇಮ (1917), 'ಧಾರ್ಮಿಕ ತೇಜ', 'ಸಂಸಾರ ಸುಖ' ಅಥವಾ 'ಲೋಕ ಭ್ರಮ ವಿಲಾಸ' ಮುಂತಾದ ಇತಿಹಾಸಿಕ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಇವು ಸೃಜನಶೀಲ ಅನುವಾದಗಳಾಗಿವೆ. (ಕೃಷ್ಣಮೂರ್ತಿ ಕಿತ್ತೂರ : ಗಳಗನಾಥರು ಮತ್ತು ಅವರ ಕಾದಂಬರಿಗಳು ಪುಟ. 158). ಇವರು ಕಥಾನಕ, ಪಾತ್ರ, ಸನ್ನಿವೇಶ ವರ್ಣನೆಯಲ್ಲಿ ಮಾತ್ರ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡಿದ್ದಾರೆ.

'ಕಮಲಾಕುಮಾರಿ' 'ಮರಾಠಿಯಲ್ಲಿ ಗಡ ಆಲಾಪಣ ಸಿಂಹಗೇಲಾ' (ಕೋಟೆ ಬಂದಿತು ಆದರೆ ಸಿಂಹವು ಹೋಯಿತು) ಎಂದಿದ್ದು ಆಪಟೆಯವರು ಸಿಂಹಗಡ ಕೋಟೆಯನ್ನು ಶಿವಾಜಿಯ ವೀರಭಂಟನಾದ ತಾನಾಜಿ ಗೆದ್ದುಕೊಂಡ ಕಥೆಯನ್ನು ಹೇಳಿರುವವರು. ಇದು ಅತ್ಯಂತ ಜನಪ್ರಿಯವಾಗಿದ್ದು, ದೇಶಾಭಿಮಾನ ಹುಟ್ಟಿಸುವ ಚಾರಿತ್ರಿಕ ವ್ಯಕ್ತಿಗಳ ರೋಚಕ ಸಾಹಸ ಕಥೆ. ಇದರಲ್ಲಿ ಪಾತ್ರ ಸನ್ನಿವೇಶಗಳು, ಪೋಷಕಪಾತ್ರಗಳು, ಸ್ವತಂತ್ರವಾಗಿದ್ದು ಸತ್ವಯುತವಾಗಿವೆ. ಕುತೂಹಲ ಕೊನೆಯವರೆಗೆ ಮುಂದುವರಿಯುತ್ತದೆ. ಇದು ಅಕ್ಷರಶಃ ಅನುವಾದವಾದ ಕೃತಿ. 'ಕುರುಕ್ಷೇತ್ರ' ಪೇಶ್ವೆಯ ಕಾಲದ ಪಾಣಿಪತ್ ಯುದ್ಧದ ಕಥೆ. ಪ್ರಭುವಿನ ಪುಣ್ಯ, ಛತ್ರಪತಿ, ಗೃಹಕಲಹ ಇವು ಕ್ರಮವಾಗಿ ಶಿವಾಜಿಯ ಗೆಲುವು, ಮರಣಗಳಿಗೆ ಸಂಬಂಧಿಸಿದ ಕೃತಿಗಳು. 'ಕ್ಷಾತ್ರ ತೇಜ' ಔರೇಗಜೇಬನ ಕಥೆ. ಮೂಲಕೃತಿಯ ಸೊಬಗು ಅನುವಾದದಲ್ಲಿ ಬಂದಿಲ್ಲವೆಂದು ಗಳಗನಾಥರೇ ಒಪ್ಪಿಕೊಂಡಿದ್ದಾರೆ. ಧಾರ್ಮಿಕ ತೇಜ, ಸಂಸಾರ ಸುಖ ಅಥವಾ 'ಲೋಕಭ್ರಮವಿಲಾಸ'ಗಳಲ್ಲಿ ರಾಜಪೂತರ ಸ್ವಾಮಿಭಕ್ತಿ ಕ್ಷಾತ್ರಧರ್ಮದ ಬಗ್ಗೆ ಇದ್ದರೆ, 'ತಿಲೋತ್ತಮೆ' ಅಥವಾ 'ಸರಸಪ್ರೇಮ'ದಲ್ಲಿ ಇತಿಹಾಸಕ್ಕಿಂತ ಪ್ರೇಮಕ್ಕೆ ಒತ್ತು ನೀಡಲಾಗಿದೆ. 'ವೈಭವ ಮತ್ತು ಕರ್ಮಕಥೆ'ಗಳು ವಿಜಯನಗರ ಸಾಮ್ರಾಜ್ಯದ ಅಧಃಪತನದ ಕರ್ಮಕಥೆಯನ್ನು ಹೇಳುತ್ತದೆ.

'ಕರ್ಮಕಥೆ'ಯ ಉದ್ದೇಶ ಕನ್ನಡಿಗರಿಗೆ ಅವರ ಹಿಂದಿನ ಸುಖ ದಿನಗಳನ್ನು ನೆನಪು ಮಾಡಿಕೊಟ್ಟು ಭವಿಷ್ಯದಲ್ಲಿ ಸುಖಿಗಳನ್ನಾಗಿಸುವುದು. ಕನ್ನಡಿಗರ ಔದಾಸೀನ್ಯ ಅಭಿಮಾನ ಶೂನ್ಯತೆಯನ್ನು ಹೊಡೆದೋಡಿಸುವುದು. ಇದನ್ನು ಗಳಗನಾಥರೇ ಈ ಕಥೆಯ ಪ್ರಸ್ತಾವನೆಯಲ್ಲಿ ಹೇಳಿದ್ದಾರೆ.

ಹುಲಿ ಮತ್ತು ರಾಮರಾಯರ ಸೆಣಸಾಟದಿಂದ ಪ್ರಾರಂಭವಾಗುವ ಈ 'ಕರ್ಮಕಥೆ' ಮಜರ್‌ಜಾನ್-ರಾಮರಾಯರ ಪ್ರಣಯ. ಕೊನೆಯಲ್ಲಿ ರಾಮರಾಯ ತನ್ನ ಮಗನಿಂದಲೇ ಸಾಯುವುದು. ಮುಂತಾದ ಸ್ವಾರಸ್ಯಕರ ಘಟನೆಗಳನ್ನೊಳಗೊಂಡಿದೆ. ಗಳಗನಾಥರು ಕಥೆ ಹೇಳುವಾಗ ವಾಚಕರಿಗೆ ಬುದ್ಧಿವಾದವನ್ನು ಹೇಳುತ್ತಾರೆ.

"ಪ್ರಿಯ ತರುಣ ವಾಚಕರೇ, ಎಚ್ಚರಿಕೆ! ಸಿಕ್ಕ ಸಿಕ್ಕ ಬೀಜಗಳು ನಿಮ್ಮ ಮನೋಭೂಮಿಯಲ್ಲಿ ಬಿತ್ತದಂತೆ ನೀವು ಜಾಗರೂಕರಾಗಿರತಕ್ಕದ್ದು. ಇಲ್ಲದಿದ್ದರೆ, ಮಜರ್‌ಜಾನ್-ರಾಮರಾಯರಂತೆ ನೀವು ವಿವೇಕ ಭ್ರಷ್ಟರಾದಿರಿ." (ಪುಟ 21)

'ತಿಲೋತ್ತಮೆ' ಅಕ್ಬರನ ಸರದಾರನಾದ ಮಾನಸಿಂಹನ ಮಗ ಜಗತ್ಸಿಂಹ ಹಾಗೂ ತಿಲೋತ್ತಮೆಯರ ಪ್ರೇಮಕಥೆ. ಬಂಗಾಳಿಯಲ್ಲಿ ಬಂಕಿಂರು ರಚಿಸಿದ 'ದುರ್ಗೇಶನಂದಿನಿ' ಆಧರಿಸಿ ದಾಮೋದರ ಮುಖ್ಯೋಪಾಧ್ಯಾಯರು ಬರೆದ 'ನವಾಬನಂದಿನಿ' ಆಧರಿಸಿ ಬರೆದ ಕೃತಿ ಈ 'ತಿಲೋತ್ತಮೆ'. ಕೃಷ್ಣಮೂರ್ತಿ ಕಿತ್ತೂರರು ಈ ಅನುವಾದ ಸಫಲವಾಗಿಲ್ಲವೆಂದು ಹೇಳಿದ್ದಾರೆ. 'ಶಿವಪ್ರಭುವಿನ ಪುಣ್ಯ'ದಲ್ಲಿ ಶಿವಾಜಿಯ ಮರಣದ ನಂತರ ಸಂಭಾಜಿ ಪಟ್ಟಕ್ಕೇರಿದುದು, ಆತನು ಎಸಗಿದ ಅತ್ಯಾಚಾರ, ಔರಂಗಜೇಬ ಅದರ ದುರ್ಲಾಭ ಪಡೆದುದು, ಮುಂತಾದ ವಿವರ ಈ ಕಥೆಯಲ್ಲಿದೆ. ಇದನ್ನು ಕೇವಲ ಇತಿಹಾಸದ ವಿವರವೆಂದು ಕಿತ್ತೂರರು ಹೇಳಿದ್ದಾರೆ.

'ಮೃಣಾಲಿನಿ'ಯು ಮೂಲತಃ ಬಂಗಾಲಿಯಲ್ಲಿ ಬರೆದ ಬಂಕಿಮಚಂದ್ರರ ಕಾದಂಬರಿ. ಅದನ್ನು ಗಳಗನಾಥರು ಮರಾಠಿಯ ಅನುವಾದದಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ.

ಹರಿನಾರಾಯಣ ಆಪಟೆಯವರ 'ಉಷಃಕಾಲ' ಹಾಗೂ 'ವಜ್ರಾಘಾತ' 'ಈಶ್ವರಿ ಸೂತ್ರ' ಹಾಗೂ 'ಕನ್ನಡಿಗರ ಕರ್ಮಕಥೆ' ಎಂಬ ಹೆಸರಿನಲ್ಲಿ ಅನುವಾದಗೊಂಡಿವೆ. ಇವರ ಬಹುತೇಕ ಅನುವಾದಗಳು ಐತಿಹಾಸಿಕ ಕಾದಂಬರಿಗಳಾಗಿವೆ. ಇವರ ಅನುವಾದನ್ನು ಈ ರೀತಿಯನ್ನು ಕ್ರೋಡೀಕರಿಸಲಾಗಿದೆ.

1. ಗಳಗನಾಥರ ಯಾವ ಅನುವಾದವೂ ಮೂಲ ಕಾದಂಬರಿಗಿಂತ ದೀರ್ಘವಾಗಿಲ್ಲ.
2. ಕಥೆಯ ಓಟದ ಕಡೆಗೆ ಅವರ ಗಮನ ಕೇಂದ್ರೀಕೃತವಾಗಿದೆ.
3. ಅದರಿಂದ ಅನೇಕ ಸನ್ನಿವೇಶಗಳನ್ನು, ವರ್ಣನೆಗಳನ್ನು, ಕಥಾಭಾಗವನ್ನು ಸಂಕುಚಿತಗೊಳಿಸಿದರು ಅಥವಾ ತ್ಯಜಿಸಿಬಿಟ್ಟರು.
4. ಅನುವಾದಗಳಲ್ಲಿ ಸ್ಥೂಲವಾಗಿ ಮೂಲವನ್ನೇ ಅನುಸರಿಸಿದರೂ ಅಲ್ಲಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿರುವರು. ಕೆಲವೆಡೆ ಕಥೆಯನ್ನು ಬೆಳೆಸಿದ್ದಾರೆ. ಕೆಲವೆಡೆ ಪಾತ್ರಗಳ ಬಣ್ಣವನ್ನು ಬದಲಿಸಿದ್ದಾರೆ.

ಗಳಗನಾಥರು ಅನುವಾದಿಸಿದ ಕಾದಂಬರಿಗಳೆಲ್ಲ ಐತಿಹಾಸಿಕ ಕಾದಂಬರಿಗಳೇ ಆಗಿವೆಯಷ್ಟೆ. ಗಳಗನಾಥರು ತಮ್ಮದೇ ಆದ ಒಂದು ವಿಶಿಷ್ಟ ರೀತಿಯಲ್ಲಿ ಅನುವಾದಿಸಿದ ಈ ಕಾದಂಬರಿಗಳನ್ನು ಜನರು ಗಳಗನಾಥರ ಮೂಲ ಕಾದಂಬರಿಗಳೆಂದೇ ಸ್ವೀಕರಿಸಿದ್ದಾರೆ. ಇದಕ್ಕೆ ಮುಖ್ಯ ಕಾರಣ ಅವರ ಭಾಷಾ ಶೈಲಿ. ಭಾಷೆಯೂ ಕನ್ನಡ ಜನಕ್ಕೆ ಸಹಜವಾದ್ದರಿಂದ ಕನ್ನಡ ಜನಕ್ಕೆ ಇವು ರುಚಿಸಿದವು.

ಗಳಗನಾಥರು ಅಚ್ಚಕನ್ನಡ ಭಾಷೆಯ ಸತ್ವವನ್ನು ಸಂಪೂರ್ಣವಾಗಿ ಬಳಸಿಕೊಂಡು, ತಮ್ಮ ಅನುವಾದಗಳು ಕನ್ನಡದಲ್ಲಿ ಬರೆದ ಮೂಲ ಕಾದಂಬರಿಗಳೇ ಎಂಬಂಥ ಒಂದು ಪ್ರಭಾವ ಮುದ್ರೆಯನ್ನು ಮೂಡಿಸಿದ್ದಾರೆ. ಪುಟಪುಟಗಳಲ್ಲಿ

ತುಂಬಿಕೊಂಡಿರುವ ಕುಕ್ಕರಬಡಿ, ಕಿವಿಯನ್ನು ಊದು, ಪಿತ್ತನೆತ್ತಿಗೇರು, ಮೋರೆ ಕಿವುಚು, ಹೊಯ್ಮಾಲಿತನ, ತೋಳ್ಮಾರಿತನ, ಸೊಂಡೆ ಬಣಗಿತು, ರಘುಳರಘುಳ ಮಾತನಾಡು, ಕೈ ತೊಳಕೊಂಡು ಬೆನ್ನು ಹತ್ತು, ಬಾಲ ಗುಂಡಾಡಿಸುತ್ತ, ಚಳ್ಳೆಹಣ್ಣು ತಿನ್ನಿಸು, ಹಣಕೊಯ್ದು ಮಣೆ ಮಾಡು, ಉಲಕೋಚಿ ಸ್ವಭಾವ ಎಂಬಂತಹ ಮಾತುಗಳು, ನಡೆನುಡಿಗಳು ಗಳಗನಾಥರ ಭಾಷೆಗೆ ತನ್ನದೇ ಆದ ಒಂದು ಒಗರನ್ನು ತಂದಿದೆ.

ಬಂಗಾಳಿ ಸಾಹಿತ್ಯಕ್ಕೆ ಬಂಕಿಮಚಂದ್ರರು, ಮರಾಠಿ ಸಾಹಿತ್ಯಕ್ಕೆ ಹರಿನಾರಾಯಣ ಆಪಟೆಯವರಂತೆ ಹೊಸಗನ್ನಡ ಸಾಹಿತ್ಯಕ್ಕೆ ಅದರಲ್ಲಿಯೂ ಕಾದಂಬರಿ ಸಾಹಿತ್ಯಕ್ಕೆ ಗಳಗನಾಥರು ಅಗ್ರಗಣ್ಯರು ಎಂಬ ಅಭಿಪ್ರಾಯ ದಾಖಲಾರ್ಹವಾಗಿದೆ.

ಗಳಗನಾಥರ ಅನುವಾದಗಳಲ್ಲಿ ಕಾಣುವ ಗದ್ಯಶೈಲಿ ಮುಂದಿನ ಬರಹಗಾರರ ಮೇಲೆ ಪ್ರಭಾವ ಬೀರಿದೆ. ಅವರಿಗೆ ಓದುಗರ ಬಗ್ಗೆ, ಭಾಷೆಯ ಬಗ್ಗೆ, ದೇಶದ ಬಗ್ಗೆ ಅಭಿಮಾನವಿದೆ. ಇವರ ಶೈಲಿಯ ಮೂಲ ತುರುಮರಿಯವರಲ್ಲಿ ಕಾಣಬಹುದೆಂದು ಡಾ: ಶ್ರೀನಿವಾಸ ಹಾವನೂರರು ಹೇಳಿದ್ದಾರೆ. (ಕನ್ನಡದಲ್ಲಿ ಕ್ರೈಸ್ತಸಾಹಿತ್ಯ, ಹನಿಗದ್ದೆ, ಕಂಪ್ಯೂಟರ್ ಇತ್ಯಾದಿ) ಇವರು ಓದುಗರಲ್ಲಿ ವಾಚಾನಾಭಿರುಚಿ ಹುಟ್ಟಿಸಿದರು. ಶೃಂಗಾರ ಅಶ್ಲೀಲತೆ ಮಟ್ಟಕ್ಕೆ ಹೋಗಲಿಲ್ಲ. ಇವರ ಕಾದಂಬರಿಗಳು ಬಹಳ ಜನಪ್ರಿಯವಾಗಿದ್ದವು. ಗಳಗನಾಥ ಸುರಸ ಗ್ರಂಥಮಾಲ ಎಂಬ ಮಾಲಿಕೆಯಲ್ಲಿ ಕನ್ನಡಿಗರ ಅಭಿಮಾನದ ಕಥೆಗಳನ್ನು ಹೊರತರಲು ಅವರು ಉದ್ದೇಶಿಸಿದ್ದರು. 'ಸದ್ಬೋಧ ಚಂದ್ರಿಕೆ' ಎಂಬ ಮಾಸ ಪತ್ರಿಕೆ ಅವರು ಹೊರತರುತ್ತಿರುವ ಈ ಕಾಲದಲ್ಲಿ ಏಳು ಸಾವಿರ ಚಂದಾದಾರರನ್ನು ಹೊಂದಿತ್ತು.

ಗಳಗನಾಥರದ್ದು ಅಕ್ಷರಶಃ ಅನುವಾದವಲ್ಲ. ಕೆಲವೆಡೆ ಕಥಾವಸ್ತುವನ್ನು ಮಾತ್ರ ಆಯ್ದುಕೊಂಡು ತಮ್ಮದೇ ಕಲ್ಪನೆ ಹಾಗೂ ಭಾಷೆಗಳಲ್ಲಿ ವಿಸ್ತರಿಸಿದ್ದು ಗೊತ್ತಾಗುತ್ತದೆ. ಅಲ್ಲದೆ ''ತಾವು ಮೆಚ್ಚುವ ಕೆಲವು ಅಭಿಪ್ರಾಯಗಳನ್ನು ಹೇಗಾದರೂ ಮಾಡಿ, ಅನೇಕ ಗ್ರಂಥಗಳಲ್ಲಿ ತಂದಿದ್ದಾರೆ.'' (ಎ. ಆರ್. ಕೃ. ಭಾಷಣಗಳು ಮತ್ತು ಲೇಖನಗಳು : ಪುಟ 236)

ಮರಾಠಿಯಿಂದ ಕನ್ನಡಕ್ಕೆ ಬಂದ ಕೃತಿಗಳಲ್ಲಿ ಕೃಷ್ಣಾಜಿ ವೆಂಕಟೇಶ ಕುಲಕರ್ಣಿಯವರ 'ಒಬ್ಬ ತರುಣ ರಾಜಪೂತ ಸರದಾರನು' (1914), ಧೊಂಡೋ ಗೋವಿಂದ ಮಹಾ ಜನರವರ 'ಅವಧೂತಗೀತಾ' (1915), ಕಲ್ಲೋ ಗಣೇಶ ಅವರ 'ಈಶ ಸಂಕಲ್ಪ' (1918) ಸೇರಿವೆ. ಕೆ. ಲಕ್ಷ್ಮೀನಾರಾಯಣ ಭಟ್ಟರು 'ಮರಾಠಿಮಿತ್ರ' ಮಾಸಪತ್ರಿಕೆಯ ಸಂಪಾದಕರು ಬರೆದ 'ಚಿತ್ತೂರು' 'ಮೊದಲನೇ ಜೋಹರ್' ಅಥವಾ 'ಪದ್ಮಿನಿ'ಯನ್ನು ಕನ್ನಡಿಸಿದ್ದಾರೆ. ಅದರ ಉದ್ದೇಶ ದೇಶಭಕ್ತಿ ದೈವಭಕ್ತಿಯನ್ನು ಸಾರವುದು. ಕಲಹದಿಂದ ಸುಖ ದೊರೆಯದೆಂದು ಬುದ್ಧಿವಾದ ಹೇಳುವುದು.

ಸಾಮಾಜಿಕ ಕಾದಂಬರಿಗಳಲ್ಲಿ ಬೆನೆಗಲ್ ರಾಮರಾಯರು ಅನುವಾದಿಸಿದ ಕಾಶೀನಾಥ ರಘುನಾಥ ಮಿತ್ರರವರ 'ರಮಾಲಣಿ ಮಾಧವ' (1898) ಮುಖ್ಯವಾದುದು. ಇದು 1900ರಲ್ಲಿ ಮಂಗಳೂರಿನ ಸುವಾಸಿನಿ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡು 1915ರಲ್ಲಿ ಪುಸ್ತಕ ರೂಪದಲ್ಲಿ ಹೊರಬಂತು. ಕನ್ಯಾಪಿತೃ ಆಸೆ ಪಡೆವುದು. ಕೊನೆಯಲ್ಲಿ ಮದುವೆಯ ಸಂದರ್ಭ, ಮಾಧವನೆಂಬ ಯುವಕನೇ ವರವಾಗಿ ಪರಿಣಮಿಸುವುದು ಈ ಕಾದಂಬರಿಯ ಕಥಾವಸ್ತು. ಪಾಶ್ಚಿಮಾತ್ಯ ಪಾರಸೀಕ ಸ್ತ್ರೀಯರು ಸೈಕಲ್ ಸವಾರಿ ಮಾಡುತ್ತಿದ್ದರು ಎಂಬ ವಿವರ ಈ ಕಾದಂಬರಿಯಲ್ಲಿ ಬರುತ್ತದೆ.

ಗುಂಡಾಶಾಸ್ತ್ರಿಗಳು 'ಪ್ರಿಯಂವದೆ' (1909) ಎಂಬ ಕಾದಂಬರಿಯನ್ನು ಮರಾಠಿಯಿಂದ ಅನುವಾದಿಸಿದ್ದಾರೆ. ಭಾಷಾಂತರ ಜಿಗುಟಾಗಿರುವ ಈ ಕೃತಿಯ ಮೂಲ ಕರ್ತೃ ಯಾರೆಂದು ತಿಳಿದಿಲ್ಲ. ಮಂಗಳೂರಿನ ಬಾಸೆಲ್ ಮಿಷನ್‌ರವರು ಹೊರತಂದ ಕನ್ನಡ ಅನುವಾದ 'ಶಾಂತಿಪುಷ್ಪ' (1906) ಕ್ರೈಸ್ತ ಧರ್ಮ ಪ್ರಚಾರಕ್ಕಾಗಿ ಹೊರಬಂದ 62 ಪುಟಗಳ ಚಿಕ್ಕ ಸಾಮಾಜಿಕ ಕಾದಂಬರಿ. ಕೊನೆಯಲ್ಲಿ ಏಸುವನ್ನು ಹೊಗಳಿ ಹಾಡುವ ಪದ್ಯ ಇದರಲ್ಲಿದೆ.

ನಾಟಕ ಕ್ಷೇತ್ರದಲ್ಲಿ ಗುರುರಾವ್ ರಾಘವೇಂದ್ರರವರು ಅನುವಾದಿಸಿದ 'ಇಂದಿರಾ' (1911) ಮರಾಠಿಯಿಂದ ಕನ್ನಡಕ್ಕೆ ಬಂದ ಮೊದಲ ನಾಟಕ. ಎಂ. ಎನ್. ಕಾಮತ್‌ರು 1914ರಲ್ಲಿ ಅದನ್ನೇ ಮತ್ತೆ ಅನುವಾದಿಸಿದರು. ಹನುಮಾನ್‌ರವರು ನಾಥಮಾಧವರ ''ಗಜೇಂದ್ರಸಿಂಹ''(1915)ವನ್ನು ಅನುವಾದಿಸಿದ್ದು ಮರಾಠಿ ಭಾಷಾ ಪರಿಚಯವಿಲ್ಲದೆ ಅನುವಾದಕ್ಕೆ ಪ್ರಯತ್ನಮಾಡಿದ ಕೃತಿ ಇದು. ದೇಶೀಯ ಭಾಷೆಗಳಲ್ಲಿ ನಾಟಕ ರಚನೆಯ ಪದ್ಧತಿ, ಸಂಗೀತ ಮಿಶ್ರಿತವಾಗಿ ನಾಟಕ ಆಡುವ ರೂಢಿ ಕಡಿಮೆಯಾಗುತ್ತ ಬಂದ ಕಾಲವದು. ಸಂಗೀತವಿಲ್ಲದೆ ಶೃಂಗಾರ, ವೀರ, ಕರುಣ, ಭಯಾನಕ, ಹಾಸ್ಯಾದಿ ರಸಗಳನ್ನು ಚೆನ್ನಾಗಿ ಬಿಂಬಿಸಬಹುದೆನ್ನುವ ಅಭಿಪ್ರಾಯ ಲೇಖಕರದು.

'ಗಜೇಂದ್ರಸಿಂಹ' ಭಾರತದಲ್ಲಿದ್ದ ಸಿಸೋದಿಯಾ ವಂಶದ ಒಬ್ಬ ವೀರನ ಕಥೆ. ಇತಿಹಾಸಿಕ ವ್ಯಕ್ತಿಗಳ ಧೈರ್ಯ ಸಾಹಸ ಬಿಂಬಿಸುವ ಕೃತಿ ಇದು. ನಿಗೂಢತೆಯ ತಂತ್ರವನ್ನು ಇಲ್ಲಿ ಬಳಸಲಾಗಿದೆ. ಹೊಸಗನ್ನಡದಲ್ಲಿ ಬರೆದ ಈ ನಾಟಕ 1914ರಲ್ಲಿ ಬಂಗಾಳಿಯಿಂದ ಅನುವಾದಿತವಾದ 'ದುರ್ಗಾದಾಸ' ನಾಟಕದ ನಂತರ ಕನ್ನಡಕ್ಕೆ ಬಂದ ಎರಡನೇ ನಾಟಕ. ಅನುವಾದದಂತೆ ತೋರದೆ ಸರಾಗವಾಗಿ ಓದಿಸಿಕೊಂಡು ಹೋಗುವ ಭಾಷಾ ಶೈಲಿ ಇಲ್ಲಿದೆ.

ಬಿ. ರಾಮರಾಯರು ಅಣ್ಣಾ ಸಾಹೇಬ ಕಿರ್ಲೋಸ್ಕರ್ ರವರ 'ಸಂಗೀತ ಸೌಭದ್ರ'ದ ಆಧಾರದ ಮೇಲೆ 'ಕರ್ನಾಟಕ ಸುಭದ್ರಾ ವಿಜಯಂ' (1906)ನ್ನು ಅನುವಾದಿಸಿದ್ದಾರೆ. 1896ರ ಸುಮಾರಿಗೆ ಈ ಅನುವಾದ ಕಾರ್ಯ ಪ್ರಾರಂಭವಾಗಿತ್ತೆಂದು ಲೇಖಕರು ಹೇಳಿದ್ದಾರೆ. ಐದು ಅಂಕಗಳಿರುವ ಈ ನಾಟಕವು ತಿಳಿಯಾದ ಗದ್ಯ ಶೈಲಿಯಲ್ಲಿದೆ. ಆರಂಭದಲ್ಲಿ ಕಥೆಯ ಸಾರ ನೀಡಿರುವುದಲ್ಲದೆ, ಮೂಲ ಲೇಖಕರ ಜೀವನ ಚರಿತ್ರೆಯನ್ನು ಸಂಗ್ರಹಿಸಿಕೊಡಲಾಗಿದೆ.

ಮರಾಠಿಯಿಂದ ಕನ್ನಡಕ್ಕೆ ಬಂದ ಒಂದೇ ಜೀವನಕೃತಿ ಎಂದರೆ ದತ್ತಾತ್ರೇಯ ಬಲವಂತ ಪಾರ್ಸನಿಸ್ 1894ರಲ್ಲಿ ರಚಿಸಿದ ಕೃತಿಯ ಆಧಾರದ ಕೆರೋಡಿ ರಾಮರಾಯರು ಅನುವಾದಿಸಿದ ಝಾನ್ಸಿ ಸಂಸ್ಥಾನದ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ಚರಿತ್ರ (1903).

ಲೇಖಕರು ತಮ್ಮ ದೇಶಭಕ್ತಿ, ದೇಶಾಭಿಮಾನದ ಬಗ್ಗೆ ವ್ಯಕ್ತಪಡಿಸುತ್ತಾ ''ಮಹಾರಾಷ್ಟ್ರ ಭಾಷೆಯಲ್ಲಿ ಪ್ರಸಿದ್ಧಿಯಾಗುವುದಕ್ಕೆ ಮುಂಚೆ ಪ್ರಾಯಶಃ ನಮ್ಮ ದೇಶದವರಿಗೆ ಈ ಶ್ರೇಷ್ಠ ಸ್ತ್ರೀಯೋರ್ವಳ ಮಹಿಮೆಯು ಸರಿಯಾಗಿ ತಿಳಿದಿರಲಿಲ್ಲವೆಂತಲೇ ಭಾವಿಸಬೇಕು. ಮೂಲ ಗ್ರಂಥದಲ್ಲಿರುವ ಯಾವ ಸಂಗತಿಯನ್ನು ಬಿಡದೆ ನನ್ನ ಅಲ್ಪ ಯೋಗ್ಯತಾನುಸಾರವಾಗಿ ಕನ್ನಡ ಭಾಷೆಯಲ್ಲಿ ಈ ಚರಿತ್ರೆಯನ್ನು ಬರೆದಿರುತ್ತೇನೆ.''[39]

ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಆಗುವ ಪರಿಣಾಮದ ಬಗ್ಗೆ ಅವರು ಬರೆಯುತ್ತಾ ''ಪಾಶ್ಚಾತ್ಯ ಪ್ರಾಬಲ್ಯದ ಯೋಗದಿಂದ ಈ ಉತ್ತಮವಾದ ಆಸ್ತಿಗಳನ್ನು (ಮತ, ಭಾಷೆ, ಉಡುಪು, ಆಚಾರ, ವ್ಯವಹಾರ ಇತ್ಯಾದಿ) ಆಸಡ್ಡೆಯಿಂದ ಕೃಷಿಮಾಡದೇ ಹೋಗಲಾಡಿಸಿಕೊಳ್ಳುವ ಪಕ್ಷದಲ್ಲಿ ನಾವು ಆರ್ಯವಂಶದವರಂತೆ ಎನಿಸಿಕೊಳ್ಳಲು ಆಧಾರವೇ ಉಳಿಯುವುದಿಲ್ಲ. ಆದುದರಿಂದ ನಮ್ಮ ದೇಶಭಾಷೆಯಲ್ಲಿ ಅಭಿಮಾನವಿಟ್ಟುಕೊಂಡು, ಅದನ್ನು ಕೃಷಿಮಾಡಿ ಪ್ರಾಚುರ್ಯಕ್ಕೆ ತರುವುದು ನಮ್ಮ ಕರ್ತವ್ಯವಾಗಿದೆ.''[40]

ಕನ್ನಡದ ವರಕವಿ ದ.ರಾ.ಬೇಂದ್ರೆಯವರ ಮೇಲೆ ಮರಾಠಿ ಸಾಹಿತ್ಯದ ಪ್ರಭಾವ ಎದ್ದು ಕಾಣುತ್ತದೆ.

ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳನ್ನು ಪರಿಶೀಲಿಸಿದಾಗ ಅದರ ಹಿನ್ನೆಲೆಯಲ್ಲಿ ಮರಾಠಿ ಕಾವ್ಯ, ಇಂಗ್ಲಿಷ್ ಕಾವ್ಯ, ಭಾರತೀಯ ಕಾವ್ಯ, ಹಳಗನ್ನಡ ಕಾವ್ಯ ಮತ್ತು ಜಾನಪದ ಕಾವ್ಯಗಳ ಪ್ರಭಾವ ಕಾಣಿಸುತ್ತದೆ. ಅವರು ವರ್ಡ್ಸ್‌ವರ್ತ್‌ನ Prelude ಕವನವನ್ನು ಓದಿರಬಹುದು. ಆದರೆ ಅದಕ್ಕಿಂತ ಭಿನ್ನವಾದ 'ಸಖೀಗೀತ'ವನ್ನು ಬರೆದರು. ವರ್ಡ್ಸ್‌ವರ್ತ್‌ನ ಪ್ರಕೃತಿಗಿಂತ ಹೆಚ್ಚು ಆತ್ಮೀಯವಾಗಿ, ನಮ್ಮ ಬದುಕಿನಲ್ಲಿ ಅಷ್ಟೇಕೆ ನಮ್ಮ ಕುಟುಂಬಗಳಲ್ಲೂ ಹಾಸುಹೊಕ್ಕಾದ ಪ್ರಕೃತಿಯನ್ನು ಬೇಂದ್ರೆಯವರು ಚಿತ್ರಿಸಿದರು.

ಕೇಶವಸುತ, ಗೋವಿಂದಾಗ್ರಜ, ವಿನಾಯಕ ಜನಾರ್ಧನ ಕರಂದೀಕರ ಮೊದಲಾದ ಆಧುನಿಕ ಮರಾಠಿ ಕವಿಗಳು ಹಾಗೂ ಅಲ್ಲಿಯ ಸಂತ ವಾಙ್ಮಯಕಾರರು ಬೇಂದ್ರೆಯವರನ್ನು ಪ್ರಭಾವಗೊಸಿದ್ದಲ್ಲದೆ ಬೇಂದ್ರೆಯವರು ತಮ್ಮ ಮನೆಮಾತಾದ ಮರಾಠಿಯ ಮೂಲಕವೇ ರೊಮ್ಯಾಂಟಿಕ್ ಸತ್ವವನ್ನು ಪಡೆದರೆನ್ನುವುದು ಈ ದಿಸೆಯಲ್ಲಿ ಮಹತ್ವದ ಸಂಶೋಧನೆಯಾಗಿದೆ. ಹೀಗೆ ಬೇಂದ್ರೆಯವರ ಕಾವ್ಯ ರಚನೆಯ ಪ್ರಥಮ ಘಟ್ಟದಲ್ಲಿ ಮರಾಠಿ ಕಾವ್ಯದ ಪ್ರಭಾವ ಇತ್ಯಾತ್ಮಕವಾಗಿತ್ತೆಂಬುದನ್ನು ಇಲ್ಲಿಯ ವಿವೇಚನೆ ದೃಢಪಡಿಸುತ್ತದೆ. ''ಸಂಸ್ಕೃತದ ಕಾವ್ಯದ ಬಗ್ಗೆ ಬೇಂದ್ರೆ ಪಾಂಡಿತ್ಯ ಪ್ರಭುತ್ವಗಳನ್ನು ಸಂಪಾದಿಸಿದ್ದರೂ ಅವರ ಕಾವ್ಯದಲ್ಲಿ ಅದು ಸಂವೇದನೆಯ ಒಂದು ಅಂಗವಾಗಿ ಬರುತ್ತದೆಯೇ ವಿನಾ ಅವರ ಮೇಲೆ ಸವಾರಿ ಮಾಡುವುದಿಲ್ಲ. ಮೊದಲು ಅವರ ಕನ್ನಡಕ್ಕೆ ಅಧೀನವಾಗಿದ್ದ ಸಂಸ್ಕೃತ ಅನಂತರ ಇಳಿಯವಯಸ್ಸಿನಲ್ಲಿ ಅವರ ಕನ್ನಡ ಆಗಿಂದಾಗ್ಗೆ ಅವರ ಸಂಸ್ಕೃತಕ್ಕೆ ಅಧೀನವಾಗುತ್ತ ಹೋದುದನ್ನು ಅವರ ಕಾವ್ಯದಿಂದಲೇ ತೋರಿಸಿಕೊಡಲಾಗಿದೆ. ಆದರೆ ಬೇಂದ್ರೆ ಕಾವ್ಯದ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ ನೇರವಾಗಿ ಅಷ್ಟೊಂದು ಆಗಲಿಲ್ಲವೆಂಬುದು ಕುತೂಹಲಕಾರಿಯಾಗಿದೆ.''[41]

1918ರ 'ತುತ್ತೂರಿ' ಕವನದಲ್ಲಿ ಬೇಂದ್ರೆಯವರು ಮರಾಠಿಕವಿ ಕೇಶವಸುತರ 'ತುತಾರಿ'ಯನ್ನು ಕನ್ನಡೀಕರಣ ಮಾಡಿಕೊಳ್ಳಲಿಕ್ಕೇ ಪ್ರಯತ್ನಿಸಿದರು. 1929ರ ''ನನ್ನದು ಈ ಕನ್ನಡ ನಾಡು' ಎನ್ನುವ ಕವನದಲ್ಲಿ ಗೋವಿಂದಾಗ್ರಜರ 'ರಾಜಹಂಸ ಮಾ ಯೂ ನಿಜಲಾ' ಎನ್ನುವ ಕವಿತೆಯನ್ನು ಕನ್ನಡೀಕರಿಸಲಿಕ್ಕೆ ಪ್ರಯತ್ನಿಸಿದರು. 1919ರ ಹೊತ್ತಿಗೆ ಬಾಲಕವಿಯವರ 'ಅರುಣ' ಕವನದಿಂದ ಮತ್ತು ವನಮಾಲಾ ಕವನದಿಂದ ಸೂಚನೆಗಳನ್ನು ಪಡೆದು 'ಬೆಳಗು' ಎನ್ನುವ ಕವಿತೆಯನ್ನು ಬರೆದು 'ಸದಾನಂದಿ ಜಂಗಮ' ಎನ್ನುವ ಅಂಕಿತನಾಮದಲ್ಲಿ ಪ್ರಕಟಿಸಿದ್ದರು. 1919ರ ನಾಲ್ಬರಿಯಲ್ಲಿ ಕೀಟ್ಸ್‌ನ ಸೌಂದರ್ಯ ಪ್ರಜ್ಞೆಯನ್ನು ತಮ್ಮದು ಮಾಡಿಕೊಳ್ಳಲಿಕ್ಕೆ ಪ್ರಯತ್ನಿಸಿದರು. 1928ರ ಹೊತ್ತಿಗೆ ಬಹುಶಃ ಸರೋಜಿನಿ

ನಾಯ್ಡುರವರ ಎನ್ನುವ The Bird of Time ಕವನದಿಂದ ಸ್ಫೂರ್ತಿ ಪಡೆದು, ಜಾನಪದ ಲಾವಣಿಗಳಿಂದ ಸ್ಫೂರ್ತಿಯನ್ನು ಪಡೆದು, "ಹಕ್ಕಿ ಹಾರುತಿದೆ ನೋಡಿದರಾ" ಎನ್ನುವ ಕವನವನ್ನು ಬರೆದರು. 1932ರಲ್ಲಿನ ಗರಿಯಲ್ಲಿನ 'ಕುಣಿಯೋಣ ಬಾರ'ಕ್ಕೆ ಕೇಶವ ಸುತರ 'ಯು ಪೂರುಘಾ' ಮಾದರಿಯಾಗಿರಲಿಕ್ಕೂ ಸಾಧ್ಯವಿದೆ. ಹೀಗೆ ಮರಾಠಿ ಕಾವ್ಯ, ಇಂಗ್ಲಿಷ್ ಕಾವ್ಯ ಮತ್ತು ಕನ್ನಡ ಜಾನಪದದಿಂದ ತಮ್ಮ ಕಾವ್ಯ ಭೂಮಿಕೆಯನ್ನು ಸಿದ್ಧಪಡಿಸಿರುವುದನ್ನು ಅವರ ಮೇಲೆ ಪ್ರಭಾವವನ್ನು ಗುರುತಿಸುವಲ್ಲಿ ಗಮನಿಸಲಾಗಿದೆ."[42]

## 6. ಅನ್ಯಭಾಷೆಗಳಲ್ಲಿ ಕನ್ನಡದ ಭಾಷಾಂತರ

ಕನ್ನಡ ಭಾಷೆ ವೇದಕಾಲದಲ್ಲೂ ಪ್ರಚಾರದಲ್ಲಿತ್ತು. ಛಾಂದೋಗ್ಯ ಉಪನಿಷತ್ತಿನಲ್ಲಿ 'ಮಟಚಿ' ಮುಂತಾದ ಕನ್ನಡ ಪದಗಳು ಕಂಡುಬರುತ್ತವೆ. ಮಹಾಭಾರತದ ಭೀಷ್ಮ ಪರ್ವದಲ್ಲಿ, ಶೂದ್ರಕನ ಮೃಚ್ಛಕಟಿಕದಲ್ಲಿ, ವಿಷ್ಣುಧರ್ಮೋತ್ತರ ಪುರಾಣದಲ್ಲಿ, ವರಾಹಮಿಹಿರನ ಬೃಹತ್ಸಂಹಿತೆಯಲ್ಲಿ, ಪದ್ಮ ಭಾಗವತ ಹಾಗೂ ಮಾರ್ಕಂಡೇಯ ಪುರಾಣಗಳಲ್ಲಿಯೂ ಅಲ್ಲದೆ ಇನ್ನೂ ಅನೇಕ ಸಂಸ್ಕೃತ ಕಾವ್ಯ ಹಾಗೂ ಶಾಸ್ತ್ರ ಗ್ರಂಥಗಳಲ್ಲಿ 'ಕರ್ನಾಟಕ'ದ ಪ್ರಸ್ತಾಪವುಂಟು.

ಕ್ರಿ. ಪೂ. ಒಂದನೇ ಶತಮಾನದ ಹಾಲನ 'ಗಥಾಸಪ್ತಶತಿ'ಯಲ್ಲಿ ಅತ್ತಾ ತುಪ್ಪೋ, ಹೊಟ್ಟ, ಫಲಹೀ, ತೀರ್ಅ ಮೊದಲಾದ ಕನ್ನಡ ಪದಗಳಿಗೆ ಕ್ರಿ. ಶ. 1899ರಲ್ಲಿ ಈಜಿಪ್ಟಿನ ಆಕ್ಸಿರಿಯಿಸ್‌ನಲ್ಲಿ ನಡೆಸಿದ ಸಂಶೋಧನೆಗಳಲ್ಲಿ, ಕ್ರಿ. ಶ. ಎರಡನೇ ಶತಮಾನದ್ದೆನ್ನಲಾದ 'ಅಕ್ಸಿರಿಯಸ್ ಸಾಪಿರಿ'ಯ ಮೂರನೇ ಭಾಗದಲ್ಲಿ ಕಂಡುಬರುವ ಒಂದು ಚಿಕ್ಕ ಗ್ರೀಕ್ ಪ್ರಹಸನದಲ್ಲಿ ಬಂದಿರುವ ಗ್ರೀಕ್ ಅಲ್ಲದ ಕೆಲವು ಪದಗಳು ಕನ್ನಡದವು ಎನ್ನುವ ಅಭಿಪ್ರಾಯವಿದೆ. ಅವು ಪ್ರಾಚೀನ ತುಳುವಾಗಿದ್ದಿರಬಹುದೆಂದು ವಾದವೂ ಇದೆ. ಕ್ರಿ. ಪೂ. ಮೂರನೇ ಶತಮಾನದ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ 'ಇಸಿಲ' ಎಂಬ ಕನ್ನಡ ಪದವನ್ನು ಗುರುತಿಸಲಾಗಿದೆ. ಕ್ರಿ. ಶ. 450ರ ಹಲ್ಮಿಡಿ ಶಾಸನವು ದೊರೆತಿರುವ ಮೊದಲ ಕನ್ನಡ ಬರವಣಿಗೆ ಎನ್ನಲಾಗಿದೆ.

ಕನ್ನಡಕ್ಕೆ ತೀರ ನಿಕಟವಾಗಿರುವ ಭಾಷೆಗಳೆಂದರೆ ತುಳು ಮತ್ತು ಕೊಡಗು ಭಾಷೆಗಳು. ಒಂದೆಡೆ ಕನ್ನಡ, ಇನ್ನೊಂದೆಡೆ ಮಲೆಯಾಳಂ, ಮತ್ತೊಂದೆಡೆ ಕೊಂಕಣಿ ಈ ಮೂರು ಭಾಷೆಗಳ ಆವರಣದಲ್ಲಿ ತುಳು ಇದ್ದು ಇದರ ಮೇಲೆ ಬೇರೆ ಭಾಷೆಗಳಿಗಿಂತ ಕನ್ನಡದ ಪ್ರಭಾವ ಹೆಚ್ಚಾಗಿದೆ. ತುಳುಗೆ ಹೆಚ್ಚಾಗಿ ಕನ್ನಡ ಲಿಪಿಯನ್ನೇ ಬಳಸುತ್ತಾರೆ. ಕೆಲವೆಡೆ ಮಲೆಯಾಳಂ ಲಿಪಿಯೂ ಬಳಕೆಯಲ್ಲಿದೆ. ತುಳುವಿನ ಬಹಳಷ್ಟು ಶಬ್ದಗಳೂ ಕೂಡ ಕನ್ನಡ ಶಬ್ದಗಳೇ. ಕನ್ನಡದ ಬೆಳವಣಿಗೆಯ ಯಾವುದೋ ಹಂತದಲ್ಲಿ ತುಳು ಬೇರೆಯಾಗಿ ಉಳಿದು ನಂತರ ಪ್ರತ್ಯೇಕ ಭಾಷೆಯಾಗಿ ಬೆಳೆಯಿತೆಂದು ತೋರುತ್ತದೆ. ತುಳುವಿನಲ್ಲಿ ಕನ್ನಡದ 'ಪ > ಹ' ಆಗದೆ 'ಪ' ಆಗಿಯೇ ಉಳಿಯುತ್ತದೆ. 'ಪ' ಕಾರದೊಂದಿಗೆ ಕೆಲವು 'ಹ'ಕಾರದ ಪದಗಳೂ ತುಳುವಿಗೆ ಕನ್ನಡದಿಂದ ಸೇರಿಬಿಟ್ಟಿವೆ. ಉದಾಹರಣೆಗೆ ಹಲವು, ಹಗಲು, ಹಸಿ, ಹಾಸಿಗೆ, ಹಾವು, ಹಾಳು ಮುಂತಾದ ಪದಗಳನ್ನು ನೋಡಬಹುದು. ಕೆಲವು ವೇಳೆ 'ಳ್' ಕಾರದ ಬದಲಿಗೆ ತುಳುವಿನಲ್ಲಿ 'ರ್' ಕಾರವಿದೆ. ಉದಾ : ಪಲ್ಲು > ಪರು ಇತ್ಯಾದಿ.

ಕನ್ನಡ ಮತ್ತು ಕೊಡಗು ಭಾಷೆಗಳಿಗಿರುವ ವ್ಯತ್ಯಾಸ ತುಂಬಾ ಕಡಿಮೆ - ಇಂಗ್ಲಿಷ್ ಮತ್ತು ಪಿಜಿನ್ ಇಂಗ್ಲಿಷ್ ಇದ್ದಂತೆ. ಪಿಜಿನ್ ಇಂಗ್ಲಿಷ್‌ನಲ್ಲಿ ಇಂಗ್ಲಿಷ್ ಪದಗಳೇ ಇದ್ದರೂ ಅದರದೇ ಆದ ಒಂದು ವ್ಯಾಕರಣ ಹಾಗೂ ಇತರ ವೈಶಿಷ್ಟ್ಯಗಳಿವೆ.

### ಅ. ಕನ್ನಡದಿಂದ ತಮಿಳು ಸಾಹಿತ್ಯಕ್ಕೆ

ತಮಿಳಿನಲ್ಲಿ 'ಬೃಹತ್ಕಥೆ' ಎಂಬರ್ಥದಲ್ಲಿ 'ಪೆರುಂಗತೈ' ಎಂಬ ಕೃತಿಯಿದೆ. ಗುಣಾಢ್ಯನ ಬೃಹತ್ಕಥೆಯ ಸಂಸ್ಕೃತಾನುವಾದವನ್ನು ದುರ್ವಿನೀತ ಮಾಡಿದ್ದು ತಮಿಳಿನ 'ಪೆರುಂಗತೈ'ಗೆ ಈ ಸಂಸ್ಕೃತ ಅನುವಾದ ಮೂಲವಾಗಿತ್ತೆಂದು ನಂಬಿದಲ್ಲಿ, ಕನ್ನಡಿಗರು ತಮಿಳಿನ ಕೃತಿಯೊಂದು ಹೊರತರಲು ಕಾರಣಕರ್ತರಾಗಿದ್ದಾರೆನ್ನಬಹುದು. ಹೀಗೆಯೇ ಹತ್ತನೇ ಶತಮಾನಕ್ಕೂ ಮುಂಚೆಯೇ ಕನ್ನಡ ಲಕ್ಷಣ ಗ್ರಂಥವಾದ 'ಗುಣಗಾಂಕಿಯಂ' ಎಂಬುದರ ಪ್ರಭಾವ ತಮಿಳಿನ ಮೇಲೆ ಬಿದ್ದಿತೆಂದು ತಿಳಿಸುತ್ತಾರೆ. 'ಯಾಪ್ಪರುಂಗಲಮ್' ಎಂಬ ತಮಿಳು ಛಂದೋಗ್ರಂಥದ ವ್ಯಾಖ್ಯಾನವೊಂದರಲ್ಲಿ ಈ ಬಗ್ಗೆ ಉಲ್ಲೇಖ ಉಂಟು.

ಹದಿನೈದನೇ ಶತಮಾನದ ಚಾಮರಸನ 'ಪ್ರಭುಲಿಂಗಲೀಲೆ'ಯನ್ನು ನಿಜಗುಣ ಶಿವಯೋಗಿಗಳ 'ವಿವೇಕ ಚಿಂತಾಮಣಿ'ಯ ವೇದಾಂತ ಪರಿಚ್ಛೇದವನ್ನು ಹದಿನೇಳನೇ ಶತಮಾನದ ಶಿವಪ್ರಕಾರ ಸ್ವಾಮಿ ತಮಿಳಿಗೆ ಭಾಷಾಂತರಿಸಿದ್ದಾನೆ.

ಇಪ್ಪತ್ತನೇ ಶತಮಾನದ ಆದಿಭಾಗದಲ್ಲೂ ಕೆಲವು ಕನ್ನಡ ಗ್ರಂಥಗಳು ತಮಿಳಿಗೆ ಅನುವಾದವಾಗಿದೆ. ನರಹರಿ ಜಯರಾಯಾಚಾರ್ಯ ಎಂಬುವರು 1905ರಲ್ಲಿ ಬರೆದ 'ಕರ್ನಾಟಕ ಪಾಕಶಾಸ್ತ್ರ' ಎಂಬ ಗ್ರಂಥ ತಮಿಳು, ತೆಲುಗುಗಳಿಗೆ ಅನುವಾದವಾಗಿದೆ. ಇತ್ತೀಚಿನ ದಿನಗಳಲ್ಲಿ ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆಯನ್ನು ಒಳಗೊಂಡಂತೆ ಹಲವಾರು ಪುಸ್ತಕಗಳು ತಮಿಳಿಗೆ ಭಾಷಾಂತರಗೊಂಡಿವೆ.

### ಆ. ಕನ್ನಡದಿಂದ ತೆಲುಗು ಸಾಹಿತ್ಯಕ್ಕೆ

ಪಾಲ್ಕುರಿಕೆ ಸೋಮನಾಥ ಕನ್ನಡಿಗರಿಗೂ ತೆಲುಗರಿಗೂ ಅಚ್ಚುಮೆಚ್ಚಿನ ಕವಿ. ಕನ್ನಡದ ರಾಘವಾಂಕ ಕವಿಯ 'ಹರಿಶ್ಚಂದ್ರ ಚಾರಿತ್ರ' ತೆಲುಗಿನಲ್ಲಿ ಅಂಥದೇ ಅನೇಕ ರಚನೆಗಳಿಗೆ ಸ್ಫೂರ್ತಿ ನೀಡಿದೆ. ಕನ್ನಡದಲ್ಲಿ ಕೆರೆಯ ಪದ್ಮರಸ ಬರೆದಿರುವ 'ದೀಕ್ಷಾ ಬೋಧೆ'ಯನ್ನು ಪಿಡುಪರ್ತಿ ಬಸವ ಕವಿ 'ವೀರಶೈವ ದೀಕ್ಷಾ ಬೋಧ' ಎಂಬುದಾಗಿ ತೆಲುಗಿಗೆ ಅನುವಾದಿಸಿದ್ದಾರೆ. ಕನ್ನಡದ ಕುಮಾರ ಪದ್ಮರಸನ ಹಾಗೂ ತೆಲುಗಿನ ಭದ್ರ ಕವಿ ಲಿಂಗಕವಿಯ ಸಾನಂದ ಚರಿತ್ರೆಗಳಲ್ಲಿ ಹೋಲಿಕೆ ಉಂಟು. ರುದ್ರಭಟ್ಟನ 'ಜಗನ್ನಾಥ ವಿಜಯ'ದಲ್ಲಿ ಬರುವ 'ಪಾರಿಜಾತ ಪಹರಣ' ಪ್ರಸಂಗ ತೆಲುಗಿನ ನಂದಿ ತಿಮ್ಮನನ 'ಪಾರಿಜಾತಾಪಹರಣಮು' ಕೃತಿಯ ಸನ್ನಿವೇಶಕ್ಕೆ ಅನುರೂಪವಾಗಿದೆ. ರಟ್ಟಕವಿಯ ಮಳೆ ಶಾಸ್ತ್ರವನ್ನು ಕುರಿತ 'ರಟ್ಟಮತ' 16ನೇ ಶತಮಾನದಲ್ಲಿ ತೆಲುಗಿಗೆ ಅನುವಾದವಾಗಿದೆ.

ಪಿಡುಪರ್ತಿ ಸೋಮನಾಥ ಕನ್ನಡದ ಚಾಮರಸನ 'ಪ್ರಭುಲಿಂಗಲೀಲೆ' ಯನ್ನು ತೆಲುಗಿಗೆ ಅನುವಾದಿಸಿದ್ದಾನೆ. ಲಕ್ಷ್ಮೀಶನ ಕಾಲದ ಬಗ್ಗೆ ಭಿನ್ನಾಭಿಪ್ರಾಯವಿರುವುದರಿಂದ ಆತನ ಪ್ರಭಾವ ಪಿಲ್ಲರ ಮರ್ರಿ ಪಿನವೀರನ 'ಜೈಮಿನಿಭಾರತ'ದ ಮೇಲೆ ಎಷ್ಟರಮಟ್ಟಿಗೆ ಬಿದ್ದಿದೆ ಎಂದು ನಿಶ್ಚಯವಾಗಿ ಹೇಳಲಾಗುತ್ತಿಲ್ಲ.

19 ಮತ್ತು 20ನೇ ಶತಮಾನದಲ್ಲಿ ಕನ್ನಡದಿಂದ ತೆಲುಗಿಗೆ ಅನೇಕ ಕೃತಿಗಳು ಅನುವಾದಗೊಂಡುದಲ್ಲದೆ ಅನೇಕ ಮಂದಿ ಕನ್ನಡಿಗರು ತೆಲುಗಿನಲ್ಲೂ ತಮ್ಮ ಕೃತಿಗಳನ್ನು ರಚಿಸಿದರು. ಡಿ. ವಿ. ಗುಂಡಪ್ಪನವರು 'ಮಂಕುತಿಮ್ಮನ ಕಗ್ಗ'ವನ್ನು ಕಲುಗೋಡು ಅಶ್ವತ್ಥರಾವು ತೆಲುಗಿಗೆ ಅನುವಾದಿಸಿದ್ದಾರೆ ಬಸವಣ್ಣನವರ ವಚನಗಳು ತೆಲುಗಿಗೆ ಹೋಗಿವೆ. ಕಂಬಾಲ ವೆಂಕಟಸುಬ್ಬರಾವು 1895ರಲ್ಲಿ ಬರೆದ "ಕೇಸರಿ ವಿಲಾಸ" ಎಂಬ ಕಾದಂಬರಿ ತೆಲುಗಿನಲ್ಲೂ ಇದೆ. ಇತ್ತೀಚೆಗೆ ಕನ್ನಡದ ಹೆಸರಾಂತ ಕಾದಂಬರಿಕಾರರ ಹಾಗೂ ಸಣ್ಣಕತೆಗಾರರ ಮತ್ತು ನಾಟಕಕಾರರ ಕೃತಿಗಳು ಭಾಷಾಂತರಗಳ ಮೂಲಕ ತೆಲುಗಿಗೆ ಹೋಗುತ್ತಿವೆ.

### ಇ. ಕನ್ನಡದಿಂದ ಮಲಯಾಳಂ ಸಾಹಿತ್ಯಕ್ಕೆ

ಸಂಸ್ಕೃತ ಮತ್ತು ಕನ್ನಡ ಕಾವ್ಯಗಳಲ್ಲಿ ಬರುವ 'ಚೇರರಾಜ್ಯ'ಪದ ಕೇರಳಕ್ಕೆ ಸಂಬಂಧಪಟ್ಟಿರಬೇಕು. ಕೇರಳದ ಪಾಟ್ಟು ಸಾಹಿತ್ಯಕ್ಕೆ ಸೇರಿದ 'ರಾಮಚರಿತಮ್' ಮೇಲೆ ನಾಗಚಂದ್ರನ ಪ್ರಭಾವ, ಎಮಿತ್ರಟ್ಟಿನ್ನನ ಭಾರತದ ಮೇಲೆ ಪಂಪನ ಪ್ರಭಾವ. ಕಿಳಿಪಾಟ್ಟುಗಳ ಮೇಲೆ ಕನ್ನಡದ ಗಿಳಿಹಾಡುಗಳ ಪ್ರಭಾವ, ಮಣಿ ಪ್ರವಾಳ ಎಂಬ ಸಂಸ್ಕೃತನಿಷ್ಠ ಮಲೆಯಾಳಂ ಕಾವ್ಯ ಶೈಲಿಯಲ್ಲಿ ಕ್ರಿ. ಶ. 1500-1800ರ ನಡುವೆ ಬಂದ ಚಂಪೂ ಕಾವ್ಯಗಳಿಗೆ ಕನ್ನಡದ ಚಂಪೂ ಕಾವ್ಯಗಳು ಪ್ರೇರಕವಾಗಿದ್ದವು ಎನ್ನುವುದು ಊಹೆಮಾತ್ರ. ಇತ್ತೀಚೆಗೆ ಕನ್ನಡದ ಅನೇಕ ಸಾಹಿತ್ಯ ಪ್ರಕಾರಗಳು ಮಲೆಯಾಳಂಗೆ ಅನುವಾದ ರೂಪದಲ್ಲಿ ಹೋಗುತ್ತಿವೆ. 'ಅಬಚೂರಿನ ಪೋಸ್ಟ್ ಆಫೀಸ್' ಮುಂತಾದ ಕತೆಗಳೂ ನಿರಂಜನರ 'ಚಿರಸ್ಮರಣೆ' ಮುಂತಾದ ಕಾದಂಬರಿಗಳೂ ಮಲೆಯಾಳಂಗೆ ಅನುವಾದಗೊಂಡಿವೆ.

### ಈ. ಕನ್ನಡದಿಂದ ಸಂಸ್ಕೃತ ಸಾಹಿತ್ಯಕ್ಕೆ

ಚಾಮರಸನ "ಪ್ರಭುಲಿಂಗಲೀಲೆ" ಸಂಸ್ಕೃತಕ್ಕೆ ಅನುವಾದವಾಗಿದೆ. ಕನ್ನಡದ ಅಲಂಕಾರಿಕರಲ್ಲಿ ಒಬ್ಬನಾದ ಸಾಳ್ವನ (1550) 'ರಸರತ್ನಾಕರ'ನನ್ನು ಆಧರಿಸಿ ರುದ್ರಭಟ್ಟನೆಂಬಾತ ಸಂಸ್ಕೃತದಲ್ಲಿ 'ರಸಕಲಿಕಾ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಕನ್ನಡ ಛಂದೋಶಾಸ್ತ್ರವಲ್ಲಿರುವ ಅನೇಕ ಹೊಸ ವಿಷಯಗಳು ಸಂಸ್ಕೃತ ಸಾಹಿತ್ಯವನ್ನು ನಾಗವರ್ಮ ಮೊದಲಾದವರ ಮೂಲಕ ಪ್ರವೇಶಿಸಿರುವುದಾಗಿ ಕಂಡುಬರುತ್ತದೆ. ಜಯಕೀರ್ತಿ (ಸುಂ 1050) ಎಂಬಾತನ 'ಛಂದೋನುಶಾಸನ' ಎಂಬ ಸಂಸ್ಕೃತ ಛಂದೋಗ್ರಂಥವಲ್ಲಿ ಕನ್ನಡದ ನಾಗವರ್ಮನ 'ಛಂದೋಂಬುಧಿ'ಯ ಪ್ರಭಾವ ಎದ್ದು ಕಾಣುತ್ತದೆ. ಇದರಲ್ಲಿ ಕನ್ನಡ ಛಂದಸ್ಸಿಗೆ ಸಂಬಂಧಪಟ್ಟಂತೆಯೆ ಒಂದು ಭಾಗ ಸಹ ಇದೆ. ಹೇಮಚಂದ್ರ ಮುಂತಾದವರ ಮೇಲೂ ಛಂದೋಂಬುಧಿ ಪ್ರಭಾವವಿದೆ ಎಂದು ಹೇಳಲಾಗಿದೆ. ಮೂರನೇ ಸೋಮೇಶ್ವರನ 'ಮಾನಸೋಲ್ಲಾಸ ಮತ್ತು ಶಾರ್ಙ್ಗದೇವನ' ಸಂಗೀತ ರತ್ನಾಕರಗಳಲ್ಲಿಯೂ ಕನ್ನಡ ಛಂದಸ್ಸಿನ ಪ್ರಸ್ತಾಪ ಉಂಟು.

ಹತ್ತನೇ ಶತಮಾನದ ನೇಮಿಚಂದ್ರಯತಿ 'ಗೊಮ್ಮಟಸಾರ' 'ತ್ರಿಲೋಕಸಾರ'ಗಳನ್ನು ರಚಿಸಿದನು. 'ಗೊಮ್ಮಟಸಾರ'ಕ್ಕೆ ಬರೆಯಲಾದ ಕನ್ನಡ ವ್ಯಾಖ್ಯಾನವನ್ನು ಮತ್ತೊಮ್ಮೆ ನೇಮಿಚಂದ್ರನೆಂಬ ಕವಿ ಸಂಸ್ಕೃತಕ್ಕೆ ಅನುವಾದಿಸಿದ್ದಾನೆ.

### ಉ. ಕನ್ನಡದಿಂದ ಮರಾಠಿ ಸಾಹಿತ್ಯಕ್ಕೆ

ಕುಮಾರವ್ಯಾಸನ ಭಾರತವನ್ನು ಮುಕ್ತೇಶ್ವರ ಮತ್ತು ಚಂದ್ರಾತ್ಮಜರೆಂಬ ಮರಾಠಿ ಕವಿಗಳು ಅನುಸರಿಸಿದ್ದಾರೆ. ಚಾಮರಸನ 'ಪ್ರಭುಲಿಂಗಲೀಲೆ'ಯನ್ನು ಬ್ರಹ್ಮದಾಸನೆಂಬ 18ನೇ ಶತಮಾನದ ಮರಾಠಿ ಕವಿ 'ವಿಶ್ವಂಭರಲೀಲ' ಎಂಬ ಹೆಸರಿನಲ್ಲಿ ಭಾಷಾಂತರಿಸಿದ್ದಾನೆ. ಜಗನ್ನಾಥದಾಸರ 'ಹರಿಕಥಾಮೃತಸಾರ' ಮತ್ತು ಲಕ್ಷ್ಮೀಶನ 'ಜೈಮಿನಿಭಾರತ'ಗಳನ್ನು ಶೇಷಗಿರಿರಾಯರು ಹಾಗೂ ಯಶವಂತ ಭಾಸ್ಕರ ಜಠಾರರು 19ನೇ ಶತಮಾನದಲ್ಲಿ ಮರಾಠಿಗೆ ಅನುವಾದಿಸಿದ್ದಾರೆ. ಜ್ಞಾನೇಶ್ವರರ ಕೌಂಟಾಚ್ಯಾ ಅನ್‌ವರ ವಸತಿ ತೀನಗಾಂವ್.........' ಎಂಬ ಕೂಟ ಪದ ಒಂದರಲ್ಲಿ 'ಮುಳ್ಳುಕೋಲಿನ ಮೇಲೆ ಮೂರು ಕಟ್ಟೆಯ ಕಟ್ಟೆ.....' ಎನ್ನುವ ಪುರಂದರದಾಸರ ಛಾಯೆ ಸ್ಪಷ್ಟವಾಗಿ ಕಂಡುಬರುತ್ತದೆ. ಮರಾಠಿಯ ಏಕನಾಥನ ಮೇಲೆ ಕೂಡ ಪುರಂದರದಾಸರ ಪ್ರಭಾವ ಬಿದ್ದಿದೆ ಎನ್ನಲಾಗಿದೆ.

ಹತ್ತೊಂಬತ್ತನೇ ಶತಮಾನದ ಮರಾಠಿ ನಾಟಕ ಸಾಹಿತ್ಯದ ಮೇಲೆ ಕನ್ನಡದ 'ಶ್ರೀಕೃಷ್ಣಪಾರಿಜಾತ'ದ ಪ್ರಭಾವ ಬಿದ್ದಿದೆ ಎನ್ನಲಾಗಿದೆ. ಕನ್ನಡಿಗರಾದ ವೆಂಕಟರಂಗೋ ಕಟ್ಟಿ ಮರಾಠಿಯಲ್ಲಿ 'ಸವಾಯಿ ಮಾಧವ ರಾಮಾಂಚೆ ನಾಟಕ' ಎಂಬ ಸ್ವತಂತ್ರ ಐತಿಹಾಸಿಕ ನಾಟಕವೊಂದನ್ನು ರಚಿಸಿದ್ದಾರೆ. ಕನ್ನಡದ ಅನೇಕ ಪ್ರಸಿದ್ಧ ಸಾಹಿತಿಗಳ ಕೃತಿಗಳು ಮರಾಠಿಗೆ ಅನುವಾದಗೊಂಡಿವೆ.

■

### ಅಡಿ ಟಿಪ್ಪಣಿ

1. ರಾಷ್ಟ್ರಕವಿ ಕುವೆಂಪು : ಸಾಹಿತ್ಯ ಪ್ರಚಾರ, ಪುಟ 40
2. ಪ್ರೊ. ಎಸ್. ಅನಂತನಾರಾಯಣ : ಹೊಸಗನ್ನಡದ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ
3. ಇ. ಪಿ. ರೈಸ್. ಕಾನರಸ್ ಸಾಹಿತ್ಯ (1921) ಪುಟ 16
4. 'ಶ್ರೀ' ಕನ್ನಡ ಕೈಪಿಡಿ, ನಂ. 2. ಪುಟ 409
5.. ಅನಂತನಾರಾಯಣ ಎಸ್. ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ. ಮೈಸೂರು. 1962 ಪುಟ 52.
6. ರಾ.ಯ. ಧಾರವಾಡಕರ, ಹೊಸಗನ್ನಡ ಉದಯಕಾಲ, ಪುಟ 377
7. ಹಟ್ಟಿಂಗಡಿ ನಾರಾಯಣರಾಯರು : ಆಂಗ್ಲಕವಿತಾವಳಿ (1919) ಮುನ್ನುಡಿ
8. ನೋಡಿ 'ಕವಿತಾ ವರ್ಧನ' ಪರಿಷತ್ಪತ್ರಿಕೆ, ಸಂಪುಟ 3. ಸಂಚಿಕೆ - 4. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. 1919. ಪುಟ 22-23.
9. ಹ. ನಾರಾಯಣರಾಯರು : 'ಕನ್ನಡ ಕವಿತೆಯ ಭವಿತೆಯು' ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ. 2 (ಏಪ್ರಿಲ್ 1918) ಪುಟ 65-68
10. ಡಾ : ರಂ. ಶ್ರೀ. ಮುಗಳಿ
11. ಶೇಖರ ಇಡ್ಯ, ಪಂಜೆ ಮಂಗೇಶರಾವ್, ಪುಟ 29.
12. ಗೋವಿಂದ ಪೈ. ಎಂ., ಸಾಹಿತ್ಯಪ್ಪರ ಆತ್ಮ ಕಥನ ದೀವಿಗೆ (ಗೋವಿಂದ ಪೈ ಸ್ಮಾರಕ ಗ್ರಂಥ) ಕುಂದಾಪುರ. ಪುಟ 3.
13. ಬಿ. ಎಂ. ಶ್ರೀ. 'ಇಂಗ್ಲಿಷ್ ಗೀತಗಳು' 1979 ಪುಟ 6

14. ಬಿ. ಎಂ. ಶ್ರೀ. 'ಇಂಗ್ಲಿಷ್ ಗೀತಗಳು' 1978 ಪುಟ 21.

15. ಪ್ರೊ. ಎಸ್. ಅನಂತನಾರಾಯಣ, ಹೊಸಗನ್ನಡ ಕವಿತ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ ಪುಟ 31

16. ಎ. ಬಿ. ವಯಟ್ಕ ಕಿರಸ್ ಅಕಿಂದ್ರೇಸ್ 1915 (ಎ. ಶ್ರೀಕಂಠಯ್ಯ ಬಿ. ಎ)

17. ಡಾ : ಸಿ. ಪಿ. ಕೆ., ಈ ಕಾಲದ ಇಂಗ್ಲಿಷ್ ನಾಟಕಗಳ ಅನುವಾದಗಳು (ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ 6) ಪಂ.ಪ
ಪುಟ 64

18. ಡಾ : ಶ್ರೀನಿವಾಸ ಹಾವನೂರ, ಹೊಸಗನ್ನಡದ ಅರುಣೋದಯ, ಪುಟ 408.

19. ತ.ಸು.ಶಾಮರಾಯ, 'ಕನ್ನಡ ನಾಟಕ', ಪುಟ 146

20. ಎ. ಆನಂದರಾಯರು, 'ರಾಮವರ್ಮ - ಲೀಲಾವತಿ' 1889

21. ಎ. ಆನಂದರಾಯರು, 'ರಾಮವರ್ಮ - ಲೀಲಾವತಿ' 1889

22. ಡಾ : ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, ಪುಟ 407

23. ಎಂ. ಎಸ್. ಪುಟ್ಟಣ್ಣ, ಹೇಮಚಂದ್ರ ರಾಜವಿಲಾಸ (1899) ಪೀಠಿಕೆ.

24. ಶ್ರೀನಿವಾಸ ಹಾವನೂರ, ಹೊಸಗನ್ನಡದ ಅರುಣೋದಯ, ಪುಟ 406

25. ಶ್ರೀನಿವಾಸ ಹಾವನೂರ : ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ ಹನಿಗದ್ದೆ ಕಂಪ್ಯೂಟರ್ ಇತ್ಯಾದಿ, ಪುಟ 86

26. ರಾಮಚಂದ್ರದೇವ : ಶೇಕ್ಸ್‌ಪಿಯರ್ 125 ವರ್ಷ, ಉದಯವಾಣಿ, 11-1-1996

27. ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, ಪುಟ 406

28. ಡಾ : ಎಚ್. ಕೆ. ರಂಗನಾಥ್, 'ಕರ್ನಾಟಕ ರಂಗಭೂಮಿ' ಪುಟ 212

29. ಎಂ. ಎಸ್. ಪುಟ್ಟಣ್ಣ 'ಜಯಸಿಂಹರಾಜ ಚರಿತ್ರೆ' (1851) ಪೀಠಿಕೆ, ಪುಟ 1.

30. ಬಿ. ವೆಂಕಟಾಚಾರ್ಯ 'ದುರ್ಗೇಶ ನಂದಿನಿ' 1910 (2)

31. ಬಿ. ವೆಂಕಟಾಚಾರ್ಯ, 'ರಾಜಸಿಂಹ' ಪುಟ 1.

32. ಬಿ. ವೆಂಕಟಾಚಾರ್ಯ, 'ಸೀತಾರಾಮ' ಪುಟ 11.

33. ಬಿಂಡಿಗನವಿಲೆ ವೆಂಕಟಾಚಾರ್ಯರು, ಜಿ. ವೆಂಕಟಯ್ಯ, ಪುಟ 138-140

34. ಸಮಗ್ರ ಕನ್ನತ ಸಾಹಿತ್ಯ, ಬೆಂಗಳೂರು ವಿ. ವಿ. ನಿಲಯ ಪ್ರಕಟಣೆ, ಪುಟ 179

35. ಜಿ. ಎಸ್. ಶಿವರುದ್ರಪ್ಪ, 'ಗತಿಬಿಂಬ', ಪುಟ 104

36. ಪ್ರೊ. ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಪುಟ 184

37. ಕೃಷ್ಣಮೂರ್ತಿ ಕಿತ್ತೂರ, ಗಳಗನಾಥರು ಮತ್ತು ಅವರ ಕಾದಂಬರಿ, ಪುಟ 376

38. ಡಾ: ಹರಿಕೃಷ್ಣ ಭರಣ್ಯ, ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ, ಪುಟ 41

39. ಕೆರೋಡಿ ರಾಮರಾಯರು, ಝಾನ್ಸಿ ಸಂಸ್ಥಾನದ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ಚರಿತ್ರೆ, 1903 ಪುಟ 1.

40. ಕೆರೋಡಿ ರಾಮರಾಯರು, ಝಾನ್ಸಿ ಸಂಸ್ಥಾನದ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ಚರಿತ್ರೆ, 1903 ಪುಟ 11.

41. ಡಾ: ಚನ್ನವೀರಕಣವಿ, ಡಾ: ಸುಮತೀಂದ್ರ ನಾಡಿಗ, ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು, ಇದರ ಮುನ್ನುಡಿಯಲ್ಲಿ
ಪುಟ 40.

42. ಡಾ: ಸುಮತೀಂದ್ರ ನಾಡಿಗ್, ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು, ಪುಟ 17.

# ಕೆಲವು ಪ್ರಾತಿನಿಧಿಕ ಅನುವಾದ ಕೃತಿಗಳ ಅಧ್ಯಯನ

## ಅ. 'ಶ್ರೀ' ಯವರ 'ಇಂಗ್ಲಿಷ್ ಗೀತಗಳು'

ಕನ್ನಡದ ಕಣ್ವ 'ಶ್ರೀ' ಯವರ ''ಇಂಗ್ಲಿಷ್ ಗೀತಗಳು'' ಹೊರಬಂದಾಗ ಕನ್ನಡ ಸಾಹಿತ್ಯದಲ್ಲಿ ಅರುಣೋದಯವಾಯಿತು. ಶ್ರೀಯವರು ನವಯುಗದ ಪ್ರವರ್ತಕರಾದರು. ಅವರ ಪ್ರಭಾವ ಗುಪ್ತಗಾಮಿನಿಯಾಗಿ ಅನೇಕ ಮರಗಳಿಗೆ ನೀರೆರೆಯಿತು. ಕನ್ನಡ ಸಾಹಿತ್ಯದಲ್ಲಿ ಹೊಸತನ ಬಂದು ಬೆಳೆಯಲು ಸಾಧ್ಯವಾಯಿತು. ಅವರ ಮುಖ್ಯ ಸಾಧನೆ ಕಾವ್ಯ ಸೃಷ್ಟಿಯಲ್ಲ, ಕವಿ ಸೃಷ್ಟಿ.

'ನುಡಿದು ಕಲಿಸಿದಿರಿ, ನುಡಿಯದೆ ಮತ್ತೆ ಕಲಿಸಿದಿರಿ
ದುಡಿದು ಕಲಿಸಿದಿರಿ, ಮನದರಿಕೆಗಳನೆಚ್ಚರಿಸಿ
ಎಳೆಯರೆದೆಯಲಿ ಹಾಡುವಾಸೆಯನು ಸುಳಿಸಿದಿರಿ'

ಎಂದು ಮಾಸ್ತಿಯವರು 'ಶ್ರೀಯವರ ಬಗ್ಗೆ ಹೇಳಿದ್ದಾರೆ.[1] ''ಅನೇಕ ಕಿರಿಯರನ್ನು ಸಮಾನರಂತೆ ಕಂಡು, ಅವರ ಲಜ್ಜಾಭಯಗಳನ್ನು ಪರಿಹರಿಸಿ, 'ಶ್ರೀ'ಯವರು ತಮ್ಮ ಕನ್ನಡದ ತೇಜಸ್ಸನ್ನು ಸಾವಿರಾರು ಹೃದಯಗಳಲ್ಲಿ ಹರಿಯಬಿಟ್ಟಿದ್ದಾರೆ.''[2] ಎಂದಿದ್ದಾರೆ. ರಾಷ್ಟ್ರಕವಿ ಕುವೆಂಪು. ಅವರ ಕುರಿತಾಗಿ ಎಸ್. ವಿ. ರಂಗಣ್ಣನವರು ''ಒಂದು ಮಾತಿನಲ್ಲಿ ಸಂಕ್ಷೇಪಿಸುವುದಾದರೆ, ಈಗ ತಾನೇ ಮುಗಿದ ತಲೆಮಾರಿನ ಕರ್ನಾಟಕದ ಎಲ್ಲಾ ಪ್ರಗತಿ ಪ್ರಯತ್ನಗಳಿಗೂ ಅವರು ಚೈತನ್ಯ ದುಸಿರು, ಜೀವರಕ್ಷ, ವಾಹಕಶಕ್ತಿಯಾಗಿದ್ದರು''[3] ಎಂದಿದ್ದಾರೆ. ಹೀಗೆ 'ಶ್ರೀ'ಯವರು ಹೊಸಗನ್ನಡ ಕಾವ್ಯ ಕುಲಪತಿಗಳಾಗಿ, ವಿದ್ವಾಂಸರಿಗೆ, ಕವಿಗಳಿಗೆ ಕರುಣಾಳು ಬೆಳಕಾಗಿ ಆಚಾರ್ಯ ಪದವಿಗೇರಿ ಮೂಲಪುರುಷರಾದರು.

ರಷ್ಯನ್ ಕತೆಗಾರ ಗೊಗೋಲ್(Gogol)ನ ಬಗ್ಗೆ ''ನಾವೆಲ್ಲಾ ಗೋಗೋಲ್‌ನ 'ನಿಲುವಂಗಿ'ಯಿಂದ ಬಂದವರು'' ಎಂದು ಪುಷ್ಕಿನ್ ಕವಿ ಹೇಳಿದ್ದಾನೆ. ಗೊಗೋಲ್ ಬರೆದ ಕತೆ ನಿಲುವಂಗಿ (The overcoat) ಅಂತಹ ಒಂದು ಪರ್ವಕೃತಿ. ಅದೇ ರೀತಿಯಲ್ಲಿ ಹೊಸಗನ್ನಡದಲ್ಲಿ ಇಂದು ಹೆಸರಾಗಿರುವ ಕವಿಗಳಲ್ಲಿ ಬಹುಮಂದಿ 'ಶ್ರೀಯವರ' 'ಇಂಗ್ಲಿಷ್ ಗೀತಗಳು' ನೆರಳಿನಲ್ಲಿ ಬೆಳೆದವರು ಎಂದು ಹೇಳಬಹುದು. ಕನ್ನಡ ಕವಿತೆಯ ಬೆಳವಣಿಗೆಯಲ್ಲಿ ಅವರ 'ಇಂಗ್ಲಿಷ್ ಗೀತಗಳು' ಅಂತಹ ಪ್ರಮುಖವಾದ ಘಟ್ಟ ಪರ್ವಕೃತಿ.''[4]

''ಶ್ರೀ'' ಯವರಿಗಿಂತ ಮೊದಲು ಬಂದ ಇಂಗ್ಲಿಷ್ ಅನುವಾದಕರಲ್ಲಿ ಹೊಸ ಭಾವ, ಹೊಸ ವಸ್ತು, ಹೊಸ

ಭಾಷೆಗಳಿದ್ದರೂ ಹೊಸ ಛಂದೋರೂಪ ಸೃಷ್ಟಿಯಾಗದಿರುವುದು, ಹೊಸ ಶೈಲಿಯ ಪೂರ್ಣ ಸೃಷ್ಟಿಯಾಗದಿರುವುದು ಕಂಡುಬರುತ್ತದೆ. 'ಇಂಗ್ಲಿಷ್ ಗೀತಗಳು' ಸಮಗ್ರವಾಗಿ ಹೊಸತನವನ್ನು ಮೈಗೂಡಿಸಿಕೊಂಡು ಬಂದಿದೆ. "ಸಾಂಪ್ರದಾಯಿಕ ದೃಷ್ಟಿಯಿಂದ ನೋಡಿದರೆ ಇಂಗ್ಲಿಷ್ ಗೀತಗಳಲ್ಲಿ ಎಲ್ಲವೂ ಹೊಸದು. ಉದ್ದೇಶ ಪೂರ್ವಕವಾಗಿ ಆಮೂಲಾಗ್ರವಾಗಿ ಹೊಸದು. ಭಾಷೆ ಹೊಸದು, ರೀತಿ ಹೊಸದು, ಛಂದಸ್ಸು ಹೊಸದು" ಎಂದಿದ್ದಾರೆ ತೀ.ನಂ.ಶ್ರೀ.

ಶ್ರೀಯವರು ತಮ್ಮ ಉದ್ದೇಶವನ್ನು "ಕಾಣಿಕೆ"ಯಲ್ಲಿ ಹೀಗೆ ಹೇಳಿದ್ದಾರೆ.

ಮೊದಲ ತಾಯ ಹಾಲ ಕುಡಿದು
ಲಲ್ಲೆಯಿಂದ ತೊದಲಿ ನುಡಿದು
ಕೆಳೆಯರೊಡನೆ ಬೆಳೆದು ಬಂದ
ಮಾತದಾವುದು -
ನಲ್ಲೆಯೊಲವ ತೆರೆದು ತಂದ
ಮಾತದಾವುದು. -

ಕನ್ನಡ ನುಡಿ, ನಮ್ಮ ಹೆಣ್ಣು
ನಮ್ಮ ತೋಟದಿನಿಯ ಹಣ್ಣು
ಬಳಿಕ, ಬೇರೆ ಬೆಳೆದ ಹೆಣ್ಣು
ಬಳಿಗೆ ಸುಳಿದಳು
ಹೊಸದು ರಸದ ಬಳ್ಳಿ ಹಣ್ಣು
ಒಳಗೆ ಸರಿದಳು

ಪಡುವಕಡಲ ಹೊನ್ನಹೆಣ್ಣು
ನನ್ನ ಜೀವದುಸಿರು, ಕಣ್ಣು
ನಲಿಸಿ ಕಲಿಸಿ ಮನವಗೊಲಿಸಿ
ಕುಣಿಸುತಿರುವಳು.

ಒಮ್ಮೆ ಇವಳು, ಒಮ್ಮೆ ಅವಳು
ಕುಣಿಸುತಿರುವರು
ಹೀಗೆ ನನಗೆ ಹಬ್ಬವಾಗಿ
ಇನಿಯರಿಬ್ಬರನ್ನು ತೂಗಿ
ಇವಳ ಸೊಬಗನವಳು ತೊಟ್ಟು
ನೋಡಬಯಸಿದೆ
ಅವಳ ತೊಡಿಗೆ ಇವಳಿಗಿಟ್ಟು
ಹಾಡಬಯಸಿದೆ."[6]

ಇದು 'ಶ್ರೀ' ಯವರ ಸ್ವತಂತ್ರ ಕವಿತೆ. ಇಂಗ್ಲಿಷಿನ ಚಲುವನ್ನು ಕನ್ನಡಕ್ಕೆ ತರುವ ತಮ್ಮ ಪ್ರಯತ್ನದ ಬಗ್ಗೆ ಈ

ಕವಿತೆಯಲ್ಲಿ 'ಶ್ರೀ'ಯವರು ಹೇಳಿದ್ದಾರೆ. ಇಂಪಿನಲ್ಲಾಗಲೀ, ಬಗೆಯಲ್ಲಾಗಲೀ, ಪುಷ್ಟಿಯಲ್ಲಾಗಲೀ ಹಳಗನ್ನಡಕ್ಕಿಂತ ಯಾವ ರೀತಿಯಲ್ಲೂ ಇದು ಕಡಿಮೆಯಾಗಿಲ್ಲ. ಇಂಗ್ಲಿಷ್ ಕವಿಗಳು ಶೃಂಗಾರ ರಸದಲ್ಲಿ ತೋರಿದ ಗಾಂಭೀರ್ಯ, ಸೂಕ್ಷ್ಮತೆ, ಸ್ವಾಭಾವಿಕತೆಗಳನ್ನು 'ಕಾಣಿಕೆ'ಯಲ್ಲಿ ಕಾಣಬಹುದು.

ಅಕ್ಷರಶಃ ಭಾಷಾಂತರ ಮಾಡುವುದಕ್ಕಿಂತ ಭಾವದ ಸತ್ವ ಮೂಡಿಸುವುದು ಮುಖ್ಯವೆಂಬುದು ಗಿಲ್ಬರ್ಟ್ ಮರ್ರೆ ಅಭಿಪ್ರಾಯ.[7] "ಶ್ರೀ"ಯವರೂ ಕೂಡ ಮೂಲಭಾವವನ್ನು ಸೆರೆಹಿಡಿದು ಕನ್ನಡದಲ್ಲಿ ಪ್ರತಿಬಿಂಬಿಸಲು ಪ್ರಯತ್ನಿಸಿದ್ದಾರೆ. ಪ್ರಾರಂಭದಲ್ಲಿ ಅವರು ಸ್ವಲ್ಪ ಮೂಲಬಿಟ್ಟು ಚಲಿಸಿದ್ದುಂಟು-

"The cattle are grazing
their heads never raising
there are forty feeding like one"
(written in March - Wordsworth)

ಕೊರಲೆತ್ತಿ ಮೈ ಮರೆತು
ಹರಡಿದೆಳೆಹಸುರಾದ
ಗರುಕೆಯನು ಮೇಯದೆಯೆ ಮಂದೆ ಇಹುದು (ಹೊಳೆಕೆರೆ - ಶ್ರೀ)

ಇಲ್ಲಿ ಕಾಣುವಂತೆ ಕೆಲವೊಮ್ಮೆ ಮೂಲಕವಿತೆಯ ಕಾವ್ಯೋಕ್ತಿಗಳು ಭಾಷಾಂತರಕಾರರನ್ನು ಪ್ರೇರೇಪಿಸಿ ನಾಡಿನ ಭೌಗೋಳಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜಾಯಮಾನಕ್ಕೆ ಒಗ್ಗುವಂತೆ ಕಾವ್ಯೋಕ್ತಿಗಳನ್ನು ಬದಲಿಸಲಾಗಿದ್ದು ಇದರಿಂದ ಅನುವಾದ ಮೂಲಕ್ಕೆ ವಿರುದ್ಧವಾಗಿದೆ ಎನ್ನಬಹುದು. ಈ ಚರಣಗಳು ಅಂದವಾಗಿದ್ದರೂ ಇವು False to words-worth ಎಂದು 'ಶ್ರೀ'ಯವರೇ ಟೀಕಿಸಿದ್ದಾರೆ. ಆ ಮುಂದಿನ ಕವನಗಳಲ್ಲಿ ಇಷ್ಟುಮಟ್ಟಿನ ಸ್ವಾತಂತ್ರ್ಯವನ್ನು ಅನುವಾದಕರು ವಹಿಸಿಲ್ಲ. ಮೂಲದ ಹೆಸರುಗಳನ್ನು ಸಂದರ್ಭಗಳನ್ನೂ ಉಕ್ತಿಗಳನ್ನೂ ತಮ್ಮ ಆವರಣಕ್ಕೆ ಹೊಂದಿಕೊಳ್ಳುವಂತೆ ಅಲ್ಲಲ್ಲಿ ಮಾರ್ಪಡಿಸಿರುವುದುಂಟು, ಆದರೂ ಮೂಲದ ತಿರುಳಿಗೆ ದ್ರೋಹವಾಗದಂತೆ ಎಚ್ಚರಿಕೆ ವಹಿಸಿದ್ದಾರೆ ಎಂದಿದ್ದಾರೆ ತೀ.ನಂ.ಶ್ರೀ.[8] ಶ್ರೀಯವರ ಉತ್ಕೃಷ್ಟ ಅನುವಾದಗಳೆಂದರೆ 'ವಸಂತ', 'ಮುದ್ದಿನ ಕುರಿಮರಿ', 'ಕಾಳಗದಪದ', 'ಮಾದ-ಮಾದಿ' ಮತ್ತು 'ಮುಪ್ಪು-ಯೌವನ', 'ಕನಕಾಂಗಿ', 'ಕಾರಿಹೆಗ್ಗಡೆಯ ಮಗಳು' ಮುಂತಾದವು. ಎರಡು ಮನಸ್ಸು ಶ್ರೀಯವರೇ ಇಂಗ್ಲಿಷ್‌ನಲ್ಲಿ ಬರೆದ 'Two moods' ಕವನದ ಅವರದೇ ಭಾಷಾಂತರ.

ಊದು ಉಸಿರನು; ತುಂಬು
ನಂಬಿಕೆಯನು
ಜೀವ, ಕಾಳಗಕಾದು
ಏಳು, ಗೆಲ್ಲು

ಪ್ರಾಯಶಃ ಈ ಕವನದ ಪ್ರೇರಣೆ 'ಶ್ರೀ'ಯವರ ಪುತ್ರ ತಮ್ಮಯ್ಯನ ಆಕಸ್ಮಾತ್ ಅಂಘಾತ್ಯ; ಇಂತಹ ದುರಂತದಿಂದ ಧೃತಿಗೆಡದೆ ಅವರು ಕನ್ನಡ ಸೇವೆಗೆ ಪಣತೊಟ್ಟಿದ್ದು ಸರ್ವವಿದಿತ. ಇದೊಂದು ಶ್ರೀಯವರ ಯಶಸ್ವಿ ಸೃಜನಶೀಲತೆಗೆ ಒಂದು ಒಳ್ಳೆಯ ಉದಾಹರಣೆ.

"ಅಡವಿಮರದಡಿಯಲ್ಲಿ" ಶೇಕ್ಸ್‌ಪಿಯರ್‌ನ 'Under the greenwood tree' ಕವನದ ಅನುವಾದ.

Here shall we see
No enemy
But winter and rough weather
ಎತ್ತ ನೋಡಿಲೆಲ್ಲಲ್ಲ
ಮತ್ತೆ ಹಗೆಯೊಂದಿಲ್ಲ
ಕೊರೆವ ಚಳಿ ಬಿರುಗಾಳಿಯಲ್ಲದಿಲ್ಲೆ

ಮೂಲ ಪದ್ಯದಲ್ಲಿ ವ್ಯಕ್ತವಾಗುವ ಆನಂದಮಯ ಮತ್ತು ಉಲ್ಲಾಸದ ಪದಗಳು ಭಾಷಾಂತರದಲ್ಲೂ ಧ್ವನಿತವಾದುದನ್ನು ನಾವು ಕಾಣಬಹುದು.

"ಮಳೆಬಿಲ್ಲು" ವರ್ಡ್ಸ್‌ವರ್ತ್ ಕವಿಯ My heart leaps up when I beholdನ ಕನ್ನಡ ಭಾಷಾಂತರ. My heart leaps up when I behold a rainbow in the sky-

ಮುಗಿಲಿನಲಿ ಮಳೆಬಿಲ್ಲ ಕಾಣುತಲೆ ನಾನು
ನೆನೆದು ಕುಣಿದಾಡುವುದು ಹೃದಯ ತಾನು!

ಭಾಷಾಂತರ ಕಾವ್ಯೋಕ್ತಿಗಳು ಹೊಸಗನ್ನಡದಲ್ಲಿ ತಮ್ಮ ಸರಳತೆ ಮತ್ತು ಅಭಿವ್ಯಕ್ತಿಯ ರೀತಿಯನ್ನು ಉಳಿಸಿಕೊಂಡಿವೆ. 'ಮುದ್ದಿನ ಕುರಿಮರಿ' ವರ್ಡ್ಸ್‌ವರ್ತ್‌ನ The pet lambನ ಭಾಷಾಂತರ. The Dew was falling fast, the stars began to blink, I heard a vioce, it said "Drink, pretty creative drink:"

ಹಿಡಿದು ಮಂಜು ಬೀಳುತ್ತಿತ್ತು; ಚುಕ್ಕಿ ಕಣ್ಣು ಮಿಟುಕುತ್ತಿತ್ತು.
"ಕುಡಿಯೋ ಕಂದ ಕುಡಿಯೋ" ಎಂಬ ನುಡಿಯ ಮಾತು ಕಿವಿಗೆ ಬಿತ್ತು.

ಭಾಷಾಂತರದಲ್ಲಿ ಮೂಲದ ಅರ್ಥ, ನಾದ, ಲಯ ಸುಸ್ಪಷ್ಟವಾಗಿ ಮೂಡಿಬಂದಿದೆ. ಅಂಕಿತ ನಾಮಗಳು, ಭಾವ ಮುಂತಾದವು ಕನ್ನಡ ಜನಕ್ಕೆ ಹೊಂದಿಕೊಳ್ಳುವಂತೆ ಬದಲಾಗಿದೆ. ಜನರು ಮಾತನಾಡುವ ಭಾಷೆಯನ್ನು ಆರಿಸಿ ಕಾವ್ಯ ರಚನೆ ಮಾಡುವ ವರ್ಡ್ಸ್‌ವರ್ತ್‌ನ ಉದ್ದೇಶವನ್ನು ಶ್ರೀಯವರು ಅಷ್ಟೇ ಸಮರ್ಪಕವಾಗಿ ಕನ್ನಡಕ್ಕೆ ತಂದಿದ್ದಾರೆ.

ಕವಿಯು ಸ್ವಾತಂತ್ರ್ಯ ವಹಿಸಿರುವುದು ಬರ್ನ್ಸ್ (Bums) ನ ಈ ಕೆಳಕಂಡ ಕವಿತೆಯ ಅನುವಾದದಲ್ಲಿ ಕಾಣಬಹುದು-

"O My love's like a red, red rose,
that's newly sprung in June
o my love's like a melodie
That's weety play'd in time.
As fair art thou, my bonnie lass,
So deep in love am I ;

And I love thee still, my dear,
Till a' "the seas gang dry"[9] *(My love is like a Red Red Rose - Bums)*

ನನ್ನ ಪ್ರೇಮದ ಹುಡುಗಿ ತಾವರೆಯ ಹೊಸಕೆಂಪು
ತಾವರೆಯ ಹೊಸ ಅರಳ ಹೊಳೆವ ಕೆಂಪು
ನನ್ನ ಪ್ರೇಮದ ಹುಡುಗಿ ಕೊಳಲ ಮೆಲು ನುಡಿಯಿಂಪು,
ಕೊಳಲು ಮೋಹಿಸಿ ನುಡಿವ ಗಾನದಿಂಪು
ಬೆಳೆಬೆಳೆಯುತಷ್ಟೆಷ್ಟು ಬಿನ್ನಾಣ, ಎಲೆ ಚಲುವೆ,
ಮುಳುಗಿದೆನು - ಅಷ್ಟಷ್ಟು ಪ್ರೇಮದೊಳಗೆ
ಬತ್ತುವುದು ಕಡಲುಗಳು ಮುಂದಾಗಿ, ಎಲೆ ಚೆಲುವೆ -
ಬತ್ತಲಾರವು ತೊಟ್ಟು ಪ್ರೇಮದೊಳಗೆ'[10] (ನನ್ನ ಪ್ರೇಮದ ಹುಡುಗಿ)

ಮೂಲಕವಿಯ ಸರಳ ಮುಗ್ಧತೆ ಅನುವಾದದಲ್ಲಿ ಕಾಣುತ್ತಿಲ್ಲ 'A fair art thou' ಎಂಬುದು 'ಬೆಳೆಬೆಳೆಯುತಿದೆ ಬಿನ್ನಾಣ' ಎಂದು ರೂಪಾಂತರಗೊಂಡಿರುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ.

ಶ್ರೀಯವರು ಗುಲಾಬಿಯನ್ನು ತಾವರೆಯಾಗಿ ಮಾರ್ಪಡಿಸಿ ಅದು ಅರಳುವ ಕಾಲದ ನಿರ್ದೇಶನವನ್ನು ಬಿಟ್ಟಿದ್ದಾರೆ. ತಾವರೆಯ ಹೊಸಕೆಂಪಿನ ರೂಪಕ ವರ್ಣ ಮತ್ತು ಸಹಜತೆಯ ದೃಷ್ಟಿಯಿಂದ ಮೂಲ ಪದ್ಯದ ಉಪಮಾನದ ಸೌಂದರ್ಯವನ್ನು ಅಷ್ಟು ಚೆನ್ನಾಗಿ ವ್ಯಕ್ತಪಡಿಸಲಾರದು. ಆದರೆ ಎರಡನೆಯ ಕೊಳಲ ರೂಪಕ ಸುಂದರವಾಗಿದ್ದರೂ ಪ್ರೇಮದ ಹುಡುಗಿಯ ಮೆಲುನುಡಿಯಿಂಪನ್ನು ಕೊಳಲಿಗೆ ಸೀಮಿತಗೊಳಿಸುತ್ತದೆ. ಭಾಷಾಂತರದ ದೃಷ್ಟಿಯಿಂದ 'ನನ್ನ ಪ್ರೇಮದ ಹುಡುಗಿ'ಯಲ್ಲಿ ಕೆಲವು ಕೊರತೆಗಳನ್ನು ಗುರುತಿಸಬಹುದು. ಭಾಷೆಯ ಜಾಯಮಾನಕ್ಕೆ ಸಮೀಪವಾಗಿ ಮೂಲಕಾವ್ಯದ ಅರ್ಥವನ್ನು ತರುವುದರ ಕಷ್ಟವನ್ನು ಈ ಯತ್ನ ನಮ್ಮ ಗಮನಕ್ಕೆ ತರುತ್ತದೆ.

'ಕಾಳಗದ ಪದ' ವಾಲ್ಟರ್‌ಸ್ಕಾಟ್‌ನ ಕಾಳಗದ ಪದ Gathering Song of Donald the Blackನ ಅನುವಾದ. ಪ್ರಾಯ, ರಣಭಾವಾವೇಶವನ್ನು ಪ್ರಚೋದಿಸುವ ಏಕೈಕ ಹೊಸಗನ್ನಡ ಕವಿತೆ ಇದು-

Fast they come, fast they come;
See how they gather
Wild waves the eagle plume
Blended with heather
Cast your plaids, draw your blades
Forward each man set,
Pibrich of Donald Dhu
Knell for the onset

ಬಂದರಣ್ಣಾ ಬಂದರಣ್ಣಾ
ಕಿಕ್ಕಿರಿದು ನೆರೆದು
ಚೆಂದವಲಿ ಹೂವುಗರಿ
ಸೆಕ್ಕಿತಲೆ ಮೆರೆದು
ಹಿರಿ, ಕತ್ತಿ, ಇರಿ ಸುರಗಿ!

ಸರಿ ಮುಂದೆ ಆಳು !
ಅರಿಯೆದೆಯ ಬಿರಿ, ಕಾಳೆ !
ತರಿಕೊಲ್ಲ ಹೇಳು.

ಭಾಷಾಂತರದಲ್ಲಿ ಅರ್ಥ ಮತ್ತು ಸ್ವರ ಭಾರಗಳ ಸಮನ್ವಯವನ್ನು ಕಾಣಬಹುದು.

''ವೀರಗಲ್ಲು'' ಕವಿ ಮತ್ತು ಕಾದಂಬರಿಕಾರ Coronach ನ ಭಾಷಾಂತರ. ಸ್ಕಾಟಿಷ್ ಮತ್ತು ಐರಿಷ್ ಭಾಷೆಗಳಲ್ಲಿ ಕೊರನಾಶ್ ಎಂದರೆ ಚರಮಗೀತೆ.

| | |
|---|---|
| Fleet foor on the corrie | ನಯದೊಳಗೆ ನೀ ಜಾಣ |
| Sage council in cumber | ಹುಯಿಲೊಳಗೆ ಬಾಣ |
| Red hand in the foray | ಬೇಟೆಯಲಿ ಬರಸಿಡಿಲು |
| How sound in thy slumber ! | ಆಟದಲಿ ನವಿಲು |
| Like the dew on the mountain | ಹಗಲೆದಿರು ಮಂಜೆಂತು |
| Like the foam on the river | ತೆರೆಯ ನೊರೆಯಂತು |
| Like the bubble on the fountain | ಮುಗಿಲ ಕುಡಿಮಿಂಚೆಂತು |
| Thou art gone, and for ever | ಮರೆಯಾದೆಯಂತು ! |

'ವೀರ'ನ ಗುಣಗಾನ ಮಾಡುತ್ತಾ 'ಶ್ರೀ'ಯವರು ಆಟದಲಿ ನವಿಲು ಎಂಬ ಪಂಕ್ತಿಯನ್ನು ಸೇರಿಸಿರುವುದು ಕುಂದೇನು ಅಲ್ಲ. ಮೂಲದಲ್ಲಿರುವ ಶೋಕದ ಉದ್ಗಾರ ಭಾಷಾಂತರದಲ್ಲಿಲ್ಲದಿರುವುದು ಮತ್ತು ನಂತರ ಬರುವ ಮೂರು ಉಚಿತವೂ ಸುಂದರವೂ ಆದ ಉಪಮೆಗಳ ಓಘವೂ 'ವೀರಗಲ್ಲಿ'ನ ಅಂತಿಮ ಪದ್ಯದ ಎರಡು ಪಂಕ್ತಿಗಳಲ್ಲಿ ಛಂದೋಬದ್ಧವಾಗಿ ಅಡಕವಾಗಬೇಕಾಗಿತ್ತು. ಈ ಶೋಕಗೀತೆಯ ಸಮಗ್ರ ಅನುಭವ ಅಷ್ಟು ಸಮಾಧಾನಕರವಾಗಿಲ್ಲ. ಆದರೆ ಈ ಕವನದ ಯಶಸ್ಸು ಮೂಲದ ಸೊಗಡನ್ನು ಗಮನದಲ್ಲಿಟ್ಟುಕೊಂಡು ಮಾಡಿದ ಪುನಃಸೃಷ್ಟಿ ಎಂಬುದರಲ್ಲಿದೆ.

ಷೆಲ್ಲಿಯ 'A Screnade' ಕವಿಕೆಯನ್ನು 'ಶ್ರೀ'ಯವರು ಹೀಗೆ ಅನುವಾದಿಸಿದ್ದಾರೆ:

I fear thy wishes, gentle maiden
Than needest not fear mine
My spirit is too deeply laden
Ever to burthen thine
I fear thy mein, thy tones, thy motion.
Than needem not fear mine.
Innocent is the hearts' devotion
with which I worship thine"[11]

ಹೆದರುವೆನು ನಾನಿನ್ನ ಬಿನ್ನಾಣಕೆಲೆ ಹೆಣ್ಣೆ
ಹೆದರದಿರು ನೀನು ನನಗೆ,
ಹೊರಲಾರದಳಲಿಂದ ನೊಂದವನು ತಂದವನು
ಹೊರಿಸುವೆನು ಹೇಳು ನಿನಗೆ?
ಹೆದರುವೆನು ನಿನ್ನ ನಗೆ, ನಿನ್ನ ನುಡಿ, ನಿನ್ನ ನಡಗೆ
ಹೆದರದಿರು ನೀನು ನನಗೆ,
ಹೊಲ್ಲದರಿಯದ ಹೃದಯದೊಲ್ಮೆಯಲಿ ಸೇವೆಯನು
ಸಲ್ಲಿಸುವೆ ದೀಪ ನಿನಗೆ''[12]

ಈ ಅನುವಾದದಲ್ಲಿ Gentle maiden ಹೆಣ್ಣೆ ಆಗಿದೆ, mine 'ನನಗೆ' ಆಗಿದೆ, mein 'ನಗೆ' ಯಾಗಿದೆ Kisses 'ಬಿನ್ನಾಣ'ವಾಗಿದೆ. ಇದು ಸಮಂಜಸವಾಗಿ ಕಾಣುವುದಿಲ್ಲ. ಮೂಲದ Gentle maiden ಧ್ವನಿಪೂರ್ಣವಾಗಿದ್ದು I fear ಎಂದು ಹೇಳುವ ರೀತಿ ರಮ್ಯವಾಗಿದೆ. ಈ ಧ್ವನಿ ಅನುವಾದದಲ್ಲಿ ಕಾಣುವುದಿಲ್ಲ. ಶ್ರೀಯವರು ಈ ಪದ್ಯದಲ್ಲಿ Kisses ಎಂಬ ಶಬ್ದಕ್ಕೆ 'ಬಿನ್ನಾಣ'ವೆಂದು ಬಳಸಿದ್ದಾರೆ. ಬರ್ನ್ಸ್‌ನ ಕವಿತೆಯಲ್ಲಿ Fair ಗೆ 'ಬಿನ್ನಾಣ' ಪದ ಬಳಸಿದ್ದಾರೆ. ಕಿಟ್ಟೆಲ್ ನಿಘಂಟಿನಲ್ಲಿ ಬಿನ್ನಾಣಕ್ಕೆ 'A clever woman' ಎಂಬ ಅರ್ಥ ಕೊಡಲಾಗಿದೆ. ಚಾಲೂಕಿನಿಂದ ಮೋಸಗೊಳಿಸುವವರನ್ನು 'ಬಿನ್ನಾಣಗಾತಿ' ಎನ್ನುವುದು ರೂಡಿ. ಹೀಗಾಗಿ ಮೂಲ ಕವಿತೆಯ ಧ್ವನಿಗೆ ವಿರೋಧವಾಗಿ ಇಲ್ಲಿ ಬಳಕೆಯಾಗಿರುವುದು ಕಂಡು ಬರುತ್ತದೆ. ಮೇಲೆ ಹೇಳಿದ ಈ ಕವಿತೆಗಳಲ್ಲಿ ಹದ ಸಾಲದೆನ್ನಿಸುತ್ತದೆ.

''ಸರ್ ಜಾನ್ ಮೂರನ್ನು ಹೂಳಿದ್ದು'' ಇದು Burial of Sir John Moore at Corunna ಕವಿತೆಯ ಅನುವಾದ. ಭಾಷಾಂತರದಲ್ಲಿ 'not a soldier discharged his funeral shot' 'ಒಬ್ಬ ಸಿಪಾಯಿಯ ಕಳಹುವ ಸುರುಟಿಲ್ಲ' ಎಂದು ಮೂಲದಿಂದ ದೂರಹೋಗಿರುವುದು ಕಂಡುಬರುತ್ತದೆ. ಶವದ ಗೌರವಾರ್ಥವಾಗಿ ಯಾವ ಸಿಪಾಯಿಯೂ ಗುಂಡು ಹಾರಿಸದಿರುವ ಸಮುಚ್ಚಯ ಭಾಷಾಂತರದಲ್ಲಿ ಸೇರಿಲ್ಲ. ಉಳಿದಂತೆ ಭಾಷಾಂತರ ಸಾಮರ್ಥ್ಯ ಕವಿತೆಯ ಎಲ್ಲಾ ಪದ್ಯಗಳಲ್ಲೂ ಕಾಣಬರುತ್ತದೆ.

| | |
|---|---|
| Slowly and sadly we laid him down | ಮೆಲ್ಲನೆ, ಮರುಗುತ, ಮಣ್ಣಿನಲ್ಲಿಟ್ಟೆವು |
| From the field of his fame fresh and gory | ರಣದ ರಕ್ತದ ಚಲುವಿನ ಚೆಲ್ವಿನಲಿ |
| We carved not line, and we raised not a stone | ಕಲ್ಲ ನಡೆದೆ, ಒಂದು ಪಂಕ್ತಿಯ ಕೆತ್ತದೆ |
| But we left him alone with his glory. | ಅವನ ಕೀರ್ತಿಯಲವನನೆ ಬಿಟ್ಟೆವಲ್ಲಿ। |

ಶ್ರೀಯವರು ಮೂಲದ ಓಘವನ್ನು, ಅರ್ಥವನ್ನೂ ಪ್ರತಿ ಪದ್ಯದಲ್ಲೂ ಸಮರ್ಥವಾಗಿ ಕನ್ನಡಿಸಿದ್ದಾರೆ.

''ರಾವುತರ ದಾಳಿ'' ಟೆನಿಸನ್ ಕವಿಯ The Charge of the Light Brigade ನ ಭಾಷಾಂತರ. ಕೊಟ್ಟಿರುವ ಆಜ್ಞೆಯನ್ನು ಪರಿಪಾಲಿಸಲು ಪಡೆಯ ಆರುನೂರು ಸವಾರರು ಮುನ್ನುಗ್ಗುವ ಚಿತ್ರವಿದು.

| | |
|---|---|
| Half a league, half a league | ಹರಿದಾರಿ ಹರಿದಾರಿ |
| Half a league onword | ಹರಿದಾರಿ ಮುಂದೆ |
| All in the valley of death | ಮೃತ್ಯುವಿನ ಪಂಜರಕೆ |
| Rode the six hundred | ನುಗ್ಗಿದರು ಮುಂದೆ ! |
| "Forward the light Brigade ! | "ನುಗ್ಗಿ ಮುಂದಕೆ ಕುದುರೆ ! |
| charge for the guns !:" he said | ಕೊಚ್ಚಿ ಗುಂಡನು" ! ಎಂದು |
| In to the valley of death | ಆರ್ನೂರು ರಾವುತರು |
| Rode the six hundred | ಮೃತ್ಯುವಿನ ಪಂಜರಕೆ |
| | ನುಗ್ಗಿದರು ಮುಂದ |

ಮೃತ್ಯುವಿನ ಕಣಿವೆ ಮೃತ್ಯುಪಂಜರವಾಗಿದೆ. ಎರಗಿ ಫಿರಂಗಿಗಳ ಮೇಲೆ ಎಂಬ ಅರ್ಥ ಬರುವ ಸಾಲುಗಳು 'ಕೊಚ್ಚಿಗುಂಡನು' ಎಂದು ಅಸಮರ್ಪಕವಾಗಿ ಭಾಷಾಂತರಗೊಂಡಿದೆ. ಉಳಿದಂತೆ ಈ ಕವಿತೆ ಒಂದು ಉತ್ತಮ ಭಾಷಾಂತರಕ್ಕೆ ಉದಾಹರಣೆಯಾಗಿದೆ.

"ರಾಯಲ್ ಜಾರ್ಜು ಮುಳುಗಿ ಹೋಗಿದ್ದು" ವಿಲಿಯಂ ಕೂಪರನ Loss of the Royal Georgeದ ಅನುವಾದ.

| | |
|---|---|
| Toll for the brave ! | ಅಳಿದರೆ ಹಾ ಧೀರರು ! |
| The brave that are no more ! | ಕಳೆದುಹೋದರೆ ಧೀರರು ! |
| All sunk beneath the wave | ನಮ್ಮ ನಾಡಿನ ಕರೆಯೊಳೆಲ್ಲರು |
| Fast by their native shore | ಮುಳುಗಿಹೋದರು ತೆರೆಯೊಳು |

ಶೋಕದ ಉದ್ಗಾರದಿಂದ ಪ್ರಾರಂಭವಾಗುವ ಕವಿತೆಯಲ್ಲಿ ನಂತರ ಭಾವುಕತೆಯನ್ನು ತಡೆಹಿಡಿದು ಹಡಗು ಮುಳುಗಿದ ವಿವರಗಳನ್ನು ಮುಂದಿಟ್ಟುಕೊಂಡು ಸರಳ ಸುಂದರ ಹೊಸಗನ್ನಡದಲ್ಲಿ ಶ್ರೀಯವರು ಈ ಕಥಾನಕವನ್ನು ಭಾಷಾಂತರಿಸಿದ್ದಾರೆ.

ನ್ಯೂಮನ್‌ನ Lead kindly lightನ ಅನುವಾದ 'ಕರುಣಾಳು ಬಾ ಬೆಳಕೆ'ಯಲ್ಲಿ 'ಶ್ರೀ'ಯವರ ಅನುವಾದಪ್ರಭುತ್ವ ಎದ್ದುಕಾಣುತ್ತದೆ.

Lead kindly light, amid the encirching gloom
Lead thou me on
The night is dark, and I am far from home
Lead thou me on
Keep thou my feet, I do not ask to see
The distant scene-one step enough for me (Newman)

ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ
ಕೈ ಹಿಡಿದು ನಡೆಸೆನ್ನನು
ಇರುಳು ಕತ್ತಲೆಯು ಗವಿ, ಮನೆ ದೂರ ಕನಿಕರಿಸಿ
ಕೈ ಹಿಡಿದು ನಡೆಸೆನ್ನನು
ಹೇಳಿ ನನ್ನಡಿಯಿಡಿಸು ಬಲುದೂರ ನೋಟವನು
ಕೇಳೆನೊಡನೆಯೆ -ಸಾಕು ನನಗೊಂದು ಹೆಜ್ಜೆ (ಇಂಗ್ಲಿಷ್ ಗೀತಗಳು, ಪುಟ 97)

ಈ ಕವಿತೆಯಲ್ಲಿ The distant scene ಬಲು ದೂರನೋಟವಾಗಿ I am for from home 'ಮನೆ ದೂರ'ವಾಗಿ ಹೆಚ್ಚು ಅರ್ಥಪೂರ್ಣವಾಗಿ ಮೂಡಿಬಂದಿದೆ. ಅನುವಾದದಲ್ಲಿ ಧ್ವನಿಪೂರ್ಣವಾಗಿ, ಭಾವ ಕೇಂದ್ರವಾಗಿದೆ. ನಡೆ ಮೂಲದಷ್ಟೆ ಗಂಭೀರವಾಗಿದೆ. ಛಂದಸ್ಸು ಮೂಲದ ಸಾಮಿಪ್ಯದಲ್ಲಿದೆ. ಈ ಪದ್ಯದ ಮೊದಲನೆಯ ಚರಣದಲ್ಲಿರುವ 'ಮೂರ್ಖನನು' ಎನ್ನುವುದಕ್ಕೆ ಸಮಾನಾರ್ಥಕೊಡುವ ಪದ ಮೂಲಕವಿತೆಯಲ್ಲಿಲ್ಲ. ಆದರೂ ತನ್ನ ಗುರುತರವಾದ ತಪ್ಪನ್ನು ಒಪ್ಪಿಕೊಳ್ಳುವ ಕವಿಯ ಹಿಂದಿನ ನಡತೆ ಪಾಪಿಯೊಬ್ಬನದಲ್ಲ, ಮೂರ್ಖನದು. ಶ್ರೀಯವರ ಈ ಪದದಿಂದ ಈ ಚರಣದ ಅರ್ಥ ಹೆಚ್ಚು ಗಾಢವಾಗುತ್ತದೆ. ಮಾರ್ಗದ ಕಷ್ಟಕಾರ್ಪಣ್ಯಗಳನ್ನು ಪ್ರತಿನಿಧಿಸುವ Moor, fen, crag, torrent ಭಾಷಾಂತರದಲ್ಲಿ ಸೂಕ್ತವಾಗಿ 'ಕಷ್ಟದಡವಿ' 'ಬೆಟ್ಟಹೊಳೆ'ಗಳಾಗಿವೆ. Angel faces smile ಎಂಬುದನ್ನು ಏಕವಚನದಲ್ಲಿ 'ದೇವಮುಖ ನಗುತ' ಎಂದು ಶ್ರೀಯವರು ಭಾಷಾಂತರಿಸಿದ್ದಾರೆ. ದೀನ ಯಾಚಕನಿಗೆ ಪ್ರಸನ್ನನಾದ ದೇವರ ಸನ್ನಿಧಿ ಆತನಿಗೆ ಪ್ರಾಪ್ತವಾಗುವುದು ಎಂಬರ್ಥದಲ್ಲಿ ಈ ಸಮುಚ್ಚಯ ಬಹಳ ಸಮಂಜಸವಾಗಿದೆ. ಶ್ರೀಯವರ ಉತ್ತಮ ಪುನರ್‌ಸೃಷ್ಟಿಗಳಲ್ಲೊಂದು (ಟ್ರಾನ್ಸ್ ಕ್ರಿಯೇಷನ್) ಈ ಪ್ರಾರ್ಥನೆ. ಒಟ್ಟಿನಲ್ಲಿ ಇಲ್ಲಿ ಅನುವಾದದ ಸಿದ್ಧಿಯಾಗಿರುವುದನ್ನು ನಾವು ಕಾಣಬಹುದು ''ಇಂಗ್ಲೆಂಡ್ ನಾವಿಕರು'' ಕ್ಯಾಂಬೆಲ್ ಕವಿಯ 'Ye mariners of England' ನ ಭಾಷಾಂತರ. ಶತಮಾನಗಳಿಂದ ಇಂಗ್ಲೆಂಡಿನ ರಕ್ಷಣೆಯ ಭಾರವನ್ನು ಹೊತ್ತಿರುವ ದೇಶಾಭಿಮಾನಿ ನಾವಿಕರನ್ನು ಶ್ಲಾಘಿಸಿ ಬರೆದಿರುವ ಕವನವಿದು.

| | |
|---|---|
| Ye mariners of England | ಇಂಗ್ಲೆಂಡ್ ನಾವಿಕರೇ - ಕಾಯುವಿರಿ |
| That guard our native seas | ನೀವೆಮ್ಮ ಕಡಲುಗಳನು |
| Whose flag has braved a thousand years | ನಿಮ್ಮ ಬಾವುಟ ತಡೆಯಿತೊಂದು ಸಾವಿರ ವರುಷ |
| The battle and the breeze | ಗಾಳಿಯನು ಕಾಳಗವನು |

ದೇಶಪ್ರೇಮಿ ಕವಿಗೆ ನಾವಿಕರಲ್ಲಿರುವ ವಿಶ್ವಾಸ ಕನ್ನಡ ಭಾಷಾಂತರದಲ್ಲೂ ಸ್ಪಷ್ಟವಾಗಿ ಮೂಡಿಬಂದಿದೆ.

'ಬ್ಲೆನ್ ಹೀಮ್ ಕದನ, ರಾಬರ್ಟ್ ಕವಿಯ After Blenheim ಕವಿತೆಯ ಅನುವಾದ. ಶೀರ್ಷಿಕೆ ''ಬ್ಲೆನ ಹೀಮ್ ನಂತರ'' ಎಂದಿರಬೇಕಿತ್ತು. ಏಕೆಂದರೆ ಇದು ಬ್ಲೆನ್‌ಹೀಮ್ ಕದನದ ನಂತರದ ಒಂದು ಘಟನೆಯನ್ನು ಕುರಿತದ್ದಾಗಿದೆ.

| | |
|---|---|
| Great praise the duke of marlbro won | ದೇಶವೆ ಹೊಗಳಿತು ಗೆದ್ದನಾಯಕನನು |
| And our good prince Eugene, | ಸುರಿದವು ಹೂವು ಮಳೆಗಳು |
| 'Why't was a very wicked thing' | ಛೀ ತೆಗೆ, ಏನದು ಬಲುಕೆಟ್ಟ ಕೆಲಸವು |
| Said little Wilhelemine, | ಎಂದಳು ಪುಟ್ಟ ಮೊಮ್ಮಗಳು |
| Nay ....... nay ....... my little girl, quoth he, | ಅಲ್ಲವೆ ಅಲ್ಲವೆ ಪುಟ್ಟ ಹುಡುಗಿ ಕೇಳು |
| It was a famous victory' | ಲೋಕ ಪ್ರಸಿದ್ಧಿಯ ಜಯವದು ಎಂದ. |

ಭಾಷಾಂತರದಲ್ಲಿ ಸೇನಾನಾಯಕರ ಹೆಸರು ಇರದಿದ್ದರೂ ಜಯದ ಹೆಸರಿನಲ್ಲಿ ಎಂತಹ ಭೀಕರ ದುರಂತ ನಡೆಯಿತೆಂಬುದನ್ನು, ನಿರ್ದಯಿ ಮನೋಭಾವವನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದ್ದಾರೆ. ಮುತ್ತಜ್ಜ ಹೆಸರಿಸುವ ಆಸ್ಟ್ರಿಯಾದ ರಾಜಕುಮಾರ ಯೂಜನ್ ಮತ್ತು ಡ್ಯೂಕ್ ಆಫ್ ಮಾರ್ಲ್‌ಬರೋ ಇವರುಗಳ ಹೆಸರನ್ನು ಅಳವಡಿಸಿಕೊಂಡಿದ್ದರೆ 'ಬ್ಲೆನ್ ಹೀಮ್'ಗೆ ಇನ್ನೂ ಹೆಚ್ಚು ಮೆರಗು ಬರುತ್ತಿತ್ತು. ಒಟ್ಟಿನಲ್ಲಿ ಭಾಷಾಂತರ ಸುಂದರವೂ ಸಮರ್ಥವೂ ಆಗಿದೆ.

"ಬಡವನ ಹುರುಡು" ರಾಬರ್ಟ್ ಬರ್ನ್ಸ್‌ನ A man's man for a' thatನ ಭಾಷಾಂತರ.

| | |
|---|---|
| Is there for honest poverty | ಮೌನವಾಗಿ ತಾನು ಬದುಕಿ |
| that hungs his head an a' that | ಹೀನ ಬಡತನವೇನೆ ಇರಲಿ |
| The Coward slave-we pass him by, | ನಾಚಿಕೊಳ್ಳುವ ನೀಚ ತೊತ್ತ |
| We dare be poor for a' that | ಆಚೆ ನೂಕುವನೆ ಇರಲಿ, |
| For a 'that', an 'a' that, | ಏನೆ ಇರಲಿ ಏನೆ ಇರಲಿ |
| our toils' obscure 'a' that | ಕಷ್ಟನಿಷ್ಠುರವೇನೆ ಇರಲಿ |
| The rank is but the guineas stamp | ಮೆರೆವ ಪದವಿ ವರಹಮುದ್ರೆ, |
| The mans' the gover'd for a' 'that | ಆಳು ಚೆನ್ನ, ಏನೆ ಇರಲಿ ! |

ಭಾಷಾಂತರದಲ್ಲಿ ಪದ್ಯಗಳು ಸರಳವಾಗಿ ಓದಿಸಿಕೊಳ್ಳುವ ಓಘವನ್ನು ಪಡೆದು ಪರಿಣಾಮಕಾರಿ ಕಾವ್ಯೋಕ್ತಿಗಳನ್ನು ಹೊಂದಿವೆ. ಪಂಕ್ತಿ ಹೆಚ್ಚು ಪರಿಣಾಮಕಾರಿಯಾಗಲೆಂದು 'ಅವನ ಕಡೆನೋಡದೆ ಮುಂದುವರಿಯುತ್ತೇವೆ' ಎಂಬ ಅರ್ಥವನ್ನು ಬಿಟ್ಟು ಅವನನ್ನು 'ಆಚೆ ನೂಕು' ಎಂಬ ಪದಬಂಧವನ್ನು ಉಪಯೋಗಿಸಲಾಗಿದೆ. ಹೀಗೆ ಇಡೀ ಪದ್ಯದಲ್ಲಿ ಶ್ರೀಯವರು ಕೆಲವೊಂದು ಚಿಕ್ಕಪುಟ್ಟ ಬದಲಾವಣೆ ಮಾಡಿಕೊಂಡಿದ್ದಾರೆ.

'ಶ್ರೀ'ಯವರ 'ದುಃಖಸೇತು' ಕನ್ನಡದ ಉತ್ತಮ ಕವಿತೆಗಳಲ್ಲೊಂದು. ಇದು ಥಾಮಸ್ ಹುಡ್‌ನ The Bridge of sighsದ ಅನುವಾದ. ಮೂಲದ ದುರ್ಭರ ದುರಂತವನ್ನು, ಕರುಣೆಯನ್ನು ಯಥಾವತ್ತಾಗಿ ಕನ್ನಡಕ್ಕೆ ತರಲಾಗಿದೆ. ಮೂಲದ ಪ್ರಾಸ, ದೀರ್ಘಪ್ರಾಸ (Faminine rhymes)ಗಳನ್ನು ತೋರಿದ್ದಾರೆ.

ಆದರೆ-

'ಏನು ಕೋಮಲ ಕಾಯ !
ಹೊಳಪು ಹೊಸ ಪ್ರಾಯ !
ಇಂಥ ಕಡೆ ಅಂತ್ಯ ಪ್ರಾಸವೂ
ಮೆಲ್ಲಗಿವಳನು ಮುಟ್ಟು
ಮರುಗಿ ಹಿಡಿದತ್ತು
ಇಂಥ ಕಡೆ 'ವಡಿ'ಯ ಸೊಗಸೂ
ಊರಮನೆ ಬೆಳಕುಗಳು
ದೂರ ಸರಿಯುತ್ತ
ಕತ್ತಲೆಯ ಹೊಳೆಹರಿದು
ಹತ್ತಿರಕೆ ಬರುತ -

ಇಂಥ ಕಡೆ ಆದಿ ಪ್ರಾಸವೂ ಮನೋಹರವಾಗಿ ಅಪ್ರಯಾಸವಾಗಿ ಬರುತ್ತದೆ. ಈ ಕವನದ ಭಾಷೆಯಂತೂ ಬಲು ಲಲಿತ''[13] ಎಂದಿದ್ದಾರೆ. ತೀ.ನಂ.ಶ್ರೀ.

'Alas for the rarity
of christian charity
under the sun

ಆಹ ಎಲ್ಲಡಗಿತೋ
ಆರ್ಯಧರ್ಮದ ಕರುಣ
ಆರ್ಯಜನಗಳ ಮರುಕ
ಉರಿಯುವನೆ ಬಲ್ಲ'

ಈ ಅನುವಾದದಲ್ಲಿ Christian Charity 'ಆರ್ಯಧರ್ಮ'ವಾಗಿದೆ, Sun 'ಉರಿಯುವನೆ' ಆಗಿದೆ. ತೀ.ನಂ.ಶ್ರೀ.ಯವರು 'ಉಕ್ತಿಯ ಸಾರ ಎಷ್ಟು ಚೆನ್ನಾಗಿ ಕನ್ನಡದಲ್ಲಿ ಆಗಿದೆ? ಉರಿಯುವವನು ಎಂದರೆ ಸೂರ್ಯ, ಹಳ್ಳಿಗರ ಮಾತಿನಲ್ಲಿ ಈಗಲೂ ಕೆಲವು ಕಡೆ ಇದು ಬಳಕೆಯಲ್ಲಿದೆ'[14] ಎಂದು ಮೆಚ್ಚಿ ನುಡಿದಿದ್ದಾರೆ. Christian Charity ಎಂಬುದನ್ನು 'ಆರ್ಯಧರ್ಮ'ವೆಂದು ಅನುವಾದಿಸುವಾಗ ಭಾರತೀಯ ಸಂಸ್ಕೃತಿಯ ಹಿನ್ನೆಲೆಗೆ ತರುವುದು ಕವಿಯ ಉದ್ದೇಶ ಸ್ಪಷ್ಟವಾಗಿದೆ. 'ಆರ್ಯ' ಎಂಬ ಶಬ್ದ ಹೆಚ್ಚು ಧ್ವನಿಪೂರ್ಣವಾಗಿದೆ. ದುಷ್ಯಂತ ಶಕುಂತಲೆಯನ್ನು ಅನುಮಾನಿಸಿದಾಗ ಅವನ ನೀಚ ನಡತೆಯನ್ನು 'ಅನಾರ್ಯ'ವೆಂಬ ಒಂದೇ ಶಬ್ದದಲ್ಲಿ ಅವಳು ಹೀಗಳೆದಿದ್ದಾಳೆ. ಇದೇ ಬಗೆಯ ಸತ್ವಪೂರ್ಣ ಧ್ವನಿ ಮೇಲ್ಕಂಡ ಕವಿತೆಯಲ್ಲಿ ಕಾಣುತ್ತದೆ.

ಮೂಲ ಕವಿತೆಯಲ್ಲಿ ಇಲ್ಲದ-
ನೀರಿಹಿಡಿದು ನಡುವೇರಿ,
ತೊದಲುಮಾತನು ಬೀರಿ
ಕೊರಗ ನಗಿಸಲು ಬಲ್ಲ
ಮಗುವಿಲ್ಲವೇನೋ?''

ಈ ಸಾಲುಗಳನ್ನು 'ಶ್ರೀ'ಯವರು ಸ್ವಂತವಾಗಿ ರಚಿಸಿ ಸೇರಿಸಿದ್ದಾರೆ. ಒಂದು ಹೆಣ್ಣು ಒಬ್ಬ ಕಾಮಿಯ ಮೋಸಕ್ಕೆ ಒಳಗಾಗಿ ಅವನ 'ಪಾಪ'ದ ಫಲವನ್ನು ಹೊತ್ತು ಅವಮಾನ ತಡೆಯಲಾಗದೆ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಈಕೆಗೆ ಈ ಪ್ರಪಂಚದಲ್ಲೇ ಯಾರೂ ಇರಲಿಲ್ಲವೇ ಎಂದು ಕೇಳಿ ತಾಯಿ, ತಂದೆ, ಬಂಧು, ಬಳಗ, ಅಕ್ಕರೆಯವ, ಹತ್ತಿರದಾತ ಒಬ್ಬರೂ ಇರಲಿಲ್ಲವೇ ಎಂದು ಬರುವ ಭಾಗದ ನಂತರ ಈ ಸಾಲುಗಳು ಹೊಸದಾಗಿ ಸೇರಿವೆ. ಈ ಸಾಲುಗಳು 'ಕರುಣಾರಸದ ಮಿನುಗನ್ನು' ಹೆಚ್ಚಿಸಿವೆ. ಬಹುಶಃ ಮಗುವಿದ್ದಿದ್ದರೆ ಇವಳು ಹೀಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಿಲ್ಲವೇನೋ ಎನ್ನುವ ಅರ್ಥ ಬರುವಂತೆ ಸೂಚಿಸಲು 'ಶ್ರೀ' ಯವರು ಈ ಸಾಲುಗಳನ್ನು ಸೇರಿಸಿರಬಹುದು. ಅವಳ ಪಾಪದ ಬಗ್ಗೆ ನಾವು ಮಾತನಾಡುವುದು ಒಳ್ಳೆಯದಲ್ಲ, ದೇವರೇ ಅವಳನ್ನು ಕ್ಷಮಿಸಲಿ ಎನ್ನುವ ಧ್ವನಿ ಮೂಲದಲ್ಲಿದೆ. ಮಗುವಿದ್ದಿದ್ದರೆ ಹೀಗಾಗುತ್ತಿರಲಿಲ್ಲ ಎಂಬ ಯೋಚನೆಯಿಂದ ಈ ಧ್ವನಿ ಕುಗ್ಗುವುದೆಂಬುದು ಸ್ಪಷ್ಟ. ಈ ಒಂದು ಕುಂದನ್ನು ಬಿಟ್ಟರೆ "ದುಃಖಸೇತು" ಕನ್ನಡ ಅನುವಾದ ಸಾಹಿತ್ಯದ ಅತ್ಯುತ್ತಮ ಕವಿತೆಗಳಲ್ಲೊಂದು.

'ಮಾದಮಾದಿ' ಸ್ಕಾಟ್‌ಲೆಂಡಿನ ಕವಿ ಬರ್ನ್ಸ್ ಬರೆದ Duncan Gray ಕವಿತೆಯ ಪುನರ್ ಸೃಷ್ಟಿ. ನಾಯಕ ಡಂಕನ್ ಶ್ರೀ ಮತ್ತು ನಾಯಕಿ ಮ್ಯಾಗಿ 'ಮಾದ-ಮಾದಿ'ಯಾಗಿದ್ದಾರೆ. "ಭಾವುಕತೆಗೆ ಅವಕಾಶವಿಲ್ಲದ ಅಶ್ವದ ಲಘು ನಾಗಾಲೋಟದ" ಓಘವನ್ನು ಶ್ರೀಯವರು ಅನುವಾದದಲ್ಲಿ ಉಳಿಸಿಕೊಂಡಿದ್ದಾರೆ.

| | |
|---|---|
| Duncan fleech'd and Duncan pray'd | ಕಯ್ಯಮುಗಿದ ಕಾಲ ಹಿಡಿದ |
| Megy was deaf and Ailsa Graig, | ಹಹ ! ಏನು ಬೇಟವೊ ? |
| Duncan sigh'd baith out and in, | ರೊಯ್ಯೆನೊಡೆಯೆ, ಹಲ್ಲಿ ಕಡಿದ |
| Grat his een baith bleer't and blin | ಹಹ ! ಏನು ಬೇಟವೊ ! |
| spak O'lowpin ower a linn. | ಬೆಚ್ಚಗುಸಿರ ಬಿಟ್ಟಮಾದ |
| | ಅರಸಕೆಂಗಡುತ್ತ ಸೀದ |
| | ಹೊಳೆಯ ಬೀಳಲೆಂದು ಹೋದ! |
| | ಹಹ ! ಏನು ಬೇಟವೋ? |

ಮೂಲದಲ್ಲಿರುವ 'Ailsa Graig' ಪುಟ್ಟದ್ವೀಪದ ನಿಶ್ಚಲತೆಯ ಉಪಮೇಯು ನಿರೀಕ್ಷಿಸಿದಂತೆ ಭಾಷಾಂತರವಾಗಿಲ್ಲ. ಮಾದಿಮಾದನನ್ನು ರೊಯ್ಯನೊಡೆಯುವ ಘಟನೆಯು ಮೂಲದಲ್ಲಿಲ್ಲ. ನಾಡಿನ ಪರಿಸರಕ್ಕೆ ತಕ್ಕಂತೆ ಶ್ರೀಯವರು ಕೆಲವೊಂದು ಬದಲಾವಣೆಗಳನ್ನು ಈ ಪದ್ಯದಲ್ಲಿ ಮಾಡಿದ್ದಾರೆ.

'ದುಃಖಸಮಯ' ಶೆಲ್ಲಿಯ A Lament ಭಾವಗೀತೆಯ ಕನ್ನಡಾನುವಾದ. ಪ್ರಪಂಚ, ಜೀವನ, ಸಮಯಗಳನ್ನು ಸಂಬೋಧಿಸಿ ಬಾಳಿನ ಅನಿಶ್ಚಿತತೆಯ ಬಗ್ಗೆ ಪ್ರತಿಮೆಯ ಮೂಲಕ ಕವಿ ವ್ಯಕ್ತಪಡಿಸುತ್ತಾರೆ.

O world of life O Tine
On whose last steps I climb
Trembling at that where I had stood before
when will return the glory of your prime
No more-oh never more.

ಏನೊ ಲೋಕವೋ! ಏನು ಜನ್ಮವೋ:
ಏನು ಕಾಲವೋ ! ಬೇಡವೋ
ಜೀವನಮಾನದ ಕಡೆಯ ಹಂತವ ಹತ್ತಿ ಹಿಂದಕೆ
ನೋಡಿ ನಡಗುವೆ
ಯಾವ ಕಾಲಕೋ ಮರಳಿ ಬರುವುದು
ಆದಿಕಾಲದ ಭೋಗಸಂಪದ ?
ಇಲ್ಲವೆಂದಿಗೂ, ಇನ್ನದೆಂದಿಗೂ, ಇಲ್ಲವೋ !

'ಬೇಡವೋ' ಅಧ್ಯಾಹಾರವಾಗಿರಬಹುದಾಗಿತ್ತು. ಶೆಲ್ಲಿಯ 'ಉತ್ತಮದೆಸೆ' ಪದಬಂಧದ ವ್ಯಾಪ್ತಿಯನ್ನು ಶ್ರೀಯವರ 'ಭೋಗಸಂಪದ' ಮೀರುತ್ತದೆ. ಒಟ್ಟಿನಲ್ಲಿ ಭಾಷಾಂತರದಲ್ಲಿ ಶೆಲ್ಲಿಯ ಭಾವನೆಗಳು ಸ್ಪಷ್ಟವಾಗಿ ಅಭಿವ್ಯಕ್ತವಾಗಿವೆ.

''ಮನಸ್ತಾಪ'' ವರ್ಡ್ಸ್‌ವರ್ತನ A complaint ಕವಿತೆಯ ಅನುವಾದ. ಶೀರ್ಷಿಕೆ ದೂರು ಎಂದಿದ್ದರೆ ಹೆಚ್ಚು ಸಮರ್ಪಕವಾಗಿರುತ್ತಿತ್ತು. ಆದರೆ ಮಿತ್ರರಿಬ್ಬರ ನಡುವಿನ 'ಮನಸ್ತಾಪ'ದಿಂದ ಪ್ರೇರಿತವಾದ ಕವನವಿದು. ಪದ್ಯದ ಅಂತ್ಯ ಹೀಗಿದೆ.

A well of love-it may be deep
I trust it is-and never dry
what matters if the waters sleep
In silence and obscurity
such change and at the very door
of my fond heart, hath made me poor.

ತುಂಬಿದೊಲುಮೆಯ ಬಾವಿ - ಆಳವಿರಬಹುದು,
ನಂಬುವೆನು - ಇರಬಹುದು - ಬತ್ತದಿರಬಹುದು
ನೆಲವೇನು? ಜಲವೆಲ್ಲ ಮುಚ್ಚುಮರೆಯಾಗಿ
ಮಲಗಿರಲು ಮನದಲ್ಲಿ ನನಗೊಲಿಯದಾಗಿ
ಈ ಬಗೆಯ ಹೊಸನಡತೆ ನನ್ನೆದೆಯ ಕೊರೆಯೆ
ನಾ ಬಡವನಾಗಿಂತು ಹುದುಗಿದೆನು. ದೊರೆಯೆ !

ಆಡುಭಾಷೆಯ ಕಾವ್ಯಮಯತೆ ಭಾಷಾಂತರದಲ್ಲಿ ಸೊಗಸಾಗಿ ಮೂಡಿಬಂದಿದೆ. ಅಂತ್ಯ ಪ್ರಾಸದ ''ದೊರೆಯೆ'' ಪದವನ್ನು ಅರ್ಥದ ದೃಷ್ಟಿಯಿಂದ ವರ್ಜಿಸಬಹುದಾಗಿತ್ತು.

'ಬಿಡು ಬಿಡುನಾವಲೆವುದಿನ್ನು' ಇದು ಬೈರನ್‌ನ So we'll go no more A-roving ಭಾಷಾಂತರ. ಭಾಷಾಂತರಿಸುವಾಗ ಮೂಲಪದಗಳ ಅರ್ಥ ಭಾಷಾಂತರದಲ್ಲಿದ್ದರೂ ರಸಾನುಭವ ದೊರಕದೆ ಹೋಗಬಹುದೆಂಬುದಕ್ಕೆ ಈ ಕೆಳಗಿನ ಸಾಲುಗಳ ಭಾಷಾಂತರ ಸಾಕ್ಷಿ-

| | |
|---|---|
| Though the night was made for loving | ಇರುಳೇಕೆ ? ಒಲಿಯುವುದಕಿಲ್ಲಾ? |
| And the day returns too soon | ಮರಳುವುದು ಬೇಗ ಬೆಳಗೆಲ್ಲಾ! |
| Yet we'll go no more a roving | ಕಳೆದೆಯೆ, ಬೇಡ ಬಿಡು ನಾವಲೆವುದಿನ್ನು |
| By the light of the moorn. | ತಿಂಗಳ ಬೆಳಕಿನಲ್ಲಿನ್ನು |

ಭಾಷಾಂತರದ ತೊಡಕು ಮೇಲಿನ ಎರಡು ಸಾಲುಗಳಿಗೆ ಹೆಚ್ಚು ಅನ್ವಯವಾಗುವುದು. ''ಹೆದರುವೆನು ನಾ ನಿನ್ನ ಬಿನ್ನಾಣಕೆಲೆ ಹೆಣ್ಣೆ'' ಶೆಲ್ಲಿಯ I fear thy kisses, gentle maidenನ ಭಾಷಾಂತರ. ಶ್ರೀಯವರು ಇಲ್ಲಿ Kisses ಅನ್ನು ಮುತ್ತುಗಳು ಎಂದು ಭಾಷಾಂತರಿಸುವುದರ ಬದಲು 'ಬಿನ್ನಾಣ'ವೆಂದು ಕನ್ನಡ ನೆಲದ ಜಾಯಮಾನಕ್ಕೆ ಸರಿಯಾಗಿ ಭಾಷಾಂತರಿಸಿದ್ದಾರೆ.

| | |
|---|---|
| I fear thy kisses, gentle maiden; | ಹೆದರುವೆನು ನಾ ನಿನ್ನ ಬಿನ್ನಾಣಕೆಲೆ ಹೆಣ್ಣೆ |
| Thou needest not fear mine | ಹೆದರಿದಿರು ನೀನು ನನಗೆ |
| My spirit is too deeply laden | ಹೊರಲಾರದಳಲಿಂದ ನೊಂದವನು ತಂದವನು |
| Ever to burthen thine. | ಹೊರಿಸುವೆನೆ ಹೇಳು ನಿನಗೆ? |

ಮೊದಲ ಕಾವ್ಯೋಕ್ತಿಯಲ್ಲಿ ಕವಿ ಹೇಳಿರುವ ಅಂಶಗಳ ಪುನರಾವರ್ತನೆಯಾಗುವಂತೆ 'ಹೆದರದಿರು' ಪದದ ನಂತರ ಒಂದು ಸೂಕ್ತ ಪದ ಇರಬೇಕಿತ್ತು. ಕೊನೆಯ ಸಾಲಿನಲ್ಲಿ ಎಂದಿಗೂ ಹೆಣ್ಣಿನ ಆತ್ಮದ ಮೇಲೆ ಹೊರೆ ಹಾಕುವುದಿಲ್ಲವೆನ್ನುವ ಕವಿ ಮಾತುಗಳು ಭಾಷಾಂತರದಲ್ಲಿ ಸ್ಪಷ್ಟವಾಗಿ ಮೂಡಿಬಂದಿಲ್ಲ. ಒಟ್ಟಿನಲ್ಲಿ ಈ ಪದ್ಯದ ಭಾಷಾಂತರ ಅಷ್ಟು ಯಶಸ್ವಿಯಾಗಿಲ್ಲ.

'ನಿನ್ನೊಳೆನಗೊಲವಿಲ್ಲ' ಕೆರೋಲಿನ್ ವಾರ್ಟ್‌ನ್‌ನ "I do not love thee" ಕವನದ ಭಾಷಾಂತರ. ಒಲವಿನ ದ್ವಂದ್ವಾರ್ಥ ಸಂಕೀರ್ಣತೆಗಳನ್ನು ಶ್ರೀಯವರು ಸಮರ್ಥವಾಗಿ ಭಾಷಾಂತರಿಸಿದ್ದಾರೆ:

| | |
|---|---|
| I do not love thee-no, I do not love thee! | ನಿನ್ನೊಳೆನಗೊಲವಿಲ್ಲ - ಇಲ್ಲ ಒಲವಿಲ್ಲ |
| And yet when than art absent I am sad. | ನೀನತ್ತ ಹೋದೆಯೇನೆ ಕಂದುವೆನದೇನು |

''ಒಂದು ಮುತ್ತು'' ಬರ್ನ್ಸ್‌ನ 'A Fond Kiss' ಭಾಷಾಂತರ. ಆದರೆ ಇದು ಮೂಲ ಕವಿತೆಗಿಂತ ಭಿನ್ನವಾದ ಕವಿತೆಯಾಗಿದೆ. ಇನಿಯನ ಯಾಚನೆಯನ್ನು ಸಂಕ್ಷಿಪ್ತಗೊಳಿಸಿ ಸರಳೀಕರಿಸಿದ್ದಾರೆ-

| | |
|---|---|
| A fond kiss, and then we sever | ಒಂದು ಮುತ್ತು ಮತ್ತೆ ಬಾರೆನು |
| A farewell and then for ever | ಒಂದು ಮುತ್ತು ಮತ್ತೆ ಹೋಗೆನು |

'ಒಂದು ಮಾತನು ಲೋಕ ಹೊಲೆಗೆಡಿಸಿಕೊಂಡಿಹುದು' ಇದು ಶೆಲ್ಲಿಯ one word is too often profaned ದ ಭಾಷಾಂತರ. ಶ್ರೀಯವರು ಮೂಲ ಅರ್ಥಕ್ಕೆ ಸಮೀಪದ ಅರ್ಥ ಕೊಟ್ಟರೂ ಭಾಷಾಂತರ ಪ್ರಯಾಸದ ಭಾಷಾಂತರವೆನ್ನಿಸುತ್ತದೆ.

one word is too often profaned — ಒಂದು ಮಾತನು ಲೋಕ ಹೊಲೆಗೆಡಿಸಿಕೊಂಡಿಹುದು
For me to profane it — ಹೊಲೆಗೆಡಿಸೆನದನು ನಾನು !

ಶ್ರೀಯವರು ಶೆಲ್ಲಿಯ ಕಾವ್ಯೋಕ್ತಿಗಳ ಇಂಗಿತವನ್ನು ಅರಿತು ಭಾಷಾಂತರಿಸಿದ್ದಾರೆ.

ಶ್ರೀಯವರು ಇಂಗ್ಲಿಷಿನ ರೊಮ್ಯಾಂಟಿಕ್ ಸಂಪ್ರದಾಯಕ್ಕೆ ಸೇರಿದ ಕವಿಗಳನ್ನು ಹಾಗೂ ಕಾವ್ಯಗಳನ್ನು ಆಯ್ದುಕೊಂಡಿದ್ದಾರೆ. ''ಅರಿಕೆ''ಯಲ್ಲಿ ಈ ಬಗ್ಗೆ 'ಶ್ರೀ'ಯವರು ಹೀಗೆ ಹೇಳಿದ್ದಾರೆ. ''ಇಲ್ಲಿ ಕೊಟ್ಟಿರುವ ಕವನಗಳೆಲ್ಲಾ ಇಂಗ್ಲಿಷ್ ಕಾವ್ಯಮಾಲೆಯ ನಾಯಕರತ್ನಗಳೆಂದು ಅಂದುಕೊಳ್ಳುವುದಿಲ್ಲ. ಉತ್ತಮರಾದ ಕವಿಗಳು ಇಲ್ಲಿ ಎಲ್ಲರೂ ಇಲ್ಲ. ಇಂಗ್ಲಿಷ್ ಕವಿಗಳು ಶೃಂಗಾರ ರಸವನ್ನು ಹೀಗೆ ಗಂಭೀರವಾಗಿಯೂ ಸ್ವಾಭಾವಿಕವಾಗಿಯೂ ಸೂಕ್ಷ್ಮವಾಗಿಯೂ ತೋರಿಸಿರುವರೆಂಬುದನ್ನು ತಿಳಿಸುವುದಕ್ಕಾಗಿ ಆ ಬಗೆಯ ಗೀತೆಗಳು ಕೊಂಚ ಮಟ್ಟಿಗೆ ಬಂದಿವೆ.'' ಈ ಸಂಗ್ರಹದಲ್ಲಿ ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು, ಮುಂತಾದ ವಿಶ್ವಕವಿತಾ ವಿಷಯಗಳ ಮೇಲೆ ಇಂಗ್ಲಿಷ್ ಕವಿಗಳು ಕಾವ್ಯವನ್ನು ರಚಿಸಿ ಹೇಗೆ ಸೌಂದರ್ಯದ ದೃಷ್ಟಾರರಾಗಿರುವರೆಂಬುದನ್ನು 'ಶ್ರೀ'ಯವರು ತೋರಿಸಿಕೊಟ್ಟಿದ್ದಾರೆ. ವಿಶ್ವವೈಶಾಲ್ಯದ ವಸ್ತುವನ್ನು ಪಡೆದಿರುವ 'ಇಂಗ್ಲಿಷ್ ಗೀತೆ'ಗಳು ತನ್ನ ಪ್ರಭಾವದಿಂದ ಕನ್ನಡದ ಕಾವ್ಯವಸ್ತುವಿನ ಆಲಿಕೆಯಲ್ಲಿ, ನಿರೂಪಣೆಯ ರೀತಿಯಲ್ಲಿ, ಭಾವದಲ್ಲಿ, ಉಕ್ತಿ ಸೌಂದರ್ಯದಲ್ಲಿ ಕ್ರಾಂತಿಯನ್ನು ತಂದುದರಲ್ಲಿ ಆಶ್ಚರ್ಯವೇನೂ ಇಲ್ಲ. ಈ ಸಂಗ್ರಹದಲ್ಲಿ ''ಬೀಕಲು ಫಲ ಒಂದೂ ಇಲ್ಲ, ಇಲ್ಲಿಯ ಕಾವ್ಯರಸದಲ್ಲಿ ಇವರ ಜೀವರಸ ಬೆರೆತು ಆದ ಹೊಸ ರಸಾಯನ''[15] ಎಂದು ಬೇಂದ್ರೆಯವರು ಹೇಳಿದುದು ಸರಿಯೆನಿಸುತ್ತದೆ.

'ಇಂಗ್ಲಿಷ್ ಗೀತೆಗಳಲ್ಲಿನ ವಸ್ತು ನಿರೂಪಣೆ ಕ್ರಾಂತಿಕಾರಕವಾದುದು. ಇಲ್ಲಿನ ವಸ್ತು ನಿರೂಪಣೆಯಲ್ಲಿ ಗಾಂಭೀರ್ಯ ಮತ್ತು ಸ್ವಾಭಾವಿಕತೆಗಳಿವೆ. ಹಳೆಯ ಕಾಲದ ಸಾಹಿತ್ಯದಲ್ಲಿನ ಶೃಂಗಾರ ಪ್ರಸಂಗಗಳು ಎಷ್ಟೋ ಬಾರಿ ನಾಚಿಕೆಯಿಂದ ತಲೆ ತಗ್ಗಿಸುವಂತಿರುತ್ತದೆ. ರಾಣಿವಾಸದ ಬಿಗುಮಾನ, ವೇಶ್ಯಾವಾಟದ ಹಗರಣದ ಸರಸ ಇವೆಲ್ಲ ತುಂಬಿರುವ ಇಲ್ಲಿ' ನಿರಂಕುಶ ವ್ಯಂಗ್ಯವೂ ದೇಶೀಯ ಧ್ವನಿಯೂ ಬರುವುದು. ದೇಶೀಯ ಪುನರುದ್ಧಾರದ ಕಾಲದಲ್ಲಿ ಈ ಆಂಗ್ಲ ಶೃಂಗಾರದ ಭಾವಗೀತೆಗಳು ನಮ್ಮ ದೇಶೀಯ ಸೊಬಗನ್ನೇ ಮತ್ತೆ ನೆನಪಿಸಿ ತಂದುಕೊಟ್ಟುದು ಹೊಸ ಕವನಗಳಿಗೆ ಉಪಕಾರವಾಯಿತು[16] ಎಂದಿದ್ದಾರೆ. ಬೇಂದ್ರೆಯವರು. ಕನ್ನಡ ಜಾನಪದ ಗೀತೆಗಳಲ್ಲಿನ ಶೃಂಗಾರವು ಬಹುಮಟ್ಟಿಗೆ ಗಂಭೀರ, ಸೂಕ್ಷ್ಮ, ನವಿರು ಮತ್ತು ಸ್ವಾಭಾವಿಕ ಗುಣಗಳಿಂದ ತುಂಬಿರುತ್ತವೆ. ಅದರಂತೆ 'ಇಂಗ್ಲಿಷ್ ಗೀತಗಳು' ಜಾನಪದ ಸಾಹಿತ್ಯದ ಹಿರಿಮೆಯನ್ನು ಎತ್ತಿಹಿಡಿದಿದೆ.

'ಶ್ರೀ'ಯವರು 'ಅರಿಕೆ'ಯಲ್ಲಿ ಇಂಗ್ಲಿಷ್ ಪದ್ಯಗಳನ್ನು ಕನ್ನಡ ಪದ್ಯಗಳಿಗೆ ತರಲು ಮಾಡಿದ ಪ್ರಯತ್ನದ ಬಗ್ಗೆ ಹೇಳುತ್ತಾ "ಕನ್ನಡದ ಜಾಯಮಾನವನ್ನು ಮೀರದೆ ಎಷ್ಟು ಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟುಮಟ್ಟಿಗೂ" ಪ್ರಯತ್ನಿಸಿರುವುದಾಗಿ ಹೇಳಿದ್ದಾರೆ. ಈ ಬಗ್ಗೆ ಬೆಳ್ಳಾವೆ ವೆಂಕಟನಾರಾಯಣಪ್ಪನವರು "ಮೂಲದಲ್ಲಿಯ ಭಾವಗಳೂ ರಸವೂ ಬಿಟ್ಟುಹೋಗದಂತೆ ಸಾಧ್ಯವಾದ ಮಟ್ಟಿಗೆ ಪ್ರಯತ್ನಿಸಿ, ಕನ್ನಡಕ್ಕೆ ಸ್ವಾಭಾವಿಕವಾಗಿರುವಂತೆ ಮಾರ್ಪಡಿಸಿ, ಲಲಿತವಾದ ಭಾಷೆಯಲ್ಲಿ ಇಂಗ್ಲಿಷಿಗೆ ಹೋಲುವ ಛಂದಸ್ಸಿನಲ್ಲಿ ಗ್ರಂಥಕರ್ತರು ಈ ಕವಿತೆಗಳನ್ನು ರಚಿಸಿರುವರು"[17] ಎಂದಿದ್ದಾರೆ. ಇದರಲ್ಲಿರುವ ಹೊಸ ಛಂದಸ್ಸೇ ಇದರ ಹೊಸತನ. ಈ ಗೀತೆಗಳ ನಿಜವಾದ ಮೇಲ್ಮೆ ಎಂದರೆ ಅದರ ಶೈಲಿಯ ಪಾಕಶಯ್ಯೆಯಲ್ಲಿಯೂ ಅದರ ಛಂದದ ಕುಣಿತ ಮಣಿತದಲ್ಲಿಯೂ ಇದೆ. ಅವರ 'ಇಂಗ್ಲಿಷ್ ಗೀತಗಳು' ಭಾಷಾಂತರಗಳಾದರೂ ಹೊಸಗನ್ನಡ ಭಾವಗೀತೆಗಳಿಗೆ ಮಾರ್ಗದರ್ಶಕವಾಗಿದೆ[18] ಎಂದಿದ್ದಾರೆ ಬೇಂದ್ರೆಯವರು. ಇಂಗ್ಲಿಷ್ ಗೀತೆಗಳಿಗಿಂತ ಮೊದಲು ಬಂದ ಅನುವಾದಗಳಾಗಲೀ, ಸಂಸ್ಕೃತ ಕೃತಿಗಳಾಗಲೀ, ವಸ್ತು ಭಾವ, ಭಾಷೆ, ಶೈಲಿಗಳಲ್ಲಿ ಹೊಸತನವನ್ನು ಸಾಧಿಸಿದರೂ, ಛಂದಸ್ಸು, ಮಾತ್ರ ವೃತ್ತ, ಕಂದ ಇಲ್ಲವೆ ಷಟ್ಪದಿಯಲ್ಲಿರುತ್ತಿದ್ದವು. ಇದಕ್ಕೆ ಎಸ್. ಜಿ. ನರಸಿಂಹಾಚಾರ್ಯರ, ಜಯಾಚಾರ್ಯರ, ಪಂಜೆಯವರ, ಹಟ್ಟಂಗಡಿ ನಾರಾಯಣರಾಯರ ಕವಿತೆಗಳು ಸಾಕ್ಷಿ. "ಶ್ರೀ"ಯವರ ಹೆಗ್ಗಳಿಕೆ ಹೊಸ ಛಂದೋರೂಪ ನೀಡಿದ್ದಾಗಿದೆ.

"ಭಾವಕ್ಕೆ ಸಹಜ ಕವಚವೋ ಎಂಬಂತೆ ಪದ್ಯರೂಪವು ಅಳವಟ್ಟು, ಅದರ ಗತಿಗೆ ಅನುಸಾರವಾಗಿ ತಾನೂ ಸಾಗಿ, ಇಲ್ಲಿ ಹ್ರಸ್ವವಾಗಿ, ಅಲ್ಲಿ ದೀರ್ಘವಾಗಿ, ಇಲ್ಲಿ ಮೊರೆದು ಅಲ್ಲಿ ಸುಯ್ದು, ಇಲ್ಲಿ ನಟಿಯಂತೆ ಬಳುಕಿ, ಅಲ್ಲಿ ಬಾಣದಂತೆ ಹಾಯ್ದು, ಇಲ್ಲಿ ಪ್ರಾಸದ ಸೊಂಪನ್ನು ಮುಡಿದು, ಅಲ್ಲಿ ನಿರಾಭರಣ ಸೌಂದರ್ಯವನ್ನು ಮೆರೆದು, ಸೊಗಸನ್ನು ಬೀರಬೇಡವೇ? ಇಂಗ್ಲಿಷ್ ಛಂದಸ್ಸಿನಲ್ಲಿ ಇದು ಎಷ್ಟು ಚೆನ್ನಾಗಿ ಸಾಧಿಸಿದೆ ಎಂಬುದನ್ನು ಸಹೃದಯರು ಬಲ್ಲರು. ಕನ್ನಡ ನುಡಿಯ ಜಾಯಮಾನಕ್ಕೆ ರಗಳೆ ಷಟ್ಪದಿಗಳ ಕಾಲದಿಂದಲೂ ಬಗ್ಗಿ ಹದನಾದ ಪಳಗಿರುವ ಮಾತ್ರಾ ಗಣಗಳನ್ನೇ ಇಟ್ಟಿಗೆಯಾಗಿ ಉಪಯೋಗಿಸಿ ಚರಣ ವಿನ್ಯಾಸ ಪ್ರಾಸ ವಿಲಾಸಗಳನ್ನು ಮಾತ್ರ ಬಗೆ ಬಗೆಯಾಗಿ ಏರ್ಪಡಿಸಿ ಹೊಸ ಹೊಸ ಕಟ್ಟಡಗಳನ್ನು ಕಟ್ಟುವುದು ಸಾಧ್ಯ, ಉಚಿತ" ಎಂಬುದು ಪಾಂಡಿತ್ಯದಿಂದ ಪರಿಪಕ್ವವಾದ 'ಶ್ರೀ'ಯವರ ಸ್ವತಂತ್ರ ದೃಷ್ಟಿಗೆ ಹೊಳೆಯಿತು.[19] ಇಲ್ಲಿ ಬಹುಪಾಲು ಪದ್ಯಗಳಿಗೆ ಮಾತ್ರಾ ಗಣಗಳೇ ತಳಹದಿ. ಈ ಪದ್ಯಭಾಗಗಳನ್ನು ಉದಾಹರಣೆಯನ್ನಾಗಿ ನೋಡಬಹುದು.

ಈ ಬಗೆಯ : ಮುಕ್ತನಿಗೆ : ತೊತ್ತುಗಳ : ತೊಡರಿಲ್ಲ : 5 : 5 : 5 : 5
ಏರುವಾ : ಸೆಗಳಿಲ್ಲ : ಬೀಳುವಳು : ಕಿಲ್ಲ : 5 : 5 : 5 : 3
ಹೊನ್ನಮ : ಣ್ಣಿಲ್ಲದೊಡೆ : ತನ್ನೊಡೆಯ : ತಾ ಬಲ್ಲ : 5 : 5 : 5 : 5
ಒಂದುತನ : ಗಿಲ್ಲದೆಯೆ : ಉಂಟುತನ : ಗೆಲ್ಲ : 5 : 5 : 5 : 3

ಇಲ್ಲಿ ಕುಸುಮ ಷಟ್ಪದಿಯ ಆರು ಸಾಲುಗಳನ್ನು ನಾಲ್ಕಕ್ಕೆ ಇಳಿಸಿ. ಅಂತ್ಯ ಪ್ರಾಸದೊಡನೆ ಬಳಸಿರುವುದನ್ನು ನೋಡುತ್ತೇವೆ. ಆದರೆ ಸಮಪಾದಗಳ (2 ಮತ್ತು 4 ನೆಯ) ಕೊನೆಯಲ್ಲಿ ಮಾತ್ರ ಒಂದು ಗುರುವಿಗೆ ಬದಲು 3 ಮಾತ್ರೆಗಳು ಬರುತ್ತವೆ.

ಕಾವ್ಯದ ಇತಿಹಾಸವು ಮೂಲಭೂತವಾದ ನಾಲ್ಕಾರು ಲಯಗಳನ್ನು ತಮ್ಮಿಷ್ಟ ಬಂದಂತೆ ಬದಲಾಯಿಸಿ, ಮಿಶ್ರಗೊಳಿಸಿ, ಹೊಸದಾಗಿ ಬರುವ ತಮ್ಮ ಭಾವಗಳ ಅವಶ್ಯಕತೆಯನ್ನು ಪೂರೈಸಲು ಹೊಸದಾಗಿ ರೂಪಿಸಿಕೊಳ್ಳುವುದರಲ್ಲಿಯೇ ಇದೆಯೆಂದು ಪಾಶ್ಚಾತ್ಯ ವಿಮರ್ಶಕರ ಅಭಿಪ್ರಾಯ.[21] ನಾಲ್ಕಾರು ಮೂಲಲಯ (Basic Rhythm)ಗಳನ್ನೇ ಆಧಾರವಾಗಿಟ್ಟುಕೊಂಡು, ಅವುಗಳನ್ನೇ ಹಿಂದುಮುಂದಾಗಿ ಬಳಸಿ, ವಿಸ್ಮಯಕಾಲಿಕವಾದಂಥ ಪಲುಕುಗಳನ್ನು (Modulations) ಸಾಧಿಸಬಹುದು. 'ಶ್ರೀ'ಯವರೂ ಅದೇ ರೀತಿಯಲ್ಲಿ ಹಳೆಯ 3, 4, 5+4 ಮಾತ್ರಾಗಣಗಳ ಲಯಗಳನ್ನೇ ವೈವಿಧ್ಯಪೂರ್ಣವಾಗಿ ಬಳಸಿಕೊಂಡಿದ್ದಾರೆ. ಅಲ್ಲದೆ 'ಪಂಪಭಾರತ'ದ ಒಂದು ಲಯವನ್ನು ಮತ್ತೆ ಜೀವಂತವನ್ನಾಗಿಸಿದ್ದಾರೆ. ಒಂದು ಸಾವಿರ ವರ್ಷದ ಹಿಂದೆ ಕೇಳಿದ ಈ ಲಯ ಮತ್ತೆ ಕೇಳಿ ಬರಲು ಇಷ್ಟು ಕಾಲ ಬೇಕಾಯಿತು.

| | | |
|---|---|---|
| "ಅಲ್ಲಿ ಸೋಗಯಿಸುವ ಕೃತಕ ಗಿರಿಗಳಿಂ | : | 3 + 5 + 3 + 5 |
| ಕಲ್ಪತರುಗಳನೆ ಪೋಲ್ವ ಮಠಗಳಿಂ | : | 3 + 5 + 3 + 5 |
| ವಂದನಂಗಳೊಳ್ ಸುಳಿವ ಬಿರಯಿಯಂ | : | 3 + 5 + 3 + 5 |
| ಕಂಪು ಕಣ್ಮಲೆಯೆ ಪೊತ ಸುರಯಿಯಿಂ | : | 3 + 5 + 3 + 5 |

ಈ ಲಯವನ್ನು 'ಇಂಗ್ಲಿಷ್ ಗೀತಗಳು' ಈ ಪದ್ಯ ಭಾಗದಲ್ಲಿ ಕಾಣುತ್ತೇವೆ:

"ದಾರಿ ಉದ್ದಕ್ಕೂ ಬಳಸಿ ಏರುವುದೇ ?
ಅಹುದು, ಕೊನೆಯವರೆಗೆ
ದಿನದ ಪಯಣ ದಿನವೆಲ್ಲ ಹಿಡಿಯುವುದೇ ?
ಎಲ್ಲ - ಇರುಳವರೆಗೆ".[22]

ಇದೇ 3+5 ಮಾತ್ರೆಗಳ ಲಯವನ್ನು 'ಚೋಳ ಕನ್ನೆಯರು (ಪುಟ 69) ಎಂಬ ಕವಿತೆಯಲ್ಲಿಯೂ ಕಾಣಬಹುದು. "ಕಾಣಿಕೆ" ಪದ್ಯದ ನುಡಿಯ ತಲಕಟ್ಟು ಭೋಗ ಷಟ್ಪದಿ, ಅದನ್ನು ಶ್ರೀಯವರು ಹೀಗೆ ಮಾರ್ಪಡಿಸಿಕೊಂಡಿದ್ದಾರೆ. ನಾಲ್ಕು ಐದನೆಯ ಚರಣಗಳನ್ನು ತೆಗೆದುಹಾಕಿ ಉಳಿದವುಗಳಲ್ಲಿ ದೀರ್ಘಚರಣಗಳನ್ನು ಎರಡೆರಡಾಗಿ ಒಡೆದು ಮೂರು ಅಂತ್ಯ ಪ್ರಾಸಗಳನ್ನು ಬಳಸಿ ಹೊಸ ರೂಪವನ್ನು ಮಾಡಿಕೊಂಡಿದ್ದಾರೆ. ಇದಕ್ಕೆ ಆದಿಪ್ರಾಸವನ್ನು ಸೇರಿಸಿಕೊಂಡು ಡಿ. ವಿ. ಗುಂಡಪ್ಪನವರು 'ಖಂಡಭೋಗ ಷಟ್ಪದಿ'ಯೆಂಬ ಹೆಸರು ಕೊಟ್ಟು 'ನಿವೇದನ'ದಲ್ಲಿ ಬಳಸಿಕೊಂಡಿದ್ದಾರೆ.

"ತ್ರಿಪುಡೆಯ ಗತಿಯ ಭಿನ್ನ ವಿಲಾಸವನ್ನು ನೋಡುವುದಾದರೆ 'ಬಾನಾಡಿ'ಯನ್ನು ಹಳೆಯ ಪಳಕೆಯ ಮುಖಗಳೊಂದಿಗೆ ಹೋಲಿಸಿ ನೋಡಬೇಕು. 'ಕಾಳಗದ ಪದ'ವಂತೂ ಛಂದೋಗತಿಯ ವಿವಿಧ ಭಾಗಗಳಿಂದ ತುಂಬಿದೆ. ಅಲ್ಲಿಯ ತಾಳ ಮತಿಗಳ ಆಂದೋಲನವು ಅತಿ ಹೃದಯಂಗಮವಾಗಿದೆ. ಉತ್ಸಾಹಕ್ಕೆ ಉಚಿತವಾಗಿದೆ" ಎಂದು ಇಲ್ಲಿಯ ಛಂದೋವೈವಿಧ್ಯದ ಬಗ್ಗೆ ಬೇಂದ್ರೆಯವರು ಹೇಳಿದ್ದಾರೆ."[23]

ವಾಲ್ಟರ್ ಸ್ಕಾಟ್‌ನ Proud Maisie ಕವನದ ಭಾಷಾಂತರ 'ಬಿಂಕದ ಸಿಂಗಾರಿ'ಯ ಲಯವು ಪದ್ಯದ ಹೆಸರಿಗೆ ತಕ್ಕಂತೆ ಚಿಮ್ಮಿ ಕುಣಿಯುತ್ತದೆ.

| | |
|---|---|
| Proud maise is in the wood | ಚಿಮ್ಮುತ ಸಿರಿಯಸು ಬನದಲಿ ಬಂದಳು |
| working so early | ಬಿಂಕದ ಸಿಂಗಾರಿ |
| sweet Robin sits on the bush | ಹೊಮ್ಮಿದ ಹಸುರಲಿ ಮೆರೆಯಿತು ಹಕ್ಕಿ |
| singing so rarely | ಕೊರಳಿನ ದನದೂಗಿ[24] |

ಇಲ್ಲಿ ವಿಷಮವಾದ (1 ಮತ್ತು 2) ಗಳಲ್ಲಿ ಆದಿ ಪ್ರಾಸವೂ, ಸಮಪಾದಗಳಲ್ಲಿ ಅಂತ್ಯ ಪ್ರಾಸವೂ ಸೇರಿಕೊಂಡು ಪದ್ಯಕ್ಕೊಂದು ಬಿಗಿಯನ್ನು ಕೊಟ್ಟಿದೆ. ಮೂಲದಲ್ಲಿಲ್ಲದ ಒಂದೆರಡು ಚಿಕ್ಕ ಮಾರ್ಪಾಟುಗಳನ್ನು ಸಂದರ್ಭೋಚಿತವಾಗಿ ಕವಿ ಬಳಸಿಕೊಂಡಿದ್ದಾರೆ.

'ಹಳೆಯ ಪಳಕೆಯ ಮುಖಗಳು' 'ಭರತಮಾತೆಯ ವಾಕ್ಯ' ಮತ್ತು 'ಬಾನಾಡಿ' ಈ ಮೂರು ಕವಿತೆಗಳಲ್ಲಿ ಒಟ್ಟು ಗಣಸಂಖ್ಯೆಯೂ ವಿನ್ಯಾಸವೂ ಒಂದೇ ಆದರೂ, ಪಂಕ್ತಿಗಳ ಅಳತೆ ಮತ್ತು ಸಂಖ್ಯೆ, ಪ್ರಾಸದ ನೆಲೆ ಇವುಗಳ ವ್ಯತ್ಯಾಸದಿಂದ ಅದರ ರೂಪ ಮಾರ್ಪಟ್ಟಿದೆ ಎಂದು ಬೇಂದ್ರೆಯವರು, ತೀ.ನಂ.ಶ್ರೀ. ಯವರು ಗುರುತಿಸಿದ್ದಾರೆ. ಈ ಪದ್ಯಗಳ ಛಂದೋರೂಪ ಒಂದೇ ಆದರೂ ವ್ಯತ್ಯಾಸವೂ ಹೇಗೆ ರೂಪಿಸಲ್ಪಟ್ಟಿದೆ ಎಂಬುದನ್ನು ಉದಾಹರಣೆಗಳಿಂದ ನೋಡಬಹುದು.

''ಗಾಳಿ ಕೊಟವೆ ನಾನು ಸುಳಿವೆನು ಹಸುಳೆ ಸುಳಿದೆಡೆಯೆಡೆಯೊಳು,
ಹಾಳು ಬಾಳಿನ ಮರಳು ಕಾಡಿನೊರಳಲರಸಿ ಹಿಂದಿನ ನಿಧಿಯದು !
ಎಂದೇ ಹೋದೆವು, ಎಂದೋ ಹೋದೆವು ಹಳೆಯ ಪಳಕೆಯ ಮುಖಗಳು''[25]

''ಎಳೆಯ ಬೆಳಕನು ಮೊಗೆದು ಹೊತ್ತರೆ
ಬೆಳ್ಳಗೆತ್ತಲು ತುಳುಕಲು
ಕಳೆಯ ಸೊಡಲನು ಕುಗ್ಗು ತಡಗುವ
ಬೆಳ್ಳಿ ಬಿಂಬದ ಬಗೆಯೊಳು,
ತಿಳಿವುದಿರುವುದು ಮೇಲೆ ಎಲ್ಲಿಯೋ, ಕಣ್ಣು ತಟ್ಟನೆ ಹಿಡಿವುದು''[26]

ಮೊದಲ ಉದಾಹರಣೆಯ ಮೊದಲೆರಡು ಸಾಲುಗಳು ನಾಲ್ಕು ಸಾಲುಗಳಾಗಿ ಒಡೆದಿವೆ. ಸಮಪಾದಗಳು ವಿಷಮಪಾದಗಳು ಆದಿಪ್ರಾಸವನ್ನು ಹೊಂದಿವೆ. ಸಮಪಾದಗಳಲ್ಲಿ ಅಂತ್ಯಪ್ರಾಸವೂ ಇದೆ. ಇವಿಷ್ಟೇ ಭಿನ್ನತೆ. ಗಣಗಳು ಅವೇ ಒಟ್ಟು ಮಾತ್ರೆಗಳ ಲೆಕ್ಕವೂ ಒಂದೇ.

ಶ್ರೀಯವರು ಕನ್ನಡಕ್ಕೆ ಹೊಸ ಛಂದೋರೂಪ ನೀಡಿದುದಲ್ಲದೆ. ಹೊಸ ಪ್ರಯೋಗಗಳಿಗೆ ಸಾಧನೆಗೆ ಮೇಲ್ಪಂಕ್ತಿಯಾದರು. ಕನ್ನಡ ಕಾವ್ಯದಲ್ಲಿ ಹಳೆಯ ರೂಪಗಳೇ ಅಲ್ಲದೆ. ಹೊಸ ರೂಪಗಳು ಸಫಲವಾಗಬಲ್ಲವೆಂಬುದನ್ನು ಸಾಧಿಸಿತೋರಿದರು.

'ಇಂಗ್ಲಿಷ್ ಗೀತ'ಗಳನ್ನು ಎಸ್. ಎಸ್. ಸುಬ್ಬರಾಯರು ಕನ್ನಡದ ಲಿರಿಕಲ್ ಬ್ಯಾಲಡ್ಸ್ (Lyrical Ballads) ಎಂದು

ಕರೆದರು.[28] 'ಲಿರಿಕಲ್ ಬ್ಯಾಲಡ್ಸ್ ಅನ್ನು 1798ರಲ್ಲಿ ವರ್ಡ್ಸ್‌ವರ್ತ್ ಮತ್ತು ಕೋಲರಿಡ್ಜ್ ಇಬ್ಬರೂ ಸೇರಿ ಪ್ರಕಟಿಸಿದರು. ಹದಿನೆಂಟನೆಯ ಶತಮಾನದ ಇಂಗ್ಲೆಂಡಿನ ಕಾವ್ಯದಲ್ಲಿ 'ಹಾಡುತನ' (Lyricisim) ಇರಲಿಲ್ಲ. ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳ ಕಾವ್ಯಗಳ ಮಾದರಿಯಲ್ಲಿ ನಾಗರೀಕ ಜೀವನದ ಭಾಷೆ, ನಾಗರೀಕ ಬದುಕಿನ ವಿಷಯಗಳನ್ನೊಳಗೊಂಡಂತೆ ಕಾವ್ಯ ರಚನೆಯಾಗುತ್ತಿದ್ದು ಜನರ ಭಾಷೆಯಿಂದ ದೂರ ಉಳಿಯುತ್ತಿತ್ತು. ವೀರದ್ವಿಪದಿ (Heroic couplet)ನ ಛಂದೋರೂಪದಲ್ಲಿ ಅಸಹಜವಾಗಿ ಕಾವ್ಯ ಕಾಣುತ್ತಿತ್ತು. ಈ ಪದ್ಯ ರೂಪವು ವಿಡಂಬನೆ, ನೀತಿಬೋಧೆ, ತಾರ್ಕಿಕ ವಾದ ವಿವಾದಗಳಿಗೆ ಚೆನ್ನಾಗಿ ಹೊಂದುತ್ತಿದ್ದು 18ನೇ ಶತಮಾನದ ಕಾವ್ಯ ಈ ವಿಷಯಗಳಿಗೆ ಪ್ರಸಿದ್ಧಿಯಾಗಿದೆ.[29] ಈ ಚೌಕಟ್ಟಿನಿಂದ ಹೊರಬಂದು ಭಾವಗೀತಾತ್ಮಕ ಕಾವ್ಯ ರಚನೆಗೆ ಬ್ಲೇಕ್, ಕ್ರಿಸ್ಟೋಫರ್ ಸ್ಮಾರ್ಟ್, ಛಾಟರ್ಟನ್, ಹಾಗೂ ಸ್ವಲ್ಪ ಮಟ್ಟಿಗೆ ಗೋಲ್ಡ್-ಸ್ಮಿತ್, ಗ್ರೇ ಮತ್ತು ಥಾಮ್ಸನ್ ಪ್ರಯತ್ನಿಸಿದರು. ಆದರೆ ಈ ಬಗ್ಗೆ ಸಿಡಿದೆದ್ದು ಹೊಸಯುಗಕ್ಕೆ ನಾಂದಿ ಹಾಡಿದವರು ವರ್ಡ್ಸ್‌ವರ್ತ್ ಮತ್ತು ಕೋಲ್‌ರಿಜ್. "ಲಲಿತವಾದ ಭಾಷೆಯಲ್ಲಿ ಸಾಮಾನ್ಯ ಜನರ ಜೀವನವನ್ನಾಧರಿಸಿ ವರ್ಡ್ಸ್‌ವರ್ತ್ ಪದ್ಯ ಬರೆದರೆ ಅದ್ಭುತ ವಿಷಯದ ಬಗ್ಗೆ ನಂಬಿಕೆ ಬರುವ ರೀತಿಯಲ್ಲಿ ಕೋಲ್‌ರಿಜ್ ಪದ್ಯ ರಚನೆ ಮಾಡಿದ. ಈ ರೀತಿ ಕೆಲಸದ ಹಂಚಿಕೆ ಅವರಲ್ಲಾಗಿತ್ತು."[30] "ಮಿಲ್ಟನ್‌ನ ಕಾಲದಿಂದ ಮಾಸಿಹೋಗಿದ್ದ ಭಾವಗೀತೆಯ ಛಂದೋರೂಪ ಅವನ ಹಿರಿಯ ಸಾಧನೆಯಾದ ಪ್ರಗಾಥ ವರ್ಡ್ಸ್‌ವರ್ತ್‌ನ ಮೂಲಕ 'ಲಿರಿಕಲ್ ಬ್ಯಾಲಡ್ಸ್'ನಲ್ಲಿ ಮತ್ತೆ ಕಾಣಿಸಿಕೊಂಡಿತು.[31] ತನ್ನ ಹೊಸ ಹೊಸ ಪ್ರಯೋಗಗಳಿಂದಾಗಿ ವರ್ಡ್ಸ್‌ವರ್ತ್ ಇತರರಿಗೆ ಮಾದರಿಯಾದ. ಕೋಲರಿಜ್ ತನ್ನ ಪುರಾತನ ನಾವಿಕನ ಹಾಡು' (The Ryhm of the Ancient Mariner) ನಲ್ಲಿ ಜಾನಪದ ಕಥನ ಕವನಗಳ ರೀತಿಯನ್ನು ಸೊಗಸಾಗಿ ಬಳಸಿಕೊಂಡ.

ಸರಳತೆಯಲ್ಲಿಯೇ ಭಾವತೀವ್ರತೆಯನ್ನು ಸಾಧಿಸುವುದು ವರ್ಡ್ಸ್‌ವರ್ತ್‌ನ ಕಾವ್ಯದ ಮುಖ್ಯ ಲಕ್ಷಣವಾದರೆ ಅದ್ಭುತ ಕಲ್ಪನೆಯಿಂದ ಮಾನವಾತೀತ ಅದ್ಭುತ (Super human Miracles)ನ್ನು ಚಿತ್ರಿಸುವುದು ಕೋಲರಿಜ್‌ನ ಕ್ರಮವಾಗಿತ್ತು. ವರ್ಡ್ಸ್‌ವರ್ತ್ 1800ರಲ್ಲಿ ಲಿರಿಕಲ್ ಬ್ಯಾಲಡ್ಸ್‌ನ ಮುನ್ನುಡಿಯಲ್ಲಿ ಈ ಹೊಸಕಾವ್ಯ ಸಿದ್ಧಾಂತದ ಪ್ರತಿಪಾದನೆ ಮಾಡಿದ. ಇದರ ಪ್ರಭಾವ 'ಶ್ರೀ'ಯವರ ಇಂಗ್ಲಿಷ್ ಗೀತಗಳ ಮೇಲಾಗಿರುವುದು ಸ್ಪಷ್ಟವಾಗಿದೆ.

ಮರುಮುಟ್ಟಿನ ಒಣಕಲು ಬರಡುತನ, ಯಾಂತ್ರಿಕತೆಯನ್ನು ಬದಿಗೆ ಸರಿಸಿ ಭಾವಗೀತೆಗೆ ದಾರಿಮಾಡಿಕೊಟ್ಟು ಇಂಗ್ಲಿಷ್ ಕಾವ್ಯದಲ್ಲಿ ಹೊಸಹಾದಿ ಹಾಕಿಕೊಟ್ಟು ಹೊಸಯುಗವನ್ನು ಸಾರಿದ್ದು, 'ಲಿರಿಕಲ್ ಬ್ಯಾಲಡ್ಸ್'[32]. ಇದೇ ರೀತಿ 'ಶ್ರೀ'ಯವರ 'ಇಂಗ್ಲಿಷ್ ಗೀತಗಳು' ಕನ್ನಡದಲ್ಲಿ ನವೋದಯ ಸಾರಿದ ಪರ್ವಕೃತಿಯಾಯಿತು. ವರ್ಡ್ಸ್‌ವರ್ತ್‌ಗೂ 'ಶ್ರೀ' ಯವರಿಗೂ ವಿಚಾರಸಾಮ್ಯತೆ ಇದ್ದರೆ 'ಲಿರಿಕಲ್ ಬ್ಯಾಲಡ್ಸ್'ಗೂ 'ಇಂಗ್ಲಿಷ್ ಗೀತಗಳಿಗೂ, 'ಪ್ರಭಾವ ಸಾಮ್ಯ'ವಿದೆ. ಎರಡೂ ಕೃತಿಗಳೂ ಆಯಾಯಾ ಕಾಲದಲ್ಲಿ ನವೋದಯಕ್ಕೆ ಕಾರಣವಾಗಿ ಹೊಸಯುಗವನ್ನು ಸೃಷ್ಟಿಸಿದವು.

"ಶ್ರೀಯವರು ಹೊಸಮಾರ್ಗದ ಪ್ರವರ್ತಕರು ನಿಜ. ಆದರೆ ಪ್ರತಿಭೆಯ ಸಂಸ್ಕಾರ ಮಾತ್ರ ಹಳೆಯದೇ. ಸಂಸ್ಕೃತ ಮಹಾಭಾರತಕ್ಕೆ ಪಂಪನ ಪ್ರತಿಭೆ ಪ್ರತಿಸ್ಪಂದಿಸಿದಂತೆ ಶ್ರೀಯವರ ಹೃದಯ. ಅವರ ಪ್ರತಿಭೆ ಸಾಹಿತ್ಯ ಕೃತಿಗಳಿಗೆ

ಪ್ರತಿಸ್ಪಂದಿಸಿತು.''[33] ಇವರ ಪ್ರತಿಭೆಯ ಸ್ವರೂಪದ ಬಗ್ಗೆ ಶ್ರೀ ಎ. ಎನ್. ಮೂರ್ತಿರಾಯರು ತಮ್ಮ 'ಪತ್ರಗಳು ಚಿತ್ರಗಳು' ಗ್ರಂಥದಲ್ಲಿ ಬಹಳ ಚೆನ್ನಾಗಿ ಹೇಳಿದ್ದಾರೆ. ''ಶ್ರೀಯವರ ಪ್ರತಿಭೆ ಮಹಾಕೃತಿಯೊಂದರ ಲಯಕ್ಕೆ ಸರಿಯಾಗಿ ಮಿಡಿಯಬಲ್ಲದು. ಅದರ ಕರೆಗೆ ಓಗೊಡಬಲ್ಲದು. ಆದರೆ ತಾನೇ ಆ ಮಟ್ಟದ ಕೃತಿಯನ್ನು ಸೃಷ್ಟಿಸಲಾರದು. ಬಹುಶಃ ಇದು ಅವರ ಪ್ರತಿಭೆಯ ಗುಣ. ಅದನ್ನು ಸೃಷ್ಟಿಶಕ್ತಿಯುಳ್ಳ ಪ್ರತಿಭೆ (Creative imagination) ಎನ್ನುವುದಕ್ಕಿಂತ ಸೃಷ್ಟಿಶಕ್ತಿಗೆ ಪ್ರತಿಸ್ಪಂದನ ಕೊಡಬಲ್ಲ ಪ್ರತಿಭೆ (Responsive imagination) ಎಂದರೆ ಸರಿಹೋದಿತೇನೋ. ನಾನು ಇಲ್ಲಿ ಲಕ್ಷಣ (definition) ಹೇಳುತ್ತಿಲ್ಲ. ಅವರ ಪ್ರತಿಭೆಯನ್ನು ಬಣ್ಣಿಸುತ್ತಿದ್ದೇನೆ ಮಾತ್ರ. ಮೇಲೆ ಹೇಳಿದ ಎರಡೂ ಬೇರೆ ಬೇರೆ ಜಾತಿಯ ಪ್ರತಿಭೆಗಳು ಎಂದರೆ ಮನಃಶಾಸ್ತ್ರ ಒಪ್ಪುವುದಿಲ್ಲ.''

ಅವೆರಡಕ್ಕೂ ಇರುವ ವ್ಯತ್ಯಾಸ ಪ್ರಮಾಣದ್ದು, ಜಾತಿಯದಲ್ಲ. Responsive ಮಟ್ಟದಲ್ಲಿ ಅವರ ಪ್ರತಿಭೆ ಅದ್ಭುತವಾದ ಕೆಲಸ ಮಾಡಬಲ್ಲದು. ಈ ಮಾತುಗಳನ್ನು ಆಳವಾಗಿ ಪರಿಶೀಲಿಸಿದರೆ ಶ್ರೀಯವರ ಲೇಖನ ಸೃಜನ ಶೀಲವಾದುದಲ್ಲ, ಪುನರ್ಲೇಖನವೆಂದು ಸ್ಪಷ್ಟವಾಗುತ್ತದೆ. ಅಂದರೆ ಒಮ್ಮೆ ಬರೆದುದನ್ನು ಮತ್ತೊಮ್ಮೆ ಬರೆದು ತೆಗೆಯುವುದು. ಇದು ಚರ್ವಿತವಾದರೂ ನುರಿಸಿದಂತೆ ರಸ ಏರುವಂತೆ ಬರೆಯಲು ಇಲ್ಲಿ ಸಾಧ್ಯವಿದೆ.

ಶ್ರೀಯವರ ಎದುರು ವೈವಿಧ್ಯಪೂರ್ಣವಾದ ಸಾಹಿತ್ಯಕ ಭಾಷೆಯ ವಿಸ್ತಾರವಿತ್ತು. ಹಳಗನ್ನಡ ಗದ್ಯಪದ್ಯಗಳ ಭಂಡಾರವಿತ್ತು. 'ಇಂಗ್ಲಿಷ್ ಗೀತ'ಗಳು ಮತ್ತು ಹೊಸ ಲೇಖನಗಳಿಗಾಗಿ ಹೊಸಭಾಷೆಯ ಪ್ರಯೋಗವಿತ್ತು.

''ಭಾವಗೀತಕ್ಕಷ್ಟೆ ಹೊಸಗನ್ನಡ
ರುದ್ರಕ್ಕೆ ಗಂಭೀರಕ್ಕೆ ಸುಧೀರ್ಘಕ್ಕೆ ಹಳಗನ್ನಡ,
ಸೊನ್ನೆ ವ್ಯಂಜನದ ರುಚಿ ಹತ್ತಿತೇಕೆ?
ಅರ್ಥಗೌರವವಿರದ ವಾಗಾಡಂಬರಕ್ಕೆ ಬೂಟಾಟಿಕೆಗೆ
ನಾಂದಿ ಹಾಕಿದ್ದೇಕೆ ಹೇಳಿ ಗುರುವೇ''

ಈ ಮಾತುಗಳನ್ನು ಕವಿ ಗೋಪಾಲಕೃಷ್ಣ ಅಡಿಗರು ''ಇಂಗ್ಲಿಷ್ ಗೀತ''ಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳಿದ್ದಾಗಿದೆ. ಈ ಕೃತಿ ಕಾವ್ಯದ ನಿರ್ಮಾಣದಲ್ಲಿ ಬಹಳ ಪ್ರಭಾವ ಬೀರಿದ್ದು, ಈ ಪ್ರಭಾವವನ್ನೇ ವಿ. ಸೀ. ಯವರು 'ಮಹಾ ಪರಿಣಾಮ'ವೆಂದು ಕರೆದಿರಬೇಕು.

'ಇಂಗ್ಲಿಷ್ ಗೀತಗಳು' ಕವನಗಳು ಇಂಗ್ಲಿಷ್ ಮೂಲದಿಂದ ಬಂದುವಾದರೂ ಅವು ಶ್ರೀಯವರ ಕವಿತೆಗಳಾಗಿ ನೆಲೆನಿಂತಿವೆ. ಮೂಲದೊಡನೆ ಹೋಲಿಸಿ ಭಾಷಾಂತರದ ಗುಣಾವಗುಣಗಳನ್ನು ವಿಮರ್ಶಿಸುವವರಿದ್ದಾರೆ. ಭಾಷಾಂತರ ಹೇಗೆ ಇರಲಿ, ಇವಂತೂ ಕನ್ನಡ ಕವಿತೆಗಳಾಗಿಬಿಟ್ಟಿವೆ. ಎರಡೂ ಭಾಷೆಗಳ ನಡುವೆ ನಡೆಯುವ ವಿನಿಮಯ ಎಷ್ಟು ಸಾಧ್ಯ! ಶ್ರೀಯವರಿಗೆ ಅರ್ಥವಾದ ಇಂಗ್ಲಿಷ್ ಕವಿತೆಗಳು ಕನ್ನಡ ಭಾಷೆಗೆ ಅರ್ಥವಾಯಿತೆ? ಹೀಗೆ ಕೇಳುವಾಗ ಪ್ರತಿಯೊಂದು ಭಾಷೆಗೂ ಒಂದು ವ್ಯಕ್ತಿ ನಿರಪೇಕ್ಷವಾದ ಪ್ರಜ್ಞೆ ಇರುತ್ತದೆ ಎಂದು ನಾವು ತಿಳಿಯಬೇಕು. ಭಾಷಾಂತರಿಸುವಾಗ ಎರಡು ಭಾಷೆಗಳ ಪ್ರಜ್ಞೆಗಳು ಮುಖಾಮುಖಿಯಾಗಿ ಅವುಗಳ ನಡುವೆ ಸಂಘರ್ಷ ಅಥವಾ ಸಾಮರಸ್ಯ ಏರ್ಪಡಬೇಕು. ಈ ಹಿನ್ನೆಲೆಯಲ್ಲಿ T. Hoodನ The Bridge of Sigh'sನ ಶ್ರೀಯವರ ಭಾಷಾಂತರ ನೋಡಿದಾಗ 'Christianity' ಕನ್ನಡದಲ್ಲಿ

'ಆರ್ಯುಧರ್ಮ'ವಾಗುತ್ತದೆ. ಈ ಬದಲಾವಣೆಗೆ ಕಾರಣ Christa nity ಎಂಬ ಶಬ್ದ ಇನ್ನೂ ಕನ್ನಡ ಭಾಷೆಗೆ ಪಳಗಿದ ಶಬ್ದವಲ್ಲ.

ಆದರೆ Christianityಯ ವಿಶೇಷ ಲಕ್ಷಣವಾಗಿರುವ Charity 'ಆರ್ಯಧರ್ಮ'ದ 'ಕರುಣೆ'ಯನ್ನು 'ಮರುಕ' ಅನ್ನುವ ಅರ್ಥದಲ್ಲಿ ಉಪಯೋಗವಾಗಿದ್ದು ಕನ್ನಡ ಭಾಷೆಯ ಪ್ರಜ್ಞೆಗೆ ಕವಿ ಹೊಸ ಪ್ರಜ್ಞೆಯನ್ನು ಒಗ್ಗಿಸಿಕೊಂಡಿದ್ದಾರೆ. ಇಂಗ್ಲಿಷಿನ 'Sun' ಕನ್ನಡದಲ್ಲಿ ಸೂರ್ಯನಾಗಿದ್ದರೆ 'ಆರ್ಯ' ಶಬ್ದಕ್ಕೆ ಪ್ರಾಸವಾಗಿ ಕವಿತೆಗೆ ಗೇಯತೆ ಬರುತ್ತಿತ್ತು. ಆದರೆ 'Under the Sun' ಒಂದು ಇಡಿಯಾದ ಅರ್ಥಪುಂಜವಾಗಿದ್ದು 'ಉರಿಯುವವನೆ ಬಲ್ಲ' ಎಂದು ಪ್ರಜ್ಞಾಪೂರ್ವಕವಾಗಿ ಬಳಸಲಾಗಿದೆ. ಇದಕ್ಕೆ ಉರಿಯುವ ಸೂರ್ಯನ ಬಗ್ಗೆ ನಮಗಿರುವ ದೈವಿಕತೆಯ ಹಾಗೂ ಸರ್ವಸಾಕ್ಷಿತ್ವದ ಕಲ್ಪನೆ ಕಾರಣ. ಆದ್ದರಿಂದ ಇದು ಒಂದು ಪ್ರಜ್ಞಾಪೂರ್ವಕವಾದ ಭಾಷಾಂತರ. ಕೇವಲ ಇಂಗ್ಲಿಷ್ ಕವಿತೆಗಳನ್ನು ಕನ್ನಡಕ್ಕೆ ತರಬೇಕೆನ್ನುವ ಉತ್ಸಾಹದಲ್ಲಿ ಬಂದುದಲ್ಲ. ಭಾಷೆ ಮತ್ತು ಸಂಸ್ಕೃತಿಯಲ್ಲಿ ಸಿದ್ಧತೆಮಾಡಿಕೊಂಡು ವಿಚಾರಪೂರ್ಣವಾಗಿ ತಂದ ಕವಿತೆಗಳು ಇವು.

ಶ್ರೀಯವರು 'ಇಂಗ್ಲಿಷ್ ಗೀತಗಳು' ಅನ್ನು ಕನ್ನಡಕ್ಕೆ ತಂದದ್ದು ಒಂದು ಇತಿಹಾಸಿಕ ಮಹತ್ವದ ಸಂಗತಿ. ಈ ಕೆಲಸದಲ್ಲಿ ಶ್ರೀಯವರ ಪ್ರತಿಭೆಯ ವಿವೇಕವಿದೆ. ನಮ್ಮಲ್ಲಿನ ಅಶ್ವತ್ಥಾಮನ ಕತೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಸೊಫೊಕ್ಲಿಸನ 'ಅಯಾಸ್' ನಾಟಕವನ್ನು ಕನ್ನಡಕ್ಕೆ ತಂದರು. ಈ ಕೊಡುಕೊಳೆಯಿಂದಾಗಿ ಭಾಷಾಂತರ ಯಶಸ್ವಿಯಾದ ವಿನಿಮಯವಾಯಿತು. ಹಾಗಾಗಿ ಅವರು ಶೇಕ್ಸ್‌ಪಿಯರ್‌ನನ್ನು ಭಾಷಾಂತರಗೊಳಿಸುವ ಗೋಜಿಗೆ ಹೋಗಲಿಲ್ಲ. ಹಾಗೆಯೇ 'ಕಾರಿಹೆಗ್ಗಡೆಯ ಮಗಳು', 'ರಾವುತರದಾಳಿ, ಮಾದಮಾದಿ, ಕಾಳಗದಪದ' ಇವೆಲ್ಲವನ್ನು ಓದಿದ ಯಾರೂ ಕನ್ನಡ ಕವಿತೆಗಳೆಂದು ಅವು ಹೇಳಬಹುದು. ಆದರೆ 'ಬಾನಾಡಿ' ಬಗ್ಗೆ ಹೀಗೆ ಹೇಳಲು ಬರುವುದಿಲ್ಲ. ಇಲ್ಲಿಯೂ ಕೂಡ ಶ್ರೀಯವರು ಇಂಗ್ಲಿಷಿನ ಶೆಲ್ಲಿ, ಬ್ರೌನಿಂಗ್, ವರ್ಡ್ಸ್‌ವರ್ತ್, ಬರ್ನ್ಸ್‌ರಂಥ ದೊಡ್ಡಕವಿಗಳನ್ನು ಆಯ್ದುಕೊಳ್ಳದೆ ಥಾಮಸ್‌ಹುಡ್, ಕ್ಯಾಂಬೆಲ್ ನಾರ್ಟನ್, ಲಿಂಡ್ಸೆ ಥಾಮ್ಸನ್‌ರಂತಹ ಸಾಮಾನ್ಯ ಕವಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ದೊಡ್ಡ ಕವಿಗಳವು ಕೂಡ ಸಣ್ಣ ಕವಿತೆಗಳನ್ನೇ ಆಯ್ಕೆ ಮಾಡಿಂಕೊಂಡಿದ್ದಾರೆ. ಈ ಕವಿತೆಗಳೆಲ್ಲಾ ನಮ್ಮಲ್ಲಿನ ಹಾಡುಗಳು, ಲಾವಣಿಗಳು, ಸಾಂಗತ್ಯ, ತ್ರಿಪದಿಗಳ ಹಿನ್ನೆಲೆಹೊಂದಿವೆ. ಹಾಗಾಗಿ ಈ ಹಿನ್ನೆಲೆ ಹೊಸ ಅರ್ಥವಂತಿಕೆ ತಂದಿದೆ. ಇವರ ಹೊಸಗನ್ನಡ ಬಳಕೆಯಲ್ಲೂ ಅರ್ಥವಿದೆ. ಅದೇ 'ಅಶ್ವತ್ಥಾಮನ್' ಹಳಗನ್ನಡದಲ್ಲಿದೆ. ಶೆಲ್ಲಿಯ Prometheus unbound ಕವಿತೆಯನ್ನು 'ಮಾತರೀಶ್ವನ್' ಎಂದು ಅನುವಾದ ಮಾಡಬೇಕೆಂದಿದ್ದರು ಶ್ರೀಯವರು. ಹಾಗೆ ಮಾಡಿದ್ದಲ್ಲಿ ಅದೂ ಕೂಡ ಹಳಗನ್ನಡದಲ್ಲೇ ಇರುತ್ತಿತ್ತು. ದೊಡ್ಡ ಸಾಹಿತ್ಯವನ್ನು ಕನ್ನಡಕ್ಕೆ ತರುವಾಗ ಶ್ರೀಯವರು ಬುದ್ಧಿಪೂರ್ವಕವಾಗಿ ಹಳಗನ್ನಡ ಪ್ರಯೋಗ ಮಾಡಿದ್ದಾರೆ.

'ಇಂಗ್ಲಿಷ್ ಗೀತಗಳ' ಲ್ಲಿ 'ಭಾಷಾಂತರ' ಕೇವಲ ಅರ್ಥಾಂತರವಾಗದೆ ಒಂದು ಹೊಸ ಕಾವ್ಯ ಮಾದರಿಯನ್ನು ಕನ್ನಡಕ್ಕೆ ಪರಿಚಯಿಸುವ ಕ್ರಿಯೆಯಾಗಿದೆ. ನವ್ಯ ಹಾಗೂ ಭಿನ್ನವಾದ ಅನುಭವ ಸಾಮಗ್ರಿ ಅಲ್ಲಿದ್ದು ಅದು ಸಾಂಸ್ಕೃತಿಕ ದೃಷ್ಟಿಯಿಂದಲೂ ವಿಶೇಷತೆಯನ್ನು ಪಡೆಯುತ್ತದೆ. ಥಾಮ್ಸನ್‌ನ 'Rule Britannia', ಕ್ಯಾಂಬೆಲ್‌ನ 'Ye Manners of England' ಹಾಗೂ ಹೆನ್ಲಿಯ 'What have I done for you. England my England' ಕವಿತೆಗಳು ದೇಶಭಕ್ತಿಯನ್ನು

ಬಿತ್ತುವುದಾಗಿದ್ದು 'ಇಂಗ್ಲೆಂಡ್'ನ್ನು 'ಇಂಡಿಯಾ'ವಾಗಿ ಅನುವಾದಿಸಿದ್ದರೆ ('Christianity' ಅನ್ನು 'ಆರ್ಯಧರ್ಮ'ವನ್ನಾಗಿಸಿದ ಹಾಗೆ) ಭಾಷಾಂತರ ಉದ್ದೇಶ ಸಾರ್ಥಕತೆಯನ್ನು ಪಡೆಯುತ್ತಿತ್ತು. ಸರ್ವಧರೆ ನಿನ್ನ ಹೊರೆಯುವ್ಯು, ನನ್ನ ಇಂಗ್ಲೆಂಡ್ ಎಂಬಂಥ ಸಾಲುಗಳು ಉಂಟು ಮಾಡುವ ಕಿರಿಕಿರಿ ತಪ್ಪುತ್ತಿತ್ತು ಇಂಗ್ಲಿಷ್ ಭಾಷೆಯ ಬಗ್ಗೆ ಇರುವ ಮೋಹಕ್ಕೂ ಇಂಗ್ಲೆಂಡ್ ಬಗ್ಗೆ ಇರುವ ಮೋಹಕ್ಕೂ ವ್ಯತ್ಯಾಸವಿದೆ. ಇಂಗ್ಲಿಷ್ ಭಾಷೆಯನ್ನು ಹಾಗೂ ಇಂಗ್ಲಿಷರ ಭಾಷೆಯನ್ನು ಸ್ವೀಕರಿಸುವವರಲ್ಲಿ ವ್ಯತ್ಯಾಸ ತುಂಬಾ ಇದೆ. ನಮ್ಮ ಸ್ವೀಕಾರ ಕಲಾತ್ಮಕವಾಗಿರಬೇಕೇ ಹೊರತು ಭಾವನಾತ್ಮಕವಾಗಿರಕೂಡದು. ವಿ. ಸೀ ಯವರು ಹೇಳಿದ ಹಾಗೆ ಶ್ರೀಯವರ ಮನಸ್ಸಿನಲ್ಲಿ ಇಂಗ್ಲಿಷರಿಗೂ ಇಂಡಿಯನ್ನರಿಗೂ ಚಾರಿತ್ರಿಕವಾಗಿ ಉಂಟಾದ ಸಂಬಂಧದಿಂದಾಗಿ ಅಲ್ಲಿನ ಸಾಹಿತ್ಯ, ತತ್ವ, ಚರಿತ್ರ ರಾಜಕೀಯಗಳನ್ನು ತೌಲನಿಕ ದೃಷ್ಟಿಯಿಂದ ನೋಡಿ ನಮ್ಮದನ್ನು ಬೆಳೆಸಿಕೊಳ್ಳುವುದಾಗಿತ್ತು. ಅಲ್ಲಿನ ಪಾಂಡಿತ್ಯದ ಬಳಕೆಗೆ ಇದು ಅಗತ್ಯವೆಂದು ಅವರ ನಂಬಿಕೆ. ಇದರಿಂದ ಪಾಶ್ಚಿಮಾತ್ಯ ಹಾಗೂ ಪೌರ್ವಾತ್ಯ ಎರಡೂ ಬೆಳೆಯಲು ಸಹಕಾರಿ. ಇದು ಇಂದಿನ ಸ್ಥಿತಿಯಲ್ಲಿ ಹೆಚ್ಚು ಸ್ವೈಜವಾದದ್ದೆಂದು ತೋರುತ್ತದೆ. ಇಲ್ಲಿ 'ವಸುದೇವ ಕುಟುಂಬಕಂ'ನ ಕಲ್ಪನೆ ಇದೆ. ಆದರೆ ಇಂಗ್ಲೆಂಡಿನ ಹಿಡಿತದಿಂದ ಬಿಡಿಸಿಕೊಳ್ಳಬೇಕೆಂಬ ಬಯಕೆ ತೀವ್ರವಾಗಿದ್ದ ಆ ಸಮಯದಲ್ಲಿ ಅದನ್ನು ಹೊಗಳುವ ಈ ಪದಗಳು ಕೇವಲ ಅರ್ಥಾಂತರ ಶಬ್ದಗಳಾಗಿ ಉಳಿಯುತ್ತವೇ ಹೊರತು ಭಾಷಾಂತರ ಶಬ್ದಗಳಾಗಿರುವುದಿಲ್ಲ.

ಶ್ರೀಯವರು 'ಗೀತಗಳು' ಎಂದು ಕರೆದಿರುವ ಶಬ್ದಕ್ಕೆ ಇಂಗ್ಲೀಷಿನಲ್ಲಿ 'ಲಿರಿಕ್' ಎನ್ನುವರು. ಕವಿಯ ಹೃದಯದಲ್ಲಿ ಮೂಡುವ ರಾಗರಸಕ್ಕೆ ರೂಪ ನೀಡುವುದು ಈ ರೀತಿಯ ಕಾವ್ಯದ ಲಕ್ಷಣ. ಇಂಗ್ಲಿಷಿನಲ್ಲಿ ಇಂತಹ ಗೀತೆಗಳು ಸಮೃದ್ಧವಾಗಿದ್ದು ಆಂಗ್ಲ ಸಾಹಿತ್ಯದ ಈ ಐಶ್ವರ್ಯವನ್ನು ಕನ್ನಡಿಗರಿಗೆ ಪರಿಚಯಿಸಲು ಇಂತಹ ಒಂದು ಭಾಷಾಂತರ ಅವಶ್ಯಕತೆ ಇದ್ದು ಇದನ್ನು ಶ್ರೀಯವರು ಮಾಡಿದ್ದಾರೆ. ಶ್ರೀಕಂಠಯ್ಯನವರು ಪ್ರಯೋಗಿಸಿರುವ ಛಂದೋರೂಪಗಳು ಸುಂದರವಾಗಿವೆ. ಕಾವ್ಯವಸ್ತುಗಳಿಗೆ ಅನುಕೂಲವಾಗಿವೆ. ಕನ್ನಡದ ಮರ್ಯಾದೆಗೆ ಒಪ್ಪಿವೆ. ಮುಖ್ಯವಾಗಿ ಶೈಲಿಯಲ್ಲಿಯೂ ಛಂದಸ್ಸಿನಲ್ಲಿಯೂ ಶ್ರೀಕಂಠಯ್ಯನವರು ಮಾರ್ಗದರ್ಶಿಗಳು. ಇನ್ನು ಮೇಲೆ ಬರುವ ಕವಿಗಳು ಇವರು ತೋರಿಸಿಕೊಟ್ಟಿರುವ ದಾರಿಯಲ್ಲಿ ಹೆಚ್ಚು ಹೆಚ್ಚಾಗಿ ನಡೆಯುವರೆಂಬುದರಲ್ಲಿಯೂ ಇದರಿಂದ ನಮ್ಮ ಸಾಹಿತ್ಯವು ಪಂಡಿತರಿಗೆ ಮಾತ್ರವಲ್ಲದೆ ಈಗಿಗಿಂತಲೂ ಹೆಚ್ಚಾಗಿ ಜನಸಾಮಾನ್ಯಕ್ಕೆ ನಿಲುಕುವಂತಾಗುತ್ತದೆಂಬುದರಲ್ಲಿಯೂ ಸಂದೇಹವಿಲ್ಲ.[34]

ಶ್ರೀಯವರು ಈ ಭಾಷಾಂತರವನ್ನು ಮಾಡುವ ಸಮಯದಲ್ಲಿ ಕನ್ನಡದಲ್ಲಿ ಕಾವ್ಯ ರಚನೆಗೆ ಮಹತ್ವ ಕಡಿಮೆಯಾಗಿತ್ತು. ಬಸವಪ್ಪಶಾಸ್ತ್ರಿಗಳಂಥ ಕವಿಗಳೂ ಕೂಡ ನಾಟಕ ರಚನೆಯ ವ್ಯವಸಾಯದಲ್ಲಿ ತೊಡಗಿದರು. ಮುದ್ದಣ್ಣ ಪದ್ಯಂವಧ್ಯಂ ಗದ್ಯಂಹೃದ್ಯಂ ಎಂದು ನಿರ್ಧರಿಸಿ, ಗದ್ಯ ರಚನೆಯಲ್ಲಿ ತೊಡಗಿದ್ದ. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಶ್ರೀಯವರು ಕವಿತಾ ಜಗತ್ತಿಗೆ ನಕ್ಷತ್ರವಾಗಿ ಬಂದರು. ಹೊಸ ಛಂದೋವಿನ್ಯಾಸವನ್ನು ನೀಡಿ ಪದ್ಯವನ್ನು ಜನರು ಓದುವಂತೆ ಮಾಡಿದರು "....... ಕಂದ, ಸಂಸ್ಕೃತ, ವೃತ್ತಗಳಲ್ಲಿ ನಾಲ್ಕು ಚರಣಗಳ ಷಟ್ಪದಿಗಳಲ್ಲಿ ಆರು ಚರಣಗಳು. ಈ ರೀತಿ ಅತಿ ನಿಯತವಾದ ಚರಣ ಸಂಖ್ಯೆಯೂ ಅವುಗಳ ಅತಿ ಬದ್ಧವಾದ ಗತಿಯೂ ಕವಿಯ ಹೃದಯದಲ್ಲಿ ಜನಿಸುವ ಅನಂತ ಭಾವಗಳಲ್ಲವನ್ನೂ

ಉತ್ಕೃಷ್ಟವಾಗಿ ನಿರೂಪಿಸಲಾರವು. ಆದ ಕಾರಣ ಭಾವದ ಗತಿಗೆ ತಕ್ಕಂತೆ ಬಳುಕಬೇಕೆಂದಾಗ ಓಗ್ಗುವ, ತುಂಬಿ ಹೊಳೆಯುವ ಮೊರೆಯುವ ಸಣ್ಣ ಕಾಲುವೆಯಂತೆ ಅಲ್ಲಲ್ಲಿ ನುಸುಳುವ, ಓಡುವ ಕುದುರೆ ನಿಲ್ಲುವಂತೆ ತಟ್ಟನೆ ನಿಲ್ಲುವ ವಿವಿಧ ಗತಿಯ ಮಟ್ಟುಗಳು ಕನ್ನಡಕ್ಕೆ ಬೇಕಾದವು. ಹೊಸ ಮಾದರಿಯನ್ನು ಕಂಡುಹಿಡಿಯಬೇಕಾಯಿತು. ಈ ಕಾರ್ಯದಲ್ಲಿ ಆಧುನಿಕ ಕವಿಗಳು ಸಂಪೂರ್ಣವಾಗಿ ಹೊಸ ಜಾಡನ್ನೇ ಹುಡುಕುವುದು ಅವಶ್ಯಕವಾಗಲಿಲ್ಲ. ಇವರು ಬಯಸುತ್ತಿದ್ದ ಸ್ವಾತಂತ್ರ್ಯವನ್ನೇ ಹಿಂದಿನವರು ಬಯಸಿ ಅಲ್ಲಲ್ಲಿ ಹೊಸ ಮಟ್ಟುಗಳನ್ನು ಏರ್ಪಡಿಸಿಕೊಂಡಿರುವುದು ಪ್ರಾಚೀನ ಸಾಹಿತ್ಯದಲ್ಲೇ ನಮಗೆ ಗೋಚರಿಸುತ್ತದೆ.'' ಇಂತಹ ಕಾರ್ಯವನ್ನು ಶ್ರೀಯವರು 'ಇಂಗ್ಲಿಷ್ ಗೀತೆಗಳ' ರಚನೆಯಿಂದ ಯಶಸ್ವಿಯಾಗಿ ನೆರವೇರಿಸಿದ್ದಾರೆ.

ಇದಕ್ಕೆ ಉದಾಹರಣೆಯಾಗಿ ಶ್ರೀಯವರು ಅನುವಾದ ಮಾಡಿರುವ ಥಾಂಸನ್ ಕವಿಯ 'ರೂಲ್ ಬ್ರಿಟಾನಿಯಾ' ಕವನವನ್ನು ಹಟ್ಟಿಯಂಗಡಿ ನಾರಾಯಣರಾಯರ ಅನುವಾದದೊಂದಿಗೆ ಹೋಲಿಸಿ ನೋಡಿದಾಗ ವ್ಯತ್ಯಾಸ ತಿಳಿಯುತ್ತದೆ.

When Britain first at Heaven's command
Arose from out of azure main
This was the charter of her land,
And guardian angels sung the strain;
Rule, Britannia ! Britannia rules the waves;
Britons never shall be slaves

ಬೀರತನೆ ದಿನೌಕನಾಥನಾಜ್ಞೆಯಿಂದ ಮೊದಲಲೇ
ನೀರಧಿಯ ಸುನೀಲ ಕಾಯದಿಂದ ಹೊರಡುವಾಗಲೇ
ಅವಳ ರಾಷ್ಟ್ರಕ್ಕಿತ್ತ ಶಾಸನೋಕ್ತಿಗಳನು ಹಾಡುತ ।
ದೀವಿಜರಿಂತು ಘೋಷಿಸಿದರು ಸದಯರಾಗಿ ನೋಡುತ ॥
ಆಳು ಬೀರತನೇ ಆಳು ವೀಜ ನಿಷ್ಕ ರಾಷ್ಟ್ರವ ।
ತಾಳರೆಂದು ಬೀರತನಯರವನಿಯೊಳಗೆ ದಾಸ್ಯವ ।

(ಹ. ನಾರಾಯಣರಾಯರ ಅನುವಾದ)

'ಆದಿಯಲಿ ದೈವಾಜ್ಞೆಯಲಿ ಬ್ರಿಟನ್ ಭೂಮಾತೆ
ನೀಲ ಜಲರಾಶಿಯಿಂದುದ್ಭವಿಸಿದಂದು
ಆದರಿಸಿ ಅಭಿಮಾನ ದೇವತೆಗಳೊಲಿದು, ದಯ
ಪಾಲಿಸಿದರಾಕೆಗೆ, ಶಾಸನವ ಹರಸಿ
ಆಳೌ ಬ್ರಿಟಾನಿಯಾ, ಆಳು ತೆರೆಗಳನು!
ಎಂದಿಗೂ ಬ್ರಿಟನನಡಿಯಾಳೆನಿಸಿಕೊಳನು : ('ಶ್ರೀ' ಯವರ ಅನುವಾದ)

'ಆಳೌ ಬ್ರಿಟಾನಿಯಾ' ಒಂದು ರಾಷ್ಟ್ರಗೀತೆಯಾಗಿದ್ದು ಸಹಜವಾಗಿ ಅದರಲ್ಲಿ ಅತಿಶಯೋಕ್ತಿ ಸೇರಿಕೊಂಡಿದೆ. ಬ್ರಿಟಿಷ್ ಸಾಮ್ರಾಜ್ಯದಲ್ಲಿ ಸೂರ್ಯ ಅಸ್ತಂಗತನಾಗದಿರುವುದು ದೈವಾಜ್ಞೆಯಿಂದ ಎಂದು ನಂಬಿದವರು ಬ್ರಿಟೀಷರು. ಶ್ರೀಯವರಿಗೆ ಅರ್ಪಿಸಿದ 'ಸಂಭಾವನೆ'ಯಲ್ಲಿ ಪ್ರೊ ವಿ. ಕೆ. ಗೋಕಾಕ್‌ರು ಹೀಗೆಂದಿದ್ದಾರೆ. ''ಆಂಗ್ಲರ ರಾಷ್ಟ್ರಗೀತೆಯೊಂದನ್ನು ಅನುವಾದಿಸುವುದಕ್ಕಾಗಿ ಅನೇಕರು ಶ್ರೀಯವರ ಮೇಲೆ ಸಿಟ್ಟಾಗಿದ್ದಾರೆ. 'Rule Britannia' ಎಂಬ ಗೀತೆಗೂ ನಮಗೂ

ಅಷ್ಟೊಂದು ಮಧುರ ಸಂಬಂಧ ಇರಲಾರದೆಂಬುದು ಮೇಲೆ ಕಾಣುತ್ತದೆ. ಇಂದಿನ ಪ್ರೇಮಗೀತೆಗಳಂತೆ ರಾಷ್ಟ್ರಗೀತೆಗಳ ಆಂಗ್ಲ ಕಾವ್ಯದಿಂದ ಸ್ಫೂರ್ತಿಪಡೆದಿವೆ. ಇಂಥ ಕೃತಿಗಳಿಗೆ ಮೂಲವಾದ ಭಾಷೆಯಲ್ಲಿಯ ಒಂದು ಕೃತಿಯೊಂದಕ್ಕೆ ನಾವು Rule Britannia ಕಡೆಗೆ ನೋಡಬಹುದು."

"ಇಂಗ್ಲೇಂಡ್" ಡಬ್ಲ್ಯೂ.ಇ.ಹೆನ್ಲಿಯ Prorage nostro ಕವನದ ಭಾಷಾಂತರ. ಒಂದು ಉತ್ಕಟ ರಾಷ್ಟ್ರಪ್ರೇಮದ ಕವಿತೆ ಇದು.

| | |
|---|---|
| What have I done for you | ಏನ ಮಾಡಿದೆ ನಾನು ನಿನ್ಗೆ |
| England my England ? | ಇಂಗ್ಲೇಂಡ್, ನನ್ನಿಂಗ್ಲೆಂಡ್ : |
| What is there I would not do | ಏನ ಮಾಡೆನು ಹೇಳು ನಿನಗೆ |
| England my own ? | ನನ್ನ ಇಂಗ್ಲೇಂಡ್ : |

ಇಲ್ಲಿ ಭಾಷಾಂತರ ಮೂಲಪಂಕ್ತಿಗಳನ್ನು ಅನುಸರಿಸಿದೆ.

"ದೇಶಸೇವಕ" ರಾಬರ್ಟ್ ಬ್ರೌನಿಂಗ್‌ನ The Patniot ಕವನದ ಭಾಷಾಂತರ ಬ್ರೌನಿಂಗ್ ದೇಶಸೇವಕನ ಮನೋವ್ಯಾಪಾರವನ್ನು ವ್ಯಕ್ತಪಡಿಸಲು ಬಳಸಿರುವ ಸ್ವಗತ ಸಂಭಾಷಣಾ ವಿಧಾನವನ್ನು ಶ್ರೀಯವರು ತಮ್ಮ ಭಾಷಾಂತರದಲ್ಲಿ ಅನುಸರಿಸಿದ್ದಾರೆ

| | |
|---|---|
| Thus I entered, and thus I go | ಹೇಗೆ ಬಂದೆನು ನಾನು, ಹೇಗೆ ಹೋಗುವೆನು |
| In triumphs, people have dropped down dead | ಹಿಂದೆ ವಿಜಯೋತ್ಸವದಿ ಸತ್ತು ಬಿದ್ದಿಹರು ! |
| 'Paid by the world' what dost thou owe | ಲೋಕವೇ ಫಲ ಕೊಡಲು, ನನ್ನ ಹಂಗೇನು? |
| 'me'? god might question, now instead. | ಎಂದು ಕೇಳನೆ ಆಗ ಭಗವಂತ ! ಈಗ |
| 'Its God shall repay: I am safer so | ಕೊಡುವಾತ ಭಗವಂತ ಕ್ಷೇಮ ಅದೇ ನನಗೆ |

"ಕಳೆದ ಹಿಂದಿನ ದಿನಗಳು" ಬರ್ನ್ಸ್‌ನ Auld lang Syneನ ಭಾಷಾಂತರ. ಕವಿತೆಯ ಅಂತಿಮ ಪದ್ಯವಿದು

| | |
|---|---|
| We two hae paidl'd in the burn | ಕೆರೆಯೊಳಿಬ್ಬರು ಈಜುತ್ತಿದ್ದೆವು |
| Frae morning sun till dine, | ಮರೆತು ಮನೆಗಳ ಜನಗಳ |
| But seas between us braid hae roared | ನಡುವೆ ಹರಡುತ ಕಡಲು ಮೊರೆಯಲು |
| sin' auld lang sume | ಕಳೆದ ವೀಚಿಗೆ ದಿನಗಳ |

ಈ ರೀತಿಯಾಗಿ ಚಿಕ್ಕಂದಿನ ವಿವರವನ್ನು ಶ್ರೀಯವರು ಮಾರ್ಪಡಿಸಿದ್ದಾರೆ. ಭಾಷಾಂತರದ ಕೊನೆಯ ಎರಡು ಪದ್ಯಗಳನ್ನು ಶ್ರೀಯವರು ಸೇರಿಸಿ ಕವನಕ್ಕೆ ಬೇರೆಯೇ ಒಂದು ತಿರುವು ನೀಡಿದ್ದಾರೆ. ಬರ್ನ್ಸ್‌ನ ಮರುಕಹುಟ್ಟಿಸುವ ಅಂತ್ಯದ ಬದಲು ಶ್ರೀಯವರ ಕವನದಲ್ಲಿ ಇಂದಿನ ಹರ್ಷಕ್ಕೆ ಗತಕಾಲದ ನೆನಪು ಪೂರಕವಾಗುತ್ತದೆ.

'ಇಂಗ್ಲಿಷ್ ಗೀತಗಳ' ಮೂಲಕ ಶ್ರೀಯವರು ಸಾಧಿಸಿದ ಕಾರ್ಯ ಮಹತ್ವದ್ದಾದುದು. ಪ್ರಾಸಪರಿತ್ಯಾಗದ ಬಗ್ಗೆ ವಸ್ತುವಿನಲ್ಲಿಯೂ ಹಾಗೂ ಉಕ್ತಿಯಲ್ಲಿ ಹೊಸತನ ಕಾಣುವುದಕ್ಕೆ ಕವಿಗಳು ಹಾರೈಸುತ್ತಿದ್ದರು. ಈ ಹಂಬಲ ಹಾರೈಕೆಗಳ ಫಲವಾಗಿ ಶ್ರೀಯವರ ಮೇಲ್ಪಂಕ್ತಿಯಲ್ಲಿ ಕೆಲವು ಉತ್ತಮ ಭಾವಗೀತೆಗಳು ಕನ್ನಡದಲ್ಲಿ ಮೂಡಿಬಂದವು. "ಎಲ್ಲಕ್ಕೂ ಮಿಗಿಲಾಗಿ ಶ್ರೀಯವರಿಂದ ಕನ್ನಡಕ್ಕೆ ಆದ ಪರಮೋಪಕಾರವೆಂದರೆ, 'ಇಂಗ್ಲಿಷ್ ಗೀತಗಳ'ಲ್ಲಿ ಛಂದಸ್ಸಿನ ಹೊಸದೊಂದು ಹೆದ್ದಾರಿಯನ್ನೇ ತೆರೆದದ್ದು. ಕನ್ನಡ ಕಾವ್ಯದ ಚರಿತ್ರೆಯಲ್ಲಿ ಅವರ ಹೆಸರು ಚಿರಸ್ಮರಣೀಯವಾಗಿ ನಿಲ್ಲುವುದು ಮುಖ್ಯವಾಗಿ ಇದರಿಂದ. ಕನ್ನಡ ನುಡಿಯ ಜಾಯಮಾನಕ್ಕೆ ರಗಳೆ ಷಟ್ಪದಿಗಳ ಕಾಲದಿಂದಲೂ ಒಗ್ಗಿ ಹದವಾಗಿ ಪಳಗಿರುವ ಮಾತ್ರಾ ಗಣಗಳನ್ನೇ ಇಟ್ಟಿಗೆಯಾಗಿ ಉಪಯೋಗಿಸಿ ಚರಣವಿನ್ಯಾಸ ಪ್ರಾಸವಿಲಾಸಗಳನ್ನು ಮಾತ್ರ ಬಗೆ ಬಗೆಯಾಗಿ ಏರ್ಪಡಿಸಿ, ಹೊಸ ಹೊಸ ಕಟ್ಟಡಗಳನ್ನು ಕಟ್ಟುವುದು ಸಾಧ್ಯ. ಉಚಿತ ಎಂಬುದು ಪಾಂಡಿತ್ಯದಿಂದ ಪರಿಪಕ್ವವಾದ 'ಶ್ರೀ'ಯವರ ಸ್ವತಂತ್ರ ದೃಷ್ಟಿಗೆ ಹೊಳೆಯಿತು. ಸಂಸ್ಕೃತ, ಕನ್ನಡ ತಮಿಳು, ಇಂಗ್ಲಿಷ್ - ಈ ಹಲವು ಭಾಷೆಗಳಲ್ಲಿ ಛಂದಸ್ಸು ಬೆಳೆದ ಬಗೆಯನ್ನು ಕೂಲಂಕಷವಾಗಿ ಅಭ್ಯಾಸಮಾಡಿ ಆಳವಾಗಿ ಸಂಶೋಧನೆ ಮಾಡಿದ್ದವರು ಅವರು, ಇದಕ್ಕೆ ಅವರ ಸಂಯೋಜಕ ಪ್ರತಿಭೆಯೂ ನೆರವಾಯಿತು."[36]

ಛಂದಸ್ಸುಗಳ ಮೇಲಿನ ಪ್ರಭುತ್ವ ಮತ್ತು ಸ್ವಭಾಷೆ ಇವು ಅನುವಾದಕನ ಪ್ರಮುಖ ಪರಿಕರಗಳು. ಶ್ರೀಯವರು ಈ ಎರಡರಲ್ಲೂ ಸಿದ್ಧಹಸ್ತರಾಗಿದ್ದರು. ಅವರ ಅನುವಾದಗಳು, ಅನುವಾದವೆಂದು ತೋರದೆ ಮೂಲದ ವೈಭವದಿಂದ ಮೆರೆಯುತ್ತವೆ. 'ಅಡವಿ ಮರದಡಿಯಲ್ಲಿ' 'ಮುಪ್ಪುಯೌವನ' 'ಮುದ್ದಿನ ಕುರಿಮರಿ' 'ಕಾಳಗದಪದ' 'ವೀರಗಲ್ಲು' 'ಸರ್‌ಜಾನ್ ಮೂರನ್ನು ಹೂಳಿದ್ದು', 'ದುಃಖಸೇತು' 'ಚೋಳ ಕನ್ಯೆಯರು' 'ನಿರಾಶೆ' 'ರಾವುತರದಾಳಿ' 'ಕರುಣಾಳು ಬಾ ಬೆಳಕೆ' 'ಕವನಕಾಂಗಿ' 'ಮುದಿಯ ರಾಮಗೌಡ' ಇವುಗಳೆಲ್ಲವೂ ಶ್ರೀಯವರ ಪಳಗಿದ ಅನುವಾದ ಕಲೆಗೆ ನಿದರ್ಶನಗಳು.

Youth is full of sport
Age's breath is short
Youth is nimble, Age is lame (ಶೇಕ್ಸ್ ಪಿಯರ್)
ಯೌವನಕೆ ಚೆಲ್ಲಾಟ
ಮುಪ್ಪಿಗುಸಿರೆಳೆದಾಟ
ಹುಲ್ಲೆನಗೆ ಯೌವನವು, ಹೆಳವುಮುಪ್ಪು (ಶ್ರೀ) (ಮುಪ್ಪುಯೌವ್ವನ)

ಮುಪ್ಪಿಗುಸಿರೆಳೆದಾಟ ಎನ್ನುವ ಶ್ರೀಯವರ ಅನುವಾದದಲ್ಲಿ ಮೂಲಕ್ಕಿಂತಲೂ ಸೊಗಸು ಹೆಚ್ಚು ತೋರುತ್ತದೆ. ಇದು ಶೇಕ್ಸ್‌ಪಿಯರ್‌ನ The Passionate piligrim ಹನ್ನೆರಡನೆಯ ಭಾಗದ ಭಾಷಾಂತರ. ಯೌವನದ ಚುರುಕು ಪರಿಣಾಮಕಾರಿಯಾಗಿ 'ಹುಲ್ಲೆನಗೆ' ಮಾಗಿದೆ.

Age I do defy thee, O! Sweet shepherd die. thee
For me thinks thou stay'st too long.

ಮುಪ್ಪೆ ನಡೆ, ನಡೆ, ಒಲ್ಲೆ
ಮುದಿಕುರುಬ ನಿಲ್ಲಲ್ಲೆ
ಬಂದಳದೋ ಚಿಕ್ಕವಳು ನನ್ನ ಚಲುವೆ.

ಮೂಲ ಪಂಕ್ತಿಯ ಉದ್ಗಾರದ ದ್ವಿರುಕ್ತಿಯಷ್ಟೆ ಪರಿಣಾಮಕಾರಿಯಾಗಿದೆ- 'ಬರುವಳದೋ ಚಿಕ್ಕವಳು ನನ್ನ ಚಲುವೆ'. ಹಾಗೆಯೇ defy ಪದದ ಮೇಲೆ ಬೀಳುವ ಘಾತವನ್ನು ಅರ್ಥದಲ್ಲಿ 'ನಡೆ ನಡೆ' ಸರಿದೂಗಿಸುತ್ತದೆ. ಭಾಷಾಂತರದಲ್ಲಿರುವ ಮೂರನೆಯ ಪಂಕ್ತಿಯ ಪುನರಾವರ್ತನೆ ಮೂಲದಲ್ಲಿಲ್ಲ. 'ಮುದಿ ಕುರುಬ ನಿಲ್ಲಲ್ಲೆ', ಎಂದು ಭಾಷಾಂತರಿಸಿರುವುದು ಹೆಚ್ಚು ಸಮರ್ಪಕವಾಗಿಲ್ಲ. ಕವನದ ಉಳಿದ ಭಾಗ ಮೂಲದ ಪರಿಣಾಮ ಉಳಿಸಿಕೊಂಡಿದೆ.

ನ್ಯಾಷನ 'ಸ್ಪ್ರಿಂಗ್'ನ ಅನುವಾದದಲ್ಲಿ ಮಧ್ಯಪ್ರಾಸ ಅಂತ್ಯಪ್ರಾಸವನ್ನು ಶ್ರೀಯವರು ಉಳಿಸಿಕೊಂಡು ತಮ್ಮ ಒಂದೆರಡು ಪದಗಳನ್ನು ಸೇರಿಸಿ ಮೂಲಕ್ಕೆ ಮೆರಗು ನೀಡಿದ್ದಾರೆ-

Spring the sweet spring, is the years' pleasent king
then blooms each thing, the maids dance a ring,
cold both not sting, the pretty birds do sing,
cuckoo jug-jug, pu-we, to witta-too

ವಸಂತ ಬಂದ, ಋತುಗಳ ರಾಜ ತಾ ಬಂದ,
ಚಿಗುರನು ತಂದ, ಹೆಣ್ಗಳ ಕುಣಿಸುತ ನಿಂದ,
ಚಳಿಯನು ಕೊಂದ, ಹಕ್ಕಿಗಳುಲಿಗಳೆ ಚೆಂದ,
ಕೂವೂ ಜಗ್ ಜಗ್, ಪುವ್ವಿ ಟೂವ್ವಿಟ್ಟೂವೂ,

ಇದೇ ಕವಿತೆಯಲ್ಲಿ ಬರುವ 'ಮಲ್ಲಿಗೆ ಬಯಲೆಲ್ಲ ಕಂಪು' ಮೂಲಕ ಒಂದು ಸೂಚನೆಯನ್ನು ವಿಸ್ತೃತಗೊಳಿಸಿದ್ದಾರೆ. 'ಬನದಲಿ ಬೆಳದಿಂಗಳೂಟ' ಹೊಸದಾಗಿ ಸೇರಿಸಿದ್ದು. ಇವೆಲ್ಲವೂ ಕವನಕ್ಕೆ ಹೆಚ್ಚು ಮೆರಗು ನೀಡಿವೆ. 'ಬಂದ ವಸಂತ ನಮ್ಮ ರಾಜ ವಸಂತ' ಇದು ಮೂಲದಲ್ಲಿರದ ಅಂತ್ಯ. ಶ್ರೀಯವರ ಪುನಃಸೃಷ್ಟಿಯಲ್ಲಿ ಸೇರಿದ್ದು. ಅದಕ್ಕೆ ಸ್ವಂತ ಕೃತಿಯೆಂಬಂತೆ ಮೆರಗು ಕೊಟ್ಟಿದೆ.

'ಸುಂದರಿ ಕಮಲೆ' ಬರ್ನ್ಸ್ ಕವಿಯ San ye Bonnie Lesley ಯ ಪುನಃಸೃಷ್ಟಿ.

| | |
|---|---|
| O saw ye bonnie lesley | ಕಂಡಿರ ಸುಂದರಿ ಕಮಲೆಯನು? |
| As she gared O'e the border? | ಕಂಡಿರ ಕೋಮಲೆ ವಿಮಲೆಯನು? |
| She's gane, like Alexander | ಧೀರನವೊಲು ದಿಗ್ವಿಜಯ ಮಾಡಲು |
| To spread her conguests farther | ಊರಿನ ಗಡಿಯನು ದಾಟಿದಳು |

ಅನುವಾದದಲ್ಲಿ 'lesley' 'ಕಮಲೆ' ಯಾಗಿದ್ದಾಳೆ, 'Alexander' ಒಬ್ಬ ಅನಾಮಧೇಯ 'ವೀರ' ನಾಗಿದ್ದಾನೆ. ಸ್ಕಾಟ್‌ಲ್ಯಾಂಡ್‌ನ ಪರಿಸರದ ಈ ಕವಿತೆಯನ್ನು ಕನ್ನಡಕ್ಕೆ ಪರ್ಗಾಯಿಸುವಾಗ ನಿರೂಪಣೆಯಲ್ಲಿ ಕೃತಕತೆ ಕಾಣಿಸಿಕೊಳ್ಳುವುದು ಸಹಜ. ಆದರೂ ಮೂಲದ ಕಾವ್ಯೋಕ್ತಿಗಳ ಸತ್ವ ಕನ್ನಡದಲ್ಲಿ ಚೆನ್ನಾಗಿ ಮೂಡಿಬಂದಿದೆ.

'ಪ್ರೇಮ ರಹಸ್ಯ' ಶೆಲ್ಲಿಯ Love's Philosopy ಯ ಭಾಷಾಂತರ. ಈ ಭಾವಗೀತೆಯ ಮೊದಲ ಎರಡು ಪಂಕ್ತಿಗಳು ತರ್ಕವನ್ನೊಳಗೊಂಡ ಒಂದು ಕಾವ್ಯೋಕ್ತಿಯೊಂದಿಗೆ ಆರಂಭವಾಗುತ್ತವೆ.

| | |
|---|---|
| The fountain mingle with the river | ಒರತೆಗಳು ಬೆರೆಯುವುವು ಹೊಳೆಯ ಬಳಸಂದು, |
| And the river with the ocean, | ಹೊಳೆಹರಿದು ಕಡಲಲ್ಲಿ ಕೂಡುವುವು ಬಂದು, |
| the winds of heaven mix for ever | ಗಗನದೊಳು ಗಾಳಿಗಳು ಹಗಲೆಲ್ಲಾ ಬೆಂದು |
| with a sweet emotion. | ಸುಳಿಯವುವು ಬಯಸಿಕೊಂಡೊಂದನೊಂದು |

ಭಾಷಾಂತರದಲ್ಲಿ 'Sweet emotion' ನ ಭಾವುಕತೆ ಮೂಡಿಬಂದಿಲ್ಲ. ಗಾಳಿಗಳು ಬೆಂದು ಸುಳಿಯುವ ವಿಶೇಷಣಾ ಮೂಲದಲ್ಲಿಲ್ಲ. 'ಬೆಂದು' ಪ್ರಾಸಕ್ಕೆ ಮಾತ್ರ ಬಂದಿದೆ. ಪದ್ಯದ ಅಂತ್ಯದ ದ್ವಿರುಕ್ತಿ ಮೂಲದಲ್ಲಿಲ್ಲ? ಆದರೂ ಭಾಷಾಂತರ ಸಮರ್ಥವಾಗಿ ಮೂಡಿಬಂದಿದೆ.

"ಮೇಲುನೋಟಕೆ ಮೆರೆಯಲಾರಳು" ಹಾರ್ಟ್ಲೆ ಕೋಲ್‌ರಿಜ್ ಕವಿಯ She is not fair to outward view ನ ಭಾಷಾಂತರ.

| | |
|---|---|
| She is not fair to outward view | ಮೇಲು ನೋಟಕೆ ಮೆರೆಯಲಾರಳು, |
| As many maidens be, | ಹಲವು ಹೆಣ್ಗಳ ಪರಿಯೊಳು; |
| Her loveliness I never knew | ಅವಳ ಚೆಲವನು ನಾನೆ ಅರಿಯೆನು |
| until; she smiled on me | ನಗುವತನಕೊಲಿದೆನ್ನೊಳು |

ಮೂಲ ಕವಿತೆಯಲ್ಲಿ ಸ್ಥಳೀಯ ಹೆಸರಾಗಲೀ, ನಿರ್ದಿಷ್ಟ ಸಾಂಸ್ಕೃತಿಕ, ಸಾಮಾಜಿಕ ವಿವರಗಳಾಗಲೀ ಇಲ್ಲದಿರುವುದರಿಂದ ಭಾಷಾಂತರಕ್ಕೆ ಯಾವ ತೊಡಕೂ ಉಂಟಾಗಿಲ್ಲ. ಕೋಲಿರಿಜ್‌ನ ಕವನ ಕನ್ನಡ ಉಡುಗೆಯಲ್ಲಿ ಚೆನ್ನಾಗಿ ಕಾಣಿಸುತ್ತದೆ.

"ವಸಂತ ಕಾಲದೊಲುಮೆ" ಕವಿ ಬೈರನ್‌ನ 'Could love for ever'ನ ಭಾಷಾಂತರ

| | |
|---|---|
| But since our sighing | ಒಲಿದವರು ಬೇರಾಗಿ |
| Ends not in dying | ಫಲಿಸದಾಸೆಯ ತೊರೆದು |
| | ಎದೆಬಿರಿದು ಸಾವೆ ಗತಿಯೆನುತಿಹರು |

ಹೀಗೆ ಮೂಲಪಂಕ್ತಿಯ ಅರ್ಥದಿಂದ ಪ್ರೇರಿತರಾಗಿ ಶ್ರೀಯವರು ಎರಡು ಪದ್ಯಗಳನ್ನು ಮೂಲಕ್ಕೆ ಸೇರಿಸಿದ್ದಾರೆ. ಇದರಿಂದಾಗಿ ಮೂಲಕವಿತೆಗೆ ಬೇರೊಂದು ತಿರುವು ಕೊಟ್ಟಂತಾಗಿದೆ. ಈ ಅರ್ಥದಲ್ಲಿ ಈ ಕವನ ಶ್ರೀಯವರ ಸ್ವತಂತ್ರ ಕವನದಂತಿದೆ.

'ಪ್ರೇಮದ ಕನಸು' ಇದು ಶೆಲ್ಲಿಯ 'The flight of love' ಕವನದ ಒಂದು ಭಾಷಾಂತರ. ಶೆಲ್ಲಿಯನ್ನು ಭಾಷಾಂತರಿಸುವುದು ಕಷ್ಟ. ಆದರೂ ಈ ಭಾವಗೀತೆಯ ವೈಶಿಷ್ಟ್ಯವನ್ನು ಶ್ರೀಯವರು ಸಮರ್ಥವಾಗಿ ಕನ್ನಡಕ್ಕೆ ತಂದಿದ್ದಾರೆ.

When hearts leave once mingle ಹೃದಯಗಳು ಕಲಿತುವೆನಲು
Love first leaves the well built nest. ಮೊದಲೊಲುಮೆ ಗೂಡನುಳಿದೋಡುತಿಹುದು

'ಕಾರಿ ಹೆಗ್ಗಡೆಯ ಮಗಳು' ಥಾಮಸ್ ಕ್ಯಾಂಬೆಲ್‌ನ Lord Vilin's Daughter ನ ಭಾಷಾಂತರ. ಶ್ರೀಯವರು ಕಥೆಯನ್ನು ಕನ್ನಡನಾಡಿಗೆ ಸ್ಥಳಾಂತರಿಸಿರುವುದರಿಂದ ಇದೊಂದು ಪುನಃಸೃಷ್ಟಿ. ಸ್ವಾಭಿಮಾನ, ಪ್ರತಿಷ್ಠೆಗಳ ಪ್ರತೀಕವಾದ ಲಾರ್ಡ್ ಉಲಿನ್ 'ಕಾರಿ ಹೆಗ್ಗಡೆ' ಆಗಿದ್ದಾನೆ. ಆತನ ಪುತ್ರಿಯ ಪ್ರಿಯಕರ ಪಡುವದಿಬ್ಬದ ಗೌಡನಾಗಿದ್ದಾನೆ.

'T was van, the land waves lashed the shore ಮರಳಬಹುದೇ ? ಹೋಗಬಹುದೇ?
Return or aid preventing, ಕರೆಯ ತೊರೆಯುಪ್ಪಳಿಸಿ ಹೊಯ್ದು
The water wild went o'er his child, ಹೊರಳಿ ಹೋದುವು ಮಗಳ ಮೇಲೆ
And he was left lamenting ಕೊರಗಿನಲಿ ಅವನುಳಿದನು

ಭಾಷಾಂತರ ಮೂಲಕ್ಕಿಂತ ಹೆಚ್ಚು ಸಾರವತ್ತಾಗಿ ವ್ಯಕ್ತಿಪಡಿಸಿರುವುದು ಶ್ರೀಯವರ ಭಾಷಾಂತರದ ಮೇಲಿರುವ ಪ್ರಭುತ್ವವನ್ನು ತೋರಿಸುತ್ತದೆ.

ಬಿಟ್ಟಹೆಣ್ಣು ಬರ್ನ್ಸ್‌ನ Bonnie Doonನ ಭಾಷಾಂತರ. ಭಾಷಾಂತರ ಮೂಲ ಕವಿತೆಯ ಹಾಗೆ ಸರಳವೂ ಸುಂದರವೂ ಆಗಿದೆ.

Wl' lightsome heart I pu'd a rose ಒಲಿದು, ನಲಿದು, ಗುಲಾಬಿಸೊಂದನು
Frac off its thorny tree, ಮುಳ್ಳುಗಿಡದಲಿ ಕೊಯ್ದನೇ;
and my fause lover straw the rose ಕಳ್ಳ ಕುಸುಮವ ಕದ್ದು, ಕುಟುಕುವ
But left thee thorn wil'me ಮುಳ್ಳನೆನ್ನಲಿ ಬಿಟ್ಟನೇ!

ಮೂಲದಲ್ಲಿಲ್ಲದ ರೂಪಕ 'ಕುಟುಕುವ' ತುಂಬಾ ಹೃದಯ ಸೃಷ್ಟಿಯಾಗಿದೆ.

'ಚೋಳ ಕನ್ನೆಯರು' ವರ್ಡ್ಸ್‌ವರ್ತನ 'The Seven Sisters' ಎನ್ನುವ ನಾಡಗೀತೆಯ ಭಾಷಾಂತರ 'ಸಪ್ತ

ಭಗಿನಿಯರು' ಎಂದು ಭಾಷಾಂತರಿಸಬೇಕಾದ ಈ ಪದ್ಯವನ್ನು ಕಥೆಯನ್ನು ಕನ್ನಡ ನೆಲಕ್ಕೆ ತರುವ ದೃಷ್ಟಿಯಿಂದ ಚೋಳ ಕನ್ನೆಯರೆಂದು ಭಾಷಾಂತರಿಸಿದ್ದಾರೆ.

| | |
|---|---|
| Seven daughters had lord Archibald | ಏಳು ಮಗಳದಿರು ಚೋಳರಾಯನಿಗೆ. |
| All Children of one mother | ಒಬ್ಬತಾಯ ಸಿರಿಮಕ್ಕಳು. |
| You could not say in one shortday | ಸಾಲದೊಂದು ದಿನ ಹೇಳಿ ಮುಗಿಸುವಿಕೆ |
| what love they bore each other | ಹಚ್ಚಿ ಹಣೆದವರ ಹಿತವನು |

"ಪದುಮ" ಲ್ಯಾಂಡರ್ ಕವಿಯ ಚರಮಗೀತೆ Rose Aylmerನ ಭಾಷಾಂತರ. ಮೂಲ ಕವಿತೆಯ ಗಾಂಭೀರ್ಯ, ಸೂಕ್ಷ್ಮತೆ ಭಾಷಾಂತರದಲ್ಲೂ ಮೂಡಿಬಂದಿದೆ.

| | |
|---|---|
| Rose Aylmer, whom these wakeful eyes | ಪದುಮಾ, ಎಚ್ಚತ್ತಳುವಿದೆ ಅಲ್ಲದೆ |
| may weep, but never see, | ಕಣ್ಣವು ನಿನ್ನನು ಕಾಣುವುವೆ? |
| A night of memories and sighs | ಗುಣವೋ, ಸೊಬಗೋ, ಏನಿದ್ದೇನು? |
| I consecrate to thee | ಪದುಮಾ, ಇದ್ದುವು ನನಗೆಲ್ಲಾ. |

'Consecrate' ಪದಕ್ಕೆ ಸಮಾನ ಅರ್ಥಕೊಡುವ ಪದಬಂಧ ಬಳಸಿದ್ದರೆ ಹೆಚ್ಚು ಅರ್ಥವತ್ತಾಗಿರುತ್ತಿತ್ತು.

ಶೆಲ್ಲಿಯ 'To a skylark' ನ್ನು ಶ್ರೀಯವರು (ಬಾನಾಡಿ) ಮತ್ತು ಗೋವಿಂದ ಪೈಯವರು (ಬಾನಕ್ಕಿ) ಎಂದು ಇಬ್ಬರೂ ಅನುವಾದಿಸಿದ್ದು. ಇವರೀರ್ವರ ಅನುವಾದದಲ್ಲಿ ವ್ಯತ್ಯಾಸವನ್ನು ನಾವು ಗುರುತಿಸಬಹುದು. ಶ್ರೀಯವರು ಛಂದೋರೂಪದಲ್ಲೂ, ಗೋವಿಂದ ಪೈಯವರು ಕುಸುಮ ಷಟ್ಪದಿಯಲ್ಲೂ ಭಾಷಾಂತರಿಸಿದ್ದಾರೆ.

Haile to thee, blithe spirit,
Bird thou never wert,
That from heaven, or near it
poorest thy full heart
In propose strains of unpremediated art (Shelly)

ಆರು ನೀನೆಲೆ ಹರುಷ ಮೂರುತಿ?
ಹಕ್ಕಿಯೆಂಬರೆ ನಿನ್ನನು;
ತೋರಿ ದಿವಿಜರು ಸುಳಿವ ಬಳಿ, ಸುಖ
ವುಕ್ಕಿ ಬಹ ನಿನ್ನೆದೆಯನು
ಹಾರಿ ನೆಗೆಯುವ ಕಲೆಯ ಕುಶಲದ ಭೂರಿ ಗಾನದೊಳೆಯುವೆ : (ಶ್ರೀ)

ಸೊಗಯಿಸೈ ಸುಖಿಜೀವಿ ;
ನೆಗೆವಕ್ಕಿ ನೀನಲ್ಲ,
ಗಗನದಿಂದಲೂ ಗಗನದುರುಗಿಂದಲೂ
ಮೊಗವೆ, ತುಂಬೆದೆಯ ಮುಂ
ಬಗೆದಿಲ್ಲದಿಹ ಬಿನ್ನ
ಣಿಗೆಯುಗುವುದಾರ ಗಾಯನದ ಝರಿಯಿಂ (ಗೋವಿಂದ ಪೈ)

ಪದ್ಯದ ಮೊದಲೆರಡು ಸಾಲುಗಳ ಅನುವಾದ ಶ್ರೀಯವರಿಗಿಂತ ಪೈಯವರದು ಮೂಲಕ್ಕೆ ಸಮೀಪವಾಗಿದೆ. Hail to thee, blithe spirit ಎಂಬುದರಲ್ಲಿನ ಆಶ್ಚರ್ಯೋದ್ಗಾರ ಶ್ರೀಯವರ ಅನುವಾದದಲ್ಲಿ ಪ್ರಶ್ನಾರ್ಥಕವಾಗಿ 'ಆರು ನೀನೆಲೆ ಹರುಷ ಮೂರುತಿ?' ಆಗಿದೆ. ಇದು ತೀರ ಅಸಮರ್ಪಕ. ಹಾಗೆಯೇ Bird then never werts ಎಂಬ ನಿಷೇಧಾರ್ಥಕ ಶಕ್ತಿ 'ಹಕ್ಕಿಯೆಂಬರೆ ನಿನ್ನನು' ಎಂಬಲ್ಲಿ ಮೂಡಿಬಂದಿಲ್ಲ. ಆದರೆ ''ಹಾರಿ ನೆನೆಯುವ ಕಲೆಯ ಕುಶಲದ ಭೂರಿ ಗಾನದೊಳೆಯುವೆ'' ಎಂಬ ಅನುವಾದ ಮಾತ್ರ ಹೆಚ್ಚು ಸಮರ್ಪಕವಾಗಿ ಮೂಡಿಬಂದಿದೆ. ಅದೇ ಪದ್ಯದಲ್ಲಿ ಬರುವ 'Like a cloud of fire' ಎಂಬ ಸಾಲನ್ನು ಶ್ರೀಯವರು 'ಒಲೆದು, ದುಳ್ಳುರಿ ನೆಗೆದು' ಎಂದೂ ಪೈಯವರು 'ಸೀನ್ನೆಗವ ಕೆಂಡದುರಿ ಮೋಡದಂತೆ' ಎಂದೂ ಅನುವಾದಿಸಿದ್ದಾರೆ. ಶ್ರೀಯವರ ಅನುವಾದ ಅಸಮರ್ಪಕವಾಗಿದ್ದು, ಪೈಯವರದ್ದು ಹೆಚ್ಚು ಸಹಜತೆಯಿಂದ ಕೂಡಿದೆ.

In the golden lightning
of the sunken sun,
O'er which clouds are brightening
Thou dost float and run,
like an unbodied joy whose race is just begun (Shelly)

ಬಿಳಿಯ ಮುಗಿಲನು ಬಣ್ಣವೇರಿಸಿ
ಕೆಳಗೆ ಹೊರಳುವ ಹೊತ್ತಿನ
ತಿಳಿಯ ಹೊಂಬಿಸಿಲಲ್ಲಿ ತೇಲುವೆ,
ಮುಳುಗಿ ಏಳುವೆ, ಹರಿಯುವೆ,
ಕಳಚಿ ದೇಹವ, ದಿವಕೆ ಹರಿಯುವ ಭೋಗಿಯೋಲಾಟದ ಪೋಲು (ಶ್ರೀ)

ಜಂಗುಲಿಯ ಮೇಲ್ಮುಗಿಲ
ಹೊಂಗಲಿಸಿ ನೇಸರುಮು-
ಳುಂಗಿದಾ ಕಾಂಚನದ ಮಿಂಚಿನಲ್ಲಿ
ಮುಂಗತಿಗಣಂ ತೊಡಗಿ
ದಂಗವಡೆಯದ ಸೊಗದ
ಪಾಂಗಿನಿಂ ತೇಲಾಡಿ ಹರಿದಾಡುವೆ (ಪೈ)

ಪೈಯವರ 'ಕಾಂಚನದ ಮಿಂಚು' Golden lighteningಗೆ ಸಮೀಪವಾಗಿದೆಯೇ ಹೊರತು ಶ್ರೀಯವರ 'ತಿಳಿಯ

ಹೊಂಬಿಸಲಲ್ಲಿ ತೇಲುವ' ಅಷ್ಟು ಸಮರ್ಪಕವಾಗಿಲ್ಲ. ಹಾಗೆಯೇ embodied joyಗೆ ಅಂಗವಡೆಯದ ಸೊಗದ ಹಚ್ಚು ಅರ್ಥಪೂರ್ಣವಾಗಿದೆಯೇ ಹೊರತು ಶ್ರೀಯವರ 'ಕಳಚಿ ದೇಹವ' ನೀರಸವಾಗಿದೆ. ಆದರೆ ಪದ್ಯ ಕೊನೆಕೊನೆಯಲ್ಲಿ ಶ್ರೀಯವರ ಅನುವಾದ ಹೆಚ್ಚು ಸ್ವಾರಸ್ಯಕರವಾಗುತ್ತಾ ಹೋಗುತ್ತದೆ. Like a high-born maiden in a palace tower ಎಂದಷ್ಟು ಇರುವುದನ್ನು ಶ್ರೀಯವರು 'ಕೆಳದಿಸುಳಿಯದ ವೇಳೆ' ಎಂದು ಹೆಚ್ಚು ವಾತಾವರಣಕ್ಕೆ ಹೊಂದಿಕೊಳ್ಳುವಂತೆ ಅನುವಾದಿಸಿದ್ದಾರೆ. 'Our sweetest songs are those that tell of saddest thought' ಎಂಬುದರ ಅನುವಾದ ''ನೊಂದ ಗೋಳನು ಹೇಳಿಕೊರೆಯುವೆ. ಇನಿಯ ಕವನಗಳೆಮ್ಮೊಳು'' ಎಂದು 'Such harmonious madness' ಎಂಬುದನ್ನು 'ರಾಗ ಮಧುರಾವೇಶವೆನ್ನಲಿ' ಎಂದು ಭಾಷಾಂತರಿಸಿರುವುದು ಮೂಲಕ್ಕೆ ಸೊಗಸು ನೀಡಿದೆ. ಇದಕ್ಕಿಂತಲೂ ಉತ್ತಮವಾದ ಭಾಷಾಂತರ ನಮ್ಮಲ್ಲಿ ಈಗಲೂ ಇಲ್ಲದಿರುವುದು ಶ್ರೀಯವರ ಯತ್ನದ ಯಶಸ್ಸನ್ನು ತೋರಿಸುತ್ತದೆ.

ಕವಿ ಸರ್ ಹೆನ್ರಿ ವೋಟನ್‌ನ Character of Happy life ನ ಕನ್ನಡ ಅನುವಾದವೇ 'ಸುಖಿ ಜೀವನ'

How happy is he born or taught — ಏನು ಸುಖಿಯೋ ತಾನು ಹುಟ್ಟಿನಲಿ ಕಲಿಕೆಯಲಿ
that Serveth not another's will, — ಇನ್ನೊಬ್ಬ ನಿಚ್ಛೆಯನು ದುಡಿಯದಿರುವವನು :
Whose armour is his honest thought — ಒಳಿತನು ಬಗೆಯುವುದೇ ತನ್ನ ಕಾಯುವ ಯಂತ್ರ
And simple truth his highest skill — ನಿಜದ ನಡತೆಯ ತಂತ್ರ ತನಗೆನಿಸಿದವನು

'ಕವಚ' 'ಯಂತ್ರ'ವಾದರೂ ಅರ್ಥಕ್ಕೆ ಏನೂ ಕುಂದಿಲ್ಲ. ಮೂಲ ಕವನದ ಆರು ಪದ್ಯಗಳ ಸರಳತೆ ಸ್ಪಷ್ಟತೆ ಲಾಲಿತ್ಯಗಳು ಈ ಅನುವಾದದಲ್ಲಿ ಮೂಡಿಬಂದಿದೆ. ನಿಜವಾದ ಸುಖಿಜೀವಿಯ ವರ್ಣನೆ ಇಲ್ಲಿದೆ.

'ಜೀವ' ಇಂಗ್ಲಿಷ್ ಕವಿಯಿತ್ರಿ ಆ್ಯನರೆಟಿಷಿಯ ಬಾರ್‌ಬಾಲ್ಡಳ 'Life' ಭಾವಗೀತೆಯ ಅನುವಾದ

Life I know not what thou art — ಎಲೆಜೀವ, ನೀನಾರೋ ನಾ ತಿಳಿಯೆನಯ್ಯಾ
But know that you and I must part — ತಿಳಿವೆನಿದ ನೀನು ನಾನಗಲಬೇಕಯ್ಯ

ಆತ್ಮದ ಕುರಿತು ಕವಯಿತ್ರಿಗಿರುವ ತಿಳುವಳಿಕೆಯನ್ನು ಮೊದಲ ಕಾವ್ಯೋಕ್ತಿ ಸ್ಪಷ್ಟಪಡಿಸುತ್ತದೆ. ಶ್ರೀಯವರು ಈ ಜಾಡನ್ನೇ ಅನುಸರಿಸಿ ಮೂಲದ ಅನುಭವವನ್ನೇ ನಮ್ಮಲ್ಲಿ ಉಂಟುಮಾಡುತ್ತಾರೆ.

'ಕನಸು ಬೇಕು ಕನಸು' If there were Dreams to sell' ಎಂಬ ಟಿ. ಎಲ್. ಬಿಡ್ಡೋಸ್ ಕವಿಯ ಕೃತಿಯ ಭಾಷಾಂತರ. ಇದು ಕವಿತೆಯ ಮೂಲಪಂಕ್ತಿಯೂ ಆಗಿದೆ. ಕಾವ್ಯೋಕ್ತಿಗಳು ಮೂಲದಲ್ಲಿದ್ದಂತೆ ಸರಳವೂ ಸ್ಪಷ್ಟವೂ ಆಗಿ ಮೂಡಿ ಬಂದಿವೆ. ಅಲ್ಲಲ್ಲಿ ಕವಿ ಸಣ್ಣಪುಟ್ಟ ಬದಲಾವಣೆ ಮಾಡಿಕೊಂಡಿದ್ದಾರೆ-

A cottage lane and still — ಮಂದಿ ಸುಳಿಯದೊಂದೆ ಗುಡಿಸಲು

| | |
|---|---|
| With boweres night | ತೋಪ್ಪು, ನೆರೆಯೊಳು; |
| shadow, my woes to still | ನೆರಳು, ಸಾವನತನಕನನ್ನ |
| Until I die | ನೋವು ತಂಪಲು |

ನೆರೆಯಲ್ಲಿ "ಬಳ್ಳಿಮಾಡ"ಗಳನ್ನು ಮೂಲಪದ್ಯದಲ್ಲಿ ಅಪೇಕ್ಷಿಸುವ ಕವಿ ಭಾಷಾಂತರದಲ್ಲಿ ತೋಪ್ಪೊಂದನ್ನಾಗಿ ಹಾತೊರೆಯುತ್ತಾನೆ. ಇದೊಂದು ಸಣ್ಣ ಬದಲಾವಣೆ.

'ವೀರಜನ್ಮ' ರಾಬರ್ಟ್ ಬ್ರೌನಿಂಗ್ ಕವಿಯ Epilolgue to Asotando ಅನುವಾದಕ್ಕೆ ಶ್ರೀಯವರು ಕೊಟ್ಟ ಶೀರ್ಷಿಕೆ. ಕವಿತೆಯಲ್ಲಿ ವ್ಯಕ್ತವಾಗುವ ಆಶಾವಾದ ಸರಳ, ಕವಿಯ ವೈಯಕ್ತಿಕ ಅನಿಸಿಕೆಯ ಅಭಿವ್ಯಕ್ತಿ, ಭಾವನೆಗಳು, ವಿಚಾರಗಳು ಪರಿಣಾಮಕಾರಿಯಾಗಿ ಅನುವಾದದಲ್ಲಿ ಮೂಡಿಬಂದಿದೆ.

All the midnight in the silence of the sleep time, When you set your fancies free.

ಇರುಳ ನಡುವೆ ಸದ್ದುನಿಂತ ನಿದ್ದೆಹೊತ್ತು – ನಿಮ್ಮ ನೆನಹು
ಹರಿವುವೆತ್ತ ಹೊಳೆಯುತ?

ಇಲ್ಲಿ "ಕಲ್ಪನೆ"ಗಳನ್ನು ಶ್ರೀಯವರು "ನೆನಹು"ಗಳನ್ನಾಗಿ ಮಾರ್ಪಡಿಸಿಕೊಂಡಿದ್ದಾರೆ. ಬ್ರೌನಿಂಗ್‌ನ ವೀರಸ್ವರ್ಗದ ಕಲ್ಪನೆಯನ್ನು 'ವೀರಜನ್ಮ'ದಲ್ಲಿ ಶ್ರೀಯವರು ಚೆನ್ನಾಗಿ ಕನ್ನಡಿಸಿದ್ದಾರೆ.

ಶ್ರೀಯವರ ಎಲ್ಲಾ ಅನುವಾದಗಳೂ ಸಿದ್ಧಿಯನ್ನು ಪಡೆದಿವೆ ಎಂದು ಹೇಳಲಾಗದು. ಕವಿಯ ಎಲ್ಲಾ ಕವನಗಳು ಹೇಗೆ ಸಿದ್ಧಿಯನ್ನು ಪಡೆಯುವುದಿಲ್ಲವೋ ಹಾಗೆಯೇ ಅನುವಾದಕನ ಎಲ್ಲಾ ಅನುವಾದಗಳೂ ಸಿದ್ಧಿಯನ್ನು ಪಡೆಯಲಾರವು. ಶ್ರೀಯವರು ಮೂಲದಿಂದ ದೂರ ಸರಿದಿರುವುದಕ್ಕೆ ವರ್ಡ್ಸ್‌ವರ್ತ್‌ನ 'ರಿಟನ್ ಇನ್ ಮಾರ್ಚ್'ನ 'ಹೊಳೆಕೆರೆ' ಅನುವಾದವೇ ಸಾಕ್ಷಿ. ಹಾಗೆಯೇ ಕವನದ ಮೂಲಸತ್ವದಿಂದ ದೂರವಾದುದಕ್ಕೆ 'To the night' ಕವನದ ಅನುವಾದ 'ಇರುಳದೇವಿ'ಯೇ ನಿದರ್ಶನ :

| | |
|---|---|
| Swifty wakeover the western wave | ಬೇಗ ಪಡುವ ತೆರೆಯ ತುಳಿದು |
| Spirit of night | ಇರುಳದೇವಿ, ಬಾ. |
| out of the misty eastern cave | ಮಬ್ಬು ಗವಿಯೊಳೊಬ್ಬಳಿದ್ದು, |
| Where, all the long and lone day light | ಹಗಲು ನವೆಯುವಾಗ ಹಣೆದ |
| thou wovest dreams of joy and fear | ಸೊಗದ ಭಯದ ಕನಸ ಬಿರಿ |
| which make thee terrible and dear | ಉಬ್ಬಿಸುತ್ತಾ, ಬೆದರಿಸುತ್ತಾ |
| swift by the flight (Shelly) | ಬಾ, ಬೇಗ, ಬಾ (ಶ್ರೀ) |

ಕವಿತೆಯ ಶೀರ್ಷಿಕೆ 'To the night' ಬದಲಿಗೆ ಪದ್ಯದ ಎರಡನೆ ಪಂಕ್ತಿಯಲ್ಲಿ ಬಂದ ಹಾಗೆ 'Spirit of Night' ಆಗಬಹುದಿತ್ತು. ಈ ಭಾವನೆಯನ್ನು ಶ್ರೀಯವರು 'ಇರುಳದೇವಿ' ಎಂದು ತಮ್ಮ ಶೀರ್ಷಿಕೆಯಲ್ಲಿ ನೀಡಿದ್ದಾರೆ.

ಶ್ರೀಯವರು ಆರಿಸಿಕೊಂಡಿರುವ ಛಂದಸ್ಸಿನಲ್ಲಿ ಮೂಲದ ಭಾವಗತಿ ವ್ಯಕ್ತವಾಗಿಲ್ಲ. 'then wonder over city and sea and land touching all with thine opite wand' 'Thy sweet child sleep, and filmy eyed murmur'd like a noon tide bee ...................... ಮುಂತಾದ ಸಾಲುಗಳು ಅರ್ಥಪೂರ್ಣವಾಗಿ ಅನುವಾದಗೊಂಡಿಲ್ಲ. ಆದರೂ ಇದೊಂದು ಸುಂದರ ಭಾಷಾಂತರ.

'ನಿರಾಶೆ' ಶೆಲ್ಲಿಯ Stanzas written in Dejection Near Naples ಎಂಬ ಕವಿತೆಯ ಭಾಷಾಂತರ. ಕವಿತೆಯ ಮೊದಲಿನ ಪದ್ಯ ಹೀಗಿದೆ-

| | |
|---|---|
| I see the deep's untrampled floor | ಕಣ್ಣೆದಿರಾಳದ ತುಳಿಯದ ತಳದೊಳ |
| With green and purple seaweeds strewn | ಗುರುಳುವ ಕಳೆಗಳು ತೋರುವುವು |
| I see the waves upon the share | ನುಣ್ಣನೆ ಬೆಳಕನು ಕರಗಿಸಿ, ಅಂತಾ |
| like light dissolved in star-showers, thrown, | ಸೆಳೆದವೊಲಲೆಗಳು ತೂರುವುವು |
| I sit up on the sands alone, | ಕುಳಿತಿಹೆನೊಬ್ಬನೆ ಮರಳಲಿ, ಸುತ್ತಲು |
| The lighting of the nootide Aocean | ಮೆರೆವುದು ಮಿಂಚುವ ಕಡಲೊಡಲು |
| Is flashing round me and a tone | ಅಳತೆಯ ತಾಳಕೆ ತಲೆತೂಗಾಡುವ |
| Arises from its measured motion | ತೆರೆಯಿಂದೇಳುವುದೊಂದುಲುಹು |
| How sweet did any heart now share in my emotion. | ತಿಳಿದಿದೆಗೆದೆ ಹೋಡುವುದೊಂದಿಹುದೇ ಏನಿದೋ ಈಗ |

ಮೊದಲನೆಯ ಕಾವ್ಯೋಕ್ತಿಯಲ್ಲಿ ಮೂಲದಲ್ಲಿರುವ ವರ್ಣಸೂಚಕ ವಿಶೇಷಣಗಳಿಲ್ಲ. 'ಉರುಳುವ' ಕ್ರಿಯಾಪದದಿಂದಾ ಕಾವ್ಯೋಕ್ತಿಯ ಚಿತ್ರ ಮಸುಕಾಗುತ್ತದೆ. ಎರಡನೆಯದು ಮೂಲದ ಸಂಕೀರ್ಣ ಚಿತ್ರಕ್ಕೆ ಸಮೀಪವಾಗಿದ್ದರೂ ಶ್ರೀಯವ ಯತ್ನದ ಪ್ರಯಾಣದ ಭಾಷಾಂತರದಲ್ಲಿ ಕಾಣಿಸಿಕೊಂಡಿದೆ. ಮುಂದಿನ ಕಾವ್ಯೋಕ್ತಿಯಲ್ಲೂ 'ನಡುಹಗಲ' ಕಡಲ ಸೌಂದರ್ಯ ವರ್ಣನೆ ಅಪೂರ್ಣ. ಆದರೆ ನಂತರದ ಕಾವ್ಯೋಕ್ತಿಯ ಭಾಷಾಂತರ 'ತಲೆ ತೂಗಾಡುವ' ಹಾಗಿದೆ. ಕೊನೆಯ ಒಂದೇ ಪ ಕಾವ್ಯೋಕ್ತಿಯ ಭಾಷಾಂತರ ಅರ್ಥದ ದೃಷ್ಟಿಯಿಂದ ಸಮರ್ಥವಾಗಿದೆ. ಆದರೆ ಮೂಲದ ಸರಳತೆ, ಹೃದಯಂಗಮವಾ ಭಾವನೆಗಳನ್ನು ಇಲ್ಲಿ ಅನುಭವಿಸಲಾರೆವು. ಶೆಲ್ಲಿಯಂತಹ ಕವಿಯನ್ನು ಭಾಷಾಂತರಿಸುವುದು ಅಷ್ಟು ಸುಲಭ ಕ್ರಿಯೆಯ ಒಟ್ಟಿನಲ್ಲಿ ಭಾಷಾಂತರದಲ್ಲಿ ಶೆಲ್ಲಿಯ ಭಾವನೆಗಳು ಸ್ಪಷ್ಟವಾಗಿ ಅಭಿವ್ಯಕ್ತವಾಗಿದೆ.

"ನನ್ನ ಮೇರಿ" ವಿಲಿಯಂ ಕೂಪರ್ ಕವಿಯ 'My Mary' ಕವಿತೆಯ ಭಾಷಾಂತರ. ಕೂಪರನ ಕಾವ್ಯೋಕ್ತಿಗಳನ್ನು ಶ್ರೀಯವರು ಸೌಷ್ಠವವಾಗಿಯೂ ಸರಳವಾಗಿಯೂ ಕನ್ನಡಕ್ಕೆ ತಂದಿದ್ದಾರೆ. ಮೂಲದ ಶೋಕ, ಕೃತಜ್ಞತೆ, ಕರುಣೆ, ಪ್ರೀತಿಗಳು ಭಾಷಾಂತರದಲ್ಲಿ ಸೊಗಸಾಗಿ ಮೂಡಿ ಬಂದಿದೆ. ಪದ್ಯದ ಅಂತ್ಯ ಹೀಗಿದೆ-

| | |
|---|---|
| And should my future not be cast | ನನ್ನ ಪಾಲಿಗೆ, ಮುಂದೆ ನಡಿಗೆ |
| with much resemblance of the past | ಹಿಂದಿನಂತೆಯೆ ಬರೆದು ಮಡಗು |
| Thy worn-out heart will break at last, | ಬರಿಯದೇ ಎದೆ ನಿನಗೆ ಕಡೆಗೆ, |
| My Mary | ನನ್ನ ಮೇರಿ : |

"ಮಡಗು" ಗ್ರಾಮ್ಯವಾದರೂ ಪ್ರಾಸ ಮತ್ತು ಅರ್ಥದೃಷ್ಟಿಯಿಂದ ಸೂಕ್ತವಾಗಿದೆ. ಎರಡೂ ಪಂಕ್ತಿಗಳು ಭವಿಷ್ಯದಲ್ಲಿ ಆಗಬಹುದಾದ ಸಾಧ್ಯತೆಯನ್ನು ಹೃದಯವಿದ್ರಾವಕವಾಗಿ ನಿರೂಪಿಸುತ್ತದೆ.

"ಬಂದರು ದಾಟುವುದು" Crossing the Bar ಎನ್ನುವ ಟೆನಿಸನ್ನಿನ ಕವಿತೆಯ ಅನುವಾದ 'ಬಾರ್' ಎಂದರೆ ನದಿ ಅಥವಾ ಸಮುದ್ರದಲ್ಲಿರುವ ಮರಳುದಿಬ್ಬ ಎಂಬ ಅರ್ಥವಿದೆ. ಶ್ರೀಯವರು 'ಬಂದರು' ಎಂದು ರೂಪಕವಾಗಿ ಜೀವನದ ಕಡಲಿನ ಯಾನದಲ್ಲಿ ಒಂದು ಮುಖ್ಯ ಘಟ್ಟವನ್ನು ದಾಟುವುದನ್ನು ತೋರಿಸಿದ್ದಾರೆ.

| | |
|---|---|
| I hope to see any pilot face to face | ನನ್ನ ಕಾರಕನ ಮುಖ ಕಾಣುವುದ ನಂಬಿಹೆನು |
| when I have crost the bar | ಬಂದರನು ದಾಟಿದಾಗ |

ಮೂಲದಲ್ಲಿನ ಗಾಂಭೀರ್ಯ, ಆತ್ಮವಿಶ್ವಾಸ ಅನುವಾದದಲ್ಲೂ ಅಚ್ಚುಕಟ್ಟಾಗಿ ಮೂಡಿಬಂದಿದೆ.

ಶ್ರೀಯವರು ಅನುವಾದಕ್ಕೆ ಕವಿತೆಗಳನ್ನು ಆಯ್ಕೆ ಮಾಡಿಕೊಳ್ಳುವಾಗ ವೈವಿಧ್ಯತೆಯನ್ನು ತೋರಿಸಿದ್ದಾರೆ. ಅವರ 'ಇಂಗ್ಲೇಂಡ್', 'ಅಳಾ ಬ್ರಿಟಾನಿಯಾ' ದೇಶಪ್ರೇಮವನ್ನು ತೋರಿದರೆ 'ವಸಂತ' 'ಹೊಳಕೆರೆ' 'ಮಳೆಬಿಲ್ಲು', 'ಬಾನಾಡಿ'. 'ಪ್ರಕೃತಿ' ಪ್ರೇಮವನ್ನು, 'ಪ್ರಾರ್ಥನೆ', ಭಕ್ತಿಯನ್ನು ಬಿಂಬಿಸುತ್ತದೆ. ಪ್ರೇಮ ಕವನಗಳಲ್ಲಿ ಪಾಶ್ಚಾತ್ಯರು ಶೃಂಗಾರವನ್ನು ಹೇಗೆ ಗಂಭೀರವಾಗಿ ನವಿರಾಗಿ ಹೇಳಿದ್ದಾರೆ ಎಂದು ತೋರಿಸುವುದು ಶ್ರೀಯವರ ಉದ್ದೇಶವೆಂದು ತೋರುತ್ತದೆ.

ಕೋಲೆರಿಜ್ ಕವಿಯ 'ಲವ್' ಅನುವಾದವಾದ 'ಕನಕಾಂಗಿ'ಯಲ್ಲಿ ಪ್ರೇಮ ನಿರೂಪಿತವಾದ ರೀತಿಯೇ ಬೇರೆ.

ಭಾವಗಳು, ರಾಗಗಳು, ಬಗೆ ಬಗೆಯ ಭೋಗಗಳು,
ಅವಾವುವಲೆಯುವುವು ಮನುಜತಿದೆಯ,
ಕಾಮರಾಯಂಗೆಲ್ಲ ಕುಲಪುರೋಹಿತರಾಗಿ
ಹೋಮಾಗ್ನಿಯನು ಬೀಸಿ ಕೆರಳಿಸುವುವು.

All thoughts, all passions, all delights,
whatever stirs this mortal frame,
All are but ministers of love
and feed his sacred flame

ಶ್ರೀಯವರ ಅನುವಾದ ಸೊಗಸಾಗಿ ಮೂಡಿಬಂದಿರುವುದು ಇಲ್ಲಿ ಸ್ಪಷ್ಟವಾಗಿದೆ. Ministers of Love ಗೆ ಕಾಮಕಾಯಂಗೆಲ್ಲ ಕುಲಪುರೋಹಿತರಾಗಿ ಎಂಬ ಅನುವಾದ ತುಂಬ ಸುಂದರವಾಗಿದೆ. ಹೆಣ್ಣಿನ ಹೃದಯದ ಮೇಲೆ ಆದ ಪರಿಣಾಮವನ್ನು ಪರಿಣಾಮಕಾರಿಯಾಗಿ ಅನುವಾದಿಸುವಲ್ಲಿ ಕವಿ ಎಡವಿರುವುದು ಈ ಕೆಳಗಿನ ಸಾಲುಗಳಲ್ಲಿ ಕಾಣುತ್ತದೆ.

She wept with pity and delight
    She blushed with love and virgin shame
And like the murmur of a dream
    I heard her breathe my name

ಮೇರೆ ಮೀರುವ ಕರುಣ ಹರ್ಷ ಪ್ರೇಮಗಳೊಡನೆ
ಹೋರಿದಳು ಹೊಸಹೆಣ್ಣು ಲಜ್ಜೆಯಿಂದ,
ಮಲ್ಲಿಗೆಯ ಬಿರುಮುಗಳ ಮೇಲೆ ಬರುವೆಂಬಂತೆ
ಮೆಲ್ಲ ನುಡಿಗಳು ಕಡೆಗೆ ನನ್ನ ಹೆಸರ

'ಕನಸಿನಲ್ಲಿ ಕನವರಿಸಿದಂತೆ ಕೇಳಿಸಿತು ಅವಳುಸುರಿದ ನನ್ನ ಹೆಸರು' ಎಂಬುದನ್ನು ಶ್ರೀಯವರು 'ಮಲ್ಲಿಗೆಯ ಬಿರಿಮುಗಳ ಮೇಲೆ ಬರುವೆಂಬಂತೆ ಮೆಲ್ಲನುಡಿದಳು ಕಡೆಗೆ ನನ್ನ ಹೆಸರು' ಎಂದು ಅನುವಾದಿಸಿದ್ದಾರೆ.

ಚಾರ್ಲ್ಸ್ ಲ್ಯಾಂಬ್‌ನ The old familiar facesನ ಅನುವಾದವೇ "ಹಳೆಯ ಪಳಕೆಯ ಮುಖಗಳು"

I have had playmates, I have had companions
In my old days of childhood, in my joyful school days.
All, all are gone, The old familiar faces

ಕಂದ ಬಿದ್ದೆಯ ಎಂದು ಮುದ್ದಿಸಿ ನನಗೆ ಮರುಗುವವರಿದ್ದರು,
ಅಂದಿನೋದಿನ ಸುಖದ ದಿನದಲಿ ಜತೆಗೆ ಕುಣಿಯುವವರಿದ್ದರು
ಎಲ್ಲ, ಎಲ್ಲಾ ಮಾಯವಾದವು ಹಳೆಯ ಪಳಕೆಯ ಮುಖಗಳು

ಮೊದಲ ಪಂಕ್ತಿಯು ಮೂಲಕವನದಲ್ಲಿಲ್ಲ. ಇಡೀ ಕವನದಲ್ಲಿ ನಮ್ಮ ಪರಿಸರಕ್ಕೆ ಅನುಗುಣವಾಗಿ ಅನೇಕ ಮಾರ್ಪಾಡುಗಳನ್ನು ಶ್ರೀಯವರು ಮಾಡಿಕೊಂಡಿದ್ದಾರೆ. ಆದರೂ ಮೂಲದ ಸತ್ವ ಬಿಟ್ಟು ಹೋಗಿಲ್ಲ. ಪದ್ಯದ ಕೊನೆಯಲ್ಲಿ ಅಳಿದವರು, ತನ್ನನ್ನು ಬಿಟ್ಟವರು, ತನ್ನಿಂದ ಬೇರ್ಪಟ್ಟವರು - ಇವರನ್ನು ಹೊರತು ಶ್ರೀಯವರು ದೂರಿ ಹಳಿದವರನ್ನು, ತನ್ನನ್ನು ಹೊರಗೆ ಹಾಕಿದ ಹಳೆಯ ಮುಖಗಳನ್ನು ಎಂದು ಭಾಷಾಂತರದಲ್ಲಿ ಸೇರಿಸಿದ್ದಾರೆ. ಇದರಿಂದ ಭಾಷಾಂತರಕ್ಕೆ ಸ್ವಲ್ಪ ಮಟ್ಟಿನ ಕುಂದುಂಟಾಗಿದೆ.

'ನೆಮ್ಮುಗೆಯ ನಾಡು' ಲೇಡಿ ನೈರ್ನ್ ರಚಿಸಿದ The land of the Lealದ ಭಾಷಾಂತರ

| | |
|---|---|
| Then dry that tearful e'e, Jean | ನೋವನುಳಿ, ಕಣ್ಣನೊರೆಸಮ್ಮ |
| My soul langs to be free, Tean | ಜೀವಸೆರೆ ತೆರೆಯುತಿಹುದಮ್ಮ |
| And Angels wait on me, | ದೇವರೇಕೊ ಕರೆವನಮ್ಮ |
| To the land of the leal | ನೆಮ್ಮುಗೆಯ ನಾಡ ಬಳಿಗೆ |

ಶ್ರೀಯವರು ಕವಯಿತ್ರಿ ಸಂಬೋಧಿಸಿರುವ ವ್ಯಕ್ತಿಯ ಅಂಕಿತನಾಮವನ್ನು ಬಿಟ್ಟಿದ್ದಾರೆ. ಸ್ವರ್ಗದ ಅಮರ ಜೀವನದಲ್ಲಿ ನಂಬಿಕೆ, ಭಗವಂತನ ಆಜ್ಞಾಧಾರಕರಾದ ಆತನ ತೇಜೋಕೃತ ಸೇವಕರ ಉಳಿಗ, ಇಹದ ನಶ್ವರತೆ - ಇವು ಕ್ರಿಶ್ಚಿಯನ್ ದೇವತಾಶಾಸ್ತ್ರದ ಕೆಲವು ಸಿದ್ಧಾಂತಗಳು. ಶ್ರೀಯವರು ನಮಗೆ ಪರಿಚಿತರಾಗಿರುವ ದೇವರು, ಸ್ವರ್ಗಗಳ ಕಲ್ಪನೆ ಮಾತ್ರ ಬಳಸಿಕೊಂಡು, ಕವಿತೆಯನ್ನು ಭಾಷಾಂತರಿಸಿದ್ದಾರೆ. ಇದು ನಿರೀಕ್ಷಿತ ಮಾರ್ಪಾಡು.

'ಹೇಳದಿರು ಹೋರಾಡಿ ಫಲವಿಲ್ಲವೆಂದು' ಕ್ಲಫ್‌ನ 'Say not the struggle naught availeth' ನ ಕನ್ನಡ ಅನುವಾದ

| | |
|---|---|
| Say not the struggle naught availeth, | ಹೇಳದಿರು ಹೋರಾಡಿ ಫಲವಿಲ್ಲವೆಂದು, |
| The labour and the wounds are vain, | ತೋಳ ದಣಿಸಿದೆ ಬರಿದೆ ಘಾಸಿಯಾಯ್ತೆಂದು, |
| The enemy fainty not, nor faileth, | ಗೆಲ್ಲುವುದಕಾಣೆ, ಹಗೆ ಹಿಮ್ಮೆಟ್ಟನೆಂದು |
| And as things have been they remain, | ಎಲ್ಲ ಇದ್ದಂತಿಹುದು - ಅಲ್ಲಾಡದೆಂದು |

ಹೋರಾಟ ನಿಷ್ಫಲವಲ್ಲವೆನ್ನುವ ರೂಪಕವನ್ನು ಪರಿಣಾಮಕಾರಿಯಾಗಿ ಶ್ರೀಯವರು ಭಾಷಾಂತರಿಸಿದ್ದಾರೆ. ಸಮುದ್ರದ ತೆರೆಗಳ ಮುಂಬರುವಯತ್ನ, ಸೂರ್ಯಗಗನದಲ್ಲಿ ಏರುವುದು ಇವುಗಳಲ್ಲಿರುವ ತರ್ಕವನ್ನು ಭಾಷಾಂತರದಲ್ಲಿ ಮನಮುಟ್ಟುವಂತೆ ಶ್ರೀಯವರು ಕನ್ನಡಿಸಿದ್ದಾರೆ.

ಲೇಡಿ ಲಿಂಡ್ಸೆಯ "ಒಲ್ಡ್ ರಾಬಿನ್ ಗ್ರೇ" ಕವನದ ಅನುವಾದ 'ಮುದಿಯ ರಾಮಗೌಡ'ದಲ್ಲಿ ದುರಂತ ಪ್ರೇಮ ಕಥನವನ್ನು ಕವಿ ಚಿತ್ರಿಸಿದ್ದಾರೆ.

I gang like a ghaist, and I carena to spin,
I daurna think on jamie, for that wad be a sin,
But I'll do my best a gude wife ay to be,
For auld Robin gray he is kind unto me.

ಗಾಳಿಯಾಗಿ ಸುಳಿಯುತಿರುವೆ -ಮನೆಯ ಕೆಲಸ ಅಕ್ಕರಿಲ್ಲ
ಚಾಮುಗನು ನೆನೆಯುವುದು ಪಾಪ ಎಷ್ಟೋ ತಡೆಯುವೆ ಮನಸನು
ಒಳ್ಳೆಗರತಿಯಾಗಿ ಬದುಕಲು ಎದೆಯನಷ್ಟು ಗಟ್ಟಿಮಾಡುವೆ,
ರಾಮುಗೌಡನ ಪ್ರೀತಿ ನಂಬಿಕೆಗೆಂತು ದ್ರೋಹವ ಬಗೆವೆನು,

ಮೂಲದಲ್ಲಿ ಪತಿಯ ಒಳ್ಳೆಯತನದ ಬಗ್ಗೆ ಹೆಣ್ಣು ಹೆಚ್ಚು ನಿರ್ಧಾರ ಪೂರ್ವಕವಾದ ಮಾತುಗಳನ್ನು ಹೇಳುವುದು ಕಂಡುಬರುತ್ತದೆ. ಹೀಗೆ ಕೆಲವೊಂದು ವ್ಯತ್ಯಾಸ ಬಿಟ್ಟರೆ ಅನುವಾದ ಬಹಳ ಅರ್ಥಪೂರ್ಣವಾಗಿ ಮೂಡಿಬಂದಿದೆ. ಮೂಲ ಕವಿತೆಯ ಸೌಂದರ್ಯಕ್ಕೆ ಸ್ಪಂದಿಸುವ ಪ್ರೇರಣೆಯು ಮತ್ತು ಭಾಷಾಂತರಕ್ಕೆ ಅವಶ್ಯಕವಾದ ಭಾಷಾಪ್ರೌಢಿಮೆಯು ಸಮನ್ವಯವನ್ನು ಇಲ್ಲಿ ಕಾಣಬಹುದು.

ಟೆನಿಸನ್‌ನ Break, Break, Break ಭಾವಗೀತೆಯ ಕನ್ನಡ ಅನುವಾದವೇ 'ಹೊಯ್, ಹೊಯ್, ಹೊಯ್' ಶ್ರೀಯವರ ಭಾಷಾಂತರದಲ್ಲಿ ಟೆನಿಸನ್ನನ ಅನಿಸಿಕೆಗಳು ಚೆನ್ನಾಗಿ ಮೂಡಿಬಂದಿವೆ.

| | |
|---|---|
| And the stately ships go on | ಗಂಭೀರದಲಿ ನಡೆದು ಹಡಗು |
| to their haven under the hill, | ಬೆಟ್ಟದಡಿಯಲ್ಲಿ ನೆಲೆಯ ಸೇರುತಿಹುವು |
| But O for the touch of a vanished hand | ಅಯ್ಯೊ ! ಆ ಬಯಲಾದ ಕಯ್ಯ ಸೋಂಕೇ ! |
| And a sound of a voice that is still | ಮಾತಡಗಿ ಹೋದವನ ಕೊರಲಿನುಲಿಯೆ ! |

ಮೊದಲೆರಡು ಪಂಕ್ತಿಗಳ ದೃಶ್ಯರೂಪಕ ಪರಿಣಾಮಕಾರಿಯಾಗಿಯೇ ಬಂದಿದೆ. Vanished hand ಗೆ 'ಬಯಲಾದ ಕೈ' ಅಷ್ಟು ಸ್ಪಷ್ಟವಾಗಿ ಅನುವಾದಗೊಂಡಿಲ್ಲ. Voice that is still ಮಾತಡಗಿ ಹೋದವನ ಪದಬಂಧದಂತೆ ಅಸ್ಪಷ್ಟತೆ ಇದ್ದು 'ಮೂಕ' ಎನ್ನುವ ಶಬ್ದ ಹೆಚ್ಚು ಸ್ಪಷ್ಟತೆ ನೀಡುತ್ತಿತ್ತು. ಒಟ್ಟಿನಲ್ಲಿ ಭಾಷಾಂತರ ಮೂಲದ ಸತ್ವವನ್ನು, ಧ್ವನಿಯನ್ನು ಉಳಿಸಿಕೊಂಡಿದೆ.

'ಪೆಡಸುದಾರಿ' ಕವಿಯಿತ್ರಿ ಕ್ರಿಸ್ಟಿನ್ ರಾಸೆಟಿಯ 'Up Hill' ಪದ್ಯದ ಭಾಷಾಂತರ. ಕವಯಿತ್ರಿ ಅನಾರೋಗ್ಯದಿಂದ ಬಳಲುತ್ತಿದ್ದು ಇಹದಿಂದ ಪರಕ್ಕೆ ಇರುವ ಹಾದಿಯನ್ನು ಗುಡ್ಡವನ್ನು ಏರಲಿರುವ ಪ್ರಯಾಸದ ಹಾದಿ ಎಂದು ಈ ಧಾರ್ಮಿಕ ಪದ್ಯದಲ್ಲಿ ತಿಳಿಸಿದ್ದಾಳೆ. ಶ್ರೀಯವರು ಈ ರೂಪಕ ಬಿಟ್ಟು ಇದನ್ನು ಕಷ್ಟದ ಹಾದಿ ಎಂದು ಭಾಷಾಂತರಿಸಿದ್ದಾರೆ.

| | |
|---|---|
| Shall I find comfort, travel sore and weak? | ನಡೆದು ನೊಂದವನು ಸುಖಿಸಲಿಕ್ಕುಂಟೆ? |
| of labour you shall find the sum | ಉಣುವೆ ದುಃಖಿಗಳದೆ |
| will there be beds for me and all who seek? | ಬಯಸಿ ಬಂದವರಿಗೆಲ್ಲ ಹಾಸಿಗೆಯೆ? |
| Yea, beds for all who come | ಬಯಸಿ ಬಂದವರಿಗೆ |

ಶ್ರೀಯವರು 'ಬಯಸಿ' ಪದದ ಬದಲು 'ಅರಸಿ' ಪದವನ್ನು ಬಳಸಿದ್ದರೆ ಪ್ರಶ್ನಿಸುವ ಅನ್ವೇಷಕನಿಗೂ ಇತರ ಅನ್ವೇಷಕರಿಗೆ ದೊರಕುವಂತೆ 'ಹಾಸುಗೆಗಳು' ದೊರಕುವ ಮೂಲಕವಿತೆಯ ಚರಣಗಳಲ್ಲಿ ವ್ಯಕ್ತವಾಗುವ ಆಶ್ವಾಸನೆ ಭಾಷಾಂತರದಲ್ಲಿ ಪರಿಣಾಮಕಾರಿಯಾಗಿ ಬರುತ್ತಿದ್ದಿತು. ಮೂಲಕವಿತೆಯ ಓಘ ಸತ್ವಗಳು, ಬಹುಮಟ್ಟಿಗೆ ಭಾಷಾಂತರದಲ್ಲಿ ಬಂದಿವೆ.

'ಕವಿ ಶಿಷ್ಯ' ರಾಬರ್ಟ್ ಸೌದಿ ಬರೆದ 'The scholar' ಕವಿತೆಯ ಅನುವಾದ.

| | |
|---|---|
| My days among the Dead are past | ಹೊತ್ತು ಹೋಗುವುದೆನಗ ಸತ್ತವರ ಸಂಗದಲಿ. |
| Around me I behold, | ಬಳಸಿನಲಿ ಬಂದಿಹರ ಕಾಣುತಿಹೆನು, |
| Where'er their casual eyes are cast | ಎತ್ತತ್ತ ಸುಳಿಸುವೆನೋ ಈ ಕಣ್ಣನತ್ತತ್ತು |
| The nighty minds of old, | ಹಳಮೆಯ ಮಹಾತ್ಮರನು ಪರಮ ಕವಿಗಳನು |
| My never-failing friends are they | ನನಗವರೆ ಕೈ ಬಿಡದ ಕಳೆಯರಾದವರು |
| with whom I converse day by day | ದಿನದಿನದಿ ಮಾತು ಕಥೆಗೆನಗಿರುವವರು |

ಸೌದಿಯ ಕಾವ್ಯೋಕ್ತಿಗಳಿಗೆ ಶ್ರೀಯವರ ಕವಿಹೃದಯ ಅಂತರಾಳದಿಂದ ಸ್ಪಂದಿಸಿದೆ. ಸೌದಿ ಗತಿಸಿದ ಮಹಾಮಹಿಮರನ್ನು ಸ್ಮರಿಸಿದರೆ ಶ್ರೀಯವರು 'ಮಹಾತ್ಮರನು ಪರಮಕವಿಗಳನು' ನೆನಕೊಂಡಿದ್ದಾರೆ. ಇದನ್ನು ಭಾಷಾಂತರವೆನ್ನುವುದಕ್ಕಿಂತ ಪುನರ್ ಸೃಷ್ಟಿ ಎನ್ನುವುದು ಹೆಚ್ಚು ಸೂಕ್ತವಾದುದು.

"ಅಳಿನಿ" Fair Helen ಕವಿತೆಯ ಭಾಷಾಂತರ. ಇದೊಂದು ಸ್ಕಾಟ್‌ಲೆಂಡಿನ ಗೀತೆ.

| | |
|---|---|
| I hacked him in pieces Sma' | ತರಿದೆನವನನು ತುಂಡು ತುಂಡು |
| For her sake that died for me. | ಸತ್ತವಳ ಹಗೆ ತೀರಲಿ ! |

ಹೀಗೆ ಮೂಲ ಕಾವ್ಯದ ಸಾಲುಗಳ ಅರ್ಥ ಸಮರ್ಥವಾಗಿ ಕನ್ನಡಿಸಲ್ಪಟ್ಟಿದೆ.

'ಗಾನಮೆಲುಪಿನ ಕೊರಲು ಕುಗ್ಗಲು' ಇದು 'To' ಎಂಬ ಶೀರ್ಷಿಕೆಯಲ್ಲಿಯ ಶೆಲ್ಲಿಯ ಭಾವಗೀತೆಯ ಮೊದಲ ಪಂಕ್ತಿಯಾದ 'Music, when soft voices die'ನ ಭಾಷಾಂತರ

| | |
|---|---|
| Music, when soft voices die, | ಗಾನ, ಮೆಲುಪಿನ ಕೊರಲು ಕುಗ್ಗಲು |
| Vibrates in the memory | ಹೊಳಲು ಕೊಡುವುದು ಮನದೊಳು |

ಮೂಲದ voices 'ಕೊರಲು' ಎಂದಾಗಿದೆ. 'die' ಕುಗ್ಗಲು ಆಗಿದೆ. ಇದರಿಂದ ಕಾವ್ಯೋಕ್ತಿ ಅಸ್ಪಷ್ಟವಾಗಿದೆ. ಹೀಗಾಗಿ ಈ ಪದ್ಯದಲ್ಲಿ ಶೆಲ್ಲಿಯ ಕಾವ್ಯೋಕ್ತಿ ಭಾಷಾಂತರದಲ್ಲಿ ಮಾಸಿರುವುದು ಕಾಣಬಹುದು.

ಅರೆ ಯಾವುದಿಲ್ಲಿ? ಇದು ಬ್ರೌನಿಂಗ್‌ನ Wanting is - what? ನ ಭಾಷಾಂತರ. ಅಪೇಕ್ಷಿಸುವುದೇನನ್ನು ಎನ್ನುವುದು ಇದರ ಅರ್ಥ.

| | |
|---|---|
| Wanting is-what? | ಅರೆ ಯಾವುದಿಲ್ಲಿ ? |
| Summer redundant, | ಜ್ವಲಿಸುವ ವಸಂತವಿರೆ. |

Blanneseles abundant, ತಿಳಿನೀಲಿ ಗಗನವಿದೆ,

- Where is the blot? ಕೊರತೆ ಇನ್ನೆಲ್ಲಿ?

ಶ್ರೀಯವರ ಕೈಯಲ್ಲಿ ಶಬ್ದಗಳು ಕುಣಿದಿವೆ. ಸಣ್ಣಪುಟ್ಟ ಮಾರ್ಪಾಡಿಗೀಡಾಗಿ ಕವಿತೆಯ ಸೌಂದರ್ಯ ಇನ್ನೂ ಹೆಚ್ಚಾಗಿದೆ.

ಶ್ರೀಯವರು 'ಇಂಗ್ಲಿಷ್ ಗೀತಗಳ' ಮೂಲಕವಾಗಿ ಪ್ರೇಮದ ವಿವಿಧ ರಾಗ ಛಾಯೆಗಳನ್ನು ಕನ್ನಡಕ್ಕೆ ತಂದರು. ಛಂದೋ ವೈವಿಧ್ಯಗಳಂತೆ ಕಾವ್ಯವಸ್ತು ವೈವಿಧ್ಯಗಳನ್ನು ಪ್ರಯೋಗಗಳ ಮೂಲಕ ಪ್ರಯತ್ನಿಸಿದರು. ದೇಶಭಕ್ತಿ ಹಾಗೂ ವೈಯಕ್ತಿಕ ಭಾವನೆಗಳಿಗೆ ತಮ್ಮ ಕಾವ್ಯದಲ್ಲಿ ಜಾಗ ನೀಡಿದರು.

ಶ್ರೀಯವರು 'ಇಂಗ್ಲಿಷ್ ಗೀತಗಳು' ಕೆಲವೊಂದು ಪದ್ಯಗಳನ್ನು ಅನುವಾದಿಸಲು ಸ್ಫೂರ್ತಿ ಅವರ ಧರ್ಮಪತ್ನಿ ದೇವಿಯಮ್ಮ, ಶ್ರೀಯವರಿಗೆ ಅವರ ಮೇಲಿದ್ದ ಅತಿಶಯ ಪ್ರೇಮ ಹಾಗೂ ಅವರ ಅಕಾಲ ಮರಣ ಎಂದು ವಿ. ಸಿ. ಯವರೇ ಒಂದು ಕಡೆ ಹೇಳಿದ್ದಾರೆ. ಇವು ಎರಡು ಒಚ್ಚೆಗಳಲ್ಲಿ ಸ್ವಲ್ಪ ಸ್ವಲ್ಪ ಪ್ರಕಟವಾಗಿ ಡಿ. ವಿ. ಜಿ. ಯವರು ತಮ್ಮ ಅರ್ಥಸಾಧನೆ, ಕರ್ನಾಟಕ ಜನಜೀವನವೆಂಬ ಪತ್ರಿಕೆಯಲ್ಲಿ ಇನ್ನಷ್ಟನ್ನು 1924ರಲ್ಲಿ ಪ್ರಕಟಿಸಿದರು. ಇವಾದ ಮೇಲೆ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಮೂಲಕ 1926ರಲ್ಲಿ ಇವರ ಶಿಷ್ಯರಾದ ಕೃಷ್ಣ ಶಾಸ್ತ್ರಿಗಳೂ ಟಿ. ಎಸ್. ವೆಂಕಣ್ಣಯ್ಯನವರೂ ಪ್ರಕಟಿಸಿದರು.

'ಇಂಗ್ಲಿಷ್ ಗೀತಗಳು' ಕಾರಣದಿಂದ ಕನ್ನಡದಲ್ಲಿ ಒಂದು ಮಹಾ ಪರಿಣಾಮ ಉಂಟಾಯಿತು. ಮೂಲದ ಕವನಗಳ ನಡೆ, ಲಯಗತಿಯ ಹತ್ತಿರಹೊಂದುವಂತೆ ನಮ್ಮ ಜಾಯಮಾನಕ್ಕೆ ಒಗ್ಗಿದ ಮಾತ್ರಾಗಣಗಳು ಅಂಶಗಣಗಳು ಹೇಗೆ ಓಡುತ್ತವೆ ಎಂಬುದನ್ನು ಪೂರ್ಣ ತಿಳಿವಿನಿಂದ ಸಾಧಿಸಿ ಹೊಸ ಛಂದೋವಿಲಾಸವನ್ನು ಕನ್ನಡದಲ್ಲಿ ಮೆರೆಸಿದರು ಶ್ರೀಯವರು.

ಶ್ರೀಯವರು ಇಂಗ್ಲಿಷ್, ಕನ್ನಡ, ಸಂಸ್ಕೃತ, ತಮಿಳು ನಾಲ್ಕು ಭಾಷೆಗಳ ಛಂದಸ್ಸನ್ನು ಬಲ್ಲವರು. ಇಂಗ್ಲಿಷಿನ ಸ್ವರಘಾತದ accuntuated- ಛಂದಸ್ಸು ನಮ್ಮದಲ್ಲ. ಸಂಸ್ಕೃತ ವೃತ್ತಗಳನ್ನು ಬಿಟ್ಟರೆ ಬಹುಮಟ್ಟಿಗೆ ಕನ್ನಡದ್ದು ಮಾತ್ರಾಗಣ ಅಂಶಗಣಗಳ ರಚನೆ, ಓಟ - ಪಾಟ 3, 4, 5 (3+4) ಅಥವಾ ಒಟ್ಟಿಗೆ 6, 8 (3+5) ಸಂಯುಕ್ತಗಣಗಳ ರೂಢಿಯದು. ಅಕ್ಕರ ಸಾಂಗತ್ಯ ತ್ರಿಪದಿಗಳನ್ನು ಹೇಗೆ ವಿಸ್ತರಿಸಿಕೊಳ್ಳುತ್ತಾರೆ ಎಂಬುದನ್ನು ಬಲ್ಲವರು ವ್ಯಂತಕಂದಗಳ ಪ್ರಯೋಗ ಹೊಸಗನ್ನಡಕ್ಕೆ ಹೊಂದಿಕೊಳ್ಳುವುದಿಲ್ಲವೆಂದು ತಿಳಿದು ನಡುಗನ್ನಡದ ಮಿಶ್ರವಿಳಕೆಯನ್ನು ಕೈಬಿಟ್ಟು ಅಚ್ಚ ಕನ್ನಡದ ಛಂದಸ್ಸು ಮಾತು ಬಳಸಿ ಆದಿಪ್ರಾಸದ ಬದಲಿಗೆ ಅಂತ್ಯ ಪ್ರಾಸವನ್ನು ನಾದಕ್ರಿಯೆಗೋ ಅರ್ಥಸಾಧನೆಗೋ ಬಳಸಿಕೊಂಡರು.

ಇಂಗ್ಲೀಷಿನಲ್ಲಿ Lyric ಹಾಡಲು ಅನುಕೂಲವಾಗಲು ಬರೆದಿದ್ದಾರೆ. Sonnet ಹಾಡಲು ಬರುವುದಿಲ್ಲ. ಕಾರಣ ಅದು ಚತುರ್ದಶಪದಿ. ಅರ್ಥ ವಿನ್ಯಾಸದಲ್ಲಿ ಎರಡು ಭಾಗಗಳಿದ್ದು 8 ಸಾಲಿನ ನಂತರ ಒಂದು ತಿರುವು ಬರುತ್ತದೆ. ಕೆಲವಕ್ಕೆ ಒಂದು ತೋಕೆ, ಬಾಲ (Coda) ಇರುವುದುಂಟು. ಆದರೆ ಎಲ್ಲಿ ಪದ್ಯದಲ್ಲಿ ಲಯ ಸೌಲಭ್ಯ, ಹೊಂದಾಣಿಕೆ ಪಲ್ಲವಿಯಂತಿರುವ ಒಂದೋ ಎರಡೋ ಸಾಲುಗಳ ರಚನೆ ಇರುತ್ತದೆಯೋ ಅಲ್ಲಿ ಅದನ್ನು ಅರ್ಥ ಹಾಡುಗಳಾಗಿ

ಬಳಸಿಕೊಳ್ಳಬಹುದು. ಅವನ್ನು ವಿಧವಿಧವಾದ ಭಾವ ವ್ಯತ್ಯಾಸಕ್ಕೆ ಹೊಂದುವಂತೆ ಹೇಳಿಕೊಳ್ಳಬೇಕಾಗುತ್ತದೆ. (ಉದಾ: ಬ್ಲೆನ್‌ಹಿಮ್ ಕದನ, ಮಾದ-ಮಾದಿ) ಮತ್ತು ಒಂದು ಭಾವಸ್ಥಿತಿಯಿಂದ ಮತ್ತೊಂದು ಭಾವಸ್ಥಿತಿಗೆ ತರುವ ಸಂದರ್ಭಗಳವ ಎಲ್ಲ ಕವಿತೆಯಲ್ಲಿಯೂ ಈ ಹಾಡಿನ ವಿಲಾಸವನ್ನು - ಗಮಕವನ್ನು ಬೆಳೆಸಿದಂತೆ ಎಂದು ಅವನನ್ನು ಕರೆಯುವ ರೀತಿಯಲ್ಲಿ ಹೇಳಿಕೊಳ್ಳಬಹುದು.

ಮಾದ ಕತ್ತನೊಲಿದುದೇನು ;
ಅತ್ತ, ಇತ್ತ, ಸಿಡಿದುದೇನು ;

ಎಂದ ಸ್ಥಿತಿಗೂ ಅವಳು ಮಾದನಿಗೆ ಸೋತಾಗ ಉಂಟಾದ

ಸುಯ್ಯು ಸುಯ್ಯು ತಣ್ಣಾಗಬಹುದು.
ಕಣ್ಣೊಂದ ನುಡಿಯುತಿಹುದು ;

ಎಂಬ ರೀತಿಗೂ ವ್ಯತಿರೇಕ ತೋರುವಂತೆ ಹೇಳಬೇಕು

ಬೇಸಿಗೆಯಲಿ ಸಂಜೆಯಾಯಿತು, ಕೆಲಸವ
ಮುತ್ತಜ್ಜ ತೀರಿಸಿಕೊಂಡ

ಎಂದು ಆರಂಭವಾಗುವ ಗದ್ಯದಂತಿರುವ ಒಂದು ರೀತಿಯನ್ನು ಕಾಣಬಹುದು.

ಶ್ರೀಯವರ ''ಆಳೌ ಬ್ರಿಟಾನಿಯಾ'' 'ಇಂಗ್ಲೆಂಡ್ ನಾವಿಕರು' ಪದ್ಯಗಳಲ್ಲಿ ಭಾರತೀಯರಿಗೆ ಸಲ್ಲದ ಇಂಗ್ಲೀಷ್ ಪ್ರೇಮವಿರುವುದಾಗಿ ಒಂದು ಆಕ್ಷೇಪವಿದೆ. ಸರ್ಕಾರಿ ನೌಕರರಾದ ಅವರಿಗೆ ದೇಶಪ್ರೇಮವನ್ನು ತೋರಿಸುವ ಪದ್ಯ ಬರೆಯುವ ಸ್ವಾತಂತ್ರ್ಯವಿರಲಿಲ್ಲ. ಇಂಗ್ಲಿಷ್‌ರು ದೇಶ ಪ್ರೀತಿಯನ್ನು ಹೇಗೆ ತೋರಿಸುತ್ತಾರೆ ಎಂದು ತೋರಿಸುವ ಮೂಲಕ ನಮ್ಮ ಜನಕ್ಕೆ ಎಚ್ಚರಿಕೆ ನೀಡಲು ಈ ಪದ್ಯಗಳನ್ನು ಬರೆದಂತಿದೆ. ಅವರಿಗೆ ಇಂಗ್ಲಿಷ್ ಭಾಷೆಯ ಮೇಲೆ ಪ್ರೀತಿ ಇತ್ತೇ ವಿನಾ ಇಂಗ್ಲೆಂಡ್ ಮೇಲಲ್ಲ. ಅವರ ದೇಶ ಪ್ರೇಮ, ಕನ್ನಡ ಅಭಿಮಾನ ಕಡಿಮೆ ಇರಲಿಲ್ಲ. ಹಾಗಿಲ್ಲದಿದ್ದಲ್ಲಿ ಕನ್ನಡದಲ್ಲಿ ಸಾಹಿತ್ಯ ರಚನೆಗೆ ಅವರು ಕೈಹಾಕುತ್ತಿರಲಿಲ್ಲ.

'ಇಂಗ್ಲಿಷ್ ಗೀತ'ಗಳನ್ನು ಶ್ರೀಯವರು "To my students who believe in the blending of the souls of India and England these verses affectionately are inscribed" .................................... ಅರ್ಪಿಸಿದ್ದೇನೆ ಅಂದಿದ್ದಾರೆ. ''ಇವಳ ಸೊಬಗನವಳು ತೊಟ್ಟು'' ಎಂಬ ಮಾತಿನಲ್ಲಿ ಇಂಗ್ಲಿಷ್ ಫ್ರಾಕ್ ಗೌನ್ ಹಾಕಿ ಭಾರತೀಯ ನಾರಿಯನ್ನು ದೊರೆಸಾನಿ ಮಾಡಲು ಅವರು ಹೊರಟಿಲ್ಲ. ಅವರ ಉದ್ದೇಶ ಇಂಗ್ಲಿಷ್ ಸಾಹಿತ್ಯದ ಶ್ರೇಷ್ಠತೆಯನ್ನು ಕನ್ನಡ ಸಾಹಿತ್ಯಕ್ಕೆ ತರುವುದಾಗಿತ್ತು. ಖ್ಯಾತ ವಿಮರ್ಶಕ ಕ್ಲಿಂಗೊಪ್ಲೊರ್‌ಗ್ ಭಾಷಾಂತರ ಕುರಿತು ಹೀಗೆಂದಿದ್ದಾನೆ: 'ಭಾಷಾಂತರದ ಗುರಿ ಅಕ್ಷರಶಃ ಭಾಷಾಂತರಕ್ಕಿಂತ ಉಚ್ಚಮಟ್ಟದಲ್ಲಿರಬೇಕಾದ ಗುರಿಯನ್ನು ಹೊಂದಿದ್ದರೆ. ಭಾಷಾಂತರಕಾರನಲ್ಲಿ ವಿದ್ವತ್ತು ಮತ್ತು ಸ್ಫೂರ್ತಿಗಳ ಸಂಯೋಜನೆಯ ಅವಶ್ಯಕತೆಯಿದೆ. ಮೂಲಕೃತಿಯನ್ನು ಸೃಷ್ಟಿಸುವಾಗ ಉಂಟಾಗುವ ಸಮಾಧಾನದ ಒಂದು ಅಂಶವನ್ನಾದರೂ ಅವನು ಅದರೊಂದಿಗೆ ಸ್ಪಂದಿಸುವಾಗ ಅನುಭವಿಸಬೇಕು.

ಶ್ರೀಯವರು ಅನುಭವಿಸಿದ್ದು ಪುನರ್ ಸೃಷ್ಟಿಯು ಮತ್ತು ಸಮರ್ಥ ಭಾಷಾಂತರದ ಹೆಚ್ಚಿನ ಸಮಾಧಾನ. ಶ್ರೀಯವರ ಭಾಷಾಂತರದ ವ್ಯಾಪ್ತಿ "ನನ್ನ ಮೇರಿ"ಯ ಮೂಲವಸ್ತು ಭಾವ, ರಸ, ಅಂಕಿತನಾಮಗಳನ್ನು ಉಳಿಸಿಕೊಂಡಿರುವುದರಿಂದ ಹಿಡಿದು, ಮೂಲದ ಸೊಗಡನ್ನು ಉಳಿಸಿಕೊಂಡು ಕನ್ನಡ ಕವಿಯೊಬ್ಬನು ಬರೆದ ಸ್ವತಂತ್ರ ಕವನಗಳೆನ್ನಬಹುದಾದ ಕನ್ನಡದಲ್ಲಿ ಮಾಡಿರುವ ಪುನರ್ ಸೃಷ್ಟಿಗಳು"[37] ಆಳಸಿಂಗರಾಚಾರ್ಯರಿಗಾಗಲೀ, ಬಸವಪ್ಪಶಾಸ್ತ್ರಿಗಳಿಗಾಗಲೀ ತಮ್ಮ ಭಾಷಾಂತರಗಳಿಗೆ ಅನುಕೂಲವಾಗಿದ್ದ ಕನ್ನಡ ಸಂಸ್ಕೃತಗಳ ಜಾಯಮಾನ, ಸಾಮೀಪ್ಯ ಶ್ರೀಯವರಿಗಿರಲಿಲ್ಲ. ಆದರೆ ಅವರಿಗೆ ಇಂಗ್ಲಿಷ್ ಮತ್ತು ಕನ್ನಡಗಳ ಪಾಂಡಿತ್ಯದೊಂದಿಗೆ ಸ್ಫೂರ್ತಿ, ಸಂವೇದನಶೀಲತೆ, ಭಾವ, ಮತ್ತು ರಸ ಪ್ರಜ್ಞೆಗಳಿದ್ದುದರಿಂದ ಇಂಗ್ಲಿಷ್ ಗೀತಗಳ ಭಾಷಾಂತರ ಅವರ ಸೃಜನಶೀಲತೆಯನ್ನು ಕ್ರಿಯಾತ್ಮಕವಾಗಿ ಮಾಡಿತು. ಅವರ ಭಾಷಾಂತರದ ವಿಧಾನ ಸ್ಥೂಲವಾಗಿ ಹೀಗಿದೆ ಯೆನ್ನಿಸುತ್ತದೆ. ಇಂಗ್ಲಿಷ್ (ಪದ) ಪದ ಬಂಧ → ಪ್ರತಿಮೆ, ಸಂವೇದನೆ → ಕನ್ನಡ (ಪದ) ಪದಬಂಧ. ಈ ಎರಡು ಭಾಷೆಗಳ ಆಂತರ್ಯ ಮತ್ತು ಸಂಸ್ಕೃತಿಗಳ ಅರಿವು ಶ್ರೀಯವರ ಯಶಸ್ಸಿಗೆ ಇಂಬುಕೊಟ್ಟಿತು.

ಬೇಂದ್ರೆಯವರು ಇಂಗ್ಲಿಷ್ ಗೀತಗಳ ಬಗ್ಗೆ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ: "ನನಗೆ ಇದ್ದ ಸಾಹಿತ್ಯ ಪರಿಚಯದಿಂದ ಹೇಳುವುದಾದರೆ ಇಂಗ್ಲಿಷ್ ಗೀತಗಳು ತನ್ನ ಮೊತ್ತದಿಂದಲೂ, ಕಾವ್ಯಗುಣದಿಂದಲೂ ಶೈಲಿಯ ಸಮತ್ವದಿಂದಲೂ ತನ್ನ ಜಾತಿಯಲ್ಲಿ ಆದರ್ಶವಾಗಿರುವಂತೆ ಈ ಗುಣಸಮುದಾಯವನ್ನು ನಾನು ಬೇರೆ ಕಡೆ ಕಂಡಿಲ್ಲ." ಅಲ್ಲಿರುವ ಕೊರತೆ ಬಗ್ಗೆಯೂ ತಮ್ಮದೇ ಆದ ದಾಟಿಯಲ್ಲಿ ಬೇಂದ್ರೆಯವರು ಹೀಗೆ ಹೇಳಿದ್ದಾರೆ. "ಇಲ್ಲಿಯ ಕೆಲಗೀತೆಗಳಲ್ಲಿ (ಪ್ರಾಸರಾಹಿತ್ಯದ) ಈ ಕೊರತೆಯು ಆಗೀಗ ಬಾಯಾರಿಕೆ ಉಂಟು ಮಾಡುವುದು" ಮುಂದುವರಿದ ಅವರು "ಕಾವ್ಯ ಗುಣವಿದ್ದರೆ ಪ್ರಾಸರಹಿತ ಪದ್ಯವು ಕಾವ್ಯವೇ ಅಹುದು' ಎಂದೂ ಒಪ್ಪಿಕೊಂಡಿದ್ದಾರೆ ಮತ್ತು ಇಂಗ್ಲಿಷ್ ಗೀತಗಳು "ಭಾವಗೀತೆಗಳ ಭಾಷಾಂತರಕ್ಕೊಂದು ಕೈಪಿಡಿಯಾಗಿ, ಅಕ್ಲಿಷ್ಟಪ್ರಸನ್ನ ಕಾವ್ಯಶೈಲಿಗೆ ಮಾದರಿಯಾಗಿ ನಿಲ್ಲುವುದು" ಎಂದು ಹಾರೈಸಿ "ಹೊಸ ಕವನಗಳ ಓಂಕಾರದಲ್ಲಿ "ಶ್ರೀ" ಯವರ ಈ ಶ್ರೀಕಾರವೂ ನಿತ್ಯನವೀನವಾಗಿ ಉಳಿಯಲಿ" ಎಂದಿದ್ದಾರೆ. ಒಟ್ಟಿನಲ್ಲಿ 'ಇಂಗ್ಲಿಷ್ ಗೀತಗಳು' ಕನ್ನಡ ಭಾಷಾಂತರ ಸಾಹಿತ್ಯದಲ್ಲಿ ಒಂದು ಮೈಲಿಗಲ್ಲಾಯಿತು.

■

## ಅಡಿಟಿಪ್ಪಣಿ

1. ಮಾಸ್ತಿ : ಮಲಾರ (1934), ಪು 43
2. ಕುವೆಂಪು - 'ಕಂಬನಿ', ಪ್ರಬುದ್ಧ ಕರ್ನಾಟಕ. ಸಂ. 22 ಸಂ. 2 (1946) ಪುಟ 111
3. ಶ್ರೀ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, (1948) ಎಸ್. ವಿ. ರಂಗಣ್ಣನವರ ಮುನ್ನುಡಿ. ಪುಟ 3
4. ಪ್ರೊ. ಎಸ್. ಅನಂತನಾರಾಯಣ. ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ. ಪುಟ 8
5. 'ಶ್ರೀ' ಇಂಗ್ಲಿಷ್ ಗೀತಗಳು (1948ರ ಮುದ್ರಣ) ತೀ.ನಂ.ಶ್ರೀ.ಯವರ ಪ್ರಸ್ತಾವನೆ. ಪುಟ 29
6. 'ಶ್ರೀ' ಇಂಗ್ಲಿಷ್ ಗೀತಗಳು (1948ರ ಮುದ್ರಣ) ಪುಟ 1-2
7. Gilbert Murray 'The orestcia' Introduction

8. 'ಶ್ರೀ' ಇಂಗ್ಲಿಷ್ ಗೀತಗಳು, ತೀ.ವಂ.ಶ್ರೀ. ಯವರ ಪ್ರಸ್ತಾವನೆ.
9. Robert Burns : Selected poems, Penguin poets (1946) p. 164.
10. ಶ್ರೀ 'ಇಂಗ್ಲಿಷ್ ಗೀತಗಳು', ಪುಟ 41
11. Shelly, 'Poetical works' 'A Serenade'
12. 'ಶ್ರೀ' ಇಂಗ್ಲಿಷ್ ಗೀತಗಳು, ಪುಟ 54.
13. 'ಶ್ರೀ' ಇಂಗ್ಲಿಷ್ ಗೀತಗಳು : ತೀ.ನಂ.ಶ್ರೀ. ಯವರ ಪ್ರಸ್ತಾವನೆ, ಪುಟ 40
14. ಅದೇ ಪುಟ 41.
15. 'ಸಂಭಾವನೆ' (1941) ಬೇಂದ್ರೆ, ಇಂಗ್ಲಿಷ್ ಗೀತಗಳು, ಪುಟ 67.
16. ಅದೇ ಪುಟ 69
17. 'ಶ್ರೀ' ಇಂಗ್ಲಿಷ್ ಗೀತಗಳು (1926) ಬೆಳ್ಳಾವೆ ವೆಂಕಟನಾರಾಯಣಪ್ಪನವರ ಮುನ್ನುಡಿ
18. 'ಸಂಭಾವನೆ' 'ಬೇಂದ್ರೆ', ಇಂಗ್ಲಿಷ್ ಗೀತಗಳು, ಪುಟ 69
19. 'ಶ್ರೀ' ಇಂಗ್ಲಿಷ್ ಗೀತೆಗಳು (1948) ತೀ.ನಂ.ಶ್ರೀ.ಯವರ ಪ್ರಸ್ತಾವನೆ, ಪುಟ 33
20. ಅದೇ - 'ಸುಖಜೀವನ', ಪುಟ 94.
21. W.J. Courthope : History of English poetry' Vol. I
22. 'ಶ್ರೀ' ಇಂಗ್ಲಿಷ್ ಗೀತಗಳು - ಪೆಡಸುದಾರಿ, ಪುಟ 90
23. 'ಸಂಭಾವನೆ' - 'ಬೇಂದ್ರೆ' 'ಇಂಗ್ಲಿಷ್ ಗೀತಗಳು', ಪುಟ 71.
24. 'ಶ್ರೀ' ಇಂಗ್ಲಿಷ್ ಗೀತಗಳು, ಪುಟ 49
25. ಅದೇ, ಹಳೆಯ ಪಳಕೆಯ ಮುಖಗಳು, ಪುಟ 87
26. 'ಶ್ರೀ' ಇಂಗ್ಲಿಷ್ ಗೀತಗಳು, ಬಾನಾಡಿ, ಪುಟ 12
27. 'ಗೋವಿಂದ ಪೈ' 'ಗಿಳಿವಿಂಡು' 'ಬಾನಕ್ಕಿಗೆ', ಪುಟ 3
28. 'ಸಂಭಾವನೆ' ಎಸ್. ಎಸ್. ಸುಬ್ಬರಾವ್, 'ಹಿತವಚನ', ಪು. 8.
29. Basci Willey - Eighteenth Century Background
30. Coleridge : Biographia Literaria, Chapter IV
31. Grierson: Lyrical poetry from Blake to Hardy', p-34
32. Peter Westland: The Romantic Revolt (1950), p. 63.
33. ಡಾ: ಕೀರ್ತಿನಾಥ ಕುರ್ತುಕೋಟಿ 'ಬಯಲು ಆಲಯ', ಪುಟ 9
34. ಶ್ರೀ ಮಾ. ವೆಂ. 'ಇಂಗ್ಲಿಷ್ ಗೀತಗಳು', ವಿಮರ್ಶೆ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ. ಸಂ:12 ಸಂ:2. ಜುಲೈ 1828
35. ಶ್ರೀ ತೀ.ನಂ.ಶ್ರೀ 'ಕನ್ನಡದಲ್ಲಿ ಹೊಸಮಟ್ಟುಗಳಿಗಿರುವ ಅವಶ್ಯಕತೆ. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ. ಜನವರಿ 1931.
36. ಶ್ರೀ ತೀ.ನಂ.ಶ್ರೀ. ಇಂಗ್ಲೀಷ್ ಗೀತೆಗಳು, ಪ್ರಸ್ತಾವನೆ 32-33 ಶ್ರೀಯವರು ಸಾಧಿಸಿದ ಛಂದೋವೈವಿಧ್ಯಗಳನ್ನು ಕುರಿತು ಶ್ರೀ ತೀ.ನಂ.ಶ್ರೀಕಂಠಯ್ಯನವರು ಇಂಗ್ಲಿಷ್ ಗೀತಗಳ ಪ್ರಸ್ತಾವನೆಯಲ್ಲೂ 'ಸಂಭಾವನೆ' ಗ್ರಂಥದಲ್ಲಿನ 'ಹೊಸ ಛಂದಸ್ಸಿನ ಲಯಗಳು' ಎಂಬ ಲೇಖನದಲ್ಲಿಯೂ, ಶ್ರೀ ಬೇಂದ್ರೆಯವರು ಅಲ್ಲೇ ಇಂಗ್ಲಿಷ್ ಗೀತಗಳು ಎಂಬ ಲೇಖನದಲ್ಲಿಯೇ ಸವಿಸ್ತಾರವೂ ಸರ್ವವ್ಯಾಪಕವೂ ಆಗಿ ಪ್ರಸ್ತಾಪಿಸಿರುವುದರಿಂದ ಅದನ್ನು ಕುರಿತು ಮತ್ತೆ ಇಲ್ಲಿ ಹೇಳಹೊರಟಿಲ್ಲ.
37) ಬಿ.ಎಂ.ಶ್ರೀ., ಪ್ರೊ. ಎಮ್. ನಜೀರ್ ಅಹಮದ್ : ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ತುಮಕೂರು. 1997

## ಆ. ಬಸವಪ್ಪಶಾಸ್ತ್ರಿಗಳ "ಕರ್ನಾಟಕ ಶಾಕುಂತಲ ನಾಟಕ"

(ಸಂಸ್ಕೃತದಿಂದ ಕನ್ನಡಕ್ಕೆ ಬಂದ ನಾಟಕ)

ಬಸವಪ್ಪ ಶಾಸ್ತ್ರಿಗಳು (1843-91) ಕನ್ನಡ ಮತ್ತು ಸಂಸ್ಕೃತ ಎರಡೂ ಭಾಷೆಗಳಲ್ಲಿ ಪಾಂಡಿತ್ಯವಿದ್ದ ಪ್ರತಿಭಾಸ್ತರು. ಮೈಸೂರು ಅರಮನೆಯಲ್ಲಿ ವಿದ್ವಾಂಸರೂ, ರಾಜಪುರೋಹಿತರೂ ಆದ ಇವರು 1882ರಲ್ಲಿ ಸ್ಥಾಪಿತವಾದ ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ ಎಂಬ ಕಂಪನಿಗೆ ಹಲವು ನಾಟಕಗಳನ್ನು ಭಾಷಾಂತರಿಸಿಕೊಟ್ಟು ಕನ್ನಡ ರಂಗಭೂಮಿಗೆ ಅಮೂಲ್ಯ ಸೇವೆ ಸಲ್ಲಿಸಿದರು. ಅವರು ಕನ್ನಡಿಸಿದ ರತ್ನಾವಳಿ, ವಿಕ್ರಮೋರ್ವಶೀಯ, ಉತ್ತರರಾಮ ಚರಿತ ಮತ್ತು ಚಂಡಕೌಶಿಕ ನಾಟಕಗಳು ರಂಗದ ಮೇಲೆ ಪ್ರದರ್ಶನಗೊಂಡು ಜನರ ಮನ್ನಣೆ ಪಡೆದವು. ಇವರು ಸಂಸ್ಕೃತ ನಾಟಕಗಳನ್ನು ಮಾತ್ರವಲ್ಲದೆ ಇಂಗ್ಲಿಷ್‌ನಿಂದ ಶೇಕ್ಸ್‌ಪಿಯರ್‌ನ 'ಒಥೆಲೋ' ನಾಟಕವನ್ನು 'ಶೂರಸೇನ ಚರಿತ್ರೆ' ಎಂಬ ಹೆಸರಿನಲ್ಲಿ ಕನ್ನಡಿಸಿದ್ದಾರೆ.

ಬಸವಪ್ಪ ಶಾಸ್ತ್ರಿಗಳು ಒಟ್ಟು 28 ಕೃತಿಗಳನ್ನು ರಚಿಸಿದ್ದು ಅದರಲ್ಲಿ 11 ಭಾಷಾಂತರಗಳೂ (10 ಸಂಸ್ಕೃತ 1 ಇಂಗ್ಲಿಷ್), 17 ಸ್ವತಂತ್ರ ಕೃತಿಗಳು (5 ಕನ್ನಡ, 12 ಸಂಸ್ಕೃತ) ಸೇರಿವೆ. ಕಾಳಿದಾಸನ ಅಭಿಜ್ಞಾನ ಶಾಕುಂತಲ. ವಿಕ್ರಮೋರ್ವಶೀಯ. ಭವಭೂತಿಯ ಉತ್ತರರಾಮ ಚರಿತ್ರೆ, ಮಾಲತೀ ಮಾಧವ. ಶ್ರೀ ಹರ್ಷನ ರತ್ನಾವಳಿ. ಕ್ಷೇಮೀಶ್ವರನ ಚಂಡಕೌಶಿಕ, ಭರ್ತೃಹರಿಯ ನೀತಿಶತಕ, ಶೃಂಗಾರ ಶತಕ, ಬಾಣನ ಹರ್ಷಚರಿತ. ಶೇಕ್ಸ್‌ಪಿಯರ್‌ನ ಒಥೆಲೋ ನಾಟಕದ ಕನ್ನಡ ರೂಪ 'ಶೂರಸೇನ ಚರಿತ್ರೆ' -ಇವು ಅವರ ಭಾಷಾಂತರಗಳು. ಕೃಷ್ಣರಾಜಾಭ್ಯುದಯ. ಸಾವಿತ್ರಿ ಚರಿತ್ರೆ. ನೀತಿಸಾರ ಸಂಗ್ರಹ. ಶ್ರೀ ರೇಣುಕ ವಿಜಯ. ದಮಯಂತಿ ಸ್ವಯಂವರ - ಇವು ಅವರ ಸ್ವತಂತ್ರ ಕನ್ನಡ ಕೃತಿಗಳು. ಬಿಲ್ವವೃಕ್ಷ ಪೂಜಾವಿಧಿ, ಶಾಂಕರೀ ನಕ್ಷತ್ರಮಾಲಾ, ಬಸವೇಶಾಷ್ಟಕ. ಅಷ್ಟಮೂರ್ತಿ ತನಯಾಷ್ಟಕ. ದಕ್ಷಿಣಾಮೂರ್ತ್ಯಷ್ಟಕ. ಶಂಕರ ಶತಕ. ಶಿವಾಷ್ಟಕಮ್. ಶಿವಭಕ್ತಿ ಸುಧಾ ತರಂಗಿಣೀ, ತ್ರಿಷಷ್ಠಿ ಪುರಾತನಸ್ತವ. ಅಂಬಾಷೋಡಶ ಮಂಜರೀ. ಆರ್ಯಾಶತಕಮ್. ಶಾರದಾ ದಂಡೀಕಮ್ - ಇವು ಅವರ ಸ್ವತಂತ್ರ ಸಂಸ್ಕೃತ ಕೃತಿಗಳು.

ಶಾಸ್ತ್ರಿಗಳ ಭಾಷಾಂತರ ಕೃತಿಗಳಲ್ಲಿ ಕಾಳಿದಾಸನ 'ಅಭಿಜ್ಞಾನ ಶಾಕುಂತಲ'ದ ಕನ್ನಡ ರೂಪ "ಕರ್ನಾಟಕ ಶಾಕುಂತಲ ನಾಟಕ" ಅಮೂಲ್ಯವಾದುದು. ಇದರ ಭಾಷಾಂತರ ಅಚ್ಚುಕಟ್ಟಾಗಿದ್ದು ಕನ್ನಡ ಭಾಷಾಂತರ ಸಾಹಿತ್ಯದಲ್ಲಿ ಒಂದು ಉತ್ತಮ ಭಾಷಾಂತರವೆಂದು ಪಂಡಿತರಿಂದ ಪರಿಗಣಿತವಾಗಿದೆ. ಈ ಕೃತಿರತ್ನವನ್ನು ಮೆಚ್ಚಿ ಅಂದಿನ ಮೈಸೂರು ಸಂಸ್ಥಾನದ ವಿದ್ವಾಂಸರಾದ

ದಿವಾನ ರಂಗಾಚಾರ್ಯರು ಶಾಸ್ತ್ರಿಗಳಿಗೆ 'ಅಭಿನವಕಾಳಿದಾಸ'ವೆಂಬ ಬಿರುದು ನೀಡಿ ಸನ್ಮಾನಿಸಿದರು. 'ಕಾಯೌ ಶ್ರೀಗೌರಿ' ಎಂಬ ಹಳೆಯ ಮೈಸೂರಿನ ನಾಡಗೀತೆಯನ್ನು ರಚಿಸಿದ ಇವರು ಆಶುಕವಿಗಳೂ ಆಗಿದ್ದರು. ತುಂಬಾ ರಸಿಕ ಕವಿಗಳೆಂದು ಮೆಚ್ಚುಗೆಗೆ ಪಾತ್ರರಾದ ಇವರು ಸಂಗೀತ ಮತ್ತು ಗಮಕ ಕಲೆಗಳಲ್ಲೂ ಪಾಂಡಿತ್ಯ ಪಡೆದಿದ್ದರು.

1882ರಲ್ಲಿ ಮೈಸೂರಿನಲ್ಲಿ 'ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ' ಸಂಸ್ಥೆ ಪ್ರಾರಂಭವಾಗಿ ಕನ್ನಡದಲ್ಲಿ ನಾಟಕ ರಚನೆ ಮಾಡಬೇಕಾದಾಗ ಆಸ್ಥಾನ ವಿದ್ವಾಂಸರಾದ ಬಸವಪ್ಪ ಶಾಸ್ತ್ರಿಗಳಿಗೆ ಕಾಳಿದಾಸನ ಶಾಕುಂತಲವನ್ನು ಅನುವಾದಿಸಲು ಶ್ರೀ ಮನ್ಮಹಾರಾಜನು ಪ್ರೇರೇಪಿಸಿದಾಗ 'ನುತಗುಣರಾಯ ಚಾಮಕ್ಷಿತಿಪತಿ' ಸನ್ನಿಧಿ ಸಚಿವರಾದ 'ನೃಸಿಂಹಾರ್ರ್ಯೋತ್ಸಾಹಿತರಾಗಿ' ಶಾಸ್ತ್ರಿಗಳು ಶಾಕುಂತಲದ ಭಾಷಾಂತರಕ್ಕೆ ತೊಡಗಿದರು. ಭಾಷಾಂತರವೇ ಕಷ್ಟ. ಅದರಲ್ಲೂ ಕಾಳಿದಾಸನಂತಹ ಮಹಾನ್ ಕವಿಯ ಕೃತಿಯನ್ನು ಅನುವಾದಿಸುವುದು ಅಷ್ಟು ಸುಲಭ ಕ್ರಿಯೆಯಲ್ಲ. ಆದರೂ ಶಾಸ್ತ್ರಿಗಳು ಈ ಪರೀಕ್ಷೆಯಲ್ಲಿ ಜಯಗಳಿಸಿದರು. ಸ್ವತಃ ವಿದ್ವಾಂಸರಾದ ದಿವಾನ್ ರಂಗಾಚಾರ್ಲು ಇವರ ಕೃತಿಯನ್ನು ಮೆಚ್ಚಿದರು. ಅರಮನೆಯ ಸಭಾಂಗಣದಲ್ಲಿ ಸೇರಿದ್ದ ವಿದ್ವದ್‌ಗೋಷ್ಠಿಯಲ್ಲಿ ಆ ಕಾಲದ ಪ್ರತಿಷ್ಠಿತರು ಉಪಸ್ಥಿತರಿದ್ದರು - ತರ್ಕ ತೀರ್ಥಾಚಾರ್ಯ ಪಂಡಿತ ರತ್ನಂ ಕಸ್ತೂರಿ ರಂಗಾಚಾರ್ಯ, ಪಂಡಿತ ರತ್ನಂ ಸೀತಾರಾಮಶಾಸ್ತ್ರಿ, ಕುಂಭಕೋಣಂ ಶೇಷಾಚಾರ್ಯ, ಕಾಶಿರಾಮಶೇಷಶಾಸ್ತ್ರಿ ಚಾಮರಾಜನಗರದ ರಾಮಶಾಸ್ತ್ರಿ, ನಂಜನಗೂಡು ಸುಬ್ಬಾಶಾಸ್ತ್ರಿ, ಜಯಾಚಾರ್ಯ, ರಾಜಕಾರ್ಯ ಪ್ರಸಕ್ತ ರಾವ್ ಬಹಾದ್ದೂರ್ ಅಂಬಿಗಲ್ ನರಸಿಂಹಯ್ಯಗಾರ್ಯರು, ಸಿ. ಸುಬ್ಬರಾವ್. ಬಿ. ಎ. ರಾವ್‌ಬಹದ್ದೂರ್ ಎಂ. ಶಾಮರಾವ್, ಎಂ. ವೆಂಕಟಕೃಷ್ಣಯ್ಯ, ರಾವ್ ಬಹದ್ದೂರ್ ಎಲೆ ಮಲ್ಲಪ್ಪಶೆಟ್ಟಿ, ಯಜಮಾನ್ ವೀರಸಂಗಪ್ಪ, ನೀಲಗಿರಿ ಪಾಪಣ್ಣ, ವೀಣೆ ಶೇಷಣ್ಣ - ಮುಂತಾದ ವಿದ್ವನ್ ಮಣಿಗಳ ಮುಂದೆ ಶಾಸ್ತ್ರಿಗಳ 'ಶಾಕುಂತಲ ನಾಟಕ'ವನ್ನು ಓದಿಸಿ ಅವರೆಲ್ಲರೂ ಮೆಚ್ಚಿದ ನಂತರ ಶಾಸ್ತ್ರಿಗಳಿಗೆ 'ಅಭಿನವ ಕಾಳಿದಾಸ' ಬಿರುದನ್ನು ನೀಡಲಾಯಿತು.

ಶೃಂಗಾರಕ್ಕಾಗರಂ ತಾನೆನಿಸಿ ಮೆರವ ಶಾಕುಂತಳಾಭಿಖ್ಯ ಮಾದು
ತುಂಗಾಲಂಕಾರಮಂ ನಾಟಕಮನೆಲಸದುದ್ದಾಮ ಸಾಹಿತ್ಯ ಮುಂ ಮೇಣ್
ಸಂಗೀತ ಪ್ರೌಢಿಯಂ ಸಂಗಳಿಸೆ ರಚಿಸಿ ಕರ್ಣಾಟ ವಾಗ್ವಾಟಿಯಿಂದಾ
ರಂಗಾಚಾರ್ಯಾಖ್ಯ ಮಂತ್ರಿ ಪ್ರವರ ಸಭೆಯೊಳೊಲ್ದೋದಿದಂ ಜಾಣ್ಮೆಯಿಂದಿಂ
ಕರ್ಣಾನಂದಮದಾಗಲ್। ಕರ್ಣಾಟಕ ಕಾಳಿದಾಸನೆಂಬೀ ಬಿರುದಂ
ತೂರ್ಣದೀನಿತ್ತಂ ವಿದ್ವ। ತ್ಪೂರ್ಣ ಸಭಾ ಮಂಡಲಿಯೊಳಗಾ ಮಂತ್ರೀಶಂ

ಬಸವಪ್ಪ ಶಾಸ್ತ್ರಿಗಳು 'ಷಡಕ್ಷರಿಯ ಯುಗದಿಂದ ಶೇಕ್ಸ್‌ಪಿಯರ್‌ನನ್ನೋದಿರುವವರ ಯುಗಕ್ಕೆ ಸೇತುಪ್ರಾಯರಾಗಿರುವ ಕವಿಗಳಲ್ಲಿ ಅತ್ಯಂತ ಪ್ರಸಿದ್ಧರು''[1]. ಕನ್ನಡ ಸಾಹಿತ್ಯದ ನವೋದಯಕ್ಕೆ ಅಚಿರ ಪೂರ್ವದ ಉಷಃಕಾಲದಲ್ಲಿ ಅಥವಾ ಅರುಣೋದಯದ ಸಮಯದಲ್ಲಿ ಕನ್ನಡ ಸಾಹಿತ್ಯ ತನ್ನವರು ಜವ್ವನದ ವೈಭವದ ಔನ್ನತ್ಯದಿಂದ ಕ್ರಮೇಣ ಇಳಿಗಾಲಕ್ಕಿಳಿದು ಮರಣೋನ್ಮುಖವಾಗಿ ಎದುತ್ತಾ ಕೊನೆಯುಸಿರೆಳೆಯುತ್ತಿದೆಯೋ ಎಂಬಂತಿದ್ದ ದುರಂತ ಸಮಯದಲ್ಲಿ ಅದರ ಶ್ವಾಸಕೋಶಕ್ಕೆ

ಅಮ್ಲಜನಕೋಪಮ, ಅನಿಲವಸ್ತುವಿದಿ ಪ್ರಾಣ ರಕ್ಷಣೆ ಮಾಡಿದ ಅಲ್ಪ ಸಂಖ್ಯೆ ಓರಿಯ ವ್ಯಕ್ತಿಗಳಲ್ಲಿ ಶ್ರೀ ಶಾಸ್ತ್ರಿಗಳು ಒಬ್ಬ ಅಗ್ರಗೇಸರ ಪಾಂಡಿತ್ಯ ಮಾನ್ಯ ಸಾಹಿತಿಗಳಾಗಿದ್ದರು.''[2]

ಬಸವಪ್ಪ ಶಾಸ್ತ್ರಿಗಳ ಭಾಷಾಂತರ ಶಕ್ತಿ 'ಶಾಕುಂತಲ'ದಲ್ಲಿ ಅದ್ಭುತವಾಗಿ ಮೂಡಿ ಬಂದಿದ್ದು ಅದರ ಬಗ್ಗೆ ಅವರು ತಮ್ಮ ಭರ್ತೃಹರಿಯ ನೀತಿಶತಕ ಕನ್ನಡ ಭಾಷಾಂತರದ ಪ್ರಸ್ತಾವನಾ ಪದ್ಯದಲ್ಲಿ ಹೇಳಿದ್ದಾರೆ. ಇದರಲ್ಲಿ ಶಾಸ್ತ್ರಿಗಳು ತಮ್ಮ ಪ್ರತಿಜ್ಞೆ ಹಾಗೂ ಇತರ ಕವಿಗಳಿಗೆ ಎಚ್ಚರಿಕೆ ನೀಡಿದ್ದಾರೆ.

ಮುನ್ನಿನ ಸಂಸ್ಕೃತ ಕೃತಿಗಿದು ಕನ್ನಡಿಯನೆ ಕನ್ನಡಿಪ್ಪುದುಚಿತಂ ಕವಿಗಳ್
ಎನ್ನರಿವುಳ್ಳನಿತಂದಾಂ ಕನ್ನಡಿಸಿರ್ಪೆಂ ಗುಣಜ್ಞರಭಿಮತಿ ಪುದಿದಂ

ಬಸವಪ್ಪ ಶಾಸ್ತ್ರಿಗಳ ವಿದ್ವತ್ತು, ಭಾಷಾಂತರ ಶಕ್ತಿ, ಪ್ರತಿಭೆಯನ್ನು ಶ್ರೀ ಚಾಮರಾಜ ಒಡೆಯರು, ದಿವಾನ್ ರಂಗಾಚಾರ್ಲು, ವಿದ್ವತ್ಸಭೆ, ಸಮಕಾಲೀನ ವಿದ್ವಾಂಸರು, ಅವರ ಶಿಷ್ಯರು, ಇತ್ತೀಚಿನ ವಿದ್ವಾಂಸರು, ಸಾಹಿತ್ಯ ಚರಿತ್ರಕಾರರು, ವಿಮರ್ಶಕರು ಎಲ್ಲರೂ ಹೊಗಳಿದ್ದು ಅತಿಶಯೋಕ್ತಿಯಲ್ಲ. ಅವರ ಭಾಷಾಂತರದಲ್ಲಿ ಅಂತಹ ಸೊಗಸು ಮತ್ತು ಛಂಧೋಗಾಂಭೀರ್ಯವಿದೆ. ಅರ್ಥವೂ ಅಷ್ಟೇ ಸಮರ್ಥವಾಗಿ ಕನ್ನಡದಲ್ಲಿ ಮೂಡಿ ಬಂದಿದೆ. ಮೂಲದಲ್ಲಿದ್ದುದನ್ನು ಸ್ವಲ್ಪವೂ ಮರೆಯಬಾರದು. ಅನಪೇಕ್ಷಿತವಾದುದನ್ನು ಹೇಳಬಾರದು ಎನ್ನುವ ಭಾಷಾಂತರದ ವ್ಯಾಖ್ಯೆಗೆ ಶಾಸ್ತ್ರಿಗಳ 'ಶಾಕುಂತಲ' ನಾಟಕ ಚೆನ್ನಾಗಿ ಹೊಂದಿಕೊಳ್ಳುತ್ತದೆ.

ಶಾಸ್ತ್ರಿಗಳು ಭಾಷಾಂತರಿಸುವಾಗ ಒಂದು ಪದ್ಯದ ಭಾವವನ್ನು ಹೇಳಬೇಕಾದರೆ ಬೇರೆ ಬೇರೆ ಪದ್ಯಗಳಲ್ಲಿ ಭಟ್ಟಿ ಇಳಿಸಿ, ನೋಡಿ ತಮಗೆ ಯಾವುದು ಸರಿ ಎನಿಸುತ್ತದೋ ಅದನ್ನು ಕೊನೆಗೆ ಇಡುತ್ತಿದ್ದರು. ಬೇರೆಯವರನ್ನು ತೃಪ್ತಿಪಡಿಸುವ ಸಲುವಾಗಿ ಬರೆಯುವ ಜಾಯಮಾನ ಅವರದಲ್ಲ. ಅವರ ಭಾಷಾಂತರ ವೈಖರಿಯೇ ಬೇರೆ. ಆಯಾ ರಸ ಸನ್ನಿವೇಶಕ್ಕೆ ತಕ್ಕಂತೆ ಮೂಲದ ಛಂದಸ್ಸು ಅಥವಾ ಅದಕ್ಕೆ ಸಮೀಪವಾದ ಛಂದಸ್ಸನ್ನು ಉಪಯೋಗಿಸುತ್ತಿದ್ದರು. ಭಾಷಾಂತರದಲ್ಲೂ ಅಷ್ಟೆ. ಅದರ ಶಬ್ದ ಸೌಷ್ಟವ, ಶೈಲಿ ಹಾಗೆಯೇ ಮೈತಳೆಯುವಂತೆ ಮೂಡಿಸುವ ಶಕ್ತಿ ಅವರದು. ಮೂಲದ ಭಾಷೆ, ಭಾವ, ರೀತಿ ರಸಗಳೊಂದಿಗೆ ಅದು ಭಾಷಾಂತರವೆಂದು ಗೊತ್ತಾಗದ ಮಟ್ಟಿಗೆ ಸರಳವಾಗಿ, ಲಲಿತವಾಗಿ ಭಾಷಾಂತರಿಸುವ ಕೈಚಳಕ ಶಾಸ್ತ್ರಿಗಳಿಗೆ ಸಿದ್ಧಿಸಿತ್ತು.

ಬಸವಪ್ಪ ಶಾಸ್ತ್ರಿಗಳು ಗಮಕಿಗಳಾಗಿ, ರಸಿಕರಾಗಿ, ಭಾವುಕರಾಗಿ, ಕನ್ನಡದ ಸೇವೆ ಮಾಡಿದರು. ಉಭಯ ಭಾಷಾ ಪರಿಣಿತರಾದ ಅವರ ವಿದ್ವತ್ ಶಕ್ತಿ, ಪ್ರತಿಭೆ, ಪಾಂಡಿತ್ಯ, ಅನುವಾದ ಶಕ್ತಿ, ಪ್ರಾಚೀನ ಕೃತಿಗಳ ಸತತಾನುಶೀಲನ ತಪಸ್ಸು ಉಲ್ಲೇಖನೀಯ. ಆದ್ದರಿಂದ ಈ ಕೆಳಕಂಡ ಮಾತುಗಳು ಹೆಚ್ಚು ಸೂಕ್ತವಾಗಿವೆ-

ರಸಕವಿತ್ವದೊಳಸಮನೆನಿಸುವ ಜಸವು ಪಸರಿಸುತಿರಲು ಜಗದೊಳು
ಮಸಣದೊಡೆಯನ ಸೇರ್ದನಾ ಬಸವಪ್ಪ ಶಾಸ್ತ್ರಿ
ಅದರೇನು
ನವಕಾಳಿದಾಸನೆಂಬಾ ಕವಿ ಸಭೆಯೊಳ್ ಪೆಸರಾಂತ ಜಸಮುಜ್ವಳಿಸಲ್

ಶಿವನ ಮಹಾ ಪಾದ ಸರೋಜವ ಸೇರ್ದು ಬಸವಶಾಸ್ತ್ರಿ ಜೀವಿಪನಲ್ಲೇ
ಜಯಂತಿ ತೇಸುಕೃತಿನೋ ರಸಸಿದ್ಧಾ; ಕವೀಶ್ವರಾ ;
ನಾಸ್ತಿ ಯೇಷಾಂ ಯಶಃ ಕಾಯೋ ಜರಾಮರನಿಜ ಭಯಂ

ಅಭಿನವ ಕಾಳಿದಾಸ ಬಿರುದಾಂಕಿತ ಬಸವಪ್ಪ ಶಾಸ್ತ್ರಿಗಳು ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ನಾಟಕವನ್ನು 1883ರಲ್ಲಿ ಕನ್ನಡಕ್ಕೆ ತಂದರು. ಸರಳವಾಗಿ ರಚಿತವಾದ ಈ ಕೃತಿಯಲ್ಲಿ ಸಂಸ್ಕೃತ ಪದಗಳ ವ್ಯಾಮೋಹ ಕಾಣದ ಜಾನಪದ ಸೆಲೆಯನ್ನು ನಾವು ಗುರುತಿಸಬಹುದಾಗಿದೆ. ಇವರ ಅನುವಾದ ಕಾಳಿದಾಸನ ಕೃತಿಯ ಶಕ್ತಿ ಸೌಂದರ್ಯಗಳನ್ನು ಸೆರೆಹಿಡಿದಿದೆ. ಉತ್ತಮ ಅನುವಾದಕರಾದ ಅವರ ಕವಿತಾ ಶಕ್ತಿ ಪದ್ಯರಚನಾ ಶಕ್ತಿ ಅಮೋಘವಾದುದು. ಇವರ ಕೃತಿಯಲ್ಲಿ ಕಂದ ಮತ್ತು ವೃತ್ತಗಳಿದ್ದು ಇವುಗಳಿಗೆ ಸಂವಾದಿಯಾದ ಹಾಡುಗಳನ್ನು ರಂಗಪ್ರಯೋಗಕ್ಕಾಗಿ ಸೇರಿಸಿದ್ದಾರೆ. ಮೂಲ ಕೃತಿಯ ಗೇಯತೆ, ಧ್ವನಿ, ಶಕ್ತಿ, ಓಜಸ್ಸು, ತೇಜಸ್ಸುಗಳನ್ನು ಅನುವಾದದಲ್ಲೂ ನಾವು ಕಾಣಬಹುದು. ಸಾಹಿತ್ಯಿಕವಾಗಿ ಗಂಭೀರವಾದ ಭಾವನೆಗಳನ್ನು ಕನ್ನಡಿಸುವಾಗ ಕೆಲವೆಡೆ ಕೃತಕತೆ ಕಾಣುತ್ತದೆ. ಸಂಸ್ಕೃತದಲ್ಲಿ ಗೌರವ ಸೂಚಿಸಲು ಉಪಯೋಗಿಸುವ ಕರ್ಮಣಿ ಪ್ರಯೋಗ ಕನ್ನಡದಲ್ಲಿ 'ಅನುಗ್ರಹಿಸಲ್ಪಟ್ಟೆನು'' ಎಂದಾಗ ಕೃತಕತೆ ತೋರುತ್ತದೆ. ಈ ರೀತಿ ಪರೋಕ್ಷವಾಗಿ ಹೇಳುವುದು ಸಂಸ್ಕೃತ ಮತ್ತು ಇಂಗ್ಲಿಷಿನಲ್ಲಿ ಬಳಕೆಯಲ್ಲಿದೆ. ಕನ್ನಡದಲ್ಲಿಲ್ಲ. ಆದರೂ ಇವರ ಭಾಷಾಂತರದಲ್ಲಿ ಸ್ವಂತಿಕೆ ಇದೆ. ಕಾವ್ಯಕ್ಕೆ ಬೇಕಾದ ವಸ್ತುವನ್ನು ಇವರು ಸಂಸ್ಕೃತದಿಂದ ಪಡೆದಿದ್ದರೂ ಅದಕ್ಕೆ ತಮ್ಮದೇ ಆದ ಶೈಲಿಯನ್ನು ಬಳಸಿ ಉಸಿರು ತುಂಬಿದ್ದಾರೆ. ತಮ್ಮ ಸ್ವಂತ ಪ್ರತಿಭೆ, ಸ್ವೋಪಜ್ಞತೆ, ಜೀವನಾನುಭವ, ದರ್ಶನಗಳನ್ನು ಈ ಭಾಷಾಂತರ ಕೃತಿಯಲ್ಲಿ ತಂದಿದ್ದಾರೆ. ಇದರಿಂದಾಗಿ ಪರಿಮಿತ ಸ್ಥೂಲಾರ್ಥದಲ್ಲಿ ಇದು ಅನುವಾದವೆಂದು ಕರೆಯಬಹುದೇ ವಿನಾ ನಿರ್ದಿಷ್ಟವಾದ ಅರ್ಥದಲ್ಲಿ ಸ್ವತಂತ್ರ ಕೃತಿಯ ಎಲ್ಲಾ ಲಕ್ಷಣಗಳನ್ನು ಹೊಂದಿದೆ. ಕನ್ನಡಿಗರ ಬದುಕಿನಲ್ಲಿರುವ ತನ್ನತನವನ್ನು ಸಂಸ್ಕೃತದಿಂದ ಬಂದ ಈ ಭಾಷಾಂತರದಲ್ಲೂ ನಾವು ಕಾಣಬಹುದು. ಈ ಕೃತಿಯಲ್ಲಿ ಆರ್ಯ ದ್ರಾವಿಡ ಸಂಸ್ಕೃತಿಗಳ ಸಂಗಮದಿಂದ ರೂಪಿತವಾದ ಒಂದು ವಿಶಿಷ್ಟ ಸಂಸ್ಕೃತಿಯ ಹುಟ್ಟನ್ನು ನೋಡುತ್ತೇವೆ.

ಶಾಸ್ತ್ರಿಗಳ ಅನುವಾದದ ಮುಖ್ಯ ಉದ್ದೇಶ ಕಾಳಿದಾಸನ ಕೃತಿಯ ಶಕ್ತಿ ಸೌಂದರ್ಯವನ್ನು ಸೆರೆಹಿಡಿಯುವುದು. ಈ ಅನುವಾದದಿಂದಾಗಿ ಕನ್ನಡ ರಂಗಭೂಮಿ ಮೈಸೂರು ಅರಮನೆಯಲ್ಲಿ ಹುಟ್ಟಿತು. ಅಲ್ಲದೆ ಮುಂದೆ ಅನೇಕ ಸಂಸ್ಕೃತ ಹಾಗೂ ಇಂಗ್ಲಿಷ್ ನಾಟಕಗಳ ಅನುವಾವಕ್ಕೆ ಇದು ನಾಂದಿಯಾಯಿತು. ಈ ನಾಟಕದಲ್ಲಿ ಜಾನಪದದ ಸೆಲೆ ಇರುವುದನ್ನು ನಾವು ಗಮನಿಸಬಹುದು. ಮೂಲದ ಭಾವನೆಗಳನ್ನು ಹಾಗೆಯೇ ಉಳಿಸಿಕೊಂಡು ಅದಕ್ಕೆ ಕನ್ನಡ-ತನವನ್ನು ನೀಡಿದ್ದಾರೆ ಶಾಸ್ತ್ರಿಗಳು. ಇವರ ಕೃತಿಯಲ್ಲಿ ಕಂದ ಮತ್ತು ವೃತ್ತಗಳಿದ್ದು ಇವುಗಳಿಗೆ ಸಂವಾದಿಯಾದ ಹಾಡುಗಳನ್ನು ರಂಗಪ್ರಯೋಗಕ್ಕಾಗಿ ರಚಿಸಿದ್ದಾರೆ.

ಕಾಳಿದಾಸನ 'ಅಭಿಜ್ಞಾನ ಶಾಕುಂತಲ'ವನ್ನು ಬಸವಪ್ಪ ಶಾಸ್ತ್ರಿಗಳು 1883ರಲ್ಲಿ 'ಕರ್ನಾಟಕ ಶಾಕುಂತಲ ನಾಟಕ'ವೆಂಬುದಾಗಿಯೂ, 1992ರಲ್ಲಿ ಬಿ. ಕೃಷ್ಣಪ್ಪನವರು 'ಅಭಿಜ್ಞಾನ ಶಾಕುಂತಲ ನಾಟಕ'ವೆಂಬುವುದಾಗಿಯೂ, 1926ರಲ್ಲಿ ಬೆಳ್ಳಾವೆ ನರಸಿಂಹ ಶಾಸ್ತ್ರಿಗಳು 'ಕರ್ನಾಟಕ ಶಾಕುಂತಲ ನಾಟಕ'ವೆಂಬುದಾಗಿಯೂ, 1934ರಲ್ಲಿ ಚುರಮುರಿ ಶೇಷಗಿರಿರಾಯರು 'ಕರ್ನಾಟಕ ಶಾಕುಂತಲ ನಾಟಕ'ವೆಂಬುದಾಗಿಯೂ ಕನ್ನಡಕ್ಕೆ ಭಾಷಾಂತರಿಸಿದ್ದಾರೆ.

ಶಾಸ್ತ್ರಿಗಳ ಶಾಕುಂತಲ ಅವರ ಕೃತಿ ರತ್ನಮಾಲೆಯೊಳಗಿನ ರಾಜರತ್ನದಂತಿದೆ. ಶ್ರೀ ಮುಗಳಿಯವರು "ಬಸವಪ್ಪ ಶಾಸ್ತ್ರಿ ಮೇಲಾದ ಅನುವಾದಕಾರ .... 'ಅಭಿನವ ಕಾಳಿದಾಸ'ವೆಂಬ ಬಿರುದು ಕಾಳಿದಾಸನ ಅನುವಾದಕಾರ ಎಂಬುದರಲ್ಲಿ ಇದ್ದರ ಮಾತ್ರ ಯಥೋಚಿತನಾದುದು"[3] ಎಂಬ ಮಾತು ಗಮನಿಸುವಂತಹದು. ಕನ್ನಡ ಮತ್ತು ಸಂಸ್ಕೃತಗಳೆರಡರಲ್ಲೂ ಉದ್ದಾಮ ಪಂಡಿತರಾದ ಶಾಸ್ತ್ರಿಗಳ ಶಾಕುಂತಲವು ಇತರರು ಕನ್ನಡಕ್ಕೆ ತಂದ ಶಾಕುಂತಲಕ್ಕಿಂತ ಬಹಳ ಎತ್ತರದಲ್ಲಿದ್ದು ಇಂತಹ ಕೃತಿ ಇನ್ನೂ ಕನ್ನಡದಲ್ಲಿ ಬಂದಿಲ್ಲವೆಂದು ಹೇಳಬಹುದು.

ಕಾಳಿದಾಸನ ಶಾಕುಂತಲ ನಾಟಕವನ್ನು ಅನೇಕ ಲೇಖಕರು ಭಾಷಾಂತರ ಮಾಡಿದ್ದಾರೆ. ಅದರಲ್ಲಿ ಮೊದಲಿಗರು ಮುಮ್ಮಡಿ ಕೃಷ್ಣರಾಜ ಒಡೆಯರು. ಗದ್ಯಶೈಲಿಯಲ್ಲಿರುವ ಅವರ ಅನುವಾದದ ಹೆಸರು "ಶಾಕುಂತಲ ನಾಟಕದ ನವೀನ ಟೀಕೆ". ಶೇಷೋ ರಾಮಚಂದ್ರ ಚುರಮುರಿರವರು 1869-70 ರಲ್ಲಿ ಅನುವಾದಿಸಿದ್ದು ಅವರ ನಾಟಕದ ಹೆಸರು 'ಕನ್ನಡ ಶಾಕುಂತಲ ನಾಟಕ'. 1922ರಲ್ಲಿ ಬಿ. ಕೃಷ್ಣಪ್ಪನವರೂ, 1926ರಲ್ಲಿ ಬೆಳ್ಳಾವೆ ನರಹರಿ ಶಾಸ್ತ್ರಿಗಳೂ, ಇತ್ತೀಚಿನ ದಿನಗಳಲ್ಲಿ ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳು, ಮಲ್ಲಿಕಾರ್ಜುನ ಶಿವಶಂಕರಪ್ಪ ರೈನಾಪುರ, ಎಸ್. ವಿ. ಪರಮೇಶ್ವರ ಭಟ್ಟ ಮುಂತಾದವರು ಶಾಕುಂತಲದ ಭಾಷಾಂತರ ಮಾಡಿದ್ದಾರೆ. ಆದರೆ ಇವು ಯಾವುವೂ ಬಸವಪ್ಪ ಶಾಸ್ತ್ರಿಗಳ ಶಾಕುಂತಲದ ಮಟ್ಟ ಮುಟ್ಟಿಲ್ಲ.

ಬಸವಪ್ಪ ಶಾಸ್ತ್ರಿಗಳ ಉದ್ದಾಮ ಪಾಂಡಿತ್ಯ, ಕವಿತಾ ಶಕ್ತಿ, ಕಲಾಶಕ್ತಿ, ಅನುಕರಣಾತೀತ ಶೈಲಿ ಇವು ಶಾಕುಂತಲ'ದಲ್ಲಿ ಪ್ರತಿಬಿಂಬಿತವಾಗಿವೆ. ಕಾಳಿದಾಸನಲ್ಲಿದ್ದ ಅದ್ಭುತ ಸಾಹಿತ್ಯ ಪ್ರತಿಭೆಯನ್ನು ಶಾಸ್ತ್ರಿಗಳಲ್ಲೂ ನಾವು ಕಾಣಬಹುದು. "ಅದ್ದರಿಂದ ಮಹಾಕವಿಯೊಬ್ಬನ ಅಂತರಂಗವನ್ನು ಹೊಕ್ಕು ಅದರ ಆಳ ಔಚಿತ್ಯಗಳನ್ನು ಪರರಿಗೆ ದರ್ಶನ ಮಾಡಿಸುವ ಕಾರ್ಯದಲ್ಲಿ ಬಹು ಮಟ್ಟಿಗೆ ಕೃತಕೃತ್ಯರಾಗಿದ್ದಾರೆ. ಕಾಳಿದಾಸನ ಕಲಾಶಕ್ತಿ ಶಾಕುಂತಲ ನಾಟಕದಲ್ಲಿ ಪರಿಣತಿಗೊಂಡಿದ್ದರೆ ಬಸವಪ್ಪ ಶಾಸ್ತ್ರಿಗಳ ಭಾಷಾಂತರ ಕಲೆ ಕನ್ನಡ ಶಾಕುಂತಲ ನಾಟಕದಲ್ಲಿ ಪರಿಣತಿಗೊಂಡಿದೆ."[4]

ಬಿ. ಕೃಷ್ಣಪ್ಪನವರ ಕೃತಿ ಹೊಸಗನ್ನಡ ಗದ್ಯ ರೂಪದಲ್ಲಿದೆ. "ಅದ್ದರಿಂದ ಮೂಲದ ಸೂಕ್ಷ್ಮ ಭಾವಗಳೂ. ಛಂದಸ್ಸಿನಿಂದ ಬರಬಹುದಾದ ಒಂದು ಭಾವೌನ್ನತ್ಯ ಅಥವಾ ಧ್ವನಿಶಕ್ತಿಗಳು ಇವರ ಗದ್ಯಾನುವಾದದಲ್ಲಿ ಕಂಡುಬರುವುದಿಲ್ಲ. ಬೆಳ್ಳಾವೆ ನರಸಿಂಹ ಶಾಸ್ತ್ರಿಗಳು ಮಾಡಿರುವುದು ಭಾಷಾಂತರವಲ್ಲ, ರೂಪಾಂತರ. ಮೂಲದ ಶ್ಲೋಕಗಳೂ. ವೃತ್ತಗಳೂ ಹಾಡುಗಳಾಗಿ ಕುಳಿತಿವೆ. (ನರಹರಿ ಶಾಸ್ತ್ರಿಗಳ ಉದ್ದೇಶ ಅದು ಪಂಡಿತೇತರರಿಗೂ ರಂಜಕವಾಗಿರಲೆಂದು) ಅದ್ದರಿಂದ ಮೂಲದ ಬಂಧುರತೆಯಾಗಲೀ ಪದ ಲಾಲಿತ್ಯ ಪ್ರೌಢಿಮೆಯಾಗಲೀ ಇದರಲ್ಲಿ ಇಲ್ಲ."[5] ಚುರಮುರಿಯವರು ಸಾಹಿತ್ಯದ ವಿದ್ಯಾರ್ಥಿಯಲ್ಲ. ಇಂಜಿನಿಯರಿಂಗ್ ವಿದ್ಯಾರ್ಥಿ. ಅದ್ದರಿಂದ ಅವರ ಭಾಷಾಂತರ ಅಷ್ಟು ಉತ್ತಮವಾಗಿ ಬರಲಿಲ್ಲ. ಅದರೂ ಅವರ ಭಾಷಾಂತರದ ಬಗ್ಗೆ ಶ್ರೀ ಮುದವೀಡು ಕೃಷ್ಣರಾಯರು ಹೊಗಳಿದ್ದನ್ನು ತ.ಸು. ಶಾಮರಾಯರು ತಿಳಿಸಿದ್ದಾರೆ. "ಚುರಮುರಿಯವರ ಗ್ರಂಥ ಲೋಕೋತ್ತರವಾದುದೆಂದೂ ಬಸಪ್ಪನವರ ಗ್ರಂಥಕ್ಕಿಂತಲೂ ಶ್ರೇಷ್ಠವಾದುದೆಂದೂ ಶ್ರೀ ಮುದವೀಡು ಕೃಷ್ಣರಾಯರು ಅದರ ಮುನ್ನುಡಿಯಲ್ಲಿ ಹೇಳಿರುವವರಾದರೂ, ಅದು ಅರ್ಥವಿಲ್ಲದ

ಪ್ರಾಂತಾಭಿಮಾನವೆನ್ನಬೇಕು. ಮೊದಲು ಯಾರಾದರೂ ಭಾಷಾಂತರಿಸಲಿ. ಎಲ್ಲಿಯ ಬಸವಪ್ಪ ಶಾಸ್ತ್ರಿಗಳು ಎಲ್ಲಿಯ ಚುರುಮುರಿ? ಅಜಗಜಾಂತರ ಅಷ್ಟೆ.''[6]

''ಶಾಕುಂತಲವು ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯಗಳಂತೆಯೇ ಒಬ್ಬ ರಾಜನ ಪ್ರಣಯ ಕಥೆಯನ್ನೊಳಗೊಂಡಿದ್ದರೂ ಸಂವಿಧಾನ ಚಾತುರ್ಯ, ಸನ್ನಿವೇಶ ರಚನೆ, ಪಾತ್ರ ಸ್ವರೂಪ, ರಸನಿರೂಪಣಾಧಿಗಳಲ್ಲಿ ಅವುಗಳಿಗಿಂತ ಭಿನ್ನವಾಗಿ ಕಾಳಿದಾಸನ ಕೌಶಲ ಪರಿಪಾಕವನ್ನು ವ್ಯಕ್ತಗೊಳಿಸುವ ಶ್ಲಾಘನೀಯ ನಾಟಕವಾಗಿದೆ. ಭಾರತೀಯ ಕೃತಿಯಾದರೂ ಅದರ ವಿಶ್ವಸಾಮಾನ್ಯ ಗುಣಗಳಿಂದ ಪ್ರಪಂಚವನ್ನೇ ಮೆಚ್ಚಿಸಬಲ್ಲ ಸುಂದರಕಾವ್ಯವಾಗಿದ. ಆದ್ದರಿಂದಲೇ ಇದು ಪಾಶ್ಚಾತ್ಯರಿಂದ ಮೊದಲು ಎಂದರೆ 1789ರಲ್ಲಿ ಸರ್ ವಿಲಿಯಂ ಜೋನ್ಸ್ ಅವರ ಭಾಷಾಂತರದಿಂದ ಪರಿಚಯವಾಗಿ ಮೆಚ್ಚುಗೆ ಪಡೆಯಿತು. ಅವರು ಅದರ ಮೂಲಕ ಸಂಸ್ಕೃತ ವಾಙ್ಮಯವನ್ನೇ ವ್ಯಾಸಂಗ ಮಾಡುವಂತಾಯಿತು. ಬಸವಪ್ಪ ಶಾಸ್ತ್ರಿಗಳಿಂದಾಗಿ ಇದು ಕನ್ನಡಿಗರಿಗೆ ಪರಿಚಯವಾಗುವಂತಾಯಿತು.

ಬಸವಪ್ಪ ಶಾಸ್ತ್ರಿಗಳ 'ಕರ್ನಾಟಕ ಶಾಕುಂತಲ ನಾಟಕ'ದಲ್ಲಿ 7 ಅಂಕಗಳಿವೆ. ಮೊದಲನೆಯ ಅಂಕದಲ್ಲಿ ಹಸ್ತಿನಾಪುರ ರಾಜನಾದ ದುಷ್ಯಂತ ಬೇಟೆಯಾಡಲು ಕಾಡಿಗೆ ಹೋಗುತ್ತಾನೆ. ಅಲ್ಲಿ ಸಂಯೋಗ ವಶದಿಂದ ಮಹರ್ಷಿ ಕಣ್ವರ ಆಶ್ರಮಯದಲ್ಲಿ ಶಕುಂತಲೆಯನ್ನು ನೋಡುತ್ತಾನೆ. ಅವಳ ಜನದ ಕಥೆಯನ್ನು ಕೇಳಿ ಅವನ ಹೃದಯದಲ್ಲಿ ಶಕುಂತಲೆಯ ವಿಷಯದಲ್ಲಿ ಅನುರಾಗವುಂಟಾಗುತ್ತದೆ. ಎರಡನೆಯ ಅಂಕದಲ್ಲಿ ಋಷಿಗಳ ಪ್ರಾರ್ಥನೆಯ ಮೇಲೆ ಆಶ್ರಮವನ್ನು ರಕ್ಷಿಸುವುದಕ್ಕಾಗಿ ಅವನು ಅಲ್ಲಿಯೇ ಇರುತ್ತಾನೆ. ಮೂರನೆಯ ಅಂಕದಲ್ಲಿ ರಾಜ ಮತ್ತು ಶಕುಂತಲೆಯ ಸಮಾಗಮ. ನಾಲ್ಕನೆಯ ಅಂಕದಲ್ಲಿ ಕಣ್ವರು ತೀರ್ಥಯಾತ್ರೆಯಿಂದ ಹಿಂದಿರುಗಿ ಬಂದು ಶಕುಂತಲೆ ಗರ್ಭವತಿ ಎಂಬುದನ್ನು ತಿಳಿದು ಗೌತಮಿ, ಶಾಙ್ಗರವ ಮತ್ತು ಶಾರದ್ವತರೊಡನೆ ಅವಳನ್ನು ಹಸ್ತಿನಾಪುರಕ್ಕೆ ಕಳುಹಿಸುತ್ತಾರೆ. ಶಕುಂತಲೆಯು ಆಶ್ರಮದಿಂದ ಹೊರಡುವ ದೃಶ್ಯವು ಬಹು ಕರುಣಾಜನಕವಾಗಿದೆ. ಐದನೆಯ ಅಂಕದಲ್ಲಿ ಶಕುಂತಲೆಯು ಹಸ್ತಿನಾಪುರವನ್ನು ತಲುಪುತ್ತಾಳೆ. ಆದರೆ ದೂರ್ವಾಸ ಋಷಿಯ ಶಾಪದ ಕಾರಣ ರಾಜ ಅವಳನ್ನು ಗುರುತಿಸುವುದಿಲ್ಲ. ಈ ಪ್ರಸಂಗದ ನಂತರ ಋಷಿ ಕುಮಾರರು ಹಿಂದಿರುಗಿದ ಮೇಲೆ, ಶಕುಂತಲೆಯನ್ನು ಒಂದು ದಿವ್ಯ ಜ್ಯೋತಿಯು ಆಕಾಶಕ್ಕೆ ತೆಗೆದುಕೊಂಡು ಹೋಗುತ್ತದೆ. ಅಲ್ಲಿ ಮಾರೀಚರ ಆಶ್ರಮದಲ್ಲಿ ತನ್ನ ತಾಯಿಯಾದ ಮೇನಕೆಯ ಜೊತೆಯಲ್ಲಿ ವಾಸಿಸುತ್ತಾಳೆ. ಆರನೆಯ ಅಂಕದಲ್ಲಿ, ಮೀನು ಹಿಡಿಯುವವರಿಂದ ರಾಜನಿಗೆ ಮುದ್ರೆ ಉಂಗುರವು ಲಭಿಸುತ್ತದೆ. ಅದನ್ನು ನೋಡಿದ ಕೂಡಲೇ ರಾಜನಿಗೆ ಶಕುಂತಲೆಯ ಸ್ಮೃತಿಯುಂಟಾಗುತ್ತದೆ. ಅವನು ತನ್ನ ಪ್ರಿಯತಮೆಯನ್ನು ತ್ಯಜಿಸಿದುದರಿಂದ ಬಹಳ ವ್ಯಾಕುಲಗೊಳ್ಳುತ್ತಾನೆ. ಅವನು ಅಂತ್ಯದಲ್ಲಿ ಇಂದ್ರನಿಗೆ ಸಹಾಯ ಮಾಡಲು ಸ್ವರ್ಗಕ್ಕೆ ಹೋಗುತ್ತಾನೆ. ಏಳನೆಯ ಅಂಕದಲ್ಲಿ ದುಷ್ಯಂತನು ವಿಜಯಿಯಾಗಿ ಸ್ವರ್ಗದಿಂದ ಹಿಂದಿರುಗಿ ಬರುತ್ತಲಿರುವಾಗ ಮಾರೀಚರ ಆಶ್ರಮದಲ್ಲಿ ತನ್ನ ಪತ್ನಿ ಮತ್ತು ಪುತ್ರರನ್ನು ನೋಡುತ್ತಾನೆ. ಈ ಪುನರ್ಮಿಲನ ಮತ್ತು ಮಾರೀಚರ ಆರ್ಶೀವಾದದಿಂದ ನಾಟಕವು ಮುಕ್ತಾಯವಾಗುತ್ತದೆ.

ಇಂತಹ ಸುಂದರ ಕಥಾವಸ್ತುವನ್ನು ಕಾಳಿದಾಸನಷ್ಟೇ ಸಮರ್ಥವಾಗಿ ಶಾಸ್ತ್ರಿಗಳು ಕನ್ನಡೀಕರಿಸಿದ್ದಾರೆ. ಇದಕ್ಕೆ ಒಂದು ಉದಾಹರಣೆಗೆ ದುಷ್ಯಂತ ಮಹಾಹಾಜ ಜಿಂಕೆಯನ್ನು ಬೆನ್ನಟ್ಟಿಕೊಂಡು ಹೋಗುವಾಗ ಅದರ ವೇಗವನ್ನು ತನ್ನ ಸಾರಥಿಗೆ ವರ್ಣಿಸುವ ರೀತಿ-

ಗ್ರೀವಾಭಂಗಾಭಿರಾಮಂ ಮುಹುರಮುಪತತಿ ಸ್ಯಂದನೇ ದತ್ತ ದೃಷ್ಟಿ।
ಪಶ್ಚಾದೇವಸ ಪ್ರಬಿಷ್ಟ ಶತಪತನ ಭಯಾದ್ಭುಮಸಾ ಪೂರ್ವಕಾಯಂ
ದರ್ಭೈರರ್ಧಾವಲೀ ಢೈಃ ಶ್ರಮ ವಿಸ್ಮೃತ ಮುಖಿಭ್ರಂಶಿಬೀಕೀರ್ಣವಸ್ಮಾ
ಪಶ್ಯೊದಗ್ರ ಪ್ಲುತತ್ವಾದ್ವಿಯಂತಿ ಬಹುತರಂ ಸೋಕ್ತ ಮುರ್ವಾಂ ಪ್ರಯಾತಿ॥ (ಕಾಳಿದಾಸ)

ಕೊರಲಂ ತಾಂ ಕೊಂಕುಗೈಯುತ್ತಡಿಗಡಿಗೊಡನೈತರ್ಪ ತೇರಲ್ಲರಾಂಪ
ಟ್ಟಿರೆ ನೋಟಂ ಬಾಣಪತಕ್ಕಿರದಿರು ಕಿಸುತಂ ಪೃಷ್ಠಮಂ ಮಾರ್ಗದೊಳ್।
ವಿರೆ ನೀಡುಂ ಬಿಟ್ಟ ಬಾಯಿಂ ಶ್ರಮದುದಿರ್ವರೆ ಮೆಲ್ದಿರ್ದ ಧರ್ಬಾಂಕುರಂಗಳ್
ಧರೆಯಲ್ಲೋರ್ದೊರ್ಮೆ ಕಾಲಿಟ್ಟಹಹ ನಿರುಕಿಸೆ ಬಾನೋಳೇ ಪಾರಿಪೋಕುಂ॥ (ಬಸವಪ್ಪಶಾಸ್ತ್ರಿ)

ದುಷ್ಯಂತನನ್ನು ಕಂಡು ಹೆದರಿದ ಜಿಂಕೆ ನಾಗಾಲೋಟದಲ್ಲಿ ಓಡುತ್ತದೆ. ಹಾಗೆ ಓಡುವಾಗ ಕೇವಲ ಒಮ್ಮೆ ಮಾತ್ರ ಧರೆಯಲ್ಲಿ ಕಾಲಿಟ್ಟು ನಂತರ ಆಕಾಶದಲ್ಲೇ ಹಾರಿಹೋಗುತ್ತದೆ (ಧರೆಯಲ್ಲೊರ್ದೊರ್ಮೆ ಕಾಲಿಟ್ಟು ನಿರುಕಿಸೆ ಬಾನೋಳೇ ಪಾರಿಪೋಕುಂ) ಇದು ಕಾಳಿದಾಸನ ಹಾಗೂ ಶಾಸ್ತ್ರಿಗಳ ಪ್ರತಿಭೆಗೂ ಅನ್ವಯಿಸುತ್ತದೆ. ಅದು ಅಲ್ಲಿ ಇಲ್ಲಿ ಮಾತ್ರ ಭೂಮಿಯನ್ನು ಮುಟ್ಟಿ (ಸ್ತೋಕಮುರ್ವಾಂ) ಉಳಿದಂತೆ ಆಗಸದಲ್ಲಿ ಹಾರಾಡುತ್ತಿರುತ್ತದೆ. "ಈ ಚಿತ್ರವನ್ನು ಮನೋಭಿತ್ತಿಯ ಮೇಲೆ ಮೂಡಿಸಿಕೊಂಡಾಗ ಆತನ ಸ್ವರ್ಗೀಯ ಪ್ರತಿಭಾ ವಿಲಾಸದ ಅರಿವು ಪರಿಭಾವಿತಲಾಸ್ಯದ ಅರಿವು ಪರಿಭಾವಿಸುವವರಿಗೆ ಆಗದಿರದು. ಮೂಲದ ಬಂಧುರ ಛಂದಸ್ಸನ್ನು ಭಾಷಾಂತರದಲ್ಲಿ ದೀರ್ಘಛಂದಸ್ಸೊಂದರ ಪ್ರಯೋಗ ಮಾಡಿ ಮೂಲದ ಅರ್ಥವನ್ನು ಶಾಸ್ತ್ರಿಗಳು ನಿಜವಾಗಿಯೂ ಕನ್ನಡಿಯೆನಿಸಿ 'ಕನ್ನಡಿ'ಸಿದ್ದಾರೆ. 'ಅಭಿರಾಮಂ' ಮತ್ತು 'ಉದಗ್ರಪ್ಲುತ ತ್ವಾತ್' ಎಂಬ ಎರಡು ಶಬ್ದಗಳ ಭಾವವನ್ನು ಸಹ ಕೊಂಕುಗೈಯುತ್ತ ಮತ್ತು ಪರಿಪೋಕುಂ ಎಂಬಲ್ಲಿ ಸೆರೆಹಿಡಿದಿದ್ದಾರೆನ್ನಬಹುದು. ಅವುಗಳ ವಾಚ್ಯಾರ್ಥ ಮಾತ್ರ ಕನ್ನಡದಲ್ಲಿ ಬಂದಿಲ್ಲ."[7]

ಶಾಕುಂತಲ ನಾಟಕದಲ್ಲಿ ಶಾಸ್ತ್ರಿಗಳು ಕಾಳಿದಾಸನ ಭಾಷೆ, ಭಾವ, ರೀತಿ, ರಸಗಳೊಂದಿಗೆ ಅಮೋಘವಾಗಿ ಕನ್ನಡಿಸಿದ್ದಾರೆ. ಭಾಷಾಂತರ ಕಲೆಯಲ್ಲಿ ಅವರ ಕೈ ಪಳಗಿದ್ದು ಮೂಲಕ್ಕೂ ಭಾಷಾಂತರಕ್ಕೂ ವ್ಯತ್ಯಾಸವೇ ಗೊತ್ತಾಗದೇ ಇರುವಂತೆ ಸ್ವತಂತ್ರ ಕೃತಿಯ ರೂಪದಲ್ಲಿ ಸರಳ ಲಲಿತ ಶೈಲಿಯಲ್ಲಿ ಅವರ ಲೇಖನಿ ಹರಿದಿದೆ. ಕಾಳಿದಾಸನಿಗೆ ಕಾಳಿಮಾತೆ ಒಲಿದಿದ್ದರೆ ಶಾಸ್ತ್ರಿಗಳಿಗೆ ಶಾರದೆ ಸಂಪೂರ್ಣವಾಗಿ ಒಲಿದಿದ್ದಳು.

ಕಾಳಿದಾಸನಿಗಿದ್ದ ಸಾಂಸಾರಿಕ ಅನುಭವ ಮತ್ತು ಲೋಕ ವ್ಯವಹಾರಗಳಲ್ಲಿದ್ದ ಪ್ರಾವೀಣ್ಯತೆಯು ಅವನ ನಾಟಕಗಳಿಂದ ಗೊತ್ತಾಗುತ್ತದೆ. ಇವುಗಳಲ್ಲಿ ಮಾನವ ಹೃದಯದಲ್ಲಿ ವಿಭಿನ್ನ ಪರಿಸ್ಥಿತಿಯಲ್ಲಿ ಉದಯಿಸುವ ವೃತ್ತಿಗಳನ್ನು ಲೋಕ ವ್ಯವಹಾರದ ಜೊತೆಯಲ್ಲಿ ಪರಿಪೂರ್ಣವಾದ ಸಾಮಂಜಸ್ಯ ಹೊಂದುವಂತೆ ಚಿತ್ರಿಸಿರುತ್ತಾನೆ. ಪ್ರೇಮ ಮೂಲಕವಾದ ಆಖ್ಯಾನಗಳು ಕಥಾವಸ್ತುವಾಗಿದ್ದು, ಇವುಗಳ ನಾನಾ ಅವಸ್ಥೆಯನ್ನು ಮನೋವೈಜ್ಞಾನಿಕ ರೂಪದಿಂದ ಚಿತ್ರಿಸಿದ್ದಾನೆ.

ಶಾಕುಂತಲಳಲ್ಲಿ ತಪಸ್ಸು ಮತ್ತು ಸಾಧನೆಯ ದ್ವಾರಾ ವಿರಹಾಗ್ನಿಯಿಂದ ವಿಶುದ್ಧವಾದ ಕಾಮವು ಪ್ರೇಮದಲ್ಲಿ ಪರಿಗಣಿತವಾಗುವ ಸುಂದರವಾದ ಚಿತ್ರವು ಪ್ರಸ್ತುತವಾಗಿದೆ. ಬಸವಪ್ಪ ಶಾಸ್ತ್ರಿಗಳು ಕನ್ನಡದಲ್ಲಿ ಇದನ್ನು ಸುಂದರವಾಗಿ ಪ್ರತಿಬಿಂಬಿಸಿದ್ದಾರೆ.

ಭಾಸೋ ಹಾಸಃ ಕವಿಕುಲಗುರುಃ ಕಾಳಿದಾಸೋ ವಿಲಾಸಃ।
ಕಾವ್ಯೇಷು ನಾಟಕಂ ರಮ್ಯ ನಾಟಕೇಷು ಶಕುಂತಲಾ।

ಎಂಬ ಮಾತಿನಂತೆ ಕಾಳಿದಾಸನ ಶಾಕುಂತಲ ಸಂಸ್ಕೃತ ನಾಟಕ ಸಾಹಿತ್ಯದಲ್ಲೇ ಶ್ರೇಷ್ಠವಾದುದು. ಆದುದರಿಂದ ಬಸವಪ್ಪ ಶಾಸ್ತ್ರಿಗಳ ಅನುವಾದವೂ ಅಷ್ಟೇ ಶ್ರೇಷ್ಠವಾಗಿದೆ. ಮಹಾಭಾರತದ ಆದಿಪರ್ವದಲ್ಲಿ ಬರುವ ಶಕುಂತಲಾ ಮತ್ತು ದುಷ್ಯಂತರ ನೀರಸ, ಅರೋಚಕ ಹಾಗೂ ಆದರ್ಶ ವಿಹೀನವಾದ ಕಥೆಯನ್ನು ಕಾಳಿದಾಸ ಅನೇಕ ಬದಲಾವಣೆಗಳನ್ನು ಮಾಡಿ ಅತ್ಯಂತ ಸುಂದರ ರೂಪವನ್ನು ನೀಡಿ ಭಾರತೀಯ ಸಂಸ್ಕೃತಿಯ ಅನುರೂಪವಾದ ಆದರ್ಶವನ್ನು, ಸೌಂದರ್ಯ, ಪ್ರೇಮ, ಸ್ವಾರ್ಥ, ಪರಮಾರ್ಥ, ಲೋಕ ಪರಲೋಕಗಳ ಅನುಪಮವಾದ ಸಾಮಂಜಸ್ಯವನ್ನು ಪ್ರಸ್ತುತಗೊಳಿಸುತ್ತಾನೆ. ಬಸವಪ್ಪ ಶಾಸ್ತ್ರಿಗಳೂ ಈ ಭಾವನೆಗಳನ್ನು ಕನ್ನಡದಲ್ಲಿ ಸಮರ್ಥವಾಗಿ ಮೂಡಿಸಿದ್ದಾರೆ. ಮೂಲ ಕೃತಿಯಲ್ಲಿರುವಂತೆ ಅನುವಾದಿತ ಕೃತಿಯಲ್ಲೂ ಬಸವಪ್ಪ ಶಾಸ್ತ್ರಿಗಳು ಶಾಕುಂತಲೆಯನ್ನು ಜೀವನ ಶಕ್ತಿಯಿಂದ ಸಂಪನ್ನವಾದ ಜೀವಂತ ಜಗತ್ತಿನ ವ್ಯಕ್ತಿಯನ್ನಾಗಿ ಮೂಡಿಸಿದ್ದಾರೆ. ಶಾಕುಂತಲೆ ಪ್ರಕೃತಿಯ ಕನ್ಯೆ, ಆಶ್ರಮದ ನಿಸರ್ಗ ಬಾಲಿಕೆ ಮತ್ತು ಅವಳ ಜೀವನವನ್ನು ಬಾಹ್ಯ ಪ್ರಕೃತಿಯು ಕೋಮಲ ಮತ್ತು ಸ್ನಿಗ್ಧವನ್ನಾಗಿ ಮಾಡಿದೆ. ಜೊತೆಗೆ ಅವಳ ಸ್ವಾಭಿಮಾನ ಮತ್ತು ಉದಾತ್ತ ಮನೋಭಾವಗಳೂ ಚಿತ್ರಿತವಾಗಿದೆ. ಹಾಗೆಯೇ ಪುರುಷ ಪಾತ್ರ ಚಿತ್ರಣ ಕೂಡ ಅಷ್ಟೇ ಸ್ವಾಭಾವಿಕವಾಗಿ, ಭಾವಪೂರ್ಣವಾಗಿ ಮೂಡಿದೆ.

**ಪರಿವರ್ತನೆಗಳು** : ನಾಟಕದ ವಸ್ತುವಿನ್ಯಾಸ ಮತ್ತು ಚಾರಿತ್ರ್ಯ ಚಿತ್ರಣದಲ್ಲಿ ಅನೇಕ ಬದಲಾವಣೆಗಳನ್ನು ಕಾಳಿದಾಸ ಮಾಡಿದ್ದು, ಅವು ಭಾಷಾಂತರಿಕ ಕೃತಿಯಲ್ಲೂ ಪ್ರತಿಬಿಂಬಿತವಾಗಿದೆ. ಶಾಕುಂತಲೆಯ ಶೀಲವನ್ನು ರಕ್ಷಿಸುವುದಕ್ಕಾಗಿ ಭವಿಷ್ಯದ ಚಿಂತೆಯನ್ನು ಮಾಡಿ ಶಕುಂತಲೆಯನ್ನು ಚಿಂತಾರಹಿತಳನ್ನಾಗಿ ಮಾಡುವ ಅನುಸೂಯ ಮತ್ತು ಪ್ರಿಯಂವದೆಯರಂತಹ ಸಖಿಯರನ್ನು ಸೃಷ್ಟಿಸಿದ್ದಾನೆ. ದುಷ್ಯಂತನ ಆದರ್ಶ ಚಾರಿತ್ರ್ಯದ ಸಿದ್ಧಿಗಾಗಿ ದೂರ್ವಾಸ ಶಾಪದ ಪ್ರಸಂಗವನ್ನು ಕಲ್ಪನೆ ಮಾಡಿರುತ್ತಾನೆ. ದುಷ್ಯಂತನು ಶಕುಂತಲೆಯೊಡನೆ ಆದ ಗಾಂಧರ್ವ ವಿವಾಹವನ್ನು ಸ್ವಇಚ್ಛೆಯಿಂದ ಮರೆಯದೇ ಋಷಿ ಶಾಪದಿಂದ ಮರೆತಿರುತ್ತಾನೆ. ಐದನೆಯ ಅಂಕದಿಂದ ಏಳನೆಯ ಅಂಕದವರೆಗಿನ ಶಕುಂತಲೆಯ ಪ್ರತ್ಯಾಖ್ಯಾನ, ತಪಶ್ಚರ್ಯೆ ಮತ್ತು ಪುನರ್ಮಿಲನ, ಇವೆಲ್ಲವೂ ಕವಿಯ ಉನ್ನತ ಪ್ರತಿಭೆಯ ಅನುಪಮ ಸೃಷ್ಟಿಗಳು. ಕಥಾನಕವು ಕಾಮ ಮತ್ತು ಧರ್ಮ ವಾಸನಾ ಮತ್ತು ಕರ್ತವ್ಯ ಈ ಎರಡೂ ಮಾನಸಿಕ ಪ್ರವೃತ್ತಿಗಳ ತುಮುಲ ಸಂಘರ್ಷದ ಮೇಲೆ ಆಧಾರಿತವಾಗಿದೆ. ನಾಟಕದ ಪ್ರಾರಂಭದ ಮೂರು ಅಂಕಗಳಲ್ಲಿ ಕಾಮದ ಅಧಿಕಾರ ಮತ್ತು ಉತ್ತರಾರ್ಧದಲ್ಲಿ ಧರ್ಮದ ಅಧಿಕಾರ ಹಾಗೂ ವಿಷಯ ವಾಸನೆಯ ವಶದಲ್ಲಿನ ರಾಜನ ಅಧಃಪತನ, ಕರ್ತವ್ಯ ಸ್ಮರಣೆ ಮತ್ತು ಪಾಲನೆಯಿಂದ ಅವನ ಅಭ್ಯುತ್ಥಾನ ಪ್ರತಿಬಿಂಬಿತವಾಗಿವೆ ನಾಟಕವು ಸಮಗ್ರವಾಗಿ ''ಧರ್ಮ ವಿರುದ್ಧ ಕಾಮೋಸ್ಮಿ'' ಎಂಬುದರ ಸಾಹಿತ್ಯಿಕ ದೃಷ್ಟಾಂತವಾಗಿದೆ.

**ನಾಟಕದ ವೈಶಿಷ್ಟ್ಯ:** ಈ ನಾಟಕವು ನಾಟಕ ಕಲೆಯ ನಿದರ್ಶನವಾಗಿದ್ದು ಆಧ್ಯಾತ್ಮಿಕ ರಹಸ್ಯಗಳನ್ನು ಸೂಚಿಸುತ್ತದೆ. ದೂರ್ವಾಸ ಋಷಿಯು ಅರಣ್ಯವಾಸದ, ತಪಶ್ಚರ್ಯೆಯ ಪ್ರತೀಕವಾಗಿದ್ದರೆ. ದುಷ್ಯಂತನು ವಿಲಾಸಜೀವನದ ಪ್ರತೀಕವಾಗಿದ್ದಾನೆ. ನಾಲ್ಕನೆಯ ಅಂಕದಲ್ಲಿ ಪ್ರಕೃತಿ ಪ್ರೇಮ ಮತ್ತು ಪ್ರಕೃತಿದೇವಿಯ ದರ್ಶನವಿದೆ. ಮೊದಲನೆಯ ಅಂಕದಲ್ಲಿ ತಪೋವನದ ವರ್ಣನೆ ಇದೆ. ಶಕುಂತಲೆಯ ಚಾರಿತ್ರ್ಯದ ಮೇಲೆ ಈ ತಪೋವನದ ಪ್ರಭಾವ ಎದ್ದು ಕಾಣುತ್ತದೆ. ತಪಸ್ಸಿನಿಂದಾಗಿ ಕಾಮ ನಾಶವಾಗಿ ಪ್ರೇಮ ಹುಟ್ಟಿಕೊಳ್ಳುತ್ತದೆ. ಶಕುಂತಲೆ ಮತ್ತು ದುಷ್ಯಂತನ ಪ್ರಾರಂಭಿಕ ಪ್ರೇಮ ಕಾಮದ ವಾಸನೆಯಿಂದ ಕೂಡಿದ್ದರೆ, ಮಾರೀಚನ ಆಶ್ರಮದಲ್ಲಿ ತಪಸ್ಸಿನಿಂದ ಪರಿಪಕ್ವವಾದ ಶಕುಂತಲೆಯ ಪ್ರೇಮ ಹಾಗೂ ಪಶ್ಚಾತ್ತಾಪ ಹಾಗೂ ವಿಯೋಗದ ನೋವಿನಿಂದ ತಪ್ತನಾದ ದುಷ್ಯಂತನ ಪ್ರೇಮ ಕಾಮದ ವಾಸನೆಯಿಂದ ರಹಿತವಾದುದು.

ಮಹಾಭಾರತದಲ್ಲಿ ಚಿತ್ರಿತವಾದ ನಿರ್ಜೀವವಾದ ದುಷ್ಯಂತನ ಪಾತ್ರ ಚಿತ್ರಣ, ಈ ನಾಟಕದಲ್ಲಿ ಪ್ರಜಾವತ್ಸಲ, ಧೀರೋದಾತ್ತ, ಉದಾತ್ತ ಚಾರಿತ್ರ್ಯದ ನಾಯಕನಾಗಿದ್ದಾನೆ. ರೂಕ್ಷ ಪ್ರಾಯಳಾದ ಶಕುಂತಲೆಯ ಪರಮ ಸ್ನಿಗ್ಧರೂಪವನ್ನು ಧರಿಸಿ ನಮ್ಮ ಮುಂದೆ ನರ್ತಿಸುತ್ತಾಳೆ. ಆರು ಮತ್ತು ಏಳನೆಯ ಅಂಕದಲ್ಲಿ ದುಷ್ಯಂತ ತನ್ನ ಸಾಧನೆಯಿಂದಾಗಿ ಈ ಪಾರ್ಥಿವ ಜಗತ್ತಿನಿಂದ ದಿವ್ಯಲೋಕಕ್ಕೆ ಹೋಗುತ್ತಾನೆ. ಕಾಮ ಧರ್ಮ, ಸ್ವಾರ್ಥ ಪರಮಾರ್ಥಗಳು ಮಿಳಿತವಾಗಿ ದುಷ್ಯಂತನ ಆದರ್ಶ ರೂಪ ನಮ್ಮ ಮುಂದೆ ನಿಲ್ಲುತ್ತದೆ.

ಯೇನ ಯೇನ ವಿಯುಜ್ಯಂತೇ ಪ್ರಜಾಃ ಸ್ನಿಗ್ಧೇನ ಬಂಧು ನಾ।
ಸ ಸ ಪಾಪಾದೃತೇ ತಾಸಾಂ ದುಷ್ಯಂತ ಇತಿ ಘುಷ್ಯತಾಂ॥

ಕವಿವರ ರವೀಂದ್ರರು ಶೇಕ್ಸ್‌ಪಿಯರನ ಟೆಂಪೆಸ್ಟ್ ಮತ್ತು ಶಾಕುಂತಲಗಳನ್ನು ಈ ರೀತಿ ತುಲನೆ ಮಾಡಿದ್ದಾರೆ. "ಟೆಂಪೆಸ್ಟಿನಲ್ಲಿ ಶಕ್ತಿ ಇದೆ. ಆದರೆ ಶಾಕುಂತಲದಲ್ಲೂ ಶಕ್ತಿ ಇದೆ. ಟೆಂಪೆಸ್ಟಿನಲ್ಲಿ ಬಲದ ದ್ವಾರಾ ಜಯವುಂಟಾಗುತ್ತದೆ.ಆದರ ಶಾಕುಂತಲದಲ್ಲಿ ಮಂಗಲದ ದ್ವಾರಾ ಸಿದ್ಧಿ. ಟೆಂಪೆಸ್ಟಿನಲ್ಲಿ ಅರ್ಧಮಾರ್ಗದಲ್ಲಿಯೇ ವಿರಾಮವಿದ್ದರೆ, ಶಾಕುಂತಲವು ಸಂಪೂರ್ಣವಾಗಿ ಕೊನೆಗೊಂಡಿದೆ. ಟೆಂಪೆಸ್ಟಿನಲ್ಲಿ ನಾಯಕಿ ಸರಳವಾದ ಮಾಧುರ್ಯದಲ್ಲಿ ಪರಿಪೂರ್ಣಳಾಗಿದ್ದಾಳೆ. ಆದರೆ ಈ ಸರಳತೆಯು ಅಜ್ಞತೆ ಅಥವಾ ಅನಭಿಜ್ಞತೆಯನ್ನು ಅವಲಂಬಿಸಿರುತ್ತದೆ. ಶಕುಂತಲೆಯ ಸರಳತೆಯು ಅಪರಾಧ, ದುಃಖ, ಅಭಿಜ್ಞತೆ, ಧೈರ್ಯ ಮತ್ತು ಕ್ಷಮಾಗುಣದಿಂದ ಪರಿಪಕ್ವವಾಗಿ ಗಂಭೀರವಾಗಿಯೂ ಮತ್ತು ಸ್ಥಾಯಿಯಾಗಿಯೂ ಇದೆ. ಗಯಟೆಯ ಸಮಾಲೋಚನೆಯನ್ನು ಅನುಸರಿಸಿ, ಶಕುಂತಲೆಯ ತರುಣ ಸೌಂದರ್ಯವು ಮಂಗಲಮಯವಾದ ಪರಿಣಾಮದಿಂದ ಸಫಲತೆಯನ್ನು ಹೊಂದಿ ಮರ್ತ್ಯವನ್ನು ಸ್ವರ್ಗದೊಡನೆ ಸಂಮಿಳಿತಗೊಳಿಸಿದೆ ಎಂದು ನಾನು ಪುನಃ ಘೋಷಿಸುತ್ತೇನೆ." (ಪ್ರಾಚೀನ ಸಾಹಿತ್ಯ)

**ಸೌಂದರ್ಯ ವರ್ಣನೆ :** ಶಾಕುಂತಲದಲ್ಲಿ ಶೃಂಗಾರ ಮತ್ತು ಪ್ರೇಮ ಬಹಳ ಚೆನ್ನಾಗಿ ವರ್ಣಿತವಾಗಿದೆ. ಕೋಮಲ ಭಾವನೆಗಳ, ಪ್ರಕೃತಿಯ ಬಾಹ್ಯ ಮತ್ತು ಆಂತರಿಕ ಸೌಂದರ್ಯಗಳ ಸಾಮರಸ್ಯವನ್ನು ನಾವು ಶಾಕುಂತಲದಲ್ಲಿ ಕಾಣಬಹುದು. ಕವಿ ಶಕುಂತಲೆಯನ್ನು ಒಂದು ಕೋಮಲ ಲತೆಗೆ ಹೋಲಿಸಿದ್ದಾನೆ. ಅವಳ ಅಧರವು ಹೊಸದಾದ ಪಲ್ಲವದ ರಾಗದಂತೆಯೂ,

ತೋಳುಗಳು ಕೋಮಲವಾದ ಶಾಖೆಗಳಂತೆಯೂ, ಯೌವನವು ಅರಳಿದ ಹೂವಿನಂತೆ ಸಮಸ್ತ ಅಂಗಗಳಲ್ಲಿಯೂ ಪ್ರಸರಿಸಿದೆ ಎಂದು ವರ್ಣಿಸಿದ್ದಾನೆ:

ಅಧರಃ ಕಿಸಲಯರಾಗಃ ಕೋಮಲವಿಟಪಾನುಕಾರಿಣಾ ಬಾಹೂ।
ಕುಸುಮವಿವ ಲೋಭನೀಯಂ ಯೌವನಮಂಗೇಷು ಸಾನದ್ಧಮ್

**ರಸಸಿದ್ಧಿ :-** ಶಾಕುಂತಲದಲ್ಲಿ ಶೃಂಗಾರ ಮತ್ತು ಕರುಣ ರಸಗಳ ಅಪೂರ್ವವಾದ ಸಮ್ಮಿಲನವನ್ನು ನಾವು ಕಾಣಬಹುದು. ನಾಲ್ಕನೆಯ ಅಂಕದಲ್ಲಿ ಶಕುಂತಲೆಯನ್ನು ಪತಿಗೃಹಕ್ಕೆ ಕಳುಹಿಸುವ ಸಂದರ್ಭದಲ್ಲಿ ಸಂಸಾರವನ್ನು ಪರಿತ್ಯಜಿಸಿರುವ ಕಣ್ವರೂ ಈ ರೀತಿಯಾಗಿ ಪರಿತಪಿಸುತ್ತಾರೆ. ''ಇಂದು ಶಕುಂತಲೆಯು ಪತಿಗೃಹಕ್ಕೆ ತೆರಳಲಿದ್ದಾಳೆ. ಈ ಉತ್ಕಠೆಯಿಂದ ನನ್ನ ಹೃದಯವು ದುಃಖಗೊಂಡಿದೆ. ಕಣ್ಣೀರನ್ನು ತಡೆಯುವುದರ ನಿಮಿತ್ತದಿಂದ ಕಂಠವು ದಗ್ಧಿತವಾಗುತ್ತಿದೆ. ಚಿಂತೆಯಿಂದ ದೃಷ್ಟಿಯು ಮಂದವಾಗುತ್ತದೆ. ನಾನಾದರೋ ಅರಣ್ಯವಾಸಿ. ಸಂಸಾರಿಯಾಗದಿದ್ದರೂ ಸಹ ಪ್ರೀತಿಯ ನಿಮಿತ್ತದಿಂದ ನನಗೆ ಈ ವಿಹ್ವಲ ದೆಸೆಯುಂಟಾದರೆ ತಮ್ಮ ಮಗಳನ್ನು ಮೊಟ್ಟಮೊದಲು ಗಂಡನ ಮನೆಗೆ ಕಳುಹಿಸುವ ಸಮಯದಲ್ಲಿ ಗೃಹಸ್ಥರಿಗೆ ಇನ್ನೆಷ್ಟು ದುಃಖವಾಗಬಹುದು.'' ಅಲ್ಲದೆ ಈ ನಾಟಕದಲ್ಲಿ ಪ್ರಕೃತಿ ಮತ್ತು ಮಾನವ ಒಂದು ಪ್ರೇಮಬಂಧನದಲ್ಲಿ ಸಿಕ್ಕಿರುವುದು ನಮಗೆ ಗೋಚರಿಸುತ್ತದೆ. ಶಕುಂತಲೆಯನ್ನು ಅಲಂಕರಿಸಲು ಪತ್ರಪುಷ್ಪಗಳ ಆಭರಣವನ್ನು ಪ್ರಕೃತಿ ನೀಡುತ್ತದೆ. ಜಿಂಕೆಮರಿ ಶಕುಂತಲೆ ಆಶ್ರಮದಿಂದ ಹೋಗಲು ಬಿಡುವುದಿಲ್ಲ. ಮರಗಳು ಎಲೆಯನ್ನು ಉದುರಿಸುವುದರ ಮೂಲಕ ಕಣ್ಣೀರು ಸುರಿಸುತ್ತವೆ. ಮಹರ್ಷಿ ಕಣ್ವರು ಶಕುಂತಲೆಯನ್ನು ಕಳುಹಿಸಿಕೊಡಲು ಪ್ರಕೃತಿಯ ಅಪ್ಪಣೆ ಕೇಳುತ್ತಾರೆ. ''ಎಲೈ ವೃಕ್ಷಗಳೇ, ನಿಮಗೆ ಮೊದಲು ನೀರನ್ನು ಕುಡಿಸಿದ ಹೊರತು ಶಕುಂತಲೆಯು ತಾನು ನೀರನ್ನು ಕುಡಿಯುತ್ತಿರಲಿಲ್ಲ. ಅಲಂಕರಿಸಿಕೊಳ್ಳಲು ಆಸೆ ಇದ್ದರೂ ಸಹ, ಪ್ರೀತಿಯ ದೆಸೆಯಿಂದ ನಿಮ್ಮ ಪಲ್ಲವಗಳನ್ನು ಕೀಳುತ್ತಿರಲಿಲ್ಲ. ಮೊಟ್ಟಮೊದಲು ಹೂಗಳು ಅರಳಿದಾಗ ದೊಡ್ಡ ಉತ್ಸವವನ್ನು ನಡೆಸುತ್ತಿದ್ದಳು. ಅಂತಹ ಶಕುಂಲೆಯು ಇಂದು ಪತಿಗೃಹಕ್ಕೆ ತೆರಳಲಿದ್ದಾಳೆ. ನೀವೆಲ್ಲರೂ ಅವಳಿಗೆ ಅನುಮತಿಯನ್ನು ನೀಡಿರಿ.' ಶಕುಂತಲೆಯು ಹೊರಡುವ ಸಮಯದಲ್ಲಿ ತಪೋವನವು ಈ ರೀತಿಯಾಗಿ ದುಃಖವನ್ನು ಅನುಭವಿಸುತ್ತದೆ. ಶಕುಂತಲೆಯ ವಿಯೋಗದ ದುಃಖದಿಂದ ಹೆಣ್ಣು ಜಿಂಕೆಗಳು ಹುಲ್ಲನ್ನು ತಮ್ಮ ಬಾಯಿಂದ ಬೀಳಿಸುತ್ತವೆ. ಸರ್ವದಾ ಆನಂದದಿಂದ ನರ್ತಿಸುತ್ತಿದ್ದ ಮಯೂರವು ತನ್ನ ನರ್ತನ ನಿಲ್ಲಿಸಿದೆ. ಹಣ್ಣಾದ ಎಲೆಗಳನ್ನು ಉದುರಿಸುವ ಮೂಲಕ ಲತೆಗಳು ಕಣ್ಣೀರಿಡುತ್ತಿವೆ. ಕಣ್ವರ ಕಂಠ ಗದ್ಗದವಾಗಿರುವುದು. ಅನುಸೂಯ, ಪ್ರಿಯಂವದೆಯರು ವಿಹ್ವಲರಾಗಿರುವುದು ಸಹಜ. ಆದರೆ ಪ್ರಕೃತಿಯ ಅಂತಃಕರಣದ ಕರುಣದೆಸೆಯನ್ನು ಅಭಿವ್ಯಕ್ತಗೊಳಿಸಿರುವುದು ಕವಿಯ ಶ್ರೇಷ್ಠತೆಯ ಕುರುಹು.

**ಪ್ರಕೃತಿಯ ವರ್ಣನೆ :** ಪ್ರಕೃತಿಯ ಸೂಕ್ಷ್ಮ ರಹಸ್ಯಗಳನ್ನು ಕವಿ ಶಾಕುಂತಲದಲ್ಲಿ ಸಾವಧಾನದಿಂದ ಹೃದಯಂಗಮವಾಗಿ ಚಿತ್ರಿಸಿದ್ದಾನೆ. ಪ್ರಕೃತಿಯ ವರ್ಣನೆ ನಮ್ಮ ಮುಂದೆ ಸಜೀವವಾಗಿ ನರ್ತಿಸುತ್ತದೆ. ಬಾಹ್ಯ ಪ್ರಕೃತಿಯ ಸೂಕ್ಷ್ಮವನ್ನು ವಿವರಿಸಿ ಅವುಗಳ ಮರ್ಮವನ್ನು ಗ್ರಹಿಸುವುದು ಕವಿಯ ಮಹತ್ತರವಾದ ವೈಶಿಷ್ಟ್ಯ. ಪ್ರಕೃತಿಯ ಮಂಜುಳವಾದ ಸಂಪರ್ಕ, ಅದ್ಭುತವಾದ ಏಕರಸತೆಯ ಪ್ರದರ್ಶನ, ಅದರ ಸ್ಫುರಿಸುವ ಹೃದಯ ಕವಿಯ ವರ್ಣನೆಯಲ್ಲಿ ಕಾಣಸಿಗುತ್ತವೆ. ಕವಿಯ ಪ್ರಕೃತಿ ವರ್ಣನೆ

ಅಲಂಕೃತವಾಗಿದ್ದು, ಸೂಕ್ಷ್ಮ, ಸುಂದರ ಮತ್ತು ಸಂಶ್ಲಿಷ್ಟವಾಗಿರುತ್ತದೆ. ಕವಿಯು ಮಾನವನ ಸೂಕ್ಷ್ಮ ಭಾವ ಮತ್ತು ಯಥಾರ್ಥತೆಯನ್ನು ಅಭಿವ್ಯಕ್ತಗೊಳಿಸುವುದರಲ್ಲಿ ಪ್ರಕೃತಿಯನ್ನು ಆಶ್ರಯಿಸುತ್ತಾನೆ. ಅವನ ದೃಷ್ಟಿ ಪ್ರಕೃತಿಯ ಸೌಮ್ಯರೂಪ. ಮಾಧುರ್ಯಮಯ ಪ್ರವೃತ್ತಿ ಮತ್ತು ಸ್ನಿಗ್ಧ ಸೌಂದರ್ಯದ ಮೇಲೆ ಹರಿದಾಡುತ್ತದೆ ಮತ್ತು ಉಗ್ರ ಹಾಗೂ ಭೀಷಣವಾದ ಸಂದರ್ಭಗಳಿಂದ ಪರಾಙ್ಮುಖವಾಗಿರುತ್ತದೆ.

**ಸಾಂಸ್ಕೃತಿಕ ಸಂದೇಶ :** ಶಾಕುಂತಲವನ್ನು ಸುಮಾರು 200 ವರ್ಷಗಳ ಹಿಂದೆ ಸರ್ ವಿಲಿಯಂ ಜೋನ್ಸ್ ಎಂಬಾತನು ಆಂಗ್ಲ ಭಾಷೆಗೆ ಅನುವಾದ ಮಾಡಿದನು. ಈ ಅನುವಾದ ಓದಿಯೇ ಮಹಾಕವಿ ಗಯಟೆಯು ಶಾಕುಂತಲವನ್ನು ಪ್ರಶಂಸಿಸಿರುವುದು. ಈ ಅನುವಾದಗಳು ವಿಶ್ವದ ದೃಷ್ಟಿಯಲ್ಲಿ ಭಾರತ ಸಂಸ್ಕೃತಿ ವಿಹೀನ ದೇಶವೆಂಬ ಭಾವನೆಯನ್ನು ತೊಡೆದು ಹಾಕಿದವು. ಇಲ್ಲಿಯ ಸಂಸ್ಕೃತಿ ಬಹಳ ಉನ್ನತಮಟ್ಟದ್ದು. ಇಲ್ಲಿಯ ಕವಿಗಳ ಹೃದಯ ಕೋಮಲ ಭಾವನೆಗಳನ್ನು ಪ್ರದರ್ಶಿಸಲು ಸಮರ್ಥವಾದವೆಂದು ಪಾಶ್ಚಾತ್ಯರು ತಿಳಿಯಲು ಅನುಕೂಲವಾಯಿತು. ತ್ಯಾಗ, ತಪಸ್ಸು ಮತ್ತು ತಪೋವನ ಈ ಮೂರು ಕವಿಯ ಪ್ರಮುಖ ಸಂದೇಶವಾಗಿವೆ. ತಪೋವನದಂತಹ ಸುಂದರ ಪರಿಸರವನ್ನು ಸೃಷ್ಟಿಸಿಕೊಂಡು ಸ್ವಾರ್ಥ ತ್ಯಾಗ ಮಾಡಿ ಪರಮಾತ್ಮನಲ್ಲಿ ಭಕ್ತಿ ಇಟ್ಟು ತಪಸ್ಸು ಮಾಡಿದಲ್ಲಿ ಆತ್ಮದರ್ಶನವಾಗಿ ಮಾನವ ಜೀವನ ಸಾರ್ಥಕವಾಗುತ್ತದೆ ಎಂಬುದು ಕವಿಯ ಸಂದೇಶದ ಸಾರಾಂಶ. ಇದು ಭಾರತೀಯ ಸಂಸ್ಕೃತಿಯ ಸಾರವೂ ಕೂಡ.

**ಶಕುಂತಲೆಯ ಪಾತ್ರ ಚಿತ್ರಣ :** ಶಾಕುಂತಲ ನಾಟಕದಲ್ಲಿ ಶಕುಂತಲೆಯ ಪಾತ್ರ ಚಿತ್ರಣಕ್ಕೆ ಹೆಚ್ಚು ಮಹತ್ವ. ಕಾಳಿದಾಸನ ಮಿಕ್ಕ ನಾಟಕಗಳ ಹಾಗೆ ಇದನ್ನು 'ಶಕುಂತಲಾ ದುಷ್ಯಂತ'ವೆಂದೋ 'ದುಷ್ಯಂತ ಶಾಕುಂತಲ'ವೆಂದೋ ಅದನ್ನು ಕರೆದಿಲ್ಲ. ಇದು ಶಕುಂತಲೆಯದೇ ಚರಿತ್ರೆ. ಇದರಲ್ಲಿ ದುಷ್ಯಂತನದು ಒಂದು ಪಾತ್ರವಷ್ಟೇ. ಶಕುಂತಲೆಯಲ್ಲಿ ಪ್ರಣಯದ ಆವಿರ್ಭಾವ, ವೃದ್ಧಿ, ಪರಿಣಾಮ, ಫಲ ಇವುಗಳ ನಿರೂಪಣೆಯೇ ಕಥಾವಸ್ತು.

ದುಷ್ಯಂತನಿಗೆ ಪ್ರಣಯ ಹೊಸದಲ್ಲ. ಅವನು ಎಷ್ಟೋ ಮದುವೆ ಮಾಡಿಕೊಂಡಿದ್ದಾನೆ. ಆದರೆ ಶಕುಂತಲೆಯ ಜೊತೆಗಿನ ಅವನ ಪ್ರಣಯ ಹೂವಿನಿಂದ ನಾರು ಸ್ವರ್ಗಕ್ಕೆ ಹೋದಂತಾಯಿತು. ದುಷ್ಯಂತನು ಶಕುಂತಲೆಯನ್ನು ಅಂತಃಪುರಕ್ಕೆ ಸೇರಿಸಿ ಬಿಟ್ಟಿದ್ದರೆ ಮುಂದೆ ಕಥೆಯೇ ಇರುತ್ತಿರಲಿಲ್ಲ. ದೂರ್ವಾಸ ಶಾಪದ ಮೂಲಕ ಕವಿ ತನ್ನ ಕಾರ್ಯ ಮಾಡಿಕೊಂಡ. ಶಕುಂತಲೆ ಪತಿಯ ಯೋಚನೆಯಲ್ಲಿ ತನ್ನನ್ನೇ ಮರೆತು ಶಾಪ ತಂದುಕೊಂಡಳು. ಶಕುಂತಲೆ ತನ್ನ ಸೌಂದರ್ಯದಿಂದ ತರುಲತೆಗಳ ಮಧ್ಯೆ ಬೆಳೆದ ಒಂದು ಹೂವು. ದುಷ್ಯಂತ ಕಾಡಾನೆಯಂತೆ ನುಗ್ಗಿ ಬಂದು ತಪೋವನದ ಶಾಂತಿಯನ್ನು ಕದಡಿದ. ಕಣ್ವರ ಆಶ್ರಮದಲ್ಲಿ ಶಕುಂತಲೆ ದುಷ್ಯಂತನ ಕಣ್ಣಿಗೆ ಬಿದ್ದರೆ ಮಾರೀಚರ ಆಶ್ರಮದಲ್ಲಿ ಅವಳ ಮಗ ದುಷ್ಯಂತನ ಕಣ್ಣಿಗೆ ಬೀಳುತ್ತಾನೆ. ನಾಟಕ ಶಕುಂತಲೆಯಿಂದಲೇ ಮುಕ್ತಾಯವಾಗುತ್ತದೆ. ನಾಟಕದ ತುಂಬಾ ಶಕುಂತಲೆಯ ಪಾತ್ರ ಆವರಿಸಿಕೊಂಡಿದೆ. ದುಷ್ಯಂತನನ್ನು ನೋಡಿದ ಶಕುಂತಲೆ. 'ತಪೋವನಕ್ಕೆ ವಿರುದ್ಧವಾದ ವಿಕಾರ'ದಿಂದ ಬಳಲುತ್ತಾಳೆ. ಪ್ರಣಯವೆಂದರೇನು ಎಂದು ಅರಿಯದ ಮುಗ್ಧೆ ಅವಳು. ಕಾಳಿದಾಸನ ಇತರ ನಾಯಕಿಯರಾದ ಮಾಳವಿಕೆಯಾಗಲೀ, ಊರ್ವಶಿಯಾಗಲೀ ಪ್ರಣಯದ ವಿಚಾರದಲ್ಲಿ ಇಷ್ಟು ಮುಗ್ಧರಲ್ಲ. ಮರಗಿಡಗಳಿಗೆ ನೀರೆರೆಯುತ್ತಾ, ಜಿಂಕೆಗಳನ್ನು ಸಾಕಿಕೊಂಡು ''ಅಖಂಡ ಪುಣ್ಯ ಫಲ''ದಲ್ಲಿ

ಬೆಳೆದವಳು ಶಕುಂತಲೆ. ಕಣ್ವ, ಗೌತಮಿ, ಕಶ್ಯಪ, ಅದಿತಿ, ಅನುಸೂಯ, ಪ್ರಿಯಂವದೆ ಇವರ ಮಧ್ಯೆ ಬೆಳೆದ ಶಕುಂತಲೆ ತಪೋವನದ ಎಲ್ಲಾ ರೀತಿ ರಿವಾಜುಗಳನ್ನು ಪಾಲಿಸಿಕೊಂಡು ಬಂದವಳು. ಹಾಗಾಗಿ ದುಷ್ಯಂತ ಅವಳ ಕಾಲು ಒತ್ತುತ್ತೇನೆಂದು ಹೇಳಿದಾಗ ಅದು ಅವಳಿಗೆ ಅನುಚಿತವಾಗಿ ತೋರಿತು. ಕಣ್ವರ ಉಪದೇಶವನ್ನು ಅಕ್ಷರಶಃ ಪಾಲಿಸಿಕೊಂಡು "ಗೃಹಿಣೀಪದ 'ಸಂಪಾದಿಸಿ' ಕುಲಕ್ಕೆ ಅಧಿ"ಯಾಗಲಿಲ್ಲವೆಂದು ನಾವು ಹೇಳಬಹುದು. ಮಹಾಭಾರತದ ಶಕುಂತಲೆ ದುಷ್ಟ, ದ್ರೌಪದಿಯ ತಂಗಿ ಮಗನಿಗೆ ರಾಜ್ಯ ಕೊಡುತ್ತೇನೆಂದು ಮದುವೆಗಿಂತ ಮುಂಚೆ ರಾಜನಿಂದ ಪ್ರತಿಜ್ಞೆ ಮಾಡಿಸಿಕೊಂಡ ವ್ಯವಹಾರ ಚತುರೆ. ತಪೋವನದ ಹುಡುಗಿ ಧೈರ್ಯವಾಗಿ ನಗರಕ್ಕೆ ಹೋಗಿ ಅರಮನೆಯಲ್ಲಿ ರಾಜರೊಡನೆ ವಾದ ಮಾಡಿ ಅವರನ್ನು ನಡುಗಿಸಿದವಳು. ಆದರೆ ನಾಟಕದ ಶಕುಂತಲೆ ತುಂಬಾ ಸಾತ್ವಿಕಳು. ದುಃಖವನ್ನು, ಕಷ್ಟವನ್ನು ಸಹಿಸಿಕೊಂಡ ಆದರ್ಶಪ್ರಾಯಳಾದ ನಾರೀಮಣಿ. ಎಲ್ಲರಿಂದಲೂ ತಿರಸ್ಕೃತಳಾಗಿ 'ಭೂಮಿ ತಾಯಿ, ಬಾಯಿ ಬಿಟ್ಟು ನನ್ನನ್ನು ನುಂಗಿಕೊಳ್ಳಬಾರದೇ" ಎಂದು ಪ್ರಲಾಪಿಸಿದವಳು. ಹೇಮಕೂಟದಲ್ಲಿ ದುಷ್ಯಂತನನ್ನು ನೋಡಿದಾಗ 'ಎಷ್ಟು ಬಡವಾಗಿ ಹೋಗಿದ್ದಾನೆ' ಎಂದು ಅವನ ಬಗ್ಗೆ ಅನುತಾಪಪಟ್ಟವಳು. ಮಗನ ಯೋಗಕ್ಷೇಮವನ್ನು ಚಿಂತಿಸಿ ಅವನನ್ನು ಜೋಪಾನವಾಗಿ ಸಾಕಿದವಳು. ಒಟ್ಟಿನಲ್ಲಿ ಅವಳೊಬ್ಬ ಆದರ್ಶ ಗೃಹಿಣಿ.

"ಯಾಂತ್ಯೇವಂ ಗೃಹಿಣೀಪದಂ ಯುವತಯೋ ವಾಮಃ ಕುಲಸ್ಯಾಧಯಃ।"

**ಇತರ ಪಾತ್ರಗಳ ಚಿತ್ರಣ :** ನಾಟಕದಲ್ಲಿ ಅವಳಿಜವಳಿಗಳಂತಿರುವ ಅನುಸೂಯ- ಪ್ರಿಯಂವದ, ಶಾರ್ಙ್ಗರವ ಶಾರದ್ವತರುಗಳ ಪಾತ್ರ ಸೃಷ್ಟಿಯಲ್ಲೂ ಕವಿ ಚತುರತೆ ತೋರಿಸಿದ್ದಾನೆ. ಇವರುಗಳ ಪಾತ್ರ ಗೌಣವಾದರೂ ಪೋಷಕ ಪಾತ್ರಗಳಲ್ಲಿ ಇವರು ಮಿಂಚುತ್ತಾರೆ. ಅನುಸೂಯೆಯ ಮಾತಿನಲ್ಲಿ ಗಾಂಭೀರ್ಯ, ವಿವೇಕ ಕಂಡುಬಂದರೆ ಪ್ರಿಯಂವದೆಯ ಮಾತಿನಲ್ಲಿ ವಿನೋದ. ಸರಸ, ಬುದ್ಧಿವಂತಿಕೆ ಕಂಡುಬರುತ್ತದೆ. ಶಾರ್ಙ್ಗರವ ಮುಂಗೋಪಿ. ಮಾತು ಕಠಿಣ. ಶಾರದ್ವತ ಶಾಂತ ಸ್ವಭಾವದವನು, ಖಂಡಿತವಾದಿ. ಕಣ್ವರು ತ್ಯಾಗಜೀವಿಗಳು, ಶಾಂತರು. ಆದರೂ ಸಾಕು ತಂದೆಯ ಪೂರ್ಣ ಕರ್ತವ್ಯ ನಿರ್ವಹಿಸಿದವರು. ಕಶ್ಯಪರು ಸಂಸರಿಗಳಾದ ತಪಸ್ವಿಗಳು.

ನಾಟಕದಲ್ಲಿ ತಪೋವನಕ್ಕೆ ಹೆಚ್ಚು ಪ್ರಾಶಸ್ತ್ಯವಿದೆ. ನಾಟಕ ಪ್ರಾರಂಭವಾಗುವುದೂ ತಪೋವನದಲ್ಲಿ ಮುಕ್ತಾಯವಾಗುವುದೂ ತಪೋವನದಲ್ಲಿ. ಅಲ್ಲಿಯ ಜಿಂಕೆ, ತರುಲತೆಭ್ರಮರಗಳಿಗೂ ಕವಿ ಜೀವ ತುಂಬಿದ್ದಾರೆ. ಮೊದಲ ತಪೋವನದಲ್ಲಿ ತಾಪಸಕನ್ಯೆಯರು ಗಿಡಲತೆಗಳಿಗೆ ನೀರೆರೆಯುವುದು, ಜಿಂಕೆಗಳೊಡನೆ ಆಡುವುದು ದೃಶ್ಯವಾದರೆ ಕೊನೆಯ ತಪೋವನದಲ್ಲಿ ಒಬ್ಬನೇ ಬಾಲಕ ಇಡೀ ವಾತಾವರಣದ ಕೇಂದ್ರಬಿಂದುವಾಗಿದ್ದಾನೆ. ಅವನು ಆಡುತ್ತಿದ್ದುದು ಜಿಂಕೆಮರಿ ಹತ್ತಿರವಲ್ಲ, ಸಿಂಹದಮರಿ ಹತ್ತಿರ. ಭಾರತವನ್ನು ಮುಂದೆ ಆಳುವ ಭರತ ಚಕ್ರವರ್ತಿ ಹುಟ್ಟಿನಿಂದಲೂ ಎಂತಹ ಶೂರನಾಗಿದ್ದಾನೆಂದು ತೋರಿಸಲು ಈ ಸನ್ನಿವೇಶದ ಸೃಷ್ಟಿ. ಮೊದಲ ದೃಶ್ಯದಲ್ಲಿ ಶಕುಂತಲೆಯ ಮುಗ್ಧ ಸೌಂದರ್ಯ ದುಷ್ಯಂತನನ್ನು ಆಕರ್ಷಿಸಿದರೆ, ಕೊನೆಯ ದೃಶ್ಯದಲ್ಲಿ ವೀರ ಬಾಲಕನ ಕ್ಷಾತ್ರ ತೇಜಸ್ಸು ರಾಜನನ್ನು ಆಕರ್ಷಿಸುತ್ತದೆ. ಇದನ್ನು ಕವಿ ರವೀಂದ್ರರು ಬಹು ಚೆನ್ನಾಗಿ ವರ್ಣಿಸಿದ್ದಾನೆ.

''ಪ್ರಥಮಾಂಕವು ಚಾಂಚಲ್ಯ ಜಾಜ್ವಲ್ಯಗಳಿಂದ ಪೂರ್ಣವಾಗಿದೆ. ಈ ಅಂಕದಲ್ಲಿ ಉಕ್ಕುತ್ತಿರುವ ಯೌವನವುಳ್ಳ ಋಷಿಕನ್ಯೆ, ಕೌತುಕೋತ್ಸಾಹಪೂರಿತರಾದ ಇಬ್ಬರು ಸಖಿಯರು, ನವ ಪುಷ್ಪಿತವಾದ ವನಜ್ಯೋತ್ಸ್ನೆ, ಸೌರಭದಿಂದ ಭ್ರಾಂತವಾದ ಮೂಢಭ್ರಮರ, ವೃಕ್ಷಗಳ ಮರೆಯಲ್ಲಿದ್ದು ಮೋಹಪರವಶವಾದ ರಾಜ- ಇವರು ತಪೋವನದಲ್ಲಿ ನಿಭೃತ ಪ್ರಾಂತವೊಂದನ್ನು ಆಶ್ರಯಿಸಿ, ಸೌಂದರ್ಯ ಮದಮೋದಿತವಾದ ಒಂದು ಅಪೂರ್ವ ದೃಶ್ಯವನ್ನು ಉಂಟುಮಾಡುತ್ತಾರೆ. ದುಷ್ಯಂತನ ಪ್ರೇಯಸಿಯು ಅಪಮಾನವನ್ನು ಹೊಂದಿ ಈ ಪ್ರಮೋದ ಸ್ವರ್ಗದಿಂದ ಚ್ಯುತಳಾದಳು. ಆದರೆ ಮಂಗಳಸ್ವರೂಪಿಯಾದ ಭಾರತಮಾತೆಯು ಯಾವ ದಿವ್ಯತರವಾದ ತಪೋಭೂಮಿಯಲ್ಲಿ ಆಶ್ರಯವನ್ನು ಪಡೆದಳೋ ಅಲ್ಲಿಯ ದೃಶ್ಯವೇ ಬೇರೆ. ಅಲ್ಲಿ ಕಿಶೋರೆಯಾದ ತಾಪಸ ಕನ್ಯೆಯರು ಗಿಡಗಳ ಪಾತಿಗೆ ನೀರೆರೆಯುತ್ತಿರಲಿಲ್ಲ. ಲತಾ ಭಗಿನಿಯನ್ನು ಸ್ನೇಹ ದೃಷ್ಟಿಯಿಂದ ಅಭಿಷೇಕ ಮಾಡುತ್ತಿರಲಿಲ್ಲ. ಕೃತಕ ಪುತ್ರನಾದ ಮೃಗಶಿಶುವನ್ನು ನೀವಾರ ಮುಷ್ಟಿಯಿಂದ ಕಾಪಾಡುತ್ತಿರಲಿಲ್ಲ. ಅಲ್ಲಿ ತರುಲತಾ ಪಲ್ಲವಗಳ ಸಮುದಾಯ ಚಾಂಚಲ್ಯವನ್ನೆಲ್ಲಾ ಒಬ್ಬನೇ ಒಬ್ಬ ಬಾಲಕನು ಅಧಿಕಾರ ಮಾಡಿಬಿಟ್ಟಿದ್ದಾನೆ. ಆ ವನದ ಎಲ್ಲಾ ಪ್ರಾಂತಗಳಲ್ಲಿಯೂ ಅವನೇ ತುಂಬಿದ್ದನು. ಅಲ್ಲಿ ಸೀಮಾವಿನ ಕೊಂಬೆಯಲ್ಲಿ ಮೊಗ್ಗು ಹಿಡಿದಿದೆಯೋ ಇಲ್ಲವೋ ಅದು ಯಾರ ಕಣ್ಣಿಗೂ ಬೀಳುವುದಿಲ್ಲ. ಸ್ನೇಹ ವ್ಯಾಕುಲರಾದ ತಾಪಸೀ ಮಾತೆಯರು ದುರಂತ ಬಾಲಕನಿಂದ ವ್ಯಸ್ತರಾಗಿದ್ದಾರೆ. ಪ್ರಥಮಾಂಕದಲ್ಲಿ ದುಷ್ಯಂತನಿಗೆ ಶಕುಂತಲೆಯು ಪರಿಚಿತವಾಗುವುದಕ್ಕೆ ಮೊದಲೇ ದೂರದಿಂದಲೇ ಆಕೆಯ ನವಯೌವನ ಲಾವಣ್ಯಲೀಲೆಯು ಆತನನ್ನು ಮುಗ್ಧನನ್ನಾಗಿ ಮಾಡಿ ಆಕರ್ಷಿಸಿತು. ಕೊನೆಯ ಅಂಕದಲ್ಲಿ ಶಕುಂತಲೆಯ ಬಾಲಕನು ಆಕೆಯ ಸಮಸ್ತ ಲಾವಣ್ಯದ ಸ್ಥಾನವನ್ನು ಆಕ್ರಮಿಸಿಕೊಂಡು ದುಷ್ಯಂತ ರಾಜನ ಅಂತರತಮ  ಹೃದಯವನ್ನು ಆರ್ದ್ರಮಾಡಿದನು. ಆ ಸಮಯದಲ್ಲಿ ಮಲಿನ ಧೂಸರವಸನಳೂ ನಿಯಮಚರ್ಯೆಯಿದ ಶುಷ್ಕ ಏಕಜಟಾಧಾರಣೆಯೂ ವಿರಹ ವ್ರತಾಚಾರಣೆಯೂ ಶುದ್ಧ ಶೀಲಳೂ ಆದ ಶಕುಂತಲೆಯು ಪ್ರವೇಶಿಸುವಳು. ಇಂತಹ ತಪಸ್ಸನ್ನು ಆಚರಿಸಿದ ಮೇಲೆ ಅಕ್ಷಯ ವರಲಾಭವಾಗದೇ ಇರದು. ಬಹುಕಾಲ ವ್ರತವನ್ನು ಆಚರಿಸಿದುದರಿಂದ ಪ್ರಥಮ ಸಮಾಗಮದ ಮಲಿನತೆಯು ದಗ್ಧವಾಗಿ ಪುತ್ರಭೂಷಣದಿಂದ ಪರಮಭೂಷಿತವಾದ ಮತ್ತು ಪರಮ ಕಲ್ಯಾಣ ಕಾಂತಿಯುಕ್ತವಾದ ಯಾವ ಜನನೀಮೂರ್ತಿಯು ಕಂಡು ಬಂದಿತ್ತೋ ಅದನ್ನು ಯಾರು ತಾನೇ ತಿರಸ್ಕರಿಸಬಲ್ಲರು.''[2]

ದೂರ್ವಾಸ ಶಾಪ. ಈ ಶಾಪ ವಿಮೋಚನೆಗೆ ಸಾಧನವಾದ 'ಅಭಿಜ್ಞಾನ'ಕ್ಕೆ ನಾಟಕದ ಹೆಸರಿನಲ್ಲೂ ಸ್ಥಾನವಿದೆ. ಈ ಶಾಪ, ಉಂಗುರ, ಭೃಂಗ, ಪುತ್ರಪಿಂಡಪಾಲನವ್ರತ, ಕಾಡಾನೆ, ಬೆಸ್ತ, ಮೇನಕೆ, ಮಾತಲಿ ಮುಂತಾದವರಿಂದ ಕಥೆ ಬೆಳೆಯುತ್ತದೆ. ಇಲ್ಲದಿದ್ದಲ್ಲಿ ಕಥೆ ಐದು ಅಂಕಗಳಲ್ಲೇ ಮುಕ್ತಾಯವಾಗಬೇಕಿತ್ತು. ಪುರಾಣ ಕಥೆಗೂ ನಾಟಕದ ವಸ್ತುವಿಗೂ ಇರುವ ವ್ಯತ್ಯಾಸವನ್ನು ಎರಡೂ ನಾಯಕ ನಾಯಕಿಯರ ಸಮಾಗಮದಲ್ಲಿ ನೋಡಬಹುದು. ನಾಟಕದಲ್ಲಿ ದುಷ್ಯಂತ ಬೇಟೆಯಾಡುತ್ತಾ ಜಿಂಕೆಯನ್ನು ಅಟ್ಟಿಸಿಕೊಂಡು ಹೋದಾಗ ಋಷಿಗಳು ಅವನನ್ನು ತಡೆಯುತ್ತಾರೆ. ಅವರ ಮಾತಿಗೆ ಬೆಲೆಕೊಟ್ಟ ರಾಜನನ್ನು ಆಶೀರ್ವದಿಸಿದಾಗ ಅದು ಕಣ್ವರ ಆಶ್ರಮವೆಂದೂ ಆತಿಥ್ಯವನ್ನು ಸ್ವೀಕರಿಸಿಕೊಂಡು ಹೋಗಬೇಕೆಂದೂ ಅವರು ಹೇಳಿದಾಗ ಆಶ್ರಮದಲ್ಲಿ  ಶಕುಂತಲೆ ಅವನ ಕಣ್ಣಿಗೆ ಬೀಳುತ್ತಾಳೆ. ಅವಳಿಗೆ ಮದುವೆ ಆಗಬೇಕಾಗಿದೆ ಎಂದು ತಿಳಿದಾಗ ಪರಸ್ಪರ ಅನುರಾಗ ಉಂಟಾಗುತ್ತದೆ. ಅನಂತರ ಅವನು ಗಾಂಧರ್ವ ವಿವಾಹವಾಗುತ್ತಾನೆ. ಇಲ್ಲಿ ಕವಿ ಪರಿಚಯ

ಪ್ರಣಯವಾಗಿ ಬೆಳೆಯಲು ಸಾಕಷ್ಟು ಅವಕಾಶ ನೀಡುತ್ತಾನೆ. ಆದರೆ ಪುರಾಣದಲ್ಲಿ ರಾಜನು ಆತುರವಾಗಿ ನನ್ನನ್ನು ಮದುವೆ ಮಾಡಿಕೊಳ್ಳುತ್ತೀಯ ಎಂದು ಕೇಳುವುದು, ತನ್ನಲ್ಲಿ ಹುಟ್ಟಿದ ಮಗನಿಗೆ ಪಟ್ಟಾಭಿಷೇಕ ಮಾಡಿಸಬೇಕೆಂಬ ವಚನವನ್ನು ಶಕುಂತಲೆ ಪಡೆಯುವುದು ಎಲ್ಲವುದೂ ಕೃತ್ರಿಮವಾಗಿ ನಡೆಯುತ್ತದೆ.

ನಾಟಕದ ಕೊನೆಯಲ್ಲಿ ಕೂಡ ಪುನಃ ಸಮಾಗಮ ಅಷ್ಟೇ ಅನಿರೀಕ್ಷಿತವಾಗಿ ಆಗುತ್ತದೆ. ಕಶ್ಯಪರ ಆಶ್ರಯದಲ್ಲಿ ಬಾಲ್ಯಕ್ಕೆ ಮೀರಿದ ಶಕ್ತಿಯುಳ್ಳ ಬಾಲಕನನ್ನು ನೋಡಿದಾಗ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗ ಹೇಗೋ ಹಾಗ ಅನುರಾಗ ಹುಟ್ಟುವುದು. ಹುಡುಗ 'ಶಕುಂತಲಾ ಲಾವಣ್ಯ'ವನ್ನು ನೋಡು ಎಂದಾಗ 'ಎಲ್ಲಿ ನಮ್ಮ ತಾಯಿ' ಎಂದಾಗ. ರಕ್ಷಾಯಂತ್ರವನ್ನು ಮುಟ್ಟಿದಾಗಲೂ ಅದು ಹಾವಾಗಿ ಕಚ್ಚದೇ ಇದ್ದಾಗ, ದುಷ್ಯಂತ ಅವನನ್ನು ಕರೆದುಕೊಂಡು ಹೋಗಲು ಪ್ರಯತ್ನಿಸಿದಾಗ ''ನನ್ನ ತಂದೆ ದುಷ್ಯಂತ, ನೀನು ಯಾರು'' ಎಂದು ಹೇಳುತ್ತಾ ನಿಧಾನವಾಗಿ ಕಥೆ ಬಿಚ್ಚಿಕೊಳ್ಳುವಂತೆ ಕವಿ ಮಾಡುತ್ತಾನೆ. ಅರುಣೋದಯದ ನಂತರ ಸೂರ್ಯೋದಯವಾಗುವಂತೆ ನಂತರ ಶಕುಂತಲೆ ಬರುತ್ತಾಳೆ. ತಪಸ್ಸಿನಿಂದ, ದುಃಖ ತಾಪಗಳಿಂದ ಮಾಗಿದ ಈ ಶಕುಂತಲೆಗೂ, ಇನ್ನು ಚಿಗುರೆಲೆಯಂತಿದ್ದ ಅಂದಿನ ಶಕುಂತಲೆಗೂ ಇರುವ ಅಜಗಜಾಂತರ ವ್ಯತ್ಯಾಸ ನಾವು ಕಾಣುತ್ತೇವೆ. ಸರ್ವದಮನನ ಬದಲಿಗೆ ಶಕುಂತಲೆಯೇ ಬಂದಿದ್ದರೆ, ಏಳನೇ ಅಂಕವು ನಾಟಕದ ಕಳೆಯನ್ನು ಕಳೆದುಕೊಳ್ಳುತ್ತಿತ್ತು. ಹೀಗೆ ಕವಿ ಪುರಾಣದ ಒಂದು ಸಾಮಾನ್ಯ ಕಥೆಯನ್ನು ಒಂದು ಸುಂದರ ನಾಟಕವನ್ನಾಗಿ ಮಾಡಿ ಈ ಕಥೆ ಶಾಶ್ವತವಾಗಿ ಜನಮನದಲ್ಲಿ ಉಳಿಯುವಂತೆ ಮಾಡಿದ್ದಾನೆ. ಕಾಳಿದಾಸನು ಸಂಸ್ಕೃತದಲ್ಲಿ ಮಾಡಿದ ಮೋಡಿ ಬಸವಪ್ಪ ಶಾಸ್ತ್ರಿಗಳು ಕನ್ನಡದಲ್ಲಿ ಮಾಡಿದ್ದಾರೆ. ಕಣ್ವರು ಶಕುಂತಲೆಗೆ ಕೊಟ್ಟ ಉಪದೇಶದಲ್ಲಿ ಭಾರತೀಯ ಗೃಹಿಣಿಯ ನಡತೆ ಹೇಗಿರಬೇಕೆಂಬುದನ್ನು ತಿಳಿಸಿಕೊಟ್ಟಿದ್ದಾರೆ. ಅವರು ''ವನೌಕಸರಾದರೂ ಲೌಕಿಕತಜ್ಞರು'' ಎಂಬುದನ್ನು ಅದು ತೋರಿಸುತ್ತದೆ.

ಶಶ್ರೂಷಸ್ವ ಗುರೂನ್ ಕುರು ಪ್ರಿಯಸಖೀವೃತ್ತಿಂ ಸಪತ್ನೀಜನೇ
ಭರ್ತುರ್ವಿ ಪ್ರಕೃತಾಪಿ ರೋಷಣ ತಯಾ ಮಾಸ್ಮ ಪ್ರತೀಪಾ ಗಮಃ।
ಭೂಯಿಷ್ಠಂ ಭವ ದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ
ಯಾಂತ್ಯೇನಂ ಗೃಹಿಣೀಪದಂ ಯುವತಯೋ ವಾಮಾಃ ಕುಲಸ್ಯಾಧಯಃ॥

ಕೊನೆಯದಾಗಿ ಇಷ್ಟೊಂದು ಅದ್ಭುತ ವಿವರಣೆಯಿಂದ ಕೂಡಿದ ಶಾಸ್ತ್ರಿಗಳ 'ಶಾಕುಂತಲ'ವನ್ನು ಬೇರೆಯವರ ಭಾಷಾಂತರಕ್ಕೆ ಹೋಲಿಸಿದಾಗ ಅದು ಎಷ್ಟು ಉತ್ಕೃಷ್ಟ ಮಟ್ಟದಲ್ಲಿ ನಿಂತಿದೆ ಎಂದು ಗೊತ್ತಾಗುತ್ತದೆ. ಇದಕ್ಕೆ ಮೊದಲನೆಯ ಅಂಕದ ಇಪ್ಪತ್ತನೆಯ ಪದ್ಯವನ್ನು ನೋಡಬಹುದು-

ಸರಸಿದಮನುವಿದ್ಧಂ ಶೈವಲೇನಾಪಿ ರಮ್ಯಂ
ಮಲಿನಮಪಿ ಹಿಮಾಂಶೋರ್ಲಕ್ಷ್ಮ ಲಕ್ಷ್ಮೀಂ ತನೋತಿ।
ಇಯಮಧಿಕ ಮನೋಜ್ಞಾ ವಲ್ಕಲೇನಾಪಿ ತನ್ವೀ
ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ॥ (ಕಾಳಿದಾಸ)

ಶೈವಲದಿಂದೆ ತಾವರೆ ಮುಸುಂಕಿದೊಡಂ ರಮಣೀಯ ಮಿಂದವಿಂ
ಗೀವುದು ಕಾಂತಿಯುಂ ಮಲಿನಮಾದೊಡ ಮೇಂ ಕರೆ ವಲ್ಕದಿಂದಿವಳ್
ಪ್ರಾವೃತೆಯಾದೊಡಂ ಬಹುಮಹೋಜ್ಜೆ ಮನೋಹರಮಾದ
ರೂಪುಗಳಾವುದು ತಾನೆ ತಾಳಿದೊಡೆ ಭೂಷಣ ಮಾಗದೆ ಪೋಪುದುರ್ವಿಯೊಳ್॥(ಶಾಸ್ತ್ರಿ)
ಮೋಹದ ವಸ್ತು ತಾ ಮಾಜಲರಿದು। ಮೋಹವೇ ಬಡಿಸುವುದು । ಪಲ್ಲ ।
ಬಾಹು ಬಿಗಿಯೇ ಕೆಂ - । ದಾಹತವನು ತೋ - ।
ಟ್ಟೀ ಹುಡುಗಿಯ್ಮೊನ। ಸ್ನೇಹಬಯಸುವುದು ॥ ಅನುಪಲ್ಲ॥
ಎಳೆವೆಣ್ಣು ತಾಳ್ದಿರುವ ಬಡವಸನ । ಅಲ್ಲಿವಳಿಗೆ ಹದನ।
ತೊಳಗುವ ಚೆನ್ನದ ಮೈಬಣ್ಣ। ಅಡಗಿದೆ ಬಲುತಿಣ್ಣ॥
ಮೊಲೆಗಳ ಚೆಲ್ವಿಕೆ ॥ ಮುಳುಗಲದಿರು ಪೂ -।
ಗಳ ಗುಚ್ಛದ ಮ್ಯಾ-1 ಲೆಲೆಯನಿಕ್ಕಿದವೊಲು ॥
ಶರೀರದ ಸೋಂ ಚೈಲದಿ ಮುರಿಯೇ । ಘಣಕಿಂ ಬೆವರೊಡಯೇ।
ಕರಮುಖ ಪಾದಗಳು ತೆರೆಯೆ । ಈ ಉಡಿಗೆಯ ತಿಳಿಯೆ।
ಸರಸಿಯೊಳಗೆ ತವೆ। ಬಿರಿದ ಕಮಲ ಸು -1
ತ್ತಿರುವ ಶೈವಲದ । ಪಿರಿಯ ಲೊಪ್ಪಿಹುದ್ಯ. ॥ 2॥
ತರುಣಿ ತಾನುಟ್ಟ ವಸ್ತ್ರವು ಮೈಯ । ದೊರಕಿಸುವುದು ಸಿರಿಯ।
ಅರಳುಗಳಿಂ ದೇಂಟಿಗೆ ಸೌಂದರಿಯಾ । ಬರುವುದು ನಿಶಿಪತಿಯ।
ಕರಿಗುರುತವದೋ -। ಸ್ಪಿರುವದಲ್ಲದೆ ಕೆಡ -।
ಲರಿದು ಮೊದಲೇ ತಾ। ಸರಸವಿರಲು ನೆರೆ ॥ 2॥ (ಚುರಮರಿ)

ಶಾಸ್ತ್ರಿಗಳ ಹಾಗೂ ಚುರಮುರಿಯವರ ಭಾಷಾಂತರವನ್ನು ಹೋಲಿಸಿದರೆ ವ್ಯತ್ಯಾಸ ತಾನಾಗಿಯೇ ಅರಿವಾಗುತ್ತದೆ. ಶಾಸ್ತ್ರಿಗಳ ಭಾಷಾಂತರದಲ್ಲಿರುವ ಛಂದೋಗಾಂಭೀರ್ಯ, ಸೊಗಸು ಚುರಮುರಿಯವ ಭಾಷಾಂತರದಲ್ಲಿಲ್ಲ. ಅದು ಮೂಲದಿಂದ ಬಹು ದೂರ ಸರಿದಿರುವುದು ಗೋಚರವಾಗುತ್ತದೆ. ಶಾಕುಂತಲದ ಬೇರೆಲ್ಲಾ ಅನುವಾದಕ್ಕಿಂತ ಶಾಸ್ತ್ರಿಗಳ ಅನುವಾದ ಎತ್ತರಕ್ಕೆ ನಿಲ್ಲುತ್ತದೆ ಎನ್ನುವುದಕ್ಕೆ ಮೇಲಿನ ಉದಾಹರಣೆಯೇ ಸಾಕ್ಷಿ.

## ಬಸವಪ್ಪಶಾಸ್ತ್ರಿಗಳ 'ಶಾಕುಂತಲ' ಅನುವಾದ

ಬಸವಪ್ಪ ಶಾಸ್ತ್ರಿಗಳು ಶ್ರೇಷ್ಠ ಅನುವಾದಕರು. 'ಅಭಿಜ್ಞಾನ ಶಾಕುಂತಲ'ವನ್ನು ಅನುವಾದಿಸಿ 'ಅಭಿನವ ಕಾಳಿದಾಸ' ಬಿರುದಿಗೆ ಪಾತ್ರರಾದವರು. ಕನ್ನಡ ಸಾಹಿತ್ಯದಲ್ಲಿ ಮರೆಯಾಗಿದ್ದ ನಾಟಕ ರಚನೆ ಇದರಿಂದ ಚುರುಕಾಯಿತು. "ಬಸವಪ್ಪ ಶಾಸ್ತ್ರಿಗಳು ಮೇಲಾದ ಅನುವಾದಕರು. ಅವರ ಕವಿತಾಶಕ್ತಿ ಮತ್ತು ಪದ್ಯರಚನಾಶಕ್ತಿ ಮೇಲಾದವು. ಶಾಕುಂತಲ ಪದ್ಯಗಳಲ್ಲಿ ಇದನ್ನು ಕಾಣಬಹುದು" ಎನ್ನುತ್ತಾರೆ ಡಾ॥ ರಂ. ಶ್ರೀ. ಮುಗಳಿಯವರು. ಕ್ರಿ. ಶ. 1882ರಲ್ಲಿ ಅಭಿಜ್ಞಾನ ಶಾಕುಂತಲದ ಅನುವಾದವನ್ನು ಶಾಸ್ತ್ರಿಗಳು ಸಿದ್ಧಪಡಿಸಿದರು. "ಕಾಳಿದಾಸನ ಪ್ರತಿಭಾವಿಲಾಸಕ್ಕೆ ಕೂದಲೆಳೆಯಷ್ಟು ಕಡಿಮೆತನ ಬಂದಿಲ್ಲ"

ಎನ್ನುವ ಕೀರ್ತಿನಾಥ ಕುರ್ತಕೋಟಿಯವರು ಮಾತು ಹೆಚ್ಚು ಉಚಿತವಾಗಿದೆ. ಇಡೀ ನಾಟಕದ ಉದ್ದಕ್ಕೂ ಇರುವ ಸೊಬಗುಳ್ಳ ಸನ್ನಿವೇಶಗಳ ಸೃಷ್ಟಿ, ವರ್ಣನಾ ಜಗತ್ತು, ಸಂಭಾಷಣೆಗಳ ಬೆಡಗನ್ನು ಕಂಡು ಎಂಥವರೂ ಆನಂದ ಪಡೆಯುವಂತೆ ಮಾಡುತ್ತಾರೆ. 'ಶಾಕುಂತಲ ನಾಟಕ' ಕೇವಲ ಕನ್ನಡ ರೂಪಾಂತರವಲ್ಲ. ಮೂಲ ನಾಟಕದ ಅಮಿತ ಭಾವಗ್ರಹಣ. ಶಾಸ್ತ್ರಿಗಳ ಪದ್ಯಾನುವಾದವಂತೂ ಉತ್ಕೃಷ್ಟವಾದುದು.

ಹಾಗೆಯೇ ದುಶ್ಯಂತನಲ್ಲಿ ಅನುರಕ್ತಳಾದ ಶಕುಂತಲೆ ಅವನನ್ನು ಬಿಟ್ಟು ಬರಲಾಗದ ಮನಸ್ಥಿತಿಯನ್ನು ತುಂಬಾ ಸ್ವಾರಸ್ಯಕರವಾಗಿ ಶಾಸ್ತ್ರಿಗಳು ಹಿಡಿದಿಟ್ಟಿದ್ದಾರೆ:

"ಎಲೆ ಅನಸೂಯೆ, ಸೂಜಿಯಂತಿರುವ ದರ್ಭೆಯ ತುದಿಯು ನನ್ನ ಕಾಲಿಗೆ ಚುಚ್ಚಿತು. ಇದಲ್ಲದೆ ಈ ಗೋರಂಟಿ ಮರದ ಕೊನೆಗೆ ನನ್ನ ನಾರಸೀರೆಯ ಸೆರಗು ಸಿಕ್ಕಿತು; ಬಿಡಿಸಿಕೊಂಡು ಬರುವ ಪರ್ಯಂತ ನನ್ನನ್ನು ಕಾಯಿರಿ."

ಕಾಳಿದಾಸನಂತಹ ಮಹಾಕವಿಯ ಕೃತಿಯ ಅನುವಾದ ಅಷ್ಟು ಸುಲಭವಲ್ಲ. ಅದನ್ನು ಯಥಾವತ್ತಾಗಿ ಭಾಷಾಂತರಿಸಿದ ಕೀರ್ತಿ ಶಾಸ್ತ್ರಿಗಳದು. ಭಾಷಾಂತರದಲ್ಲಿ ಮೆಲ್ಮಟ್ಟದ ಕವಿಪ್ರತಿಭೆ, ಅರ್ಥಸ್ಪಷ್ಟತೆ, ಪ್ರೌಢಿಮೆಗಳು ಎದ್ದು ಕಾಣುತ್ತವೆ.

"ಕಾವ್ಯಗಳಲ್ಲಿ ನಾಟಕ; ಅವುಗಳಲ್ಲಿ ಕಾಳಿದಾಸನ ಶಾಕುಂತಲ; ಅದರಲ್ಲೂ ನಾಲ್ಕನೆಯ ಅಂಕ; ನಾಲ್ಕನೆಯ ಅಂಕದಲ್ಲಿ ನಾಲ್ಕು ಶ್ಲೋಕಗಳು ರಮಣೀಯವಾಗಿವೆ" ಎಂಬುದು ವಿದ್ವಾಂಸರ ಅಭಿಮತ. ಅವುಗಳ ಒಂದು ಪದ್ಯದ ಕನ್ನಡ ಅನುವಾದ ಹೀಗಿದೆ:

ಜಲವನದಾವಳೀಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುವಂ
ತಳಿರ್ಗಳ ಕೊಯ್ಯಳಾವಲೊಲವಿಂ ಮಿಗೆ ಸಿಂಗಾರದಾಸೆಯುಳ್ಳೊಡಂ।
ಅಲರ್ಗಳ ತಾಳೆ ನೀವು ಮೊದಲುತ್ಸವವಾಂತ ಪಳಾವಳಾಶಕುಂ
ತಳೆವತಿ ಸದ್ಮಕೈದಿದಪಳಾಕೆಗನುಜ್ಞೆಯ ನೀವುದೆಲ್ಲರುಂ॥ (4-87)

ಕಾಳಿದಾಸನ ಶಾಕುಂತಲಾ ನಾಟಕದ ಪ್ರಸಿದ್ಧ ಪದ್ಯಗಳಲ್ಲಿ ಇದು ಒಂದು. ಶಕುಂತಲೆಯು ಆಶ್ರಮದ ಗಿಡಗಳಿ ನೀರೆರೆಯದೆ ತಾನು ನೀರು ಕುಡಿಯುತ್ತಿರಲಿಲ್ಲ. ಅಲಂಕಾರಮಾಡಿಕೊಳ್ಳುವ ಆಸೆ ಇದ್ದರೂ ಚಿಗುರನ್ನು ಚಿವುಟುತ್ತಿರಲಿಲ್ಲ. ಹೂ ಬಿಡುವ ಲತೆಗಳನ್ನು ಕಂಡರೆ ಅವಳಿಗೆ ಎಲ್ಲಿಲ್ಲದ ಆನಂದ. ಇಂತಹ ಶಾಕುಂತಲೆ ಪತಿಗೃಹಕ್ಕೆ ಹೋಗುತ್ತಿದ್ದಾ ನೀವೆಲ್ಲ ಆಕೆಗೆ ಅನುಜ್ಞೆಯನ್ನು ಕೊಡಿರೆಂದು ಕಣ್ವರು ಎಲ್ಲರನ್ನೂ ಬಿನ್ನವಿಸಿಕೊಳ್ಳುವುದು.

ಅಗಲಿ ಹೋಗುತ್ತಿರುವ ಶಕುಂತಲೆಯನ್ನು ಕಳುಹಿಸಿಕೊಡುವಾಗ ಸನ್ಯಾಸಿಯಾದ ಕಣ್ವರು ಪಡುವ ಸಂಕಟವನ್ನು ಹಿ ವಿವರಿಸಿದ್ದಾರೆ:

ಕಳವಳವಾಂತುದೆನ್ನೆರ್ದೆ ಶಕುಂತಳೆ ಪೋದಪಳೆಂದು ಕಂಠವು
ಮ್ಮಳಿಸುವುದೊತ್ತುವಶ್ರುಭರದಿಂ ಜಡಮಾದುದು ದೃಷ್ಟಿ ಚಿಂತೆಯಿಂ।
ದಳಲಿತಾಗೆ ಕಾಡ ಮನುಜಂಗೆನಗಂ ಕಡುನೇಹದಿಂದಮಿ
ನ್ನಳಿವ ಗೃಹಸ್ಥರಾತ್ಮಭವೆಯಿಂ ಕಳುಪುತ್ತ ಕಟಿಂತಳ್ವರೋ॥ (4-84)

ಬಸವಪ್ಪ ಶಾಸ್ತ್ರಿಗಳು 'ಶಾಕುಂತಲ ನಾಟಕ'ದ ಕೆಲವು ಪದ್ಯಗಳನ್ನು ರಂಗಪ್ರಯೋಗದ ದೃಷ್ಟಿಯಿಂದ ಹಾಡಿನರೂಪಕ್ಕೆ ತಿರುಗಿಸಿಕೊಟ್ಟಿದ್ದಾರೆ. ಅವುಗಳಲ್ಲಿ ಈ ಕೆಳಗಿನದು ಮನಸ್ಸಿನಲ್ಲಿ ಉಳಿಯುತ್ತದೆ.

**ರಾಗ - ದೇಶಿಕಾಪಿ ಆದಿತಾಳ**

ಪೋಗಬೇಡವೆ ಸಖಿ ನೀಂ ಪೋಗಬೇಡವೆ ॥ ಪಲ್ಲವಿ ॥
ಆರ್ಯನು ಬರೆ ಪರಿ । ಚರ್ಯವ ಮಾಡದ
ಕಾರ್ಯವಾವುದನಿ । ಪಾರ್ಯವೆಮಗೆ ಸಖಿ । ಪೋಗ ॥ 1 ॥
ಅತಿಥಿ ವಿಶೇಷವ । ಪತಿಕರಿಸದ ಬಗೆ।
ಮತವೇನಾಶ್ರಮ । ಗತರಿಗೆ ಸಖಿನೀಂ । ಪೋಗ ॥ 2 ॥
ಸಮ್ಮತವಲ್ಲಿದು । ನಮ್ಮನುಳಿದು ನೀಂ।
ಸುಮ್ಮನೆ ಪೋಗದಿ । ರಮ್ಮ ಶಕುಂತಲೆ । ಪೋಗ ॥ 3 ॥

ಒಬ್ಬನಲ್ಲಿ ಭಾಷಾಂತರ ಕಲೆಯಲ್ಲಿ ಬಸವಪ್ಪ ಶಾಸ್ತ್ರಿಗಳು ಸಿದ್ಧಹಸ್ತರು. ''ಬಸವಪ್ಪಶಾಸ್ತ್ರಿಯು ಮೂಲವನ್ನು ಅನುಸರಿಸುವುದರ ಕಡೆಗೆ ಹೆಚ್ಚು ಗಮನವಿತ್ತು ತನ್ನ ಪ್ರೌಢ ಕವಿತ್ವ ರಚನೆಯಿಂದ ಕನ್ನಡಕ್ಕೆ ಶ್ರೇಷ್ಠವಾದ ಸಾಹಿತ್ಯ ಕೃತಿಯೊಂದನ್ನು ನೀಡಿದ್ದಾನೆ'' ಎನ್ನುವ ಡಾ॥ ಶ್ರೀನಿವಾಸ ಹಾವನೂರ ಅವರ ಮಾತು ಅನುರೂಪವಾಗಿದೆ. ಕವಿಯಾಗಿ, ಗಮಕಿಯಾಗಿ, ಸಮರ್ಥ ಅನುವಾದಕರಾಗಿ, ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಪರಿಣತಿ ಸಾಧಿಸಿ ಪಂಡಿತರು ಮೆಚ್ಚುವ ಹಾಗೆ ನಾಟಕಗಳನ್ನು ರೂಪಾಂತರಿಸಿ, 'ಅಭಿನವ ಕಾಳಿದಾಸ' ಬಿರುದಾಂಕಿತ ಶಾಸ್ತ್ರಿಗಳನ್ನು ಸಾಹಿತ್ಯ ಜಗತ್ತು ಸದಾ ಸ್ಮರಿಸುತ್ತದೆ.

ಶೋಕಿಪುದೇನಿರ ತೆಗೆ ಪರ
ಲೋಕಕೆ ಬಸವಪ್ಪಶಾಸ್ತ್ರಿ ಪೋದುದಕಾಗಳ್
ಲೋಕೋತ್ತರ ಕವಿಯೆಂದು ವಿ
ವೇಕಿಗಳಿಂ ಶ್ಲಾಘ್ಯನಾದನೀತನೆ ಧನ್ಯಂ

ಬಸವಪ್ಪ ಶಾಸ್ತ್ರಿಗಳ ಬಗ್ಗೆ ಶ್ರೇಷ್ಠ ಸಾಹಿತಿಗಳ ಮಾತುಗಳನ್ನು ಇಲ್ಲಿ ಉಲ್ಲೇಖಿಸುವುದು ಅಗತ್ಯವೆಂದು ಕಾಣುತ್ತದೆ.:

ರಾಷ್ಟ್ರಕವಿ ಕುವೆಂಪುರವರು ಶ್ರೀ ಎಂ. ಜಿ. ನಂಜುಂಡಾರಾಧ್ಯರಿಗೆ ಬರೆದ ಪತ್ರರಲ್ಲಿ ಹೀಗೆ ಹೇಳಿದ್ದಾರೆ:

''ಅವರ ಅನೇಕ ಗದ್ಯಪದ್ಯ ನಾಟಕಾದಿ ಕೃತಿಗಳು ಶಾಲೆಗಳಲ್ಲಿ, ಪ್ರೌಢಶಾಲೆಗಳಲ್ಲಿ ಮಾತ್ರವಲ್ಲದ ವಿಶ್ವವಿದ್ಯಾನಿಲಯದವಲ್ಲಿಯೂ ಪಠ್ಯಗ್ರಂಥಗಳಾಗಿದ್ದವು. ವಿದ್ಯಾರ್ಥಿಯಾಗಿದ್ದಾಗ ಅವರ ಶಾಕುಂತಲ ನಾಟಕದ ಅಧ್ಯಯನದಿಂದ ಕಾಳಿದಾಸನ ಮಹೋಜ್ವಲ ಪ್ರಜ್ಞಾಜ್ಯೋತಿಮಂಡಲದ ದೂರದರ್ಶನದಿಂದ ಪುಳಕಿತರಾಗುತ್ತಿದ್ದ ವಿದ್ಯಾರ್ಥಿ ಸಹೃದಯರಲ್ಲಿ ನಾನೂ ಒಬ್ಬನಾಗಿದ್ದೆ''.

'ಬಸವಪ್ಪ ಶಾಸ್ತ್ರೀ' ಗ್ರಂಥದ ಮುನ್ನುಡಿ (1945) ಯಲ್ಲಿ ಶಾಸ್ತ್ರಿಗಳ ಬಗ್ಗೆ ಡಿ. ವಿ. ಗುಂಡಪ್ಪನವರು ಹೀಗೆ ಹೇಳುತ್ತಾರೆ:

''ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಷಡಕ್ಷರಿಯ ಯುಗದಿಂದ ಷೇಕ್ಸಪಿಯರ್‌ನೋದಿದವರ ಯುಗಕ್ಕೆ ಸೇತುವೆ ಪ್ರಾಯರಾಗಿರುವ ಕವಿಗಳಲ್ಲಿ ಬಸವಪ್ಪಶಾಸ್ತ್ರಿಗಳು ಅತ್ಯಂತ ಪ್ರಸಿದ್ಧರು. ಚಂಪೂ ಸಂಪ್ರದಾಯದ ಶೈಲಿ ಅವರಿಗೆ ವಿಧೇಯವಾಗಿತ್ತು. ಆಧುನಿಕ ಲೋಕ ಕಲಾಭಿರುಚಿಯೂ ಅವರ ಸಹಾನುಭೂತಿಯನ್ನು ಪಡೆದುಕೊಂಡಿತ್ತು. ಅವರ 'ಶಾಕುಂತಲ' 'ದಮಯಂತೀ ಸ್ವಯಂವರ' ಗಳು ವಿದ್ವದ್ರಸಿಕರಿಗೆ ಪ್ರಿಯವಾಗಿರುವಂತೆ ಅವರ 'ಸಾವಿತ್ರೀ ಚರಿತ್ರೆ' ಸರ್ವಜನಾದೃತವಾಗಿದೆ. ಹೀಗೆ ಒಂದು ಕಡೆ ಓಜಸ್ಸು ಗಾಂಭೀರ್ಯಗಳಿಂದಲೂ ಇನ್ನೊಂದು ಕಡೆ ಲಾಲಿತ್ಯ ಪ್ರಸಾದಗಳಿಂದಲೂ ಮನೋರಂಜಕವಾಗಿರುವ ಸಾಹಿತ್ಯವನ್ನು ಅವರು ನಿರ್ಮಿಸಿದರು..... ಪ್ರತಿಭೆ ಬಸವಪ್ಪ ಶಾಸ್ತ್ರಿಗಳಲ್ಲಿ ಮಹಾಕಾವ್ಯೋಪಾಸನೆಯಿಂದಲೂ, ಶಾಸ್ತ್ರವ್ಯಾಸಂಗದಿಂದಲೂ ಪರಿಪುಷ್ಟವಾಗಿತ್ತು. ಈ ಅಂಶವನ್ನು ಒತ್ತಿಹೇಳಬೇಕೆನ್ನಿಸುತ್ತದೆ. ಈಗ ಕನ್ನಡದಲ್ಲಿ ಲೇಖನೋತ್ಸಾಹ ಹರಡುತ್ತಿದೆ. ಆದರೆ ಸಂಸ್ಕಾರ ಪಡೆಯದ ಉತ್ಸಾಹ, ಮುಖಮೂತಿ ತಿದ್ದದ ಒರಟು ಕಲ್ಲಿನಂತೆ. ಒಂದು ಕಲ್ಲು ಕಟ್ಟಡ ಕಟ್ಟಲು ಒದಗಬೇಕಾದರೆ, ಉಳಿ ಚಮ್ಮಟಿಗೆಗಳಿಂದ ಸಂಸ್ಕಾರ ಪಡೆಯಬೇಕು. ಲೇಖನೋತ್ಸಾಹ ಪ್ರಯೋಜನವಾಗಬೇಕಾದರೆ, ಅದರ ಜೊತೆಗೆ ಶಾಸ್ತ್ರಾಭ್ಯಾಸರೂಪ ಪೂರ್ವಸಿದ್ಧತೆ ಬೇಕು. ಯಾವ ಮಹಾಸಿದ್ಧಿಗೂ ಪ್ರಾಪ್ತವಾದದ್ದು ತಪಸ್ಸು. ಬಸವಪ್ಪ ಶಾಸ್ತ್ರಿಗಳ ಪ್ರತಿಭೆ ಜನ್ಮಸಿದ್ಧವಾದದ್ದಾದರೂ ಅದು ಸರ್ವಾಂಗ ಮನೋಹರವಾಗಿ ಬೆಳೆದು ಪುಷ್ಟವಾಗಿ ಲೋಕರಂಜಕವಾದದ್ದು ಅವರ ಪಾಂಡಿತ್ಯರೂಪ ತಪಃಪ್ರಭಾವದಿಂದ.''

ಪ್ರೊ. ಎಚ್. ರಾಮಚಂದ್ರರಾಯರು 'ಶರಣ ಸಾಹಿತ್ಯ'ದಲ್ಲಿ (ಸಂ 3, ಸಂ 11 1932) ಶಾಸ್ತ್ರಿಗಳ ಭಾಷಾಂತರ ಶಕ್ತಿಯ ಬಗ್ಗೆ ತಮ್ಮ ಮೆಚ್ಚುಗೆಯನ್ನು ಹೀಗೆ ವ್ಯಕ್ತಪಡಿಸಿದ್ದಾರೆ-

''ಬಸವಪ್ಪಶಾಸ್ತ್ರಿಗಳ ಭಾಷಾಂತರ ಶಕ್ತಿಯನ್ನು ಕಾಣಬೇಕಾದರೆ ಅವರು ರಚಿಸಿರುವ ಶೃಂಗಾರಕ್ಕಾರಣ ತಾನೆನಿಸಿ ಮೆರೆವ ಶಾಕುಂತಲ ನಾಟಕದ ಭಾಷಾಂತರವನ್ನು ಪರಿಶೀಲಿಸಬೇಕು. ಈ ಭಾಷಾಂತರವು ಅವರ ಭಾಷಾಂತರ ಶಕ್ತಿಗೆ ಒರೆಗಲ್ಲು. ಏಕೆಂದರೆ ಕಾಳಿದಾಸನು ಪರಿವರ್ತನೆಗೆ ಸುಲಭನಲ್ಲ. ಅನುಕರಣಾತೀತನಾದ ಆತನ ಶೈಲಿ ಪರಿವರ್ತನಕಾರನ ಮೃತ್ಯು. ಕಾಳಿದಾಸನ ಶಕ್ತಿಯನ್ನು ಹೊಗಳಲು ಎಲ್ಲರಿಗೂ ಆನಂದ. ಆದರೆ ಅವನ ಕಾವ್ಯಗಳನ್ನು ಭಾಷಾಂತರಿಸತೊಡಗಿದವರು ನಿರಾಶರಾಗುತ್ತಾರೆ. ಇಂತಹ ಕಷ್ಟಕರವಾದ ಕಾರ್ಯವನ್ನು ಶಾಸ್ತ್ರಿಗಳು ವಿದ್ವಜ್ಜನರು ಮೆಚ್ಚುವಂತೆ ಮಾಡಿದ್ದಾರೆ. ಕಾಳಿದಾಸನ ಶಾಕುಂತಲವು ಪ್ರಪಂಚದ ಎಲ್ಲಾ ಭಾಷೆಗಳಿಗೂ ಪರಿವರ್ತಿತವಾಗಿದೆ. ಆದರೆ ಎಲ್ಲಾ ಪರಿವರ್ತನೆಗಳಿಗಿಂತಲೂ ಶಾಸ್ತ್ರಿಗಳವರದು ಉತ್ತಮವೆಂದು ಧೈರ್ಯವಾಗಿ ಹೇಳಬಹುದು.''

ಕನ್ನಡ 'ಶಾಕುಂತಲ'ವನ್ನು ಓದುವವರ ಮನಸ್ಸಿನಲ್ಲಿ ಭಾಷಾಂತರವನ್ನು ಓದುತ್ತಿದ್ದೇನೆ ಎಂಬ ಅಭಿಪ್ರಾಯವು ಬರಲು ಎಡೆಗೊಡದೆ ಶಾಸ್ತ್ರಿಗಳು ತಮ್ಮ ಕೈವಾಡವನ್ನು ಹಿಂದಿಟ್ಟು ತಮ್ಮ ವ್ಯಕ್ತಿತ್ವವನ್ನು ಹೊರಗಾಣಿಸದೆ ಕಾಳಿದಾಸನ ಮನೋವೃತ್ತಿ, ಕಾಳಿದಾಸನ ಭಾಗವತಿ ಮತ್ತು ಕಾಳಿದಾಸನ ಚಿತ್ರಗಳನ್ನೇ ಓದಿ ಅನುಭವಿಸುತ್ತಿರುವೆವು ಎಂಬ ಭಾವನೆಯು ಉತ್ಪನ್ನವಾಗುವ ರೀತಿಯಲ್ಲಿ ಭಾಷಾಂತರಿಸಿದ್ದಾರೆ.

ಒಟ್ಟಿನಲ್ಲಿ ಭಾಷಾಂತರವೇ ಒಂದು ದೊಡ್ಡ ಕಲೆ. ಈ ಕಲೆಯ ಉಪಾಸಕರು ಎಷ್ಟೋ ಮಂದಿ ಇದ್ದಾಗ್ಯೂ ಶಾಸ್ತ್ರಿಗಳು ಅದರಲ್ಲಿ ಸಿದ್ಧಿಹೊಂದಿದಂತೆ ಇತರರು ಹೊಂದಿರುವರೆಂದು ಹೇಳಲು ಸಾಧ್ಯವಿಲ್ಲ. ಭಾಷಾಂತರಕಾರನು ಎರಡು ವಿಧವಾದ ಜನರನ್ನು ಮೆಚ್ಚಿಸಬೇಕು. ಮೊದಲನೆಯದಾಗಿ ಪರಿಚಿತರು. ಇವರು ಭಾಷಾಂತರಕಾರನು ಮೂಲಪದಗಳಿಗೆ ಶುದ್ಧವಾದ ಮತ್ತು ಉಚಿತವಾದ ಪದಗಳನ್ನು ಕೊಡುತ್ತಾನೆಯೇ ಎಂಬುದನ್ನು ಪರೀಕ್ಷಿಸುವರು. ಶಾಸ್ತ್ರಿಗಳ ''ಉಮ್ಮಳವಾಂಪಳ್'' ''ಕೊಂಕುಗೆಯುತ್ತ'' ''ನಡೆಮಿಡುಕ'' ''ಮಿನುಗುವ ಮೊನೆವಲ್ಗಳ್'' ಮುಂತಾದ ಅರ್ಥವತ್ತಾದ, ಭಾವಗರ್ಭಿತವಾದ ಮತ್ತು ಉಚಿತವಾದ ಪದಗಳು ಯಾವ ವಿದ್ವಾಂಸನನ್ನಾದರೂ ತಲೆದೂಗಿಸಲೇಬೇಕು.

ಪದ್ಯಗಳ ಒಟ್ಟರ್ಥ, ಭಾವ ಇವುಗಳ ಕಡೆಗೂ ಗಮನವಿತ್ತು ಭಾಷಾಂತರಿಸಿರುವುದರಿಂದ ಇವರ ಭಾಷಾಂತರವು ಎರಡನೆಯ ಪಂಗಡದವರಾದ 'ಸಾಹಿತಿ'ಗಳಿಗೂ ಹರ್ಷವನ್ನುಂಟುಮಾಡಿದೆ. ಹೀಗೆ ಸಹೃದಯರೆಲ್ಲರನ್ನು ತಮ್ಮ ಭಾಷಾಂತರ ಶಕ್ತಿಯಿಂದ, ಈ ಕಲೆಯ ಚಾತುರ್ಯದಿಂದ ಮುಗ್ಧರನ್ನಾಗಿ ಮಾಡಿರುವುದಲ್ಲದೆ ಇವರ 'ಶಾಕುಂತಲ'ದ ಭಾಷಾಂತರವು ಕಾಳಿದಾಸನನ್ನೂ ತಲೆದೂಗುವಂತೆ ಮಾಡಿದೆ. ಇವರಿಗೆ ಸಹೃದಯರಿತ್ತ 'ಅಭಿನವ ಕಾಳಿದಾಸ' ಎಂಬ ಬಿರುದು ಸಾರ್ಥಕ.

20.12.1945ರಲ್ಲಿ ಬೆಂಗಳೂರು ಕಾವ್ಯಕಲಾ ಸಂಘದ ಆಶ್ರಯದಲ್ಲಿ ನಡೆವ ಬಸವಪ್ಪಶಾಸ್ತ್ರಿಗಳ ಶತಮಾನೋತ್ಸವದಲ್ಲಿ ಮಾಡಿದ ಭಾಷಾಣದಲ್ಲಿ ಶ್ರೀ ಎಸ್. ಜಿ. ಶಾಸ್ತ್ರಿಗಳು ಬಸವಪ್ಪಶಾಸ್ತ್ರಿಗಳ ಬಗ್ಗೆ ಹೀಗೆ ಹೇಳುತ್ತಾರೆ:

''ನಮ್ಮ ತಾತಂದಿರಾದ ಗರಳಪುರಿ ಶಾಸ್ತ್ರಿಗಳಲ್ಲಿ ಬಸವಪ್ಪಶಾಸ್ತ್ರಿಗಳು, ಅಳಿಯ ಲಿಂಗರಾಜರೊಂದಿಗೆ ವಿದ್ಯಾಭ್ಯಾಸ ಮಾಡಿದರು. ನಮ್ಮ ತಂದೆ 'ಕವಿತಿಲಕ' ಅಯ್ಯಾಶಾಸ್ತ್ರಿಗಳು ಬಸವಪ್ಪಶಾಸ್ತ್ರಿಗಳ ಸಹಪಾಠಿಗಳು. ಅವರು ಗರಳಪುರಿ ಶಾಸ್ತ್ರಿಗಳ ಅಪ್ಪಣೆಯಂತೆ ಬಸವಪ್ಪಶಾಸ್ತ್ರಿಗಳಲ್ಲಿ ಕನ್ನಡ ಕಲಿತು ಕವಿತ್ವಕ್ಕೆ ಆರಂಭಮಾಡಿದರು. ಕನಿಷ್ಠಪಕ್ಷ ಹತ್ತುಸಾವಿರ ಶ್ಲೋಕಗಳನ್ನಾದರೂ ಕಂಠಪಾಠಮಾಡದ ಹೊರತು ಕವಿತ್ವಕ್ಕೆ ಕೈಹಾಕಬಾರದೆಂದು ಗರಳಪುರಿ ಶಾಸ್ತ್ರಿಗಳು ಮಗನಿಗೆ ಬುದ್ಧಿವಾದ ಹೇಳಿ ಬಸವಪ್ಪಶಾಸ್ತ್ರಿಗಳನ್ನು ಉದಾಹರಣೆಯಾಗಿ ತೋರುತ್ತಿದ್ದರು.

ಬಸವಪ್ಪಶಾಸ್ತ್ರಿಗಳು ''ಶೂರಸೇನ ಚರಿತ್ರೆ''ಯನ್ನು ಭಾಷಾಂತರಿಸಿದರು. 1903ರಲ್ಲಿ ''ಗ್ರಾಜುಯೇಟ್ಸ್ ಅಸೋಸಿಯೇಷನ್ನಿ''ನಲ್ಲಿ ಅದನ್ನು ಅಭಿನಯಿಸಿದರು. ಆಗ ಷೇಕ್ಸ್‌ಪಿಯರ್‌ನೇ ಕನ್ನಡ ಕವಿಯಾಗಿ ಬಂದು ಬರೆದಿದ್ದರೂ ಬಸವಪ್ಪಶಾಸ್ತ್ರಿಗಳಿಗಿಂತಲೂ ಹೆಚ್ಚಾಗಿ ಬರೆಯಲಾಗುತ್ತಿರಲಿಲ್ಲ ಎಂದು ನಾಟಕ ನೋಡಿದ ವಿದ್ವಾಂಸರು ಮುಕ್ತಕಂಠದಿಂದ ಅಭಿಪ್ರಾಯಪಟ್ಟರು.''

ಮೇಲಿನ ದೊಡ್ಡವರ ಮಾತುಗಳು ಬಸವಪ್ಪಶಾಸ್ತ್ರಿಗಳು ಎಂತಹ ಶ್ರೇಷ್ಠ ವಿದ್ವಾಂಸರಾಗಿದ್ದರು ಎಂದು ತೋರಿಸುವುದಲ್ಲದೆ ಭಾಷಾಂತರದಲ್ಲಿ ಅವರಿಗೆ ಎಂತಹ ಪ್ರಭುತ್ವವಿತ್ತೆಂದು ಅರಿವಾಗುತ್ತದೆ. ಬಸವಪ್ಪಶಾಸ್ತ್ರಿಗಳು ಭಾಷಾಂತರ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಅಮೋಘ ರತ್ನ ಎಂಬುದು ಸುಸ್ಪಷ್ಟ.

■

## ಅಡಿಟಿಪ್ಪಣಿ

1. ಬಸವಪ್ಪ ಶಾಸ್ತ್ರಿ, ಎಂ. ಜಿ. ನಂಜುಂಡಾರಾಧ್ಯ, ಬೆಂಗಳೂರು 1945, ಡಿ. ವಿ. ಗುಂಡಪ್ಪನವರ ಟೀಕೆ. ಪುಟ 111
2. ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಸಮಗ್ರ ಕೃತಿಗಳು. ಎಂ. ಜಿ. ನಂ. 1977 ಪುಟ 3 ಕುವೆಂಪು ಸಂದೇಶ
3. ರಂಗನಾಥ ಶ್ರೀರಂಗ ಮುಗಳಿ
4. ಬಿ. ಶಿವಮೂರ್ತಿ ಶಾಸ್ತ್ರಿ, ಆಸ್ಥಾನ ವಿದ್ವಾನ್, ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು. ಬೆಂಗಳೂರು 1974 ಪುಟ 50
5. ತ.ಸು. ಶಾಮರಾಯ, ಕನ್ನಡ ನಾಟಕ, ಮೈಸೂರು 1962 ಪುಟ 104-105
6. ತ.ಸು. ಶಾಮರಾಯ, ಕನ್ನಡ ನಾಟಕ, ಮೈಸೂರು 1962 ಪುಟ 105
7. ಸಿ. ಜಿ. ಪುರುಷೋತ್ತಮ್, ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ 6. ಪುಟ - 84

## ೩. ಶ್ರೀಕಂಠೇಶಗೌಡರ 'ಪ್ರತಾಪರುದ್ರದೇವ'

### ( ಇಂಗ್ಲಿಷ್‌ನಿಂದ ಕನ್ನಡಕ್ಕೆ ಬಂದ ನಾಟಕ )

ಶ್ರೀ ಎಂ. ಎಲ್. ಶ್ರೀಕಂಠೇಶಗೌಡರು (1852-1926) ವೃತ್ತಿಯಲ್ಲಿ ವಕೀಲರಾಗಿದ್ದರೂ ಸಾಹಿತ್ಯ ಮತ್ತು ಪತ್ರಿಕೋದ್ಯಮದಲ್ಲಿ ಆಸಕ್ತಿ ಹೊಂದಿದ್ದರು. 19ನೇ ಶತಮಾನದ ಕೊನೆಯ ದಶಕದಲ್ಲಿ ತಮ್ಮ ಕೃತಿಗಳನ್ನು ಪ್ರಕಟಿಸಿ ಹೊಸಗನ್ನಡ ಸಾಹಿತ್ಯಕ್ಕೆ ಭದ್ರವಾದ ಅಡಿಗಲ್ಲು ಹಾಕಿದರು. ಅವರು ಬಗೆಬಗೆಯ ಸಾಹಿತ್ಯ ಕೃತಿಗಳನ್ನು ರಚಿಸಿದ್ದರೂ ಅವರು ಪ್ರಸಿದ್ಧರಾದದ್ದು ಶೇಕ್ಸ್‌ಪಿಯರ್‌ನ ಎರಡು ನಾಟಕಗಳ ರೂಪಾಂತರದಿಂದ. ಅವರ 'ಪ್ರತಾಪರುದ್ರದೇವ' (ಮ್ಯಾಕ್‌ಬೆತ್) 1895ರಲ್ಲೂ, ಪ್ರಮೀಳಾರ್ಜುನೀಯಂ (ಎ ಮಿಡ್‌ಸಮರ್ ನೈಟ್ಸ್ ಡ್ರೀಮ್ಸ್) 1896ರಲ್ಲೂ ಪ್ರಕಟಗೊಂಡವು.

'ಪ್ರತಾಪರುದ್ರದೇವ' ಶೇಕ್ಸ್‌ಪಿಯರ್‌ನ 'ಮ್ಯಾಕ್‌ಬೆತ್' ನಾಟಕದ ರೂಪಾಂತರ. ಈ ರೂಪಾಂತರ ರಚಿಸುವಲ್ಲಿ ಗೌಡರು ತುಂಬಾ ಜಾಣತನವನ್ನು ಪ್ರದರ್ಶಿಸಿದ್ದಾರೆ. ನಮ್ಮ ಜನರ ಜೀವನವನ್ನು ನೋಡಿ ಅದಕ್ಕೆ ಸರಿಯಾಗಿ ಈ ಪಾಶ್ಚಾತ್ಯ ನಾಟಕವನ್ನು ಹೊಂದಿಸಿದ್ದಾರೆ. ಅವರಲ್ಲಿರುವ ಪ್ರತಿಭೆ ಸ್ವತಂತ್ರ ನಾಟಕಗಳನ್ನು ರಚಿಸುವಷ್ಟು ಪ್ರೌಢವಾಗಿದೆ. ಡಾ. ಡಿ. ವಿ.ಗುಂಡಪ್ಪನವರು ಇವರ ಕುರಿತು ಬರೆಯುತ್ತಾ ಹೀಗೆ ಹೇಳುತ್ತಾರೆ:

''ಶ್ರೀಕಂಠೇಶಗೌಡರ ಬಗೆಗೆ ಅವರ ಗ್ರಂಥಗಳ ಕಾರಣದಿಂದ ನನ್ನಲ್ಲಿ ಗೌರವ ವಿಶ್ವಾಸಗಳು ಅಂಕುರಿಸಿದ್ದವು. ಅಷ್ಟು ಹಿಂದಿನ ಕಾಲದಲ್ಲಿಯೇ ಎಂದರೆ ಎಪ್ಪತ್ತು ಎಂಬತ್ತು ವರ್ಷಗಳ ಹಿಂದೆಯೇ ಅವರು ಕನ್ನಡಕ್ಕಾಗಿ ಶ್ರದ್ಧೆ ಸಾಮರ್ಥ್ಯಗಳಿಂದ ಕೆಲಸ ಮಾಡಿದ್ದವರು. ನನಗೆ ತಿಳಿದಮಟ್ಟಿಗೆ ಒಕ್ಕಲಿಗ ಜನಾಂಗದಲ್ಲಿ ಪ್ರಸಿದ್ಧರಾದ ಸಾಹಿತಿಗಳಲ್ಲಿ ಶ್ರೀಕಂಠೇಗೌಡರೇ ಪ್ರಪ್ರಥಮರು....... ಆಗಿನವರ ಪ್ರಯತ್ನ ಕನ್ನಡಕ್ಕೆ ಒಂದು ಹೊಸ ಜಾತಿಯ ವಸ್ತುವನ್ನು ಒಂದು ಹೊಸ ಪರಿಪಾಟಿಯನ್ನು ತಂದುಕೊಡಬೇಕೆಂಬುದು. ಅದು ಹೊಸ ಪ್ರಯತ್ನ. ಅಪೂರ್ವವಾದ ಪ್ರಯತ್ನ. ಮೇಲ್ಪಂಕ್ತಿಯಿಲ್ಲದಿದ್ದ ಪ್ರಯತ್ನ...... ಈ ದೃಷ್ಟಿಯಿಂದ ನೋಡಿದರೆ ಶ್ರೀಕಂಠೇಶಗೌಡರ ಪ್ರಯತ್ನ ಸ್ತೋತ್ರಾರ್ಹವಾದದ್ದು''. ಅವರ ಕೃತಿಗಳ ಬಗ್ಗೆ ಡಾ॥ ಹಾ. ಮಾ. ನಾಯಕರು ಹೀಗೆ ಹೇಳಿದ್ದಾರೆ. ''ಇಂಗ್ಲಿಷ್ ಸಾಹಿತ್ಯಕ್ಕೆ ಮನಸ್ಸುಕೊಟ್ಟು ಆ ಸಾಹಿತ್ಯದ ಸೌಂದರ್ಯ ಸಂಪತ್ತುಗಳನ್ನು ಕನ್ನಡಕ್ಕೆ ತರಬೇಕೆಂದು ಸಂಕಲ್ಪಿಸಿ ಯಶಸ್ಸು ಗಳಿಸಿದ ಆದ್ಯರಲ್ಲಿ ಶ್ರೀಕಂಠೇಶಗೌಡರು ವಿಶೇಷ ಸ್ಥಾನ ಪಡೆದಿದ್ದಾರೆ. ನಮ್ಮ ಸಾಹಿತ್ಯಕ್ಕೆ ಮೊದಲ ಬಾರಿಗೆ ಹಲವು ಹೊಸ ಪ್ರವೃತ್ತಿಗಳನ್ನು ತಂದುಕೊಟ್ಟು ಕನ್ನಡಿಗರ ಚಿರಕೃತಜ್ಞತೆಗೆ ಪಾತ್ರರಾಗಿದ್ದಾರೆ. ಇಂದಿನ ಕನ್ನಡ ಸಾಹಿತ್ಯ ಸೌಧ -ಅದು ಎಷ್ಟೇ ನವ್ಯವಾಗಿರಲಿ - ಶ್ರೀಕಂಠೇಶಗೌಡರೂ ಅವರಂಥ ಅನೇಕರೂ ಕಟ್ಟಿದ ನೆಲಗಟ್ಟಿನ ಮೇಲೆ ನಿಂತಿದೆ ಎಂಬುದನ್ನು ನಾವು ಮರೆಯುವಂತಿಲ್ಲ.''

ಕನ್ನಡ ನಾಟಕಗಳ ಇತಿಹಾಸವನ್ನು ಬರೆಯುವಾಗ ಶ್ರೀಕಂಠೇಶಗೌಡರ ಕೃತಿ ವಿವೇಚನೆ ಮಾಡುತ್ತ ಶ್ರೀ ತ. ಸು. ಶಾಮರಾಯರು ಹೀಗೆ ಬರೆಯುತ್ತಾರೆ.

"ಇಂಗ್ಲಿಷ್ ನಾಟಕಗಳನ್ನು ಕನ್ನಡಕ್ಕೆ ಅನುವಾದ ಮಾಡ ಹೊರಟವರಲ್ಲಿ ಶ್ರೀಮಾನ್ ಶ್ರೀಕಂಠೇಶಗೌಡರ ಹೆಸರು ಅಗ್ರಗಣ್ಯವಾದುದು. ಅವರ ಭಾಷಾಂತರ ಶಕ್ತಿಗಿಂತಲೂ ಅವರ ಕನ್ನಡ ಅಭಿಮಾನಕ್ಕಾಗಿ ಅವರನ್ನು ಕನ್ನಡಿಗರು ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ. ವಿದ್ಯಾವಂತರು ಕನ್ನಡವನ್ನು ಕೀಳಾಗಿ ಕಾಣುತ್ತಿದ್ದ ಕಾಲವದು ..... ಸಮಾಜದಲ್ಲಿ ಉನ್ನತ ಸ್ಥಾನದಲ್ಲಿದ್ದ ಅವರು ನಿರರ್ಥಕವಾದರೂ ಬೇಕಾದಷ್ಟು ಅನರ್ಥಕಾರಿಯಾಗಿದ್ದ ಕನ್ನಡದ ಮೇಲಿನ ಕೀಳುಭಾವನೆಯನ್ನು ತ್ಯಜಿಸಿ ಕನ್ನಡ ಕಾವ್ಯ ಸೃಷ್ಟಿಗೆ ಕೈ ಹಾಕಿದರು. ತಮ್ಮ ಪ್ರಥಮ ಕೃತಿಯಾದ 'ಪ್ರತಾಪರುದ್ರದೇವ' (ಮ್ಯಾಕ್‌ಬೆತ್) ನಾಟಕಕ್ಕೆ ವಿಸ್ತಾರವಾದ ಒಂದು ಮುನ್ನುಡಿಯನ್ನು ಬರೆದು ಭಾಷಾಂತರಕಾರರಿಗೆ ಒಂದು ಮಾರ್ಗದರ್ಶನವಿತ್ತು. ಜನರಲ್ಲಿ ಕನ್ನಡದ ಅಭಿಮಾನವನ್ನು ಕೆರಳಿಸಿದವರು. ಅಷ್ಟೇ ಅಲ್ಲದೇ ನೂತನ ವಿಧಾನದ ನಾಟಕಗಳನ್ನಾಡುವ ವಿಚಾರದಲ್ಲಿ ನಟರಿಗೂ ಬೇಕಾದಷ್ಟು ಸಲಹೆಗಳನ್ನು ಕೊಟ್ಟು ಕನ್ನಡ ನಾಟಕದ ಜಗತ್ತಿನಲ್ಲಿ ನೂತನ ಸಂಪ್ರದಾಯವೊಂದನ್ನು ಆರಂಭಿಸಿದರೆಂದು ಹೇಳಬಹುದು."

ಕನ್ನಡದ ರಂಗಭೂಮಿಯ ಇತಿಹಾಸವನ್ನು ನಿರೂಪಿಸುತ್ತಾ ಶ್ರೀಕಂಠೇಶಗೌಡರ ಬಗ್ಗೆ ಡಾ॥ ಹೆಚ್. ಕೆ. ರಂಗನಾಥ್ ಹೀಗೆ ಬರೆದಿದ್ದಾರೆ:

M. L. Srikantesh Gowda was one of the first and foremost men to translate Shakespeare. The best known of his translations are of 'Macbeth' (Prataparudradeva) and 'A Midsummer Night's Dream' (Pramilarjuniya). His attempts to place the themes in native settings met wih considerable success, but it necessarily made him deviate from the original in details. He gave popular local names to the original characters and employed easy flowing simple Kannada. Of his renderings. Prataparudradeva is better known and has been repatedly stayed by the Ratnavali Theatrical company of Varadachar."[4]

ಗೌಡರ 'ಪ್ರತಾಪ ರುದ್ರದೇವ'ದ ಕತೆ ಹೀಗಿದೆ. ವಿಜಯಧ್ವಜ ಒತ್ತ್ರ ದೇಶದ ರಾಜ. ಅವರ ಸೇನಾಧಿಪತಿ ವೀರಸೇನ 'ನೀನು ರಾಜನಾಗುತ್ತೀಯ' ಎಂದು ಹೇಳಿದ ಮಾಟಗಾರ್ತಿಯರ ಮಾತಿಗೆ ಮರುಳಾಗಿ, ಹೆಂಡತಿ ಚಂದ್ರವಲ್ಲಿಯ ಪ್ರೋತ್ಸಾಹದಿಂದ ರಾಜನನ್ನು ಕೊಲೆ ಮಾಡುತ್ತಾನೆ. ರಾಜನಾದ ನಂತರ ತನ್ನ ಸಿಂಹಾಸನ ಕಾಪಾಡಿಕೊಳ್ಳುವುದಕ್ಕಾಗಿ ಶೂರಸೇನ ಮುಂತಾದ ಅನೇಕರ ಹತ್ಯೆಗೈಯುತ್ತಾನೆ. ಕೊಲೆಯಲ್ಲಿ ಭಾಗಿಯಾದ ಚಂದ್ರವಲ್ಲಿಗೆ ಬುದ್ಧಿಭ್ರಮಣೆಯಾಗುತ್ತದೆ. ಕೊನೆಗೆ ವೀರಸೇನನೇ ಹತ್ಯೆಗೆ ಒಳಗಾಗುತ್ತಾನೆ. ವಿಜಯಧ್ವಜಗ ಮಗ ಪ್ರತಾಪರುದ್ರದೇವ ರಾಜನಾಗುತ್ತಾನೆ. ಮೂಲ ನಾಟಕ 'ವೀರಸೇನ'ನ (ಮ್ಯಾಕ್‌ಬೆತ್) ಹೆಸರಿನಲ್ಲಿದ್ದು ರೂಪಾಂತರದಲ್ಲಿ 'ಪ್ರತಾಪರುದ್ರದೇವ'ನ ಹೆಸರಿನಲ್ಲಿದೆ. ಇಡೀ ನಾಟಕದಲ್ಲಿ ಪ್ರತಾಪರುದ್ರದೇವನ ಪಾತ್ರ ಅಷ್ಟು ಪ್ರಮುಖವಾಗಿಲ್ಲವಿದ್ದರೂ ಖಳನಾಯಕನಾದ 'ವೀರಸೇನ'ನ ಹೆಸರು ಭಾರತೀಯ ಸಂಪ್ರದಾಯದ ಪ್ರಕಾರ ನಾಟಕಕ್ಕೆ ಇಡಲಾಗದು

ಗೌಡರು ಈ ಬದಲಾವಣೆ ಮಾಡಿಕೊಂಡಿದ್ದಾರೆ. ಹಾಗೆಯೇ ಮೂಲದ ನಾಟಕದ 'ಡಂಕನ್' ವಿಜಯಧ್ವಜನಾಗಿ 'ಮ್ಯಾಕ್‌ಬೆತ್' ವೀರಸೇನನಾಗಿ 'ಲೇಡಿಮ್ಯಾಕ್‌ಬೆತ್' ಚಂದ್ರವಲ್ಲಿಯಾಗಿ 'ಸ್ಕಾಟ್‌ಲ್ಯಾಂಡ್' 'ಉತ್ತರದೇಶ'ವಾಗಿ ಬದಲಾಗಿದೆ. ಈ ಎಲ್ಲಾ ಬದಲಾವಣೆಗಳನ್ನು ಭಾರತೀಯ ಪರಿಸರಕ್ಕೆ ಹೊಂದಿಸಿಕೊಳ್ಳಲು ಹಾಗೂ ರಂಗಮಂಚದ ಮೇಲೆ ಸಮರ್ಥವಾಗಿ ತರುವ ದೃಷ್ಟಿಯಿಂದ ಮಾಡಿಕೊಳ್ಳಲಾಗಿದೆ.

ಗೌಡರು ತಮ್ಮ ರೂಪಾಂತರದಲ್ಲಿ ಸಾಕಷ್ಟು ಸ್ವಾತಂತ್ರ ವಹಿಸಿ ಕೆಲವೆಡೆ ಸಂಕ್ಷೇಪಿಸಿ ಕೆಲವೆಡೆ ವಿಸ್ತರಿಸಿ, ಇನ್ನು ಕೆಲವೆಡೆ ಕೆಲವು ವಾಕ್ಯಗಳನ್ನೇ ಕೈಬಿಟ್ಟಿದ್ದಾರೆ. ಇದಕ್ಕೆ ಉದಾಹರಣೆಗಳು-

೧. Lady Macbeth: Here is the smell of the blood still. All the Perfumes of Arabia will not sweeten this little hand (ಶೇಕ್ಸ್ ಪಿರಯರ್) ಚಂದ್ರವಲ್ಲಿ : ರಕ್ತದ ವಾಸನೆ ಇನ್ನೂ ಇದೆಯಲ್ಲ. ಅಹ! ಬ್ರಹ್ಮ ನಿರ್ಮಿತವಾದ ವಿಶಿಷ್ಟ ಪರಿಮಳದಿಂದಲೂ ಈ ಚಿಕ್ಕ ಕೈವಾಸನೆ! ಹೋಗದೆ? ಹುಶ್! ಹುಶ್! ಹುಶ್! (ಶ್ರೀಕಂಠೇಶಗೌಡ)

2. Macbeth : So is the mine; and in such bloody distance that every minute of his being thrusts against my nearest of life and though I could with bare-faced power sweep him four my sight. and bid my will arouch it yet I must not, for certain friends that are both his and mine whose loves I may not drop but vail his fall who I myself stukdown : and there it is that I to your assistance to make love ; masking the business ; from the common eye for sundry weighty realons. (ಶೇಕ್ಸ್‌ಪಿಯರ್)

ವೀರಸೇನ : ನನಗೂ ಅವನು ಶತೃವು. ಅವನಿಂದ ಪ್ರತಿ ನಿಮಿಷದಲ್ಲೂ ನನ್ನ ಗುಂಡಿಗೆ ಕರಗುತ್ತಿರುವುದು. ನನ್ನ ಅಧಿಕಾರ ಬಲದಿಂದಲೇ ಅವನನ್ನು ನಾನು ನಾಶಪಡಿಸಿ ದಕ್ಕಿಸಿಕೊಳ್ಳಬಲ್ಲೆ. ಆದರೆ ನನ್ನ ಕೆಲವು ಸ್ನೇಹಿತರು ಅವನಿಗೂ ಸ್ನೇಹಿತರಾಗಿರುವುದರಿಂದ ಬಹಿರಂಗವಾಗಿ ಅವನನ್ನು ವಧಿಸಿ ಅವರ ನಿಷ್ಠುರಕ್ಕೆ ಗುರಿಯಾಗಲು ನನಗೆ ಸಮ್ಮತವಿಲ್ಲ. ಅದು ಕಾರಣ ನಿಮ್ಮ ಸಹಾಯವನ್ನಪೇಕ್ಷಿಸುತ್ತಿರುವೆನು. ನಾನು ಅವನನ್ನು ವಧಿಸಿದೆನೆಂದು ಜನರಿಗೆ ತಿಳಿಯದಂತೆ ಈ ಕೆಲಸವನ್ನು ನಿಮ್ಮಿಂದ ಮಾಡಿಸಿ ಕಾರ್ಯ ನಿರ್ವಾಹ ಮಾಡಿಕೊಳ್ಳಬೇಕೆಂದಿರುವೆನು (ಶ್ರೀಕಂಠೇಶಗೌಡ).

ಎರಡನೆಯ ಅನುವಾದ ಬಿಗಿಯಾಗಿ ಕಂಡುಬಂದರೆ ಮೊದಲನೆಯದು ಜಾಳು ಎನಿಸುತ್ತದೆ.

ಹತ್ತೊಂಬತ್ತನೆಯ ಶತಮಾನದ ಕನ್ನಡ ಸಾಹಿತ್ಯ ಇತಿಹಾಸವನ್ನು ಈಚೆಗೆ ಸವಿಸ್ತಾರವಾಗಿ ನಿರೂಪಿಸಿರುವ ಡಾ॥ ಶ್ರೀನಿವಾಸ ಹಾವನೂರ ಅವರು ಶ್ರೀಕಂಠೇಶಗೌಡರ ಬಗೆಗೆ ಹೀಗೆ ಬರೆಯುತ್ತಾರೆ:

"………. ಮತ್ತೆ ಕೆಲವರು ಇಂಗ್ಲಿಷ್‌ನಿಂದ ವಿಶೇಷತಃ ಶೇಕ್ಸ್‌ಪಿಯರ್‌ನ ನಾಟಕಗಳನ್ನು ಅನುವಾದಿಸಿ ಐತಿಹಾಸಿಕ ನಾಟಕ ಪರಂಪರೆಗೆ ನಿಮಿತ್ತರಾದರು. ಅವರಲ್ಲಿ ಎಂ ಎಲ್. ಶ್ರೀಕಂಠೇಶಗೌಡರ ಹೆಸರು ಎದ್ದು ಕಾಣುವಂತಹದು…… ಈ ರೀತಿಯ

ರೂಪಾಂತರಗಳಲ್ಲಿ ಶ್ರೀಕಂಠೇಶಗೌಡರ ಸ್ವತಂತ್ರ ರಚನೆಯ ಹೊಳಪು ಅಲ್ಲಲ್ಲಿ ತೋರಿಬರುತ್ತದೆಯಲ್ಲದೇ ಹಲವು ಸನ್ನಿವೇಶ ಚಿತ್ರಣಗಳಲ್ಲಿ ವಾಸ್ತವಿಕತೆಯನ್ನು ಕಾಣಬಹುದು. ಇಂಗ್ಲಿಷ್ ಕೃತಿಗಳಿಂದ ಕನ್ನಡ ವಾಙ್ಮಯವನ್ನು ಪುಷ್ಟಿಗೊಳಿಸಬೇಕೆಂಬ ಪ್ರಜ್ಞೆಯಿದ್ದ ಆರಂಭಕಾರರಲ್ಲಿ ಶ್ರೀಕಂಠೇಶಗೌಡರು ಪ್ರಮುಖರೆನ್ನಬಹುದು.''[5]

ಶ್ರೀಕಂಠೇಶಗೌಡರ ಅನುವಾದಿತ ಕೃತಿ ಹೊರಬಿದ್ದಾಗ ಆಗಿನ ಸಾಹಿತ್ಯ ಜಗತ್ತಿನಲ್ಲಿ ಒಂದು ರೀತಿಯ ಸೋಜಿಗವೇ ಆಯಿತು. ಈ ಬಗ್ಗೆ ಡಾ॥ ಹಾ. ಮಾ. ನಾಯಕರು ಹೀಗೆ ಹೇಳುತ್ತಾರೆ. ''ಸಾಹಿತ್ಯ ವಿಮರ್ಶೆಯಲ್ಲಿ ವೈಯಕ್ತಿಕ ಇಷ್ಟಾನಿಷ್ಟ, ಜಾತೀಯತೆ, ಗುಂಪುಗಾರಿಕೆಗಳು ಶ್ರೀಕಂಠೇಶಗೌಡರ ಕಾಲದಲ್ಲಿಯೂ ಇದ್ದವು ಎಂಬುದಕ್ಕೆ 'ಪ್ರತಾಪರುದ್ರದೇವ' ನಾಟಕ ಪ್ರಕಟವಾದ ಮರು ವರ್ಷವೇ (1896) 'ವಿದ್ಯಾದಾಯಿನಿ' ಪತ್ರಿಕೆಯಲ್ಲಿ ಸೋಜಿಗವೇ ಪೇಳ ಕಬ್ಬವ ಗೌಡಂ? ಎಂಬ ಶೀರ್ಷಿಕೆಯಲ್ಲಿ ಪ್ರಕಟವಾದ ವಿಮರ್ಶೆ – ಪ್ರತಿ ವಿಮರ್ಶೆಗಳು ಸಾಕ್ಷಿಯಾಗಿವೆ. ಪ್ರತಿಭಾ ಪಾಂಡಿತ್ಯಗಳನ್ನು ಗುತ್ತಿಗೆ ಹಿಡಿದಿದ್ದೇವೆಂದು ಭಾವಿಸುವ ವರ್ಗದವರಿಗೆ ಯಾವಾಗಲೂ ಗೌಡರು ಕಾವ್ಯವನ್ನು ಹೇಳುವುದು ಸೋಜಿಗವಾಗಿಯೇ ಕಾಣುತ್ತದೆ.''[6] ವಿದ್ಯಾದಾಯಿನಿ ಪತ್ರಿಕೆಯಲ್ಲಿ ಪ್ರಕಟವಾದ ಶೀರ್ಷಿಕೆಯ ಸಾಲನ್ನು ಶ್ರೀಕಂಠೇಶಗೌಡರು 'ಪ್ರತಾಪರುದ್ರದೇವ' ನಾಟಕದ ಪ್ರಾರಂಭದಲ್ಲಿ ಬರೆದ ಸಾಲುಗಳಿಂದ ತೆಗೆದುಕೊಳ್ಳಲಾಗಿದೆ.

ಕಂ : ವಾಣಿಯೆ ಕರ್ನಾಟಕದೊಳ್ ।
ರಾಣಿಯು ಸೋಜಿಗವೆ ಪೇಳೆ ಕಬ್ಬವ ಗೌಡಂ ॥
ಜಾಣರಿದೋದಿರಿ ನೀವ್ ಬಿ ।
ನ್ನಾಣವ ಕಾಣುವಿರಿದರೊಳು ಮನ್ನಿಸಿ ತಪ್ಪಂ ॥

ಗೌಡರು ಅತಿ ವಿನಯದಿಂದ ಈ ಕೃತಿಯನ್ನು ಅರ್ಪಿಸುವಾಗ ನುಡಿದ ಮಾತುಗಳು ಇವು. ಆ ಕಾಲದಲ್ಲಿ ಶೂದ್ರನೊಬ್ಬ ಸಾಹಿತ್ಯ ರಚನೆಗೆ ಕೈಹಾಕಿದ ಸಾಹಸ ದೊಡ್ಡದೇ. ಇಂತಹ ಸಾಹಸಕ್ಕೆ ಇಳಿದಾಗ ತಪ್ಪಾದಲ್ಲಿ ಜಾಣರಾದ ನೀವು ಕ್ಷಮಿಸಿ ಎಂದು ವಿನೀತರಾಗಿ ನುಡಿದ ಶಬ್ದಗಳನ್ನೇ ತೆಗೆದುಕೊಂಡು ಹೀಯಾಳಿಸುವುದು ಒಳ್ಳೆಯ ಪ್ರವೃತ್ತಿಯಲ್ಲ. ಈ ಪ್ರವೃತ್ತಿಯನ್ನು ನಾವು ಖಂಡಿಸಲೇಬೇಕು. ಇಂತಹವರ ಬಗ್ಗೆ ಡಾ॥ ಹಾ. ಮಾ. ನಾಯಕರು ಬಹಳ ನಿಷ್ಠುರದ ಮಾತನ್ನು ಹೇಳುತ್ತಾರೆ:

''ಇಂಥವರಿಗೆ ಪರಂಪರೆಯ ಪ್ರಜ್ಞೆಯಾಗಲಿ ಇತಿಹಾಸದ ಸಾತತ್ಯ ದೃಷ್ಟಿಯಾಗಲಿ ಇರುವುದು ಸಾಧ್ಯವಿಲ್ಲ. ಇಂದಿನ ಸಾಹಿತ್ಯಿಕ ಸಾಧನೆ ಸಿದ್ಧಿಗಳ ಹಿನ್ನೆಲೆಯಲ್ಲಿರುವ ಸಂಪದ್ಭರಿತವಾದ ಸುದೀರ್ಘ ಸಾಹಿತ್ಯದ ಪರಿಚಯವಂತೂ ಇರುವುದೇ ಇಲ್ಲ. ಎರವಲು ತಂದ ವಿಚಾರಗಳೊಡನೆ ಸರ್ಕಸ್ ಮಾಡುತ್ತಾ ತಾತ್ಕಾಲಿಕ ಸಿದ್ಧಿ ಪ್ರಸಿದ್ಧಿಗಳಿಗೆ ಮಾತ್ರ ಅವರು ಭಾಜನರಾಗುತ್ತಿದ್ದಾರೆ. ಬಣ್ಣ ಸವರುತ್ತಿರುವ ಈ ಜನರಿಗೆ ಶ್ರೀಕಂಠೇಶಗೌಡರಂಥವರು ಇಟ್ಟ ಇಟ್ಟಿಗೆಗಳು ಕಾಣುವುದಿಲ್ಲ.''[7]

'ಪ್ರತಾಪರುದ್ರದೇವ' ನಾಟಕದ 'ಪೀಠಿಕೆ'ಯಲ್ಲಿ ಶ್ರೀಕಂಠೇಶಗೌಡರು ಕನ್ನಡದಲ್ಲಿ ಭಾಷಾಂತರದ ಸಮಸ್ಯೆ ಕುರಿತು ಚರ್ಚಿಸಿದ್ದಾರೆ. ಟ್ರ್ಯಾಡುಟೋರಿ ಟ್ರ್ಯಾಡಿಟುರಿ ( Traduttotori Tradituri )ಎಂದರೆ 'ಭಾಷಾಂತರಕಾರರು ವಿಶ್ವಾಸಘಾತಕರು' ಎಂಬ ಮಾತು ಇಟಲಿಯಲ್ಲಿದೆ. ಅಂದರೆ ಭಾಷಾಂತರಕಾರ ಮೂಲಕೃತಿಯ ರಸವನ್ನು ಅಲ್ಲೇ ಬಿಟ್ಟು ಕಸವನ್ನು ಮಾತ್ರ ತರುತ್ತಾನೆ

ಎಂಬ ಆರೋಪ. ಈ ಆರೋಪದಿಂದ ಮುಕ್ತವಾಗಲು ಎಲ್ಲಾ ಭಾಷಾಂತರಕಾರರು ಬಹಳ ಪ್ರಯತ್ನ ಮಾಡುತ್ತಾರೆ. ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರಿಸುವುದಕ್ಕೆ ಅನೇಕ ಅನುಕೂಲತೆಗಳಿರುವುದೆಂದು ಶ್ರೀಕಂಠೇಶಗೌಡರು ಹೇಳುತ್ತಾರೆ. ಅವರ ಪ್ರಕಾರ ಸಂಸ್ಕೃತದಲ್ಲಿ ಹೇಳಿದ ಜನ, ಅವರ ಆಚಾರ, ವಿಚಾರ, ಪರಿಸರ, ಪುರಾಣ, ಇತಿಹಾಸ, ನೀತಿ, ನ್ಯಾಯ, ಕಾವ್ಯಬಂಧನ, ಅಲಂಕಾರ ಲಕ್ಷಣ, ಛಂದಸ್ಸು ಎಲ್ಲವೂ ಕೂಡ ಕನ್ನಡಕ್ಕೆ ಪರಿಚಿತವಾಗಿರುವುದು ಹಾಗೂ ಹೊಂದಿಕೊಳ್ಳುವುದರಿಂದ ಭಾಷಾಂತರ ಕಷ್ಟವಾಗುವುದಿಲ್ಲ. ಅಲ್ಲದೆ ಸಂಸ್ಕೃತದಿಂದ ಶಬ್ದಗಳು ನಿರಂತರವಾಗಿ ಕನ್ನಡಕ್ಕೆ ಹರಿದು ಬರಲು ಅವಕಾಶವಿರುವುದರಿಂದ ಭಾಷಾಂತರ ಕಷ್ಟವಾಗದು ಎಂಬುದು ಅವರ ಅಭಿಪ್ರಾಯ. ಸಾಮಾನ್ಯವಾಗಿ ಸಂಸ್ಕೃತದಲ್ಲಿ ಪಾಂಡಿತ್ಯವಿರುವವರು ಮಾತ್ರ ಕನ್ನಡದಲ್ಲಿ ಭಾಷಾಂತರಿಸುವ ಕಾರ್ಯಕ್ಕೆ ಇಳಿದಿರುವುದನ್ನು ನಾವು ಕಾಣುತ್ತೇವೆ. ಹಾಗೆಯೇ ಶ್ರೀಕಂಠೇಶಗೌಡರು ಸಂಸ್ಕೃತ ಶಬ್ದಗಳ ಬದಲಿಗೆ ಕನ್ನಡ ಶಬ್ದಗಳೆಂಬ ಹೆಸರಿನಲ್ಲಿ ತದ್ಭವ ಶಬ್ದಗಳ ಪ್ರಯೋಗವನ್ನು ಆಕ್ಷೇಪಿಸಿದ್ದಾರೆ. ಅವರ ಪ್ರಕಾರ ಸಂಸ್ಕೃತ ಶಬ್ದಗಳನ್ನು ಕನ್ನಡಕ್ಕೆ ತರುವುದರಲ್ಲಿ ಯಾವ ತಪ್ಪು ಇಲ್ಲ. ಅಂದರೆ ಈ ಅನುಕೂಲ ಇಂಗ್ಲಿಷ್‌ನಿಂದ ಕನ್ನಡಕ್ಕೆ ಭಾಷಾಂತರಿಸುವಾಗ ಒದಗಿ ಬರುವುದಿಲ್ಲ. ಇಂಗ್ಲಿಷ್ ಸಾಹಿತ್ಯದಲ್ಲಿ ಬರುವ ಜನ, ಆಚಾರ, ವಿಚಾರ, ಪರಿಸರ, ಕಾವ್ಯಬಂಧನ, ಅಲಂಕಾರ, ಲಕ್ಷಣ ಛಂದಸ್ಸು ಎಲ್ಲವೂ ಕನ್ನಡಕ್ಕೆ ಅಪರಿಚಿತವಾದುದು. ಆದ್ದರಿಂದ ಈ ಭಾಷಾಂತರ ಕಷ್ಟಕರವಾದುದು. ಇದನ್ನು ಶ್ರೀಕಂಠೇಶಗೌಡರ ಮಾತಿನಲ್ಲೇ ಕೇಳುವುದು ಒಳಿತು:

''ಕಾವ್ಯಕ್ಕೆ ಅಂದಕೊಡತಕ್ಕ ಅನೇಕ ಅಂಗಗಳಲ್ಲಿ ಛಂದಸ್ಸು ಒಂದಾಗಿರುವುದು. ಇದೇ ಲಕ್ಷಣ, ಅಲಂಕಾರ, ಉಪಮಾನ, ಪುರಾಣ, ಇತಿಹಾಸ, ನೀತಿ, ನ್ಯಾಯ, ಮತ, ಆಚಾರ, ವ್ಯವಹಾರಗಳು ವ್ಯತ್ಯಾಸವಾಗಿರುವಲ್ಲಿ ಭಾಷಾಂತರಿಸುವವನ ಪಾಡೇನು? ಮೊದಲ ಶಬ್ದಗಳ ಅನುಕೂಲತೆ ಹ್ಯಾಗಿರುವುದು? ಇಂಗ್ಲಿಷಿನ ಒಂದು ಶಬ್ದವನ್ನು ಕನ್ನಡ ತೆಗೆದುಕೊಳ್ಳಲು ಅಧಿಕಾರವಿಲ್ಲ. ಚಿಂತೆಯಿಲ್ಲ, ಕನ್ನಡದಲ್ಲಾದರೂ ಇಂಗ್ಲಿಷಿಗೆ ತಕ್ಕ ಶಬ್ದಗಳು ದೊರಕುವುವೋ? ಪ್ರಪಂಚದಲ್ಲಿ ರಸವತ್ತಾಗಿರುವ ವಿಶಿಷ್ಟ ಭಾಷೆಗಳನ್ನು ಸಂಧಿಸುತ್ತಿರುತ್ತಾ ಆ ಭಾಷೆಗಳಲ್ಲಿ ಅಸಾಧಾರಣವಾದ ಶಬ್ದಗಳನ್ನೂ ಅವರ ಕಾವ್ಯಗಳ ರಚನಾ ಚಮತ್ಕಾರಗಳನ್ನೂ ತೆಗೆದುಕೊಂಡು ಮತ್ತೆ ತೆಗೆದುಕೊಳ್ಳುತ್ತಾ ಸಮುದ್ರದಂತಾಗಿರುವ ಇಂಗ್ಲಿಷ್ ಭಾಷೆಯ ಶಬ್ದಗಳಿಗೆ ಸಾಮಾನ್ಯ ವಿಷಯವನ್ನು ಬರಿಯಬೇಕಾದರೂ ಹತ್ತು ಪಂಕ್ತಿಗೆ ಹದಿನಾರು ಕಡೆ ಪರಭಾಷೆಯ ಸಹಾಯವನ್ನಪೇಕ್ಷಿಸುವ ಕನ್ನಡದಲ್ಲಿ ಸಮಾನಾರ್ಥವನ್ನು ಕೊಡುವ ಪ್ರತಿಶಬ್ದಗಳನ್ನು ದೊರಕಿಸಿಕೊಳ್ಳಬೇಕು. ಇಲ್ಲದಿದ್ದರೆ ಸಂಸ್ಕೃತದಲ್ಲಿ ಹುಡುಕಬೇಕು. ಈ ಸಂಸ್ಕೃತವೋ ಭಾರತ ಖಂಡದಲ್ಲೇ  ಹುಟ್ಟಿ, ಬೆಳೆದು, ಲಯವಾಗಿ, ಸಾವಿರಾರು ವರುಷಗಳಾಯಿತು. ಈಗ ಇಂಗ್ಲಿಷ್ ಅದರ ಸಾರವನ್ನು ತೆಗೆದುಕೊಂಡಿರುವುದಲ್ಲದೇ ಪ್ರತಿ ದಿನವೂ ಬೆಳೆಯುತ್ತಲೇ ಬರುತ್ತಿರುವುದು. ಇಂತಹ ಭಾಷೆಯ ಉತ್ತಮ ಗ್ರಂಥವನ್ನು  ಆ ಸಾಮಿತಿಗೆ ಎಡೆಗೊಡದೆ ಕನ್ನಡಿಸಬೇಕೆನ್ನುವುದು. ಆ ಇಂಗ್ಲೇಂಡ್ ದೇಶವಿರತಕ್ಕ ಪಶ್ಚಿಮ ಸಮುದ್ರದ ನೀರನ್ನು ನಮ್ಮ ಕರ್ನಾಟಕ ರಾಜಧಾನಿಯ ದೊಡ್ಡಕೆರೆಗೆ ತರಲು ಮಧ್ಯದಲ್ಲಿರತಕ್ಕ ಅನೇಕ ಸಾವಿರ  ಮೈಲಿಗಳ ನೆಲವನ್ನು, ಅನೇಕ ಉನ್ನತ ಪರ್ವತಗಳನ್ನು, ಅಗಾಧವಾದ ನದಿಗಳನ್ನು, ಅಘೋರವಾದ ಅರಣ್ಯಗಳನ್ನು ದಾಟಿಸಿ ಬರುವಂತೆ ಕಾಲುವೆಗಳನ್ನು  ತೆಗೆಯಬೇಕೆಂದು ಪ್ರಯತ್ನ ಪಟ್ಟಂತಲ್ಲವೇ? ಅದನ್ನು ನಮ್ಮ ದೊಡ್ಡಕೆರೆಗೆ ತಿರುಗಿಸಿದರೆ ನಮ್ಮ ಈಗಿನ  ಕೆರೆಯು ಅದರ ಪ್ರವಾಹವನ್ನು ಹಿಡಿಯುವುದು ಎಲ್ಲಾದರೂ ಹೋಗಲಿ. ಕೆರೆಯು ಉಳಿಯುವುದೋ ಕೊಚ್ಚಿ ಹೋಗುವುದೋ?''[18] ಇಂಗ್ಲಿಷ್ ಸಾಹಿತ್ಯ ಹಾಗೂ ಭಾಷೆಯ

ಬೆಳವಣಿಗೆಯ ವಿಸ್ತಾರವಾದ ಹಿನ್ನೆಲೆಯಲ್ಲಿ ಸಂಸ್ಕೃತ ಭಾಷೆಯ ಮಡಿವಂತಿಕೆಯನ್ನು ದಾಟಿ ''ಸಿರಿಗನ್ನಡಂ ಗೆಲ್ಗೆ'' ಎಂದು ಹರತೊಟ್ಟು ಕನ್ನಡವನ್ನು ಬೆಳೆಸಲು ಎಲ್ಲಾ ಮಾರ್ಗವನ್ನು ಅನುಸರಿಸಬೇಕೆಂಬುದು ಶ್ರೀಕಂಠೇಶಗೌಡರ ಸದಭಿಪ್ರಾಯ. ಈ ವಿಚಾರಗಳನ್ನು ಕೇಳಿ ಅವರು ಯಾಕಾಗಿ ಮ್ಯಾಕ್‌ಬೆತ್ ನಾಟಕವನ್ನು 'ಪ್ರತಾಪರುದ್ರದೇವ' ನಾಮಾಂಕಿತದಲ್ಲಿ ಭಾಷಾಂತರಿಸುವ ಪ್ರಯತ್ನ ಮಾಡಿದ್ದಾರೆಂಬುದರ ಹಿನ್ನೆಲೆಯನ್ನು ವಿವರಿಸಿದ್ದಾರೆ.

ಪ್ರತಾಪರುದ್ರ ದೇವ ನಾಟಕದಲ್ಲಿ ಏನೇನು ಬದಲಾವಣೆ ಮಾಡಿಕೊಂಡಿದ್ದಾರೆಂಬುದರ ಬಗ್ಗೆ ಶ್ರೀಕಂಠೇಶಗೌಡರು ಈ ರೀತಿ ಹೇಳುತ್ತಾರೆ:

''ರೌದ್ರ ಭಯಾನಕ ರಸ ಪ್ರಧಾನವಾದ ಈ ಪ್ರತಾಪರುದ್ರದೇವ ನಾಟಕದ ಶ ಸ್ವಭಾವವನ್ನು ಸಾಧ್ಯವಾದ ಮಟ್ಟಿಗೂ ಕಮ್ಮಿ ಮಾಡದೇ ಇರಬೇಕು. ಇದಕ್ಕೆ ಸಂಗೀತ, ಕುಚೋದ್ಯಗಳನ್ನು ಬೆರಸಿದರ ರಸಭಂಗವಾಗುವುದಲ್ಲದೇ ಮುಖ್ಯರಸಗಳು ಕಮ್ಮಿಯಾಗುವುವು. ಅದು ಕಾರಣ ಪಂಡಿತ ಪಾಮರ ರಚನೆಯಾಗುವಂತೆ ಸಂಗೀತವನ್ನು ಬಿಟ್ಟು ಸಾಧ್ಯವಾದಮಟ್ಟಿಗೆ ವಚನದೊಂದಿಗೆ ನಾನಾ ಬಗೆಯಾದ ಸಮಾಸಮಪಾದ ವೃತ್ತಗಳಿಂದಲೂ, ರಗಳೆಗಳಿಂದಲೂ, ಕಾವ್ಯ ಭಾಗವನ್ನು ಹೇಳಿರುವುದು, ಪಾತ್ರಗಳ ಕೆಳಗಡೆ ಅಧಮ ಪಕ್ಷಕ್ಕಾಗಿ ಕೊಟ್ಟಿರುವ ಸಣ್ಣ ಅಕ್ಷರದ ರಾಗಮಟ್ಟುಗಳನ್ನು ಬಿಟ್ಟು ಕಾವ್ಯಭಾಗದ ಸಾರವನ್ನೇ ಹಿಡಿದು ನಟಿಸಿದರೆ ರಚನೆ ಕೂಡುವುದರಲ್ಲಿ ಸಂದೇಹವಿಲ್ಲ. ಆದರೆ ಈ ರೀತಿ ನಟಿಸಬೇಕೆಂದರೆ ಕೊಂಚ ಶ್ರಮ ತೆಗೆದುಕೊಳ್ಳಬೇಕು. ಇದನ್ನು ಕಂಡು ನಟಿಸತಕ್ಕವರು ಈ ನಾಟಕದ ಗೋಜಿಗೆ ಹೋಗಿ ಆ ಶ್ರಮವನ್ನು ನಾವ್ಯಾತಕ್ಕೆ ತೆಗೆದುಕೊಳ್ಳಬೇಕು. ಇತರ ನಾಟಕಗಳಂತೆ ನಮಗೆ ಪಾರ್ಟ್ ಹಾಕಿರುವಂತೆ 'ಅಂತು ಇಂತು' ಆಟವಾಯಿತು. ಭಾಗವತರಿಗೆ ಕೊಟ್ಟಿದ್ದಂತೂ ಸಾಕು ಎನ್ನೋಣವೆಂದರೆ. ಇದನ್ನು ನಟಿಸತಕ್ಕವರೇ ಇಲ್ಲದೆ ಕಾನನದ ಬೆಳದಿಂಗಳಂತೆ ಬರೆದದ್ದೂ ವ್ಯರ್ಥವಾಗುತ್ತೆಂದು, ತನಗೆ ಅಸಂಗತವಾಗಿ ತೋರುವುದನ್ನು ಉದರಪೋಷಣೆಗಾಗಿ ಸಂಗತವಾದುದ್ದೆಂದು ಕೇಳಿಕೊಂಡು ಪರಾಶ್ರಯವನ್ನು ಮಾಡುವವನಂತೆ, ಉತ್ತಮ ಪಕ್ಷವಲ್ಲದಿದ್ದರೆ ಅಧಮ ಪಕ್ಷವಾಗಿಯಾದರೂ ಇರಲೆಂದು ಈ ನಟನಾ ಜನಗಳ ಆಶ್ರಯಕ್ಕಾಗಿ ಅವರ ಅನುಕೂಲತೆಗೆ ತಕ್ಕಂತೆ ಕೆಳಭಾಗದಲ್ಲಿ ಸಣ್ಣ ಅಕ್ಷರದಲ್ಲಿ ಕೆಲವು ಮಟ್ಟುಗಳನ್ನು ಸೇರಿಸಿ ಮಹಾಕವಿಯ ಉತ್ತಮ ಕಾವ್ಯವನ್ನು ಕೆಡಿಸಿದ್ದಕ್ಕಾಗಿ ಅವರ ಕ್ಷಮಾಯಾಚನೆ ಬೇಡಬೇಕು''[9] ಈ ರೀತಿಯಾಗಿ ಶ್ರೀಕಂಠೇಶಗೌಡರು ಪ್ರಯತ್ನಪೂರ್ವಕವಾಗಿ ಮೂಲಗ್ರಂಥದ ರಸಭಂಗವನ್ನು ಮಾಡಿದುದಕ್ಕಾಗಿ ವಿಷಾದ ವ್ಯಕ್ತಪಡಿಸಿದ್ದಾರೆ. ನೋಟಕರಿಗೆ ತಕ್ಕ ಪಾತ್ರಗಳು. ಪಾತ್ರಕ್ಕೆ ತಕ್ಕ ವೇಷ. ವೇಷಕ್ಕೆ ತಕ್ಕ ಭಾಷೆ. ಭಾಷೆಗೆ ತಕ್ಕ ನಟನೆಗಳಿಲ್ಲದ ಬೆಳಕುಪಟ್ಟೆ ಅರಿವಾಳದ ದೇವತೆಗಳು ಕಾಲಿಗೆ ಗೆಜ್ಜೆಕಟ್ಟಿಕೊಂಡು ಕುಣಿದು ಕುಪ್ಪಳಿಸಿ ಯಕ್ಷಗಾನದ ಆಟದ ಮೂಲಕ ರಸಿಕರನ್ನು ರಂಜಿಸುವ ಯಕ್ಷಗಾನದ ಶೈಲಿಯಲ್ಲಿ ನಮ್ಮ ನಾಟಕಗಳಿದ್ದು ಆದರಿಂದ ರಂಜನೆಯನ್ನು ಪಡೆಯುವ ನಮ್ಮ ರಸಿಕರು ಪಾಶ್ಚಾತ್ಯ ರಂಗಭೂಮಿಯ ಗಂಭೀರತೆಯನ್ನು ಅರ್ಥಮಾಡಿಕೊಳ್ಳುವುದು ಕಷ್ಟವೆಂಬುದು ಅವರ ಅಭಿಪ್ರಾಯ. ನಟನಾದವನು ರಸವತ್ತಾದ ಛಂದೋಂಬುಧಿಯನ್ನು ಅರ್ಥಮಾಡಿಕೊಂಡು ಕವಿ ಹೃದಯವನ್ನು, ಕವಿ ಚಮತ್ಕಾರವನ್ನು, ನಟನಾ ಕೌಶಲ್ಯದಿಂದ ತೋರಿಸಿದರೆ ನೋಟಕರಿಗೆ ಸಾಕಷ್ಟು ಆನಂದ ಉಂಟಾಗುವುದು. ಆದರೆ ಈ ಬಗ್ಗೆ ಶ್ರಮ ವಹಿಸದೆ ಕೇವಲ ಸಂಗೀತದಿಂದ ರಂಜಿಸಲು ಅವನು ಪ್ರಯತ್ನಿಸುತ್ತಾನೆ. ಶೃಂಗಾರ ಸನ್ನಿವೇಶದಲ್ಲಿ ಸಂಗೀತ ಬೆರೆಸಿದರೆ ಅಷ್ಟು ಅಭಾಸವಾಗುವುದಿಲ್ಲ. ಭಯಾನಕ ಮುಂತಾದ

ಸಂದರ್ಭಗಳಲ್ಲಿ ಸಂಗೀತ, ಕುಚೋದ್ಯ, ಬೆರೆಸಿದರೆ ರಸಭಂಗವಾಗಿ ಕವಿ ಪ್ರಯತ್ನ ವ್ಯರ್ಥವಾಗುವುದೆಂಬುದು ಶ್ರೀಕಂಠೇಶಗೌಡರ ಅಭಿಪ್ರಾಯ. ಹಾಗಾಗಿ ಅಂದಿನ ಜನರ ಅಪೇಕ್ಷೆಯಂತೆ ''ಪ್ರತಾಪರುದ್ರದೇವ'' ನಾಟಕದಲ್ಲಿ ಅವರು ಅಲ್ಲೊಂದಿಲ್ಲೊಂದು ಪದ್ಯಗಳನ್ನು ಸೇರಿದ್ದಾರೆ.ಆದರೆ ಈ ಪದ್ಯಗಳನ್ನು ಕೇವಲ ಪದ್ಯಗಳಿಗಾಗಿ ನಾಟಕದ ಮಧ್ಯೆ ಅವರು ಸೇರಿಸಿಲ್ಲ. ಈ ನಾಟಕದಲ್ಲಿ ಸಂಭಾಷಣೆಗಳು ದೀರ್ಘವಾಗಿಯೂ ವಿಶೇಷವಾಗಿಯೂ ಇರುವುದರಿಂದ ಇಂತಹ ದೀರ್ಘ ಸಂಭಾಷಣೆಗಳನ್ನು ಹುಚ್ಚನಾದವನು ತನ್ನಷ್ಟಕ್ಕೆ ತಾನೇ ರಸ್ತೆಯಲ್ಲಿ ನಿಂತು ಮಾತನಾಡಿಕೊಳ್ಳುವಂತೆ ಕಾಣಬಾರದೆಂಬ ಉದ್ದೇಶದಿಂದ ಅವುಗಳನ್ನು ಪದ್ಯರೂಪದಲ್ಲಿ ಭಾಷಾಂತರಕಾರರು ನೀಡಿದ್ದಾರೆ. ಈ ಪದ್ಯಗಳನ್ನು ಕೂಡ ಅರ್ಥವನ್ನನುಸರಿಸಿ ಅವಶ್ಯವಿದ್ದ ಕಡೆ ಸಂಧಿಗಳನ್ನು ಬಿಡಿಸಿಕೊಂಡು ಅವುಗಳಲ್ಲಿರತಕ್ಕ ಸಂಗತಿಯನ್ನು ನಟನಾ ಸಹಾಯದಿಂದಲೂ ಗದ್ಯರೀತಿ ಅರ್ಥಲಾಲಿತ್ಯದಿಂದಲೂ, ಜನರಿಗ ತಿಳಿಯುವಂತ ಹೇಳಲು ಸುಲಭಭಾಷೆಯಲ್ಲಿದ್ದು, ಪದ್ಯದ ಗಾಂಭೀರ್ಯವೂ ಗದ್ಯದ ಅರ್ಥಲಾಲಿತ್ಯವೂ ಸೇರಿ ಕೇಳುವವರಿಗೆ ಇಂಗ್ಲಿಷಿನ 'ಬ್ಲ್ಯಾಂಕ್‌ವರ್ಸ್'ನಂತೆ ಬೇಜಾರಾಗದಂತೆ ನೋಡಿಕೊಂಡಿದ್ದಾರೆ. ಕಥಾ ಸಂದರ್ಭ, ಪಾತ್ರ ಸ್ವಭಾವ, ಪದ ಪ್ರಯೋಗ, ಸಮಯಗಳಿಂದ ತೋರುವ ವ್ಯಂಗ್ಯಾರ್ಥ, ಭಾವಾರ್ಥಗಳನ್ನು, ಅನ್ವಯಗಳನ್ನು, ಗ್ರಹಿಸಲು ಅಸಾಧಾರಣವಾದ ಶಾಸ್ತ್ರ, ನ್ಯಾಯ, ವ್ಯವಹಾರಗಳ ಪರಿಣತಿಬೇಕಾಗುತ್ತದೆ ಎಂಬುದು ಅವರ ಸ್ಪಷ್ಟ ಅಭಿಪ್ರಾಯ.

ಉದಾಹರಣೆಗೆ ನಾಟಕದಲ್ಲಿ ಬರುವ ಈ ಪದ್ಯವನ್ನು ನೋಡಬಹುದು-

ಕಂ॥ ಧೃಡಮಾದ ಪೊಡವಿಯೇ – ನೀಂ।
ಗುಡುಗದಿರೀ ಗಡಿಯ ನಾನಿಡಲ್ಪದಹತಿಯಂ॥
ನಡಗುತೆ ನೀನೀಕಾವಳ ।
ಗಡಣಂಗೈದೀರ್ಪ ಭಯವ ಕಲಕದಿರೀಗಳ್ ॥

ಇದು ಮೂಲದಲ್ಲಿಲ್ಲ. ಆದರೂ ಸಾಧಾರಣವಾಗಿ ಕಾಣುವ ಈ ಪದ್ಯವನ್ನು ಸರಿಯಾಗಿ ಗ್ರಹಿಸಿದರೆ ವಿಶೇಷ ಅರ್ಥವನ್ನು ಕಾಣಬಹುದು.

ನಾಟಕದಲ್ಲಿ ಭಾಷಾಂತರಕಾರರು ಮಾಡಿಕೊಂಡ ಒಂದು ಮುಖ್ಯ ಬದಲಾವಣೆ ಅಂದರೆ ಮೂಲ ನಾಟಕದ ಪ್ರಥಮಾಂಕದಲ್ಲಿ ಪಟ್ಟಣಕ್ಕೆ ಬರುತ್ತಿರುವ ಓಡ್ರ ಮಹಾರಾಜನಾದ ವಿಜಯಧ್ವಜನನ್ನು ಎದುರುಗೊಳ್ಳಲು ವೀರಸೇನನ ಹೆಂಡತಿ ಬರುವಳು.ಇದು ಇಂಗ್ಲಿಷ್ ಜನರ ಸಂಪ್ರದಾಯಕ್ಕೆ ಒಗ್ಗಬಹುದೇ ವಿನಾಃ ಕನ್ನಡ ಜನರಿಗೆ ಒಗ್ಗುವುದಿಲ್ಲ. ನಮ್ಮ ದೇಶದ ಅಂದಿನ ನಡುವಳಿಕೆ ಪ್ರಕಾರ ಅವರುಗಳು ಅಂತಃಪುರವನ್ನು ಬಿಟ್ಟು ಹೊರಗೆ ಬರುವುದಿಲ್ಲ. ಒಂದು ವೇಳೆ ಹೀಗೆ ಬಂದರೆ ಗಂಡುಬೀರಿತನ ಕಾಣುವುದು.'' ಹಾಗಾಗಿ ಭಾಷಾಂತರದಲ್ಲಿ ವೀರಸೇನನೇ ಮಹಾರಾಜ ವಿಜಯಧ್ವಜನನ್ನು ಎದುರುಗೊಳ್ಳಲು ಹೋಗುತ್ತಾನೆ.

ಹಾಗೆಯೇ ಮೂರನೇ ಅಂಕದಲ್ಲಿ ರಾಜಮಂಡಲಿಯ ಔತಣಕೂಟದ ವರ್ಣನೆ ಇದೆ. 'ಇನ್ನೊಂದಾವರ್ತಿ ಪಾನವಾಗಲಿ' ಎಂದು ಸುರಾಪಾನದ ಬಗ್ಗೆ ಹೇಳಿಕೆ. ಸುರಾಪಾನ ಕೇವಲ ಚಾಂಡಾಲ ಅಥವಾ ಸಿಪಾಯಿಗಳಲ್ಲಿ ಮಾತ್ರ ಇರುವಂತೆ ರಂಗದ ಮೇಲೆ

ತೋರಿಸುವುದು ಸಂಪ್ರದಾಯ. ಉತ್ತಮ ಪಾತ್ರಗಳಲ್ಲಿ ಇಂತಹ ನಡವಳಿಕೆ ನಮ್ಮ ಸಂಪ್ರದಾಯದಲ್ಲಿಲ್ಲ. ಆದರೂ ಅದು ರಾತ್ರಿ ಹೊತ್ತಾದುದರಿಂದ ರಾಜ ಮಹಾರಾಜರಲ್ಲಿ ಇದಕ್ಕೆ ಅವಕಾಶವಿದ್ದುದರಿಂದ ಅದನ್ನು ತೋರಿಸಲಾಗಿದೆ ಎನ್ನುತ್ತಾರೆ ಶ್ರೀಕಂಠೇಶಗೌಡರು. ಅವರ ಮುಂದೆ ಬಂದ ಇನ್ನೊಂದು ಸಮಸ್ಯೆ ಎಂದರೆ ಔತಣಕ್ಕೆ ಕುಳಿತುಕೊಳ್ಳುವಾಗ ನಮ್ಮ ಸಂಪ್ರದಾಯದಂತೆ ಜನರೆದುರಿಗೆ ಅರ್ಧ ಮೈ ಬಿಟ್ಟುಕೊಂಡು, ಪಟ್ಟೆಯನ್ನುಟ್ಟು ಪದ್ಮಾಸನದಲ್ಲಿ ಎಲೆ ಮುಂದೆ ಕುಳಿತುಕೊಂಡಂತೆ ತೋರಿಸಬೇಕೇ ಅಥವಾ ಶರಾಯಿ ಮೋಜ ಹಾಕಿಕೊಂಡು ಮೇಜಿನ ಸುತ್ತ ರೀತಿಯಿಂದ ಕುಳಿತುಕೊಂಡಂತೆ ತೋರಿಸಬೇಕೋ ಎಂಬುದು. ಅದನ್ನು ಅವರು ನಟರಿಗೇ ಬಿಟ್ಟಿದ್ದಾರೆ.ಹಾಗೆಯೇ ನಟನೆಗೆ ಅನುಕೂಲವಾಗಲೆಂದು ಬಳಸುವ 'ನೋಡಿ' 'ನಿಟ್ಟುಸಿರು ಬಿಟ್ಟು' 'ನಗುತ್ತ' 'ಲಜ್ಜೆಯಿಂದ' ಮುಂತಾದ ಶಬ್ದಗಳನ್ನು ಅವರು ಬಳಸಿಲ್ಲ. ಅವುಗಳನ್ನು ನಟರು ಸಂದರ್ಭಾನುಸಾರ ತಿಳಿದುಕೊಂಡು ನಟಿಸಲಿ ಎಂಬುದು ಅವರ ಇಚ್ಛೆ.

ಶ್ರೀಕಂಠೇಶಗೌಡರ ಈ ಕೃತಿಯಲ್ಲಿ ವಿದ್ವತ್, ಗಾಂಭೀರ್ಯ, ಅಚ್ಚುಕಟ್ಟುತನ, ಅಸಾಧಾರಣ ಅನುಭವ, ವ್ಯವಹಾರ ಜ್ಞಾನ, ಲೋಕ ಕಲ್ಯಾಣ ಪ್ರೇರಣೆ ಕಂಡುಬರುತ್ತದೆ. ತಾವು ಹೇಳಬೇಕಾದ್ದನ್ನು ಹೃದಯಂಗಮವಾಗಿ ಸತ್ವಪೂರ್ಣವಾಗಿ ಹೇಳುವುದು ಅವರ ಕಲೆ. ಶೇಕ್ಸ್‌ಪಿಯರ್ ನಾಟಕ ನಮ್ಮ ಜನತೆಗೆ ಅರ್ಥವಾಗಬೇಕಾದರೆ ನಮ್ಮ ಪರಿಸ್ಥಿತಿಗೆ ಹೊಂದಿಕೊಳ್ಳುವಂತೆ ನಾಟಕವನ್ನು ಬದಲಾಯಿಸಿಕೊಳ್ಳುವುದು ಅನಿವಾರ್ಯವೆಂದು ತಿಳಿದು ಅದರಂತೆ ಅನೇಕ ಬದಲಾವಣೆ ಮಾಡಿಕೊಂಡಿದ್ದಾರೆ. ಈ ಬಗ್ಗೆ ವಿವರಣೆಯನ್ನು ಪೀಠಿಕೆಯಲ್ಲಿ ಕೊಟ್ಟಿದ್ದಾರೆ. ಶೇಕ್ಸ್‌ಪಿಯರನ ನಾಟಕದಲ್ಲಿ ತನ್ನ ರುದ್ರನಾಯಕನಾದ ಮ್ಯಾಕ್‌ಬೆತ್‌ನ ಹೆಸರನ್ನೇ ಕೊಟ್ಟಿದ್ದರೂ ಗೌಡರು ಆ ಕಾಲದಲ್ಲಿ ನಮ್ಮ ಜನರು ರುದ್ರನಾಯಕನನ್ನು ಮೆಚ್ಚಲಿಲ್ಲವೆನ್ನುವ ಕಾರಣಕ್ಕೆ ಮಾಲ್ಕಂ ದೊರೆಗೆ ನಾಟಕ ಸುಖಾಂತವಾಗುವುದರಿಂದ ಅವನ ಹೆಸರಿನಿಂದಲೇ ನಾಟಕವನ್ನು ಕರೆದಿದ್ದಾರೆ. ನಾಟಕದಲ್ಲಿ ಸಂಗೀತವನ್ನು ಸೇರಿಸುವುದು ಸರಾಗವೆಂದು - ಕಪಿಗಳೇ ಅಬ್ಬರಿಸಲಿ, ರಾವಣನ ತಲೆಗಳೇ ಉದುರುತ್ತಿರಲಿ, ಅಮ್ಮಂದಿರಿಗೆ ಆಚಾರ್ರು ಯಥಾ ಪ್ರಕಾರವೇ ಪುರಾಣ ಹೇಳುವಂತೆ ಪದ್ಯಗಳನ್ನು ಹೇಳಲುಪಕ್ರಮಿಸಬಾರದು ಎನ್ನುತ್ತಾರೆ. ಸಂಗೀತಕ್ಕೆ ಸ್ಥಾನವುಂಟು. ನಾಟಕ ಪರಿಣಾಮ ಕಾರಿಯಾಗಲು ಎಷ್ಟು ಬೇಕೋ ಅಷ್ಟು ಎಂಬುದು ಗೌಡರ ಮತ. ಈ ರೀತಿಯಾಗಿ ಅನುವಾದಿಸಿದವರು ಅವರೇ ಮೊದಲಿಗರಾಗಿದ್ದರು. ಅದಕ್ಕೆ ಬೇಕಾದ ಎಲ್ಲಾ ಪಾಂಡಿತ್ಯ ಅನುಭವ ಅವರಿಗಿದ್ದಿತು. ಸ್ವತಃ ಕವಿಯಾದ ಅವರಿಗೆ ಕಂದ, ವೃತ್ತ, ರಗಳೆಗಳ ಪರಿಚಯವಿದ್ದು ನಿರರ್ಗಳವಾಗಿ ಕಾವ್ಯ ಸೃಷ್ಟಿ ಮಾಡುವ ಶಕ್ತಿ ಇತ್ತು. ಇಂಗ್ಲಿಷ್ ಸಾಹಿತ್ಯದ ಜೊತೆಗೆ ಸಂಸ್ಕೃತ ಜ್ಞಾನವೂ ಅಪಾರವಾಗಿದ್ದುದು ಅವರ ಈ ನಾಟಕದಿಂದ ನಮಗೆ ತಿಳಿಯುತ್ತದೆ. ನಾಟಕದ ಪ್ರತಿಯೊಂದು ಸಂದರ್ಭವನ್ನು, ಸಂಗತಿಯನ್ನು ತೂಗಿ ನೋಡಿ ಅದು ಜನಕ್ಕೆ ಹಿಡಿಸುತ್ತದೆಯೋ ಎಂದು ವಿಚಾರ ಮಾಡಿ ಅಗತ್ಯ ಬದಲಾವಣೆಯನ್ನು ಮಾಡಿದ್ದಾರೆ. ಇಂಗ್ಲಿಷಿನ ನಾಗಾಲೋಟದ ಛಂದಸ್ಸನ್ನು (ಆಗ ಕನ್ನಡದಲ್ಲಿ ಮಹಾ ಛಂದಸ್ಸು, ಬ್ಲಾಂಕ್‌ವರ್ಸ್ ಬಳಕೆ ಇನ್ನೂ ಆಗಿರಲಿಲ್ಲ) ಹೊಸ ಕನ್ನಡಕ್ಕೆ ಅಳವಡಿಸುವ ಕಷ್ಟವನ್ನು ಅವರು "ಕನ್ನಡ ಕುಂಟು ಕತ್ತೆಯ ಬೆನ್ನಿನ ಮೇಲೆ ಕರ್ನಾಟಕದಲ್ಲಿರುವ ಈಟಿಲದಪ್ಪೆಗಳನ್ನೆಲ್ಲಾ ಮುರಿದರೆ ತಾನೆ ಸಾಗುವುದೆ?" ಎಂದು ಕೇಳುತ್ತಾರೆ.

ಶ್ರೀಕಂಠೇಶಗೌಡರ ಭಾಷಾಂತರ ಶಕ್ತಿಯ ಬಗ್ಗೆ ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರು ಈ ರೀತಿ ಹೇಳುತ್ತಾರೆ: "ಶ್ರೀಕಂಠೇಶಗೌಡರು ಮೂಲ ನಾಟಕಕ್ಕೆ ಭಂಗಬಾರದಂತೆ, ಅಂದಿನ ಭಾರತೀಯ ರಂಗಭೂಮಿಯಲ್ಲಿ ಅಭಾಸವಾಗದಂತೆ

ಮಾತುಗಳು, ಸನ್ನಿವೇಶಗಳು, ಉದಾಹರಣೆಗಳು, ಗಾದೆ ಮಾತುಗಳು, ಕಾವ್ಯಗಳು ಇಂಗ್ಲಿಷಿನ ಪೌರಾಣಿಕ ವೀರರಿಗೆ ಅನುಗುಣವಾಗಿ ನಮ್ಮ ಜನರಿಗೆ ಗೊತ್ತಾಗುವ ನಮ್ಮ ಪ್ರಮೇಯಗಳು- ಇವೆಲ್ಲವೂ ತಿಳಿದುದರ ಮೂಲಕ ತಿಳಿಯುದುದನ್ನು, ಕನ್ನಡದ ಮೂಲಕ ಶೇಕ್ಸ್‌ಪಿಯರ್‌ನನ್ನು ಶೇಕ್ಸ್‌ಪಿಯರ್‌ನ ಸ್ವಾರಸ್ಯ ನಾಟಕೀಯ ಪ್ರಜ್ಞೆ. ಇವುಗಳನ್ನು ಪ್ರದರ್ಶಿಸಬೇಕಾಗಿತ್ತು. ಗೌಡರು ಭಾರತೀಯತ್ವವನ್ನು ಚೆನ್ನಾಗಿ ಅರಿತಿದ್ದುದರಿಂದಲೂ ಕನ್ನಡ ನಾಡಿನ ಜನಪದ ಮತ್ತು ಜನಜೀವನವನ್ನು ಪೂರ್ಣವಾಗಿ ಅನುಭವಿಸಿದ್ದುದರಿಂದಲೂ ಇದು ಅವರಿಗೆ ಸಾಧ್ಯವಾಯಿತು. ಶೇಕ್ಸ್‌ಪಿಯರ್ ನಾಟಕಕ್ಕೆ ಉಪಯೋಗಿಸಬೇಕಾದ ಕನ್ನಡ ಭಾಷೆಯನ್ನು ಕುರಿತು ನಾವು ಯೋಚಿಸಬೇಕಾಯಿತು ಎಂದು ಅವರೇ ಹೇಳಿದ್ದಾರೆ. ಶ್ರೀಕಂಠೇಶಗೌಡರ ಭಾಷಾಂತರ, ಬರಿ ಶಬ್ದಗಳ ಮಗ್ಗವನ್ನು ಹಾಕಿ. ಪದ್ಯಗಳನ್ನು ನೇಯುತ್ತಾ ಶಬ್ದಾಟೋಪ ಮಾಡುವುದಲ್ಲ. ಶ್ರೀಕಂಠೇಶಗೌಡರು ಅನುವಾದದಲ್ಲಿ ನಾವು ಬರಿ ಮಕ್ಕಿಕಾಮಕ್ಕಿ ಪದ ಜೋಡಣೆ ಬಿಟ್ಟು - ನಿಜವಾದ ಭಾರತೀಯ ಮೌಲ್ಯ ಮತ್ತು ಜಾನಪದ ಮೌಲ್ಯಗಳನ್ನು ಕಾಣುತ್ತೇವೆ. ಮಾತಿಗೆ ತಕ್ಕ ಮಾತುಗಳನ್ನು ಅವರು ಅನುವಾದಿಸಿ ಬಿಟ್ಟು ಇನ್ನು ನಿಮ್ಮ ಹಣೆಪಾಡು ಎಂದು ಸುಮ್ಮನಾಗುವುದಿಲ್ಲ. ಶೇಕ್ಸ್‌ಪಿಯರ್‌ನ ಯಾವ ಮಾತು ಯಾವ ಸಂದರ್ಭವೂ ಎಷ್ಟೇ ನಮಗೆ ಅಪರಿಚಿತವಾದರೂ, ನಮ್ಮ ಪರಿಚಿತ ಸಂಗತಿ ಅಥವಾ ಮಾತುಗಳಿಂದ ನಮಗೆ ಬೆಳ್ಳಂಬೆಳಕಾಗಿ ಸ್ಪಷ್ಟವಾಗಿ ಮಾಡುವವರೆಗೆ ಅವರು ಬಿಡುವುದಿಲ್ಲ.''[10]

ಪ್ರತಾಪರುದ್ರದೇವ (ಮ್ಯಾಕ್ಬೆತ್) ನಾಟಕದ ಪ್ರಾರಂಭದ ಮಾಟಗಾರ್ತಿಯರ ಹೆಸರೇ ಗ್ರೇಮಾಲ್ಕಿನ್, ಪ್ಯಾಡಾಕ್ ಎಂಬುವು. ಅಪಶಕುನದ ಗುರುತುಗಳಾದ ಇವು 'ಮಾರ್ಜಾಲ ಮಾಳ ಬೆಕ್ಕು' ಎಂದು ಆಗಿದೆ. ಗ್ರೇಮಾಲ್ಕಿನ್ (ಬೂದು ಬಣ್ಣದ ಮಾರ್ಜಾಲ) ಶೇಕ್ಸ್‌ಪಿಯರ್ ಉಪಯೋಗಿಸುವ ಅರ್ಥದಲ್ಲಿ ಅವು ನಮಗೆ ತಿಳಿಯುವಂತೆ ಮಾಡಲು ಕವಿ ನಮಗೆ ಪರಿಚಿತವಾದ ಪದಗಳನ್ನು ಬಳಸುತ್ತಾನೆ. ನಂದರಾಜನು, ಪರಾಕ್ರಮಿಯಾದ ವೀರಸೇನನ್ನು ಇಂಗ್ಲಿಷ್ ನಾಟಕದಲ್ಲಿ BELLONA'S Bridegroom ಎಂದು ವರ್ಣಿಸುತ್ತಾನೆ. ಅತಿಧೀರನೆಂದು ಅದನ್ನು ಕನ್ನಡ ಕವಿ 'ಹಿಡಿಂಬೆಯರಸಂ' ಎಂದು ಅನುವಾದಿಸಿದ್ದಾನೆ. (ಇಂಗ್ಲಿಷ್‌ನಲ್ಲಿ ಅದನ್ನು ಉಪಯೋಗಿಸಿರುವುದು ಅಂತೆಂಬರ ಗಂಡ ಎಂಬ ಅರ್ಥದಲ್ಲಿ) ಮ್ಯಾಕ್ಬೆತ್‌ನಲ್ಲಿ ಒಬ್ಬಳು ಮಾಟಗಾತಿ ನಾವಿಕನ ಹೆಂಡತಿಯೊಬ್ಬಳ ಮೇಲೆ ಮುನಿದು "I will do, I will do, I will do" ಎಂದು ರೇಗುತ್ತಾಳೆ. ''ಏನು ಮಾಡಿ ಬಿಡುತ್ತೇನೆ ನೋಡು. ನಿನಗೆ ತಕ್ಕದ್ದು ಮಾಡುತ್ತೇನೆ'' ಎಂಬ ಅರ್ಥದಲ್ಲಿ ಅದನ್ನು ಕಂಡ ಕವಿ ಮೂಳೆಯಂ ''ಮುಂಡೆಯ ಮಾಡಿವಳಂ'' ಎಂದು ಅನುವಾದಿಸಿದ್ದಾನೆ. ನಮ್ಮ ಸಂಸ್ಕೃತಿಗನುಗುಣವಾಗಿ ಮುಂಡೆಮಾಡುವುದಕ್ಕಿಂತ ದೊಡ್ಡ ಬೈಗುಳ ಇಲ್ಲ. "I will do, I will do, I will do" ಎಂದು ಮೂರು ಸಲ ಹೇಳಿದರೂ '' ಮುಂಡೆವ್ರ ಮಾಡಿವಳಂ'' ಎಂಬುವರ ತೀವ್ರತೆ ಬರುವುದಿಲ್ಲ. ಒಂದು ಕಡೆ ಸೇವಕನು ''ರಾತ್ರಿಯೆಲ್ಲಾ ಕುಡಿಯುತ್ತಿದ್ದೆವು'' ಎಂದು ಇಂಗ್ಲಿಷಿನಲ್ಲಿ ಹೇಳಿರುವುದನ್ನು ಕವಿ ''ಕಡೆ ಕೋಳಿ ಕೂಗೋಗಂಟ ನಮ್ಮ ಅರವಂಟಿಗೆ ಮುಚ್ಚಲಿಲ್ಲ'' ಎಂದು ಅನುವಾದಿಸಿದ್ದಾನೆ. ಮಾಕ್ಬೆತನು ಶತ್ರು ನಿರ್ನಾಮವಾಗಿದ್ದರೆ ನಿಶ್ಚಿಂತನೆಯಿಂದ ಇರುತ್ತಿದ್ದೆ ಎಂಬುದನ್ನು I would be whole as marble and founded as the rock as bound and general as the easing air ಎನ್ನುತ್ತಾನೆ. ಕನ್ನಡ ಕವಿ ಇದನ್ನು ''ನಿರ್ಬಾಧಿತವಾಗಿ ಅರೆಬಂಡೆಯಂತೆ ಗಟ್ಟಿಯಾಗಿಯೂ ಜಗದ್ವ್ಯಾಪಕನಾದ ಮಾರುತನಂತೆ ನಿರ್ಬಂಧವಿಲ್ಲದೆಯೂ ಇರುತ್ತಿದ್ದೆ'' ಎಂದು ಅನುವಾದಿಸಿದ್ದಾರೆ. ಶೂರಸೇನನ ಪ್ರೇತವನ್ನು ನೋಡಿ ಮ್ಯಾಕ್ಬೆತ್ ಹೆದರಿ ಇದು ''ಕಾಲಭೈರವಾಕೃತಿ'' ಎನ್ನುತ್ತಾನೆ. infected be the air where on they ride ಎಂಬುದನ್ನು ಅದರ ವಾಸನ್ಯಾನ

ನರಕವಾಗಲಿ ಎಂದು ಅನುವಾದಿಸಿದ್ದಾರೆ. ಇಂಗ್ಲಿಷ್ ನಾಟಕದಲ್ಲಿ ಮಾಟಗಾತಿಯರು ತಮ್ಮ ತಂತ್ರಗಳಿಗೆ ಅನುಕೂಲವಾಗುವಂತ ಕಷಾಯವನ್ನು ಬಾಸಿನಲ್ಲಿ ಕುದಿಸುವರೆಂಬ ಅಂಶವಿದೆ. ಈ ಬಾಸಿನಲ್ಲಿ ಮಾಟಗಾತಿಯರು ಯಾವ ಯಾವುದನ್ನು ಹಾ ಕುದಿಸುವರೆಂಬುದನ್ನು ಶೇಕ್ಸ್‌ಪಿಯರ್ ಹೇಳಿದ್ದಾನೆ. ನಮ್ಮಲ್ಲಿ ಮಾಟಗಾತಿಯರು ಅಂಥ ಬಾಸಿನಲ್ಲಿ ಕುದಿಸಿದ ಸಂಗತಿಯನ್ನು ಎಲ್ಲಿಯೂ ಹೇಳಿಲ್ಲ. ನಮ್ಮ ಮಾಟಗಾತಿಯರು ಬೂದಿ, ಮಂತ್ರ, ತಂತ್ರಗಳಿಂದ ತಮ್ಮ ಕೆಲಸ ಸಾಧಿಸುತ್ತಾರೆ. ಒಂದು ವೇಳೆ ನಮ್ಮ ಮಾಟಗಾತಿಯರು ಅಂತಹ ಕಷಾಯವನ್ನು ಮಾಡಿದ್ದಾದರೆ ಅದಕ್ಕೆ ಏನೇನು ಹಾಕಿ ಕುದಿಸುತ್ತಿದ್ದರೆಂಬುದನ್ನು ಕನ್ನಡ ಕವಿ ಹೀಗ ಹೇಳುತ್ತಾನೆ. ಕತ್ತೆಯ ಕರಳು, ಕೋತಿಯ ಕರಳು, ಮೊಳೆಯ ಮೀನು, ಸೊಳ್ಳೆಯ ತಂಡವ ಪಾಲೊಳ್ ಕುದಿಸಿರಿ. ಭರದೊಳ್ ತೋಳದ ತೊಳ್ಳೆಯ ನಲ್ಲಿಯ ವಳ್ಳಿಯ ಮೂಳೆಯ ಸೀಳಿದ ಸರ್ಪದ ನಾಲಿಗೆ ತುಪ್ಪದ ಕರಿಯುವ ನಾವುಂ ಗರಿಗರಿಯುವುವೊಳ್. ಸದೆಯುವ ಹಿಡಿಯುವ ಮದಗಜದ್ವಡಂ ನೆರತಿಹ ಕೂಡಲ ನರಿಮರಿಯಿಂದೀಗಾನೆಯ ಕುದಿಸುವ ಬಾನಿಯೊಳಾಸಿ.''

ಲಂಗದ ಬೀಬಿಯ ಭಂಗಿಯ ಸಾಬಿಯ
ಕೊಂಗರ ದಂಡನು ಮಂಗನ ಹಿಂಡನು
ಅಂಗಡಿ ಬೀದಿ ಕೋಮಟಿ ಶೆಟ್ಟಿಯ
ನಿಂಗರದಿಂದಿಹ ಗಂಧದ ರಾಯನ
ಹಂದಿಯ ಮುಸುಡಿಯ ವಂಚನೆ ಮಂತ್ರಿಯ
ಸಂಧಿಸಿ ಬಾಗಿಲ ಸಂದಿಲಿ ಕೊಲ್ಲುತ
ಗಂದಿಗೆ ಯಂಗಡಿ ಸರಕಿನ ಸಂಗಡ
ಬೌದ್ಧನ ಬುರುಡೆಯ ಜೈನನ ಜಿಹ್ವೆಯ
ಹಸುವಿನ ಕೆಚ್ಚಲೊಳ ಸಗನ ಹೊಕ್ಕಳು
ಬಸುರಿಯ ಪೆಣವನು ಪಾವಿನ ಹೆಡೆಯನು
ಎಕ್ಕದ ಕುಸುಮದ ಲಕ್ಕಿಯ ಬೇರಿನ
ರಸವನು ಬಾನೆಯ ಬಸಿಯುತ ಕುದಿಸುವ

ಶೇಕ್ಸ್‌ಪಿಯರ್‌ನ ಮಾಟಗಾತಿಯರು ಕುದಿಸಿದ ಕಷಾಯಕ್ಕಿಂತ ಈ ಕಷಾಯ ನಮಗೆ ಹೆಚ್ಚು ಸುಲಭವಾಗಿ ಅರ್ಥವಾಗುತ್ತದೆ. ಯಾಕೆಂದರೆ ನಮ್ಮಲ್ಲಿ ಒಂದು ಪಕ್ಷ ಮಾಂತ್ರಿಕರು ಅಂತಹ ಕಷಾಯವನ್ನು ಕುದಿಸಬೇಕಾದರೆ ಯಾವ ಯಾವ ವಸ್ತುಗಳನ್ನು ಉಪಯೋಗಿಸಬಹುದು ಎಂದು ಜನರು ನಂಬುತ್ತಾರೋ ಅವುಗಳನ್ನೇ ಕವಿ ಹೇಳಿದ್ದಾನೆ. ಸೇವಕನೊಬ್ಬನು ಭಯಂಕರವಾದ ಸಮಾಚಾರವನ್ನು ಹೇಳಲು ಬಂದು, ಹೆದರಿ ಹೇಳದೆ ನಿಂತಾಗ ಮ್ಯಾಕ್ಬೆತ್ Where gottest thou that geese look, then lilly live red by" ಎಂದು ಕೇಳುತ್ತಾನೆ. ಹೆದರಿರುವುದರಿಂದ ಸೇವಕನ ಮುಖ ಬಾಡಿ ಬೆಳ್ಳಗಾಗಿದೆ. ಅದನ್ನು ಕಂಡ ಕವಿ 'ಎಲೋ ಗೂಬೆ ಬಾಣಂತಿಯಂತೆ ಬೆಳ್ಳಗೇಕ್ಕಿರುವೆ ? ಈ ಕಾಮಾಲೆ ನಿನಗೆ ಯಾವಾಗ ಸಂಘಟಿಸಿತು?'' ಎಂದು ಅನುವಾದಿಸಿದ್ದಾನೆ. ಪ್ರತಾಪರುದ್ರದೇವನ ಸೇನಾಧಿಪತಿಯ ಮಗನು ಯುದ್ಧದಲ್ಲಿ ಕೊಲೆಯಾಗುತ್ತಾನೆ. ಉಳಿದ ಭಟರು ಬಂದು ತಂದೆಗೆ, 'He paid a soldier's debt. But like a man he died and brought off the field' ಎಂದು ಹೇಳುತ್ತಾರೆ.

ಗೌಡರು ಇದನ್ನು ಹೀಗೆ ಭಾಷಾಂತರಿಸಿದ್ದಾರೆ: ''ಕುಮಾರನು ಕ್ಷತ್ರಿಯ ಜನ್ಮವನ್ನು ಸಾರ್ಥಕ ಮಾಡಿಕೊಂಡನು. ತನ್ನ ಶೌರ್ಯವನ್ನು ಸ್ಥಾಪಿಸಿ ಯುದ್ಧ ಮಾಡುತ್ತಿದ್ದ ಸ್ಥಳದಿಂದ ಹಿಮ್ಮೆಟ್ಟದೆ ಶಸ್ತ್ರಹತಿ ಸಹಸ್ರಗಳಿಂದ ವೀರಸ್ವರ್ಗವನ್ನೈದಿದನು. ಜಯಲಕ್ಷ್ಮಿಯ ಸೆರಗನ್ನು ಹಿಡಿದು ಎಳೆಯುತ್ತಾ ಸ್ವರ್ಗ ಪಥದಲ್ಲೈದಿದನು''. ಇಂತಹ ಸಂಭಾಷಣೆಯಿಂದ, ಉತ್ತಮವಾದ ಆದರ್ಶಕ್ಕಾಗಿ ಮಡಿದ ವೀರನ ಮರಣಕ್ಕೆ ಉಚಿತವಾದ ವಾತಾವರಣ ರಂಗಸ್ಥಳದಲ್ಲಿ ಸೃಷ್ಟಿಯಾಗುವುದೆಂದು ಕವಿ ಹೀಗೆ ಮಾಡಿರುವರೆಂದು ಕಾಣುತ್ತದೆ. ಮಡಿದ ಯೋಧನ ತಂದೆ ತನ್ನ ಮಗನಿಗೆ ಘಾಯಗಳು ಯಾವ ಕಡೆ ಆದುವೆಂದು ಕೇಳುತ್ತಾನೆ?'' ಅಂದರೆ ಅವನು ಯುದ್ಧ ಮಾಡುತ್ತ ಸತ್ತನೋ ಎಂದು ತಿಳಿಯಲು. ಸರದಾರನು ''ಮುಂದುಗಡೆ'' ಎನ್ನುತ್ತಾನೆ. ಅದನ್ನು ಕೇಳಿ ತಂದೆಯು "Why then, God's soldier be he, God be with him. Had I as many sons as I have hairs . I would not wish them a fairer death' ಎನ್ನುತ್ತಾನೆ ಇದನ್ನು ಕವಿ ''ಹಾಗಾದರವನು ವೀರಲಕ್ಷ್ಮಿಯ ಮಗ. ಇನ್ನವನು ಕೃತಾರ್ಥನಾದ. ನನ್ನ ಅಂಗದಲ್ಲಿ ರೋಮಗಳಿರುವಷ್ಟು ಜನ ಮಕ್ಕಳು ನನಗಿದ್ದರೂ ಅವರಿಗೆಲ್ಲಾ ಇಂತಹ ಸಾವನ್ನೇ ಬಯಸುವೆನು'' ಎಂದು ಅನುವಾದಿಸಿದ್ದಾರೆ. ಇದರಿಂದ ಶ್ರೀಕಂಠೇಶಗೌಡರು ಶೇಕ್ಸ್‌ಪಿಯರ್‌ನ ಅಭಿಪ್ರಾಯವನ್ನು ಎಷ್ಟು ಚೆನ್ನಾಗಿ ಅರ್ಥಮಾಡಿಕೊಂಡು ನಮ್ಮ ಜಾನಪದ ಜ್ಞಾನಕ್ಕೆ ಸರಿಯಾಗಿ ಬಳಸಿಕೊಂಡಿದ್ದಾರೆಂಬುದು ವೇದ್ಯವಾಗುತ್ತದೆ.

ನಾಟಕದ ಪ್ರಾರಂಭದಲ್ಲಿ ಮಾಟಗಾತಿಯರು Fair in Foul and Foul in fair, however through the feg and filthy air" ಎಂದು ಹೇಳುತ್ತಾರೆ. ಇದನ್ನು ಪದಶಃ ''ಒಳಿತೇ ಕೆಡುಕು, ಕೆಡಕೇ ಒಳಿತು, ಹೇಗೊ ಮಂಜಿನಲ್ಲಿಯೂ ಕೆಟ್ಟಗಾಳಿಯಲ್ಲಿಯೂ''ಎಂದು ಅನುವಾದಿಸುವುದಕ್ಕಿಂತ-

ಬಿಟ್ಟಿದ್ದು ಬಿಟ್ಟಂತೆ ತೊಟ್ಟಿದ್ದು ತೊಟ್ಟಂತೆ
ಒಟ್ಟಾಗಿ ಸೇರುತ್ತ ಚಟ್ಟವನ್ನೇರುತ್ತ
ಪಟ್ಟದ ಗಾಳಿಯಲಿ ಮುಟ್ಟುವೆವು ಮುಗಿಲನ್ನು

ಎಂದು ತೆರೆಯಲ್ಲಿ ಹಾಡಿನೊಂದಿಗೆ ನಾಟಕ ಪ್ರಾರಂಭವಾದರೆ ಪ್ರೇಕ್ಷಕರ ಮೇಲೆ ಪರಿಣಾಮ ಚೆನ್ನಾಗಿ ಆಗಿ, ಅವರು ಒಂದು ಗಂಭೀರ ನಾಟಕವನ್ನು ನೋಡಿ ಆನಂದಿಸಲು ತಮ್ಮನ್ನು ಸಿದ್ಧಗೊಳಿಸಿಕೊಳ್ಳುವರು ಎಂಬುದು ಕವಿಯ ಅನುಭವವಾಗಿತ್ತು. ಇದು ಗೌಡರ ನಾಟಕೀಯ ಪ್ರಜ್ಞೆಯ ಪರಿಶ್ರಮಜನ್ಯ ವಿವೇಕವಾಗಿತ್ತು.

ಎಂ. ಎಲ್. ಶ್ರೀಕಂಠೇಶಗೌಡರನ್ನು ''ಕರ್ನಾಟಕ ಶೇಕ್ಸ್‌ಪಿಯರ್'' ಎಂದು ಕರೆದ ಜಿ.ಜಿ. ಮಂಜುನಾಥನ್ ಅವರ ಅನುವಾದ ಸಾಮರ್ಥ್ಯದ ಬಗ್ಗೆ ಹೀಗೆ ಹೇಳುತ್ತಾರೆ. ''ಎಂ. ಎಲ್. ಶ್ರೀಕಂಠೇಶಗೌಡರ ಅನುವಾದದ ರೀತಿ ಅನಾದೃಶ್ಯವಾದುದು. ಅನುವಾದವೆಂದರೆ ಪದಕ್ಕೆ ಪದವಿಡುವುದಿಲ್ಲ. ಅದೊಂದು ಪ್ರತಿಭಾವಂತ ಪುನರ್‌ಸೃಷ್ಟಿ. ಲೀಲಾವಿಲಾಸ-ಎನ್ನುವುದು ಅವರ ನಿಲುವು. ಹಾಗಾಗಿ ಪಂಡಿತ ವರ್ಗವು ಅವರ ಅನುವಾದಗಳ ಬಗ್ಗೆ ಏನೇ ಹೇಳಿದರೂ ಸಾಮಾನ್ಯ ಜನತೆ ಅದನ್ನು ಮೆಚ್ಚಿಕೊಂಡಿದ್ದಿತು. ನಮ್ಮ ಸಮಾಜದ ಜಾಯಮಾನಕ್ಕೆ ಹೊಂದುವ ಪ್ರಾದೇಶಿಕತೆ ಮತ್ತು ಜನರಿಗೆ ಪರಿಚಿತವಾದ ಗ್ರಾಮ್ಯ ಭಾಷೆ ಅವರ ಕೃತಿಗಳ ಯಶಸ್ಸಿಗೆ ಕಾರಣ. ನಾಟಕ ಶಿರೋಮಣಿ ವರದಾಚಾರ್ಯರು ಗೌಡರ ನಾಟಕಗಳನ್ನು ರಂಗದ ಮೇಲೆ ತಂದಾಗ

ಅವು ತುಂಬಾ ಯಶಸ್ವಿಯಾದವು. ಜನತೆಯು ತುಂಬು ಹೃದಯದಿಂದ ಅವನ್ನು ಸ್ವೀಕರಿಸಿತು. ಅನುವಾದದ ಬಗ್ಗೆ ಆ ಧೋರಣೆ ಇಂದಿಗೂ ಆದರ್ಶಪ್ರಾಯವಾಗಿದೆ.''[11]

ಪಿ. ಆರ್. ಕರಿಬಸವಶಾಸ್ತ್ರಿಗಳು ಗೌಡರ ನಾಟಕದಲ್ಲಿ ಗ್ರಾಮ್ಯ ಪದಗಳ ಪ್ರಯೋಗ, ವ್ಯಾಕರಣ ಹಾಗೂ ಛಂದಸ್ಸಿನ ದೋಷಗಳು, ನಾಟಕ ಮೂಲದಿಂದ ದೂರಸರಿದಿದೆ ಎಂಬ ದೂರಿನ ಬಗ್ಗೆ ಹೀಗೆ ಹೇಳುತ್ತಾರೆ: ''ಪ್ರತಾಪರುದ್ರದೇವ ನಾಟಕದಲ್ಲಿಒಂದು ಕಡೆ ವ್ಯಾಕರಣ ವಿರುದ್ಧಾಂಶವು ಉಂಟು. ಅವುಗಳನ್ನು ದೋಷವೆಂದು ಖಂಡಿಸೋಣವೆಂದರೆ ಅಂಥಾ ದೋಷಗಳು ಕನ್ನಡ ಭಾರತ, ಜೈಮಿನಿಗಳಲ್ಲಿಯೂ ಇವೆ ಮತ್ತು ಷೇಕ್ಸ್‌ಪಿಯರ್ ನಾಟಕದ ಮೇಲೆ ಹುಟ್ಟಿರುವ ಇತರ ಕನ್ನಡ ನಾಟಕಗಳಲ್ಲಿರುವ ವ್ಯಾಕರಣ ದೋಷಗಳಿಗೆ ಅರ್ಧಪಾಲೂ ಇದರಲ್ಲಿಲ್ಲ. ಈ ರೀತಿ ಗುಣದೋಷ ಮಿಶ್ರವಾಗಿರುವ ಈ 'ಪ್ರತಾಪರುದ್ರದೇವ' ನಾಟಕದ ಒಟ್ಟಂದವನ್ನು ತೆಗೆದುಕೊಂಡರೆ ಇದು ಉತ್ಪತ್ತಿಯನ್ನುಂಟುಮಾಡತಕ್ಕ ಗಂಭೀರವಾದ ನೂತನ ಗ್ರಂಥವಾಗಿಯೂ ನಾಟಕವೆಂದು ಹೇಳವುದಕ್ಕೆ ಯೋಗ್ಯವಾದುದ್ದಾಗಿಯೂ ತೋರುತ್ತದೆ.''

ಗೌಡರ ಮೇಲ್ಪಂಕ್ತಿಯನ್ನು ತಾನೂ ಅನುಸರಿಸಿದ್ದೇನೆಂದು ಈ ನಾಟಕದ ಬಗ್ಗೆ ಡಿ. ವಿ. ಜಿ.ಯವರು ಹೇಳಿದ್ದಾರೆ. ''ಶ್ರೀಕಂಠೇಶಗೌಡರು ಅನುಸರಿಸಿದ ಅನುವಾದದ ವಿಧಾನ ಆ ಕಾಲದಲ್ಲಿ ರೂಢಿಗೆ ಬಂದದ್ದು. ಇಂಗ್ಲಿಷ್ ಹೆಸರುಗಳಿಗೆ ಪ್ರತಿಯಾಗಿ ಸಂಸ್ಕೃತದ ಅಥವಾ ಕನ್ನಡದ ಹೆಸರನ್ನಿಡುವುದು, ಸಂಭಾಷಣೆಯಲ್ಲಿ ವಾಚನವನ್ನೂ ನಡುನಡುವೆ ಪದ್ಯಗಳನ್ನು ಹಾಡುಗಳನ್ನು ಸೇರಿಸುವುದು. ಒಟ್ಟಿನಲ್ಲಿ ಈ ನಾಟಕವನ್ನು ನಮ್ಮ. ಜನ ತಮ್ಮದೇ ಎಂದು ಭಾವಿಸಿಕೊಳ್ಳುವಂತೆ ವೇಷ ಭಾಷೆಗಳನ್ನು ಅಳವಡಿಸುವುದು. ಈ ಮೇಲ್ಪಂಕ್ತಿಯನ್ನು ನಾನು ಕೊಂಚ ಮಟ್ಟಿಗೆ ಅನುಸರಿಸಿದ್ದೇನೆ.'' [13]

ಶ್ರೀಕಂಠೇಶಗೌಡರ 'ಪ್ರತಾಪರುದ್ರದೇವ' ಒಂದು ವಿಶಿಷ್ಟವಾದ ಕೃತಿ. ಗೌಡರು ಎರಡು ಪ್ರಸಂಗಗಳಲ್ಲಿ ತೋರಿದ ಜಾಣ್ಮೆ ನಿಜವಾಗಿಯೂ ಮೆಚ್ಚಬೇಕಾದ್ದು. ಒಂದು-ವಿಜಯಧ್ವಜನನ್ನು ಚಂದ್ರವಲ್ಲಿ ಎದುರುಗೊಳ್ಳುವುದು. ಎರಡು-ವಿಜಯಧ್ವಜನ ಗೌರವಾರ್ಥವಾಗಿ ಏರ್ಪಡಿಸಿದ ಔತಣಕೂಟದಲ್ಲಿನ ಪಾನಗೋಷ್ಠಿ. ಈ ಎರಡೂ ಸಂದರ್ಭಗಳಲ್ಲಿ ಮೂಲಕ್ಕೆ ಚ್ಯುತಿ ಬರದಂತೆ ಭಾರತೀಯ ಪರಿಸರಕ್ಕೆ ಹೊಂದಿಕೊಳ್ಳುವಂತೆ ಬರೆದು ಪ್ರಗತಿ ಮನೋಭಾವನೆಯನ್ನು ತೋರಿಸಿಕೊಟ್ಟಿದ್ದಾರೆ. ಇದೇ ರೀತಿ ನಾಟಕದ ಉದ್ದಕ್ಕೂ ಎಲ್ಲೆಲ್ಲಿ ತೊಡಕು ಬಂದಿದೆಯೋ ಅಲ್ಲೆಲ್ಲಾ ಬದಲಿಸಿದ್ದಾರೆ. ''ಹೀಗೆ ಸಂಪ್ರದಾಯದ ಕಪಿಮುಷ್ಟಿಯಲ್ಲಿ ಸಾಹಿತ್ಯ ಸಿಲುಕಿಕೊಂಡಿದ್ದ ಆ ದಿನಗಳಲ್ಲೆ ಹೊಸ ನಿಲುವು, ಹೊಸ ಧೋರಣೆ ತಳೆದದ್ದು ಮಾತ್ರವಲ್ಲದೆ ತನ್ನ ಗಟ್ಟಿತನದಿಂದಾಗಿ 'ಪ್ರತಾಪರುದ್ರದೇವ' ನಾಟಕವೂ ಇವತ್ತಿಗೂ ಒಂದು ಗಮನಾರ್ಹ ಕೃತಿ ಎನ್ನುವುದರಲ್ಲಿ ಅತಿಶಯೋಕ್ತಿ ಇಲ್ಲ.'' [14]

ಹೀಗೆ ಶ್ರೀಕಂಠೇಶಗೌಡರು ನಾಟಕ, ಕಾದಂಬರಿ, ಕಾವ್ಯ, ಜೀವನ ಚರಿತ್ರೆ, ಬಿಡಿ ಲೇಖನ, ಜನಪದ ಕತೆಗಳ ಸಂಗ್ರಹ, ನಗೆಹನಿಗಳು, ಮುಂತಾದ ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ಕೆಲಸ ಮಾಡಿ ''ಸೋಜಿಗವ ಪೇಳೆ ಕಬ್ಬವ ಗೌಡಂ'' ಎಂದು ಮೂತಿ ಮುರಿಯುತ್ತಿದ್ದ ಕಾಲದಲ್ಲಿ ಹೊಸ ಹೆಜ್ಜೆಯನಿಟ್ಟು ಕನ್ನಡ ತಾಯಿಯ ಸೇವೆಯನ್ನು ಶ್ರದ್ಧೆಯಿಂದ ಮಾಡಿದ್ದಾರೆ. ವಿಮರ್ಶಕರ ಕಟು ಟೀಕೆಗೆ ಹೆದರಿ ಲೇಖನಿ ಹಿಡಿಯಲು ಅಂಜುವ ಅನೇಕರಿಗೆ ಸ್ಫೂರ್ತಿ ನೀಡುವಂತವರಾಗಿದ್ದಾರೆ. ಅವರು ಒಬ್ಬ ಗಮನಾರ್ಹ ಲೇಖಕನೆಂದು ಖಚಿತವಾಗಿ ಹೇಳಬಹುದು.

■

## ಅಡಿಟಿಪ್ಪಣಿ

1. ಡಿ. ವಿ. ಜಿ., ಸಾಹಿತ್ಯೋಪಾಸಕರು (ಮೈಸೂರು 1970), ಪುಟ 37, 40
2. ಡಾ॥ ಹಾ. ಮಾ. ನಾಯಕ, ಶ್ರೀಕಂಠೇಶಗೌಡರ ಕೃತಿಗಳು, (ಮೈಸೂರು 1974), ಮುನ್ನುಡಿ (1)
3. ತ. ಸು. ಶಾಮರಾಯ, ಕನ್ನಡ ನಾಟಕ, (ಮೈಸೂರು 1962), ಪುಟ 126-137
4. ಹೆಚ್. ಕೆ. ರಂಗನಾಥ್, ದಿ ಕರ್ನಾಟಕ ಥಿಯೇಟರ್, (ಧಾರವಾಡ, 1960), ಪುಟ 137
5. ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, (ಮೈಸೂರು 1974) ಪುಟ 270-271
6. ಡಾ॥ ಹಾ. ಮಾ. ನಾಯಕ, ಶ್ರೀಕಂಠೇಶಗೌಡರ ಕೃತಿಗಳು (ಮೈಸೂರು 1974), ಮುನ್ನುಡಿ
7. ಡಾ॥ ಹಾ. ಮಾ. ನಾಯಕ, ಶ್ರೀಕಂಠೇಶಗೌಡರ ಕೃತಿಗಳು (ಮೈಸೂರು 1974), ಮುನ್ನುಡಿ
8. ಎಂ.ಎಲ್. ಶ್ರೀಕಂಠೇಶಗೌಡ, ಪ್ರತಾಪರುದ್ರದೇವ (ಮೈಸೂರು 1895), ಪೀಠಿಕೆ 12
9. ಎಂ. ಎಲ್. ಶ್ರೀಕಂಠೇಶಗೌಡ, ಪ್ರತಾಪರುದ್ರದೇವ (ಮೈಸೂರು 1895), ಪೀಠಿಕೆ 15
10. ಗೋರೂರು ರಾಮಸ್ವಾಮಿ , ಅಯ್ಯಂಗಾರ್ , ಎಂ.ಎಲ್. ಶ್ರೀಕಂಠೇಶಗೌಡರ ಜಾನಪದ ಪ್ರಜ್ಞೆ : ಶ್ರೀಕಂಠೇಶಗೌಡರ ಜಾನಪದ ಕೊಡುಗೆ (ಮೈಸೂರು 1995), ಪುಟ 28 ಸಂ. : ಡಾ॥ ಜೀಶಂಪ, ವ. ನಾ. ಶಿವರಾಮು, ಹ. ಕ. ರಾಜೇಗೌಡ
11. ಜಿ. ಜಿ. ಮಂಜುನಾಥನ್, ಕರ್ನಾಟಕದ ಶೇಕ್ಸ್‌ಪಿಯರ್ : ಎಂ.ಎಲ್. ಶ್ರೀಕಂಠೇಶಗೌಡರ ಜಾನಪದ ಕೊಡುಗೆ. (ಮೈಸೂರು 1995) ಪುಟ 183. ಸಂ : ಜೀಶಂಪ ವ. ನಾ. ಶಿವರಾಮು, ಹ. ಕ. ರಾಜೇಗೌಡ
12. 'ವಿದ್ಯಾದಾಯಿನಿ' ಭಾಗ 4 ಸಂಚಿಕೆ 7 (ಜುಲೈ 1896) ಪುಟ 167
13. ಸಾಹಿತ್ಯೋಪಾಸಕರು (ಜ್ಞಾಪಕ ಚಿತ್ರಮಾಲೆ 111) ಪುಟ 38
14. ಕೆ. ಎಂ. ಮುನಿಕೃಷ್ಣಪ್ಪ ಎಂ. ಎಲ್. ಶ್ರೀಕಂಠೇಶಗೌಡ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂ. ವಿ., ಸಂಪುಟ 6. ಪುಟ 114

# ಭಾಷಾಂತರ - ಆಧುನಿಕ ಬೆಳವಣಿಗೆ

ಇತ್ತೀಚಿನ ದಿನಗಳಲ್ಲಿ ಭಾಷಾಂತರಕ್ಕೆ ಹೆಚ್ಚಿನ ಮಹತ್ವ ಬಂದಿದೆ ಹಾಗೂ ಬಹುಮುಖಿ ಮುನ್ನಡೆ ಸಾಧಿಸಿದೆ. ಕೇವ ಸಾಹಿತ್ಯ ಕ್ಷೇತ್ರದಲ್ಲಿ ಮಾತ್ರವಲ್ಲ, ವಿಜ್ಞಾನ, ಕಲೆ, ಸಂಸ್ಕೃತಿ, ವ್ಯಾಪಾರ, ವ್ಯವಹಾರ, ಸುದ್ದಿ ಮಾಧ್ಯಮ ಮುಂತಾದ ಹತ್ತು ಹಲವಾರು ಕ್ಷೇತ್ರಗಳಲ್ಲಿ ಭಾಷಾಂತರ ತನ್ನ ಪ್ರಭಾವ ಬೀರಿದೆ. ವೈಜ್ಞಾನಿಕ ಪ್ರಗತಿಯ ಹಿನ್ನೆಲೆಯಲ್ಲಿ ಪ್ರಪಂಚ ಹತ್ತಿರವಾಗುತ್ತಾ ಬಂದಂತೆಲ್ಲ, ಬೇರೆ ಬೇರೆ ದೇಶಗಳ ನಡುವೆ ಸಂಪರ್ಕ ಬೆಳೆದಂತೆಲ್ಲಾ ಭಾಷಾಂತರ ಮಹತ್ವದ ಸ್ಥಾನವನ್ನು ಪಡೆಯುತ್ತಿದೆ. ಹೀಗಾ ಭಾಷಾಂತರದ ಬಗ್ಗೆ ಇದ್ದ ದೃಷ್ಟಿ ಧೋರಣೆಗಳೂ ಬದಲಾಗುತ್ತಿವೆ. ಈ ಹಿನ್ನೆಲೆಯಲ್ಲೇ "ಭಾಷಾಂತರವಿಲ್ಲದೇ ಏನ ನಡೆಯದು" ಎಂದು ಇ. ಎಸ್. ಬೇಟ್ಸ್ ಹೇಳಿದ್ದು. ಭಾಷಾಂತರ ಕ್ಷೇತ್ರ ವಿಸ್ತಾರವಾಗುತ್ತಾ ಹೋಗುತ್ತಿದೆ. ಪ್ರಪಂಚ ಪ್ರತಿಯೊಂದು ಭಾಗದಲ್ಲಿ ನಡೆಯುವ ಘಟನೆಗಳ ಬಗ್ಗೆ, ಅಲ್ಲಿಯ ಪ್ರಗತಿಯ ಬಗ್ಗೆ ತಿಳಿಯುವ ಕುತೂಹಲ ಭಾಷಾಂತರ ಪ್ರಗತಿಗ ಎಡೆಮಾಡಿಕೊಟ್ಟಿದೆ. ಭಾಷಾಂತರ ಹೊಸ ನೆಲೆಯನ್ನು ಆಯಾಮವನ್ನು ಪಡೆದುಕೊಳ್ಳುತ್ತಿದೆ.

ಒಂದು ಕಾಲಕ್ಕೆ ಸಾಹಿತ್ಯ ಕೇವಲ ಧರ್ಮಗ್ರಂಥಗಳ ರಚನೆಗೆ ಸೀಮಿತವಾಗಿತ್ತು. ಲೌಕಿಕ ಸಾಹಿತ್ಯಕ್ಕೆ ಮಹತ್ವವೇ ಇರಲಿಲ್ಲ ಭಾಷಾಂತರ ಕೂಡ ಈ ಧಾರ್ಮಿಕ ಗ್ರಂಥಗಳ ಅನುವಾದಕ್ಕೆ ಮಾತ್ರ ಮೀಸಲಾಗಿತ್ತು. ಈ ಪ್ರವೃತ್ತಿ ಕ್ರಮೇಣ ಬದಲಾಯಿತು ಲೇಖಕರು ಹೆಚ್ಚು ಹೆಚ್ಚು ಸ್ವಾತಂತ್ರ್ಯವನ್ನು ವಹಿಸಿಕೊಂಡು ಸಾಮಾಜಿಕ ವಿಚಾರಗಳ ಬಗ್ಗೆ, ತಮ್ಮ ಮನಸ್ಸಿನಲ್ಲಿ ಮೂಡು ಭಾವನೆಗಳ ಬಗ್ಗೆ ನಿಸ್ಸಂಕೋಚವಾಗಿ ಬರೆಯಲು ಪ್ರಾರಂಭಿಸಿದರು. ಭಾವ, ಸನ್ನಿವೇಶ, ಸೂಕ್ತಿ, ಅಲಂಕಾರ, ವರ್ಣನ ಚಾತುರ್ಯಗಳು ಲೇಖಕರ ಲೇಖನಿಯಿಂದ ಹರಿದುಬಂದುದು ಮಾತ್ರವಲ್ಲ, ಇನ್ನೊಂದು ಭಾಷೆಯಿಂದಲೂ ಹರಿದು ಬರಲ ಪ್ರಾರಂಭವಾಯಿತು. ಹೆಚ್ಚು ಹೆಚ್ಚು ತಿಳಿದುಕೊಳ್ಳಬೇಕೆನ್ನುವ ಜನರ ಕುತೂಹಲ ಇದಕ್ಕೆ ಹೆಚ್ಚು ಇಂಬು ನೀಡಿತು. ಇತ್ತೀಚೆಗೆ ಈ ಭಾಷಾಂತರ ಪ್ರವೃತ್ತಿ ಎಷ್ಟು ಬೆಳೆದಿದೆ ಎಂದರೆ ಮೂಲದ ಸ್ಮರಣೆ ಮಾಡುವ ಗೋಜಿಗೆ ಹೋಗದಷ್ಟು. ಇದು ಭಾಷಾಂತರವೊ ಮೂಲ ಕೃತಿಯೋ ಎಂದು ತಿಳಿಯಲಾರದಷ್ಟು ಹಾಸುಹೊಕ್ಕಾಗಿ ಬೆಳೆದಿದೆ. ಈಗ ಈ ಕೃತಿಚೌರ್ಯ ಪಾಪಪ್ರಜ್ಞೆಯ ಗಡಿಯನ್ನ ದಾಟಿದೆ. ಇದೊಂದು ಸ್ವಾಭಾವಿಕ ಕ್ರಿಯೆಯಾಗಿ ಜನರು ಇದನ್ನು ಒಪ್ಪುವ ಮಟ್ಟಕ್ಕೆ ಹೋಗಿದೆ. ಹಾಗಾಗಿ ಭಾಷಾಂತರ ಇಂದು ಜನ ದೃಷ್ಟಿಯಲ್ಲಿ ಭಾಷಾಂತರವಾಗಿ ಉಳಿದಿಲ್ಲ. ಅದು ಮೂಲಕೃತಿಯಷ್ಟೇ ಸಹಜ ಕ್ರಿಯೆ ಆಗಿದೆ.

ನಾಗರೀಕತೆ ಬೆಳೆದಂತೆಲ್ಲಾ ಮಾಹಿತಿ ಹಸಿವೂ ಹೆಚ್ಚಾಗುತ್ತಾ ಹೋಗಿದೆ. ಅವಶ್ಯಕತೆಗಳು, ಅನಿವಾರ್ಯತೆಗಳು, ಭಾವುಕತೆಗಳ ಹೆಚ್ಚಿದಂತೆಲ್ಲಾ ಮನುಷ್ಯ ಎಲ್ಲಾ ಕಡೆ ಕೈ ಚಾಚಿ ತನಗೆ ದೊರೆತದ್ದನ್ನು ಸ್ವೀಕರಿಸುವ ಪ್ರವೃತ್ತಿ ಬೆಳೆಸಿಕೊಂಡಿದ್ದಾನೆ. ಹೀಗಾಗಿ ಭಾಷ

ಮತ್ತು ಭಾಷಾಂತರಕ್ಕೂ ಹೆಚ್ಚಿನ ಮಹತ್ವ ಬಂದಿದೆ. ಭಾಷಾಂತರದ ಇತ್ತೀಚಿನ ಪ್ರವೃತ್ತಿಯನ್ನು ಭಾಷಿಕ, ಸಾಹಿತ್ಯಿಕ ಹಾಗೂ ಸಾಹಿತ್ಯೇತರ ಪ್ರವೃತ್ತಿಯಾಗಿ ವಿಗಂಡಿಸಬಹುದು.

**ಭಾಷಿಕ ಪ್ರವೃತ್ತಿ**

ಮನುಷ್ಯ ಬೆಳೆದಂತೆಲ್ಲಾ ಭಾಷೆಯೂ ಬೆಳೆಯುತ್ತಿದೆ. ನಾಗರೀಕತೆಗೆ ಅನುಸಾರವಾಗಿ ಹೊಸ ಹೊಸ ವಿಚಾರಗಳು ಮನುಷ್ಯನ ಬಳಕೆಗೆ ಬರುತ್ತಿವೆ. ಅವುಗಳಿಗೆ ಅಭಿವ್ಯಕ್ತಿ ಸ್ವರೂಪ ಕಂಡುಕೊಳ್ಳಲು ಭಾಷೆ ಸಾಧನವಾಗುತ್ತದೆ. ಹೀಗಾಗಿ ಪ್ರತಿ ಭಾಷೆಯಲ್ಲೂ ಪ್ರತಿ ನಿತ್ಯವೂ ಹೊಸ ಹೊಸ ಶಬ್ದಗಳು ಸೃಷ್ಟಿಯಾಗುತ್ತಾ ಹೋಗುತ್ತವೆ. ಕೆಲವೊಮ್ಮೆ ಇತರ ಭಾಷೆಗಳ ಶಬ್ದಗಳನ್ನು ದಿನನಿತ್ಯದ ಬಳಕೆಯಲ್ಲಿ ತಂದು ತನ್ನದಾಗಿಸಿಕೊಳ್ಳಲಾಗುತ್ತದೆ. ಇಲ್ಲದಿದ್ದರೆ ಅವುಗಳಿಗೆ ತಮ್ಮ ಭಾಷೆಗಳಲ್ಲೇ ಶಬ್ದಗಳನ್ನು ಕಂಡುಕೊಳ್ಳಲಾಗುತ್ತಿದೆ. ಉದಾಹರಣೆಗೆ 'ಇಂಜಿನಿಯರ್' 'ಪೊಲೀಸ್' ಮುಂತಾದ ಶಬ್ದಗಳನ್ನು ಕನ್ನಡದಲ್ಲಿ ದಿನನಿತ್ಯ ಬಳಸುವುದರ ಮುಖಾಂತರ ಅವುಗಳನ್ನು ಕನ್ನಡೀಕರಿಸಲಾಗಿದೆ. ಅಲ್ಲದೇ ಅವುಗಳಿಗೆ ''ಅಭಿಯಂತ'' ''ಆರಕ್ಷಕ'' ಎನ್ನುವ ಪರ್ಯಾಯ ಪದವನ್ನು ಕನ್ನಡದಲ್ಲೇ ಹುಡುಕಿ ದಿನನಿತ್ಯ ಬಳಸುವ ಪ್ರಯತ್ನವನ್ನು ಮಾಡಲಾಗುತ್ತಿದೆ. ಒಟ್ಟಿನಲ್ಲಿ ಭಾಷೆ ಪದಕೋಶ (Lexicon) ಮತ್ತು ವ್ಯಾಕರಣ (grammar) ಇವೆರಡು ಆಧಾರ ಸ್ಥಂಭಗಳ ಮೇಲೆ ನಿಂತಿದೆ. ಇಂದಿನ ಹೈ-ಟೆಕ್ ಜಗತ್ತಿನಲ್ಲಿ ಭಾಷೆ ಹಿಗ್ಗುತ್ತಾ ಸಾಗಿದೆ. ಭಾಷಾಂತರಕಾರರೂ ಪರ್ಯಾಯ ಪದಗಳ ಅನ್ವೇಷಣೆಯಲ್ಲಿ ಹೊರಟಿದ್ದಾರೆ. ರೇಡಿಯೋ (ಆಕಾಶವಾಣಿ), ಟಿವಿ (ದೂರದರ್ಶನ) ಗಳು ಪರ್ಯಾಯ ಪದಗಳನ್ನು ಕಂಡುಕೊಂಡರೆ ಟ್ರಾನ್ಸಿಸ್ಟರ್, ಮೋಟಾರ್ ಸೈಕಲ್, ವಿಡಿಯೋ, ಕಂಪ್ಯೂಟರ್ ಮುಂತಾದ ಶಬ್ದಗಳು ಹಾಗೆಯೇ ಕನ್ನಡಕ್ಕೆ ಇಳಿದು ಬಂದಿವೆ. ಈ ಪ್ರವೃತ್ತಿ ದಿನದಿಂದ ದಿನಕ್ಕೆ ಬೆಳೆಯುತ್ತಲೇ ಸಾಗಿದೆ.

ಪದಗಳನ್ನು ಹ್ರಸ್ವೀಕರಿಸಿ (abbreviation) ಪ್ರಯೋಗಿಸುವುದು ಇಂದು ಹೆಚ್ಚು ಬಳಕೆಯಲ್ಲಿ ಬಂದಿವೆ. ಮಿಸಿ, ಮಿಡಿ, ಮ್ಯಾಕ್ಸಿ, ಟಿವಿ, ಫ್ರಿಜ್, ಮಿಕ್ಸಿ, ಬೈಕ್, ಪ್ಲೇನ್ ಮುಂತಾದ ಕಿರಿದಾದ ಶಬ್ದಗಳು ಕನ್ನಡದಲ್ಲಿ ದಿನನಿತ್ಯ ಬಳಕೆಯಾಗುತ್ತವೆ. ಇವುಗಳನ್ನು ಕನ್ನಡೀಕರಿಸುವುದು ಅಷ್ಟು ಸುಲಭವಲ್ಲ. ಹಾಗೆಯೇ ಕೆಇಬಿ (ಕ.ವಿ.ಮಂ) ಕೆಎಸ್ಆರ್ಟಿಸಿ(ಕರಾರಸಾಸಂ) ಕೆಹೆಚ್‌ಬಿ(ಕ.ಗೃ.ಮಂ), ಕೆ.ಪಿ.ಸಿ(ಕ.ವಿ.ನಿ), ಕೆಹೆಚ್‌ಟಿಡಿಸಿ, ಸಿ.ಎಸ್ (ಮುಖ್ಯಕಾರ್ಯದರ್ಶಿ), ಡಿ. ಸಿ. (ಜಿಲ್ಲಾಧಿಕಾರಿ) ಎಸ್. ಪಿ. (ಜಿಲ್ಲಾ ಪೊಲೀಸ್ ಮುಖ್ಯಾಧಿಕಾರಿ) ಮುಂತಾದ ಪದನಾಮಗಳು (designation) ಕನ್ನಡದಲ್ಲಿ ಬಳಕೆಯಲ್ಲಿ ಬಂದಿದೆ.

ದಿನನಿತ್ಯದ ಬಳಕೆಯಲ್ಲಿ ವ್ಯಾಕರಣದ ಮಹತ್ವ ಕಡಿಮೆಯಾಗಿದೆ. ಇಂದಿನ ಜನರು ಬಹಳ ವೇಗವಾಗಿ ಚಲಿಸುತ್ತಿದ್ದಾರೆ. ನಿಧಾನವಾಗಿ ಕ್ರಮಬದ್ಧವಾಗಿ ಭಾಷೆಯನ್ನು ಬಳಸಿ ವಿಷಯವನ್ನು ನಿರೂಪಿಸುವಷ್ಟು ಸಮಯವೂ ಇಲ್ಲ, ವ್ಯವಧಾನವೂ ಇಲ್ಲ. ಇದಕ್ಕಾಗಿ ವಿಷಯವನ್ನು ತಿಳಿಸಲು ಎಷ್ಟು ಬೇಕೋ ಅಷ್ಟು ಮಾತ್ರ ಶಬ್ದಗಳನ್ನು ಬಳಸಿ, ಮುಂದಕ್ಕೆ ಸಾಗಲಾಗುತ್ತಿದೆ. ಹೀಗಾಗಿ ವಿಭಕ್ತಿ ಪ್ರತ್ಯಯ, ಉಪಸರ್ಗ, ಸಂಸರ್ಗ ಬಳಕೆ ಕಡಿಮೆಯಾಗುತ್ತದೆ. ಹಣವನ್ನು ಉಳಿತಾಯ, ಮಿತವ್ಯಯ ಮಾಡಿದಂತೆ ಭಾಷೆಯನ್ನು ಬಳಸಲಾಗುತ್ತಿದೆ. ಅನಾವಶ್ಯಕ ಶಬ್ದ ಪ್ರಯೋಗವಿಲ್ಲ. ಎಷ್ಟು ಬೇಕೋ ಅಷ್ಟು ವಿಷಯವನ್ನು ಪರಿಣಾಮಕಾರಿಯಾಗಿ ಮುಟ್ಟಿಸುವುದು ಇಂದಿನ ಭಾಷೆಯ ಕೆಲಸ ಅಷ್ಟೇ. ಈ ನಿಟ್ಟಿನಲ್ಲಿ ಶಬ್ದಗಳನ್ನು ಸಾರ್ವತ್ರೀಕರಿಸಲು (Universlisation) ಪ್ರಯತ್ನ

ನಡೆದಿದೆ. ಹಾಗೆಯೇ ಕಂಪ್ಯೂಟರ್‌ಗೆ ಅಳವಡಿಸಲು ಹೆಚ್ಚಿನ ಪ್ರಯತ್ನ ಮಾಡಲಾಗುತ್ತಿದೆ. ಪದಬಳಕೆ ಅಂಕಿ ಅಂಶಗಳ (Lexico statistics)ನ ಪದಗಳ (Kinship terms) ಅನ್ವೇಷಣೆ ಇವೇ ಮುಂತಾದ ವಿಚಾರಗಳಲ್ಲಿ ಸಂಶೋಧನೆ ಭಾಷೆ ಮತ್ತು ಭಾಷಾಂತರಗಳೆರಡರಲ್ಲೂ ಸಾಗಿದೆ.

**ಸಾಹಿತ್ಯಿಕ ಪ್ರವೃತ್ತಿ**

ಸಾಹಿತ್ಯ ಕೂಡ ಜನರ ಅಭಿಲಾಷೆಗಳಿಗುಣವಾಗಿ ಬದಲಾಗುತ್ತಿರುವುದನ್ನು ನಾವು ಕಾಣಬಹುದು. ಒಂದು ಕಾಲದಲ್ಲಿ ಆಧ್ಯಾತ್ಮಿಕ, ಪೌರಾಣಿಕ ವಿಚಾರಗಳನ್ನು ಆಧರಿಸಿಯೇ ಸಾಹಿತ್ಯ ರಚನೆಯಾಗುತ್ತಿತ್ತು. ಇಂದು ಮನಸ್ಸಿಗೆ ಸಂತೋಷಕೊಡುವ ವಿಚಾರಗಳನ್ನು ಸೃಷ್ಟಿಸುವ ಸಾಹಿತ್ಯ ರಚನೆಯಾಗುತ್ತಿದೆ. ಎಲ್ಲವೂ ಬದಲಾವಣೆಯಾದ ಹಾಗೆ ಸಾಹಿತ್ಯದಲ್ಲೂ ಬದಲಾವಣೆಯಾಗುವುದು ಸ್ವಾಭಾವಿಕ. ಹೀಗಾಗಿ ನಿಯಮಬದ್ಧ ಸಾಹಿತ್ಯ ರಚನೆ ಇಂದಿಲ್ಲ. ಹೀಗೇ ಆಗಬೇಕು. ಹಾಗೆ ಬರೆಯಬೇಕು ಎಂಬ ಕಾಲ ಹೋಗಿದೆ. ಸಾಹಿತಿ ತನಗೆ ಯಾವುದು ಸರಿ ಎಂದು ತೋಚುತ್ತದೋ ಹಾಗೆಯೇ ಅಭಿವ್ಯಕ್ತಿಗೊಳಿಸಲು ಹೋಗುತ್ತಾನೆ. ಅದನ್ನು ಸಮಾಜ ಸ್ವಾಗತಿಸಿಯೋ, ಬೇರೆ ಮಾಡಿಯೋ ಸ್ವೀಕರಿಸುತ್ತದೆ.

ಇದೇ ರೀತಿ ಭಾಷಾಂತರ ಕ್ಷೇತ್ರದಲ್ಲಿ ಸಾಕಷ್ಟು ಬೆಳವಣಿಗೆಯಾಗಿದೆ. ಕೆಲವರು ಸಂಪ್ರದಾಯವಾದಿಗಳು ಮೂಲವನ್ನು ಅದರ ಸಮಸ್ತ ವೈಭವದೊಡನೆ ಉದ್ದಿಷ್ಟ ಭಾಷೆಯಲ್ಲಿ ಹಾಗೆಯೇ ಉಣಬಡಿಸಬೇಕೆನ್ನುತ್ತಾರೆ. ಅವರ ಉದ್ದೇಶ ಮೂಲ ಸಾಹಿತ್ಯದ ಸಾಮರಸ್ಯ ಎಲ್ಲೂ ಕೆಡಬಾರದು, ಓದುಗ ಅದನ್ನು ಮೂಲದಲ್ಲಿ ಓದಿದಾಗ ಏನು ಅನುಭವಿಸುತ್ತಾನೋ ಅದೇ ಅನುಭವ ಭಾಷಾಂತರದಲ್ಲಿ ಓದಿದಾಗಲೂ ಆಗಬೇಕೆನ್ನುವುದು. ಈ ಭಾವನೆ ಧಾರ್ಮಿಕ ಗ್ರಂಥಗಳ ಬಗ್ಗೆಯಂತೂ ಹೆಚ್ಚಾಗಿರುವುದು ಕಂಡುಬರುತ್ತದೆ. ಖುರಾನ್, ಬೈಬಲ್, ಭಗವದ್ಗೀತೆಗಳನ್ನು ಭಾಷಾಂತರಿಸಿದಾಗ ಮೂಲದಲ್ಲಿನ ವಿಷಯಗಳನ್ನು ಬದಲಾಯಿಸಲು ಸಂಪ್ರದಾಯಸ್ಥ ಪ್ರಜ್ಞಾವಂತರು ಒಪ್ಪುವುದಿಲ್ಲ. ಇದು ಗ್ರಂಥ ಕೇಂದ್ರಿತ (Text - oriented) ಭಾಷಾಂತರ. ಇನ್ನೊಂದು ಓದುಗ ಕೇಂದ್ರಿತ (reader oriented) ಭಾಷಾಂತರ. ಇದರಲ್ಲಿ ಓದುಗನ ಅಭಿಲಾಷೆ ಮುಖ್ಯ. ಅವನ ಅವಶ್ಯಕತೆಗಳಿಗೆ ಒಪ್ಪುವಂತೆ. ಅವನ ಇಚ್ಛೆಗೆ ಅನುಸಾರವಾಗಿ ಮೂಲದಲ್ಲಿ ಅನೇಕ ಬದಲಾವಣೆಯಾಗುತ್ತವೆ. ಈ ಬದಲಾವಣೆ ಶೀರ್ಷಿಕೆ ಹಂತದಿಂದಲೇ ಪ್ರಾರಂಭವಾಗಬಹುದು. ಈ ರೀತಿಯ ಭಾಷಾಂತರಗಳು ಕತೆ - ಕಾದಂಬರಿಗಳಲ್ಲಿ ಮಾತ್ರವಲ್ಲ, ಸಿನಿಮಾ ಜಗತ್ತಿನಲ್ಲೂ ನಾವು ಕಾಣಬಹುದು. ಪತ್ರಿಕೆಗಳೂ ತಮ್ಮ ಪ್ರಸಾರ ಹೆಚ್ಚಿಸುವ ದೃಷ್ಟಿಯಿಂದ ಇತರ ಭಾಷೆಗಳ ಲೇಖನಗಳ ಜೊತೆಗೆ ಸುದ್ದಿ ಸಮಾಚಾರಗಳನ್ನು ಭಾಷಾಂತರಿಸಿ ಬಿತ್ತರಿಸುವ ಪ್ರವೃತ್ತಿ ಇಂದು ಹೆಚ್ಚಾಗಿದೆ. ಇಂತಹ ಸಂದರ್ಭಗಳಲ್ಲಿ ಭಾಷಾಂತರದ ಗುಣಮಟ್ಟ ಯಾವ ಕೆಳಮಟ್ಟಕ್ಕೂ ಇಳಿಯುವ ಸಾಧ್ಯತೆ ಇದೆ. ಎಷ್ಟೋ ಸಂದರ್ಭ ಭಾಷಾಂತರ ವಾಣಿಜ್ಯೀಕರಣ(Commercialisation)ವಾಗುವ ಸಾಧ್ಯತೆಯೇ ಹೆಚ್ಚು. ಇಂದು ಪ್ರತಿಯೊಂದು ವಿಷಯವನ್ನು ವಾಣಿಜ್ಯದ ದೃಷ್ಟಿಯಿಂದ ನೋಡುತ್ತಿರುವುದರಿಂದ ಸಾಹಿತ್ಯ ಹಾಗೂ ಭಾಷಾಂತರಗಳು ಕೂಡ ಅದೇ ದೃಷ್ಟಿಯಿಂದ ನೋಡುವ ಪ್ರವೃತ್ತಿ ಬೆಳೆದಿದೆ.

ವಿಶ್ವವಿಖ್ಯಾತ ಲೇಖಕರ ಕೃತಿಗಳನ್ನು ಸಂಗ್ರಹಾನುವಾದ ಮಾಡಿ ಸರಳ ಗದ್ಯದಲ್ಲಿ ಜನರಿಗೆ ನೀಡುವುದು ಇತ್ತೀಚೆಗೆ ಹೆಚ್ಚು ಜನಪ್ರಿಯವಾಗುತ್ತಿದೆ. ಕಾಳಿದಾಸ, ಷೇಕ್ಸ್‌ಪಿಯರ್, ಹೋಮರ್ ಮುಂತಾದವರ ಕೃತಿಗಳನ್ನು ಸರಳ ಗದ್ಯರೂಪದಲ್ಲಿ ನಾವು

ಕಾಣಬಹುದು. ಜನರಲ್ಲಿ ಇಂದು ಇಂತಹ ವಿಷಯಗಳಿಗೆ ವ್ಯಯಿಸಲು ಸಮಯ ಬಹಳ ಕಡಿಮೆ. ತಮ್ಮ ಬಿರುಸಿನ ಬದುಕಿನಲ್ಲಿ ಸಿಕ್ಕ ಸ್ವಲ್ಪ ಸಮಯಾವಕಾಶದಲ್ಲಿ ಓದಲು ಅನುಕೂಲವಾಗಲು ಈ ತರಹದ ಗದ್ಯ ಸಂಗ್ರಹಗಳು ಅನುಕೂಲವಾಗಿವೆ. ದೊಡ್ಡ ದೊಡ್ಡ ಕಾವ್ಯಗಳನ್ನು ಓದುವ ವ್ಯವಧಾನವೂ ಈಗ ಯಾರಿಗೂ ಉಳಿದಿಲ್ಲ. ಹಾಗೆಯೇ ಅಳವಡಿಕೆ (Adaptation) ಇಂದು ತುಂಬಾ ಜನಪ್ರಿಯವಾಗುತ್ತಿದೆ. ಹಿಂದೊಮ್ಮೆ ಈ ವಿಧವಾದ ಭಾಷಾಂತರ ಕ್ರಿಯೆಯನ್ನು ವ್ಯಭಿಚಾರವೆಂದೂ ದೂರ ಇಡಲಾಗಿತ್ತು. ರೂಪಾಂತರ, ಅಳವಡಿಕೆ ಮುಂತಾದ ಭಾಷಾಂತರ ಪ್ರಕಾರಗಳು ಮೂಲ ಕೃತಿಗೆ ಅಪಚಾರ ಮಾಡಿದಂತೆ ಎಂಬ ಭಾವನೆ ಹಿಂದಿತ್ತು. ಈಗ ಅದು ಮಾಯವಾಗಿ ಅನೇಕ ಉತ್ತಮ ಕೃತಿಗಳ ಅಳವಡಿಕೆ, ರೂಪಾಂತರಗಳು ಕೆಲವೊಮ್ಮೆ ಅಧಿಕೃತವಾಗಿ ಕೆಲವೊಮ್ಮೆ ಅನಧಿಕೃತವಾಗಿ ಬರುತ್ತಿರುವುದು ಇತ್ತೀಚಿನ ಬೆಳವಣಿಗೆಗಳಲ್ಲೊಂದು. ಅನುವಾದವೆನ್ನಲೂ ಆಗದ, ಸ್ವಂತ ಕೃತಿ ಎಂದೂ ಹೇಳಲಾಗದ, ಜನರಲ್ಲಿ ಹೆಚ್ಚು ಪ್ರಿಯವಾಗುತ್ತಿರುವ ಈ ಬಗೆಯ ಸಾಹಿತ್ಯ ಪ್ರಕಾರ ಇಂದಿನ ಸಾಹಿತ್ಯ ಜಗತ್ತಿನ ವಿಕೃತ ಸ್ವರೂಪವನ್ನು ಪ್ರತಿಬಿಂಬಿಸುತ್ತದೆ.

ಇಷ್ಟೆಲ್ಲಾ ಬದಲಾವಣೆಗಳ ಮಧ್ಯದಲ್ಲೂ ಭಾಷಾಂತರಕ್ಕೆ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಮರ್ಯಾದೆ ಸ್ಥಾನ ಸಿಕ್ಕಿರುವುದು ಇತ್ತೀಚಿನ ದಿನಗಳ ಆರೋಗ್ಯಕರ ಬೆಳವಣಿಗೆ. ಭಾಷಾಂತರ ವಿಭಾಗಗಳು ಅನೇಕ ವಿಶ್ವವಿದ್ಯಾಲಯದಲ್ಲಿ ಹುಟ್ಟಿಕೊಂಡು ಬೆಳೆಯುತ್ತಿವೆ. ಭಾಷಾಂತರಕಾರರು ಒಂದೆಡೆ ಸೇರಿ ತಮ್ಮ ಕಷ್ಟ ಸುಖಗಳನ್ನು ಹಂಚಿಕೊಳ್ಳಲಿದ್ದಾರೆ. ಇದರ ಬಗ್ಗೆ ಉತ್ತಮ ಚರ್ಚೆ, ವಿಮರ್ಶೆಗಳು ನಡೆಯುತ್ತಿವೆ. ಭಾಷಾಂತರದ ತತ್ತ್ವ, ವಿಧಾನ, ಮಿಮಾಂಸೆಗಳು ರಚಿತವಾಗುತ್ತಿವೆ. ಅನೇಕ ಸಂಶೋಧನೆಗಳು ನಡೆಯುತ್ತಿವೆ. ಅನೇಕ ಭಾಷಾಂತರ ಅಕಾಡೆಮಿಗಳು ಅಸ್ತಿತ್ವಕ್ಕೆ ಬಂದಿವೆ. ಸಾಹಿತ್ಯ ಜಗತ್ತಿನಲ್ಲಿ ಭಾಷಾಂತರಕ್ಕೆ ಒಂದು ಗೌರವ ಸ್ಥಾನ ದೊರೆತಿರುವುದು ಒಂದು ಒಳ್ಳೆಯ ಲಕ್ಷಣ.

**ಸಾಹಿತ್ಯೇತರ ಪ್ರವೃತ್ತಿ**

ಆಧುನಿಕ ಜಗತ್ತಿನಲ್ಲಿ ಸಾಹಿತ್ಯ ಕ್ಷೇತ್ರಕ್ಕಿಂತಲೂ ಹೆಚ್ಚಾಗಿ ಇನ್ನಿತರ ಕ್ಷೇತ್ರಗಳಲ್ಲಿ ಭಾಷಾಂತರ ತನ್ನ ಮುನ್ನಡೆಯನ್ನು ಸಾಧಿಸಿದೆ. ಸಂಪರ್ಕ ಸಾಧನಗಳು ಬೆಳೆದಂತೆಲ್ಲಾ ಪ್ರಪಂಚ ಕಿರಿದಾಗುತ್ತಿದೆ. ಇಂಗ್ಲೆಂಡ್, ಅಮೆರಿಕ ದೇಶಗಳು ಇಂದು ನಮಗೆ ನೆರೆಮನೆ ಇದ್ದಂತೆ. ಹಿಂದೆ ವಿದೇಶ ಪ್ರವಾಸವೆಂದರೆ ನಮ್ಮ ಪೂರ್ವಿಕರು ಕಾಶಿ, ಬದರಿಗೆ ಹೋಗಿ ಬಂದಷ್ಟು ಅಪರೂಪವಾಗಿರುತ್ತಿತ್ತು. ಇಂದು ಅದು ಒಂದು ಅಪರೂಪದ ಸಂಗತಿಯಾಗಿ ಉಳಿದಿಲ್ಲ. ಹಾಗಾಗಿ ದೇಶದಿಂದ ದೇಶಕ್ಕೆ, ಜನರಿಂದ ಜನರಿಗೆ ಸಂಪರ್ಕ ಏರ್ಪಡಿಸಲು ಭಾಷಾಂತರ ಹೆಚ್ಚು ಸಹಕಾರಿಯಾಗುತ್ತದೆ. ಈ ಹಿನ್ನೆಲೆಯಲ್ಲಿ ಅನೇಕ ರೀತಿಯ ಸಾಹಿತ್ಯೇತರ ಪ್ರವೃತ್ತಿಗಳು ಬೆಳೆದುಕೊಂಡು ಬಂದಿವೆ. ಅವುಗಳಲ್ಲಿ ಮುಖ್ಯವಾಗಿ ಶೈಕ್ಷಣಿಕ, ವೈಜ್ಞಾನಿಕ, ವಾಣಿಜ್ಯಿಕ, ಸಾಂಖ್ಯಿಕ, ಆಡಳಿತಾತ್ಮಕ, ಮಾನವಿಕ, ಪ್ರಸಾರ, ದುಭಾಷಿತ್ವ, ಮೌಖಿಕ, ಏಕಕಾಲಿಕ, ಸಹಯೋಗಿಕ, ಸಮ್ಮೇಳನ, ಕಂಪ್ಯೂಟರ್ ಪ್ರವೃತ್ತಿಗಳನ್ನು ನಾವು ಗುರುತಿಸಬಹುದು.

**1. ಶೈಕ್ಷಣಿಕ**

ಶೈಕ್ಷಣಿಕವಾಗಿ ಭಾಷಾಂತರಕ್ಕೆ ಇಂದು ಮರ್ಯಾದೆಯ ಸ್ಥಾನ ಸಿಕ್ಕಿದೆ. ಅನೇಕ ವಿಶ್ವವಿದ್ಯಾಲಯಗಳು, ಸಂಸ್ಥೆಗಳು, ಭಾಷಾಂತರಕ್ಕೆ ವಿಭಾಗಗಳನ್ನು ಸ್ಥಾಪಿಸಿ, ಈ ಬಗ್ಗೆ ಅಧ್ಯಯನಕ್ಕೆ, ಸಂಶೋಧನೆಗೆ ಎಡೆ ಮಾಡಿಕೊಟ್ಟಿವೆ. ಭಾಷಾಂತರ ವಿಷಯದಲ್ಲಿ ಎಂ. ಎ.,

ಎಂ. ಫಿಲ್, ಪಿ. ಹೆಚ್‌ಡಿಗಳು ಕೂಡ ಹೊರಬರುತ್ತಿವೆ. ಭಾಷಾಂತರದ ಬಗ್ಗೆ ಡಿಪ್ಲೋಮೋಗಳು ಕೂಡ ಇವೆ. ಈ ನಿಟ್ಟಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ವಿಶ್ವವಿದ್ಯಾನಿಲಯ, ಮಧುರೈ ಕಾಮರಾಜ ವಿಶ್ವವಿದ್ಯಾನಿಲಯ, ಆಂಧ್ರ ವಿಶ್ವವಿದ್ಯಾನಿಲಯ, ಪಂಜಾಬ್ ವಿಶ್ವವಿದ್ಯಾನಿಲಯ, ಮುಂಬಯಿ ವಿಶ್ವವಿದ್ಯಾನಿಲಯ ಹೀಗೆ ಅನೇಕ ವಿಶ್ವವಿದ್ಯಾಲಯಗಳು ಭಾಷಾಂತರ ಅಧ್ಯಯನಕ್ಕೆ ಹೆಚ್ಚಿನ ಅವಕಾಶ ಮಾಡಿಕೊಟ್ಟಿದೆ. ಇವುಗಳಲ್ಲದೆ ಕೇಂದ್ರ ಸಾಹಿತ್ಯ ಅಕಾಡೆಮಿ, ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಕೃತಿಗಳನ್ನು ಇತರ ಭಾರತೀಯ ಭಾಷೆಗೂ, ಆಂಗ್ಲ ಭಾಷೆಗೂ ಭಾಷಾಂತರಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ ಅಲ್ಲದೇ ತನ್ನದೇ ಆದ ಭಾಷಾಂತರ ವಿಭಾಗವನ್ನು ಪ್ರಾರಂಭಿಸಿದೆ. ಅಲ್ಲದೆ ಚೆನ್ನೈನಲ್ಲಿರುವ ಇಂಟರ್‌ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ತಮಿಳ್ ಸ್ಟಡೀಸ್, ಕೇಂದ್ರೀಯ ಹಿಂದಿ ಸಂಸ್ಥಾನ, ಭಾರತೀಯ ವಿದ್ಯಾಭವನ, ಚೆನ್ನೈನ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭಾಗಳು ಭಾಷಾಂತರಕ್ಕೆ ಹೆಚ್ಚಿನ ಮಹತ್ವ ನೀಡುತ್ತಿವೆ. ಭಾರತ ಸರ್ಕಾರದ ಗೃಹಖಾತೆ, ಕೇಂದ್ರೀಯ ಅನುವಾದ ಬ್ಯೂರೋಗಳು ಈ ಬಗ್ಗೆ ತರಬೇತಿ ಶಿಬಿರಗಳನ್ನು ನಡೆಸುತ್ತಿವೆ. ವಿಶ್ವವಿದ್ಯಾಲಯಗಳಲ್ಲಿ ತೌಲನಿಕ ಅಧ್ಯಯನಕ್ಕೆ ಇಂದು ಮಹತ್ವ ಸಿಕ್ಕಿದೆ. ಒಟ್ಟಿನಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ಭಾಷಾಂತರವೆಂದರೆ ಮೂಗು ಮುರಿಯುವ ಪ್ರವೃತ್ತಿ ದೂರವಾಗಿ ಅದಕ್ಕೂ ಒಂದು ಗೌರವ ಸ್ಥಾನಮಾನ ದೊರೆಯುವಂತಾದುದು ಇತ್ತೀಚಿನ ಆರೋಗ್ಯಕರವಾದ ಬೆಳವಣಿಗೆ.

## 2. ವೈಜ್ಞಾನಿಕ

ವಿಜ್ಞಾನ ಕ್ಷೇತ್ರದಲ್ಲಿ ದೇಶೀಯ ಭಾಷೆಗಳನ್ನು ಬಳಸುವುದು ಸಾಧ್ಯವೇ ಇಲ್ಲವೆನ್ನುವ ಭಾವನೆ ಇಂದು ದೂರವಾಗಿ ಈ ನಿಟ್ಟಿನಲ್ಲಿ ಮಹತ್ತರ ಸಾಧನೆಯಾಗಿರುವುದು ಇಂದಿನ ವಿಶೇಷಗಳಲ್ಲಿ ಒಂದು. ಪ್ರಾಥಮಿಕ, ಪ್ರೌಢ ಹಾಗೂ ಉನ್ನತ ಶಿಕ್ಷಣದಲ್ಲಿ ವಿಜ್ಞಾನದ ವಿಷಯಗಳನ್ನು ದೇಶೀಯ ಭಾಷೆಯಲ್ಲಿ ನೀಡುವ ಹಂತಕ್ಕೆ ನಾವು ಬಂದು ಮುಟ್ಟಿದ್ದೇವೆ. ಇಂಗ್ಲಿಷ್ ಭಾಷೆಯ ಅನಿವಾರ್ಯತೆ ಕಡಿಮೆಯಾಗುತ್ತಿದೆ. ವೈಜ್ಞಾನಿಕ ವಿಚಾರಗಳನ್ನು ಕನ್ನಡೀಕರಿಸುವ ಪ್ರಯತ್ನ ನಮ್ಮ ರಾಜ್ಯದಲ್ಲಿ ಮಾಡಲಾಗುತ್ತಿದೆ. ಇದಕ್ಕಾಗಿ ಕೆಲವರು ಪಣತೊಟ್ಟು ದುಡಿಯುತ್ತಿದ್ದಾರೆ. ಈ ಬೆಳವಣಿಗೆಯಲ್ಲಿ ಮಾತೃಭಾಷಾ ಪ್ರೇಮವೂ, ಆ ಬಗ್ಗೆ ನಡೆಯುತ್ತಿರುವ ಚಳುವಳಿಗಳೂ ಕೂಡ ಕಾರಣ. ಶಿಕ್ಷಣ ಮಾಧ್ಯಮ ಮಾತೃಭಾಷೆಯಾಗಬೇಕೆನ್ನುವುದು ನಮ್ಮ ಭಾಷಾ ನೀತಿ. ಈ ದಿಸೆಯಲ್ಲಿ ಹೆಚ್ಚು ಪ್ರಯತ್ನಗಳು ನಡೆಯುವಂತೆ ಮಾಡಿದೆ. ಜ್ಞಾನದ ಕ್ಷೇತ್ರಗಳು ಇಂದು ವಿಸ್ತಾರಗೊಳ್ಳುತ್ತಿವೆ. ವಿಶಿಷ್ಟೀಕರಣ (Specialisation) ಇಲ್ಲದೆ ಏನೂ ಸಾಧನೆ ಇಲ್ಲವೆನ್ನುವುದು ಇಂದಿನ ಭಾವನೆ. ವಿಜ್ಞಾನ ವಿಚಾರಗಳ ಪರಿಕಲ್ಪನೆ ಬದಲಾಗುತ್ತಿದೆ. ವೈಜ್ಞಾನಿಕ ಶಬ್ದಗಳಿಗೆ ನಮ್ಮಲ್ಲಿನ ಶಬ್ದಗಳನ್ನು ಕಂಡುಕೊಳ್ಳುವಲ್ಲಿ ಅನೇಕ ಪ್ರಯತ್ನಗಳು ನಡೆದಿವೆ. 1961ರಲ್ಲಿ ಭಾರತ ಸರ್ಕಾರ ವೈಜ್ಞಾನಿಕ ಹಾಗೂ ತಾಂತ್ರಿಕ ಶಬ್ದಾವಳಿಗಳ ಆಯೋಗವನ್ನು ಸ್ಥಾಪಿಸಿತು. ಇದು ಪಾರಿಭಾಷಿಕ ಪದಕೋಶಗಳನ್ನು ಹೊರ ತಂದು ಈ ಬಗ್ಗೆ ಚರ್ಚೆ, ವಿಮರ್ಶೆ ನಡೆಸುತ್ತಿದೆ. ಹೀಗಾಗಿ ವೈಜ್ಞಾನಿಕ ವಿಷಯಗಳನ್ನು ಕೇವಲ ಇಂಗ್ಲಿಷಿನಲ್ಲಿ ಕಲಿಯುವ ಪ್ರವೃತ್ತಿ ದೂರವಾಗಿದೆ. ಈ ಬಗ್ಗೆ ಹಿಂದಿ ಭಾಷೆಯಲ್ಲಾದ ಬೆಳವಣಿಗೆ ಇತರ ಭಾಷೆಗಳಲ್ಲಿ ಆಗಿಲ್ಲ. ಆದರೂ ಪ್ರಯತ್ನ ಸಾಗಿದೆ. ಜನರಲ್ಲಿ ತಮ್ಮ ಮಾತೃಭಾಷೆ ಬಗ್ಗೆ ಅಭಿಮಾನ ಮೂಡಿದಲ್ಲಿ ಇದು ಹೆಚ್ಚು ಫಲಪ್ರದವಾಗಬಲ್ಲದು.

## 3. ವಾಣಿಜ್ಯಕ :

ವಾಣಿಜ್ಯ ಇಂದಿನ ಎಲ್ಲಾ ಚಟುವಟಿಕೆಗಳಲ್ಲೂ ಪ್ರಮುಖ ಸ್ಥಾನ ಪಡೆದಿದೆ. ಏನೇ ಮಾಡಲಿ ಅದರಲ್ಲಿ ಎಷ್ಟು ಹಣ

ಬರುತ್ತದೆ ಎಂಬುದು ಇಂದಿನ ಲೆಕ್ಕಾಚಾರ. ಕಲೆಯನ್ನು ಒಂದು ಸರಕನ್ನಾಗಿ ಮಾರುವ ಪ್ರವೃತ್ತಿ ಬೆಳೆದಿದೆ. ಭಾಷಾಂತರವೂ ಈ ದಿಸೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಯಾವುದೇ ವಸ್ತುವನ್ನು ಮಾರಾಟ ಮಾಡುವ ದೃಷ್ಟಿಯಿಂದ ಅದನ್ನು ಜನಪ್ರಿಯಗೊಳಿಸಲು ಜಾಹಿರಾತು (Advertisement) ನೀಡಲಾಗುತ್ತಿದೆ. ಜಾಹೀರಾತಿನಲ್ಲಿ ಮೋಡಿ ಹಾಕುವ ಮಾತುಗಳು ಆಕರ್ಷಕ ಚಿತ್ರ ಅಥವಾ ದೃಶ್ಯಾವಳಿಗಳಿರುತ್ತವೆ. ಆಂಗ್ಲ ಅಥವಾ ಹಿಂದಿ ಮಾಧ್ಯಮದಲ್ಲಿ ಈ ಮಾತುಗಳನ್ನು ರಚಿಸಿ ನಂತರ ಇತರ ಭಾಷೆಗಳಿಗೆ ಭಾಷಾಂತರಿಸಲಾಗುತ್ತಿದೆ.

1. Give the Devil his due - ONIDA, Neighbour's envy, owner's pride
2. Japanese tradition crafted to 21st centurty - orient watches
3. You just can't beat Bajaj

ಹೀಗೆ ಅನೇಕ ಜಾಹೀರಾತುಗಳು ಜನರ ನಾಲಿಗೆಯಲ್ಲಿ ನಲಿದಾಡುತ್ತವೆ. ಇವುಗಳ ಕನ್ನಡೀಕರಣ ಕಷ್ಟ. ಆದರೂ ಈ ಪ್ರಯತ್ನ ಸಾಗಿದೆ. ಜಾಹೀರಾತನ್ನು ಸಿದ್ಧಗೊಳಿಸಲೆಂದೇ ಅನೇಕ ಸಂಘ ಸಂಸ್ಥೆಗಳು ಇಂದು ಹುಟ್ಟಿಕೊಂಡಿವೆ.

## 4. ಸಾಂಸ್ಥಿಕ

ಭಾರತದಂತಹ ಬಹು ಭಾಷಾ ರಾಷ್ಟ್ರದಲ್ಲಿ ರಾಜ್ಯ ರಾಜ್ಯಗಳ ನಡುವೆ ಸಂಪರ್ಕ ಏರ್ಪಡಿಸಲು ಭಾಷಾಂತರ ಅಗತ್ಯ. ಈ ದಿಸೆಯಲ್ಲಿ ಸಂಘ ಸಂಸ್ಥೆಗಳು ಹೆಚ್ಚಿನ ಕೆಲಸ ಮಾಡುತ್ತಿವೆ. ಸಾಮಾಜಿಕ, ಆರ್ಥಿಕ, ರಾಜಕೀಯ ಸಂಸ್ಥೆಗಳು, ಅನೇಕ ಚಟುವಟಿಕೆಗಳನ್ನು ಹಮ್ಮಿಕೊಂಡು ಈ ರೀತಿಯ ಸಂಪರ್ಕ ಏರ್ಪಡಿಸಲು ಸಹಕಾರಿಯಾಗಿವೆ. ಕೇಂದ್ರ ಸಾಹಿತ್ಯ ಅಕಾಡೆಮಿ, ನ್ಯಾಷನಲ್ ಬುಕ್ ಟ್ರಸ್ಟ್, ಭಾರತೀಯ ಭಾಷಾ ಪರಿಷತ್, ರಾಜ್ಯಸರ್ಕಾರದ ಅಕಾಡೆಮಿಗಳು, ವಿಶ್ವವಿದ್ಯಾಲಯಗಳ ಪ್ರಸಾರಾಂಗಗಳು - ವಿಶ್ವಕೋಶಗಳು, ಪದಕೋಶಗಳು, ಗೆಜೆಟಿಯರ್‌ಗಳ, ಭಾಷಾಂತರ ಕ್ರಿಯೆಯಲ್ಲಿ ತೊಡಗಿಸಿಕೊಂಡು ಉತ್ತಮ ಕಾರ್ಯವನ್ನು ಮಾಡುತ್ತಿವೆ. INSDVC ಅಂತಹ ಅನೇಕ ಸಂಸ್ಥೆಗಳ ಭಾಷಾಂತರ ಸೇವೆಯನ್ನು ಒದಗಿಸುತ್ತಿವೆ. ಅನೇಕ ಗ್ರಂಥಾಲಯಗಳು ಭಾಷಾಂತರ ಸೇವೆಯನ್ನು ಒದಗಿಸುತ್ತಿವೆ. ಅಂತರರಾಷ್ಟ್ರೀಯ ಮಟ್ಟದಲ್ಲಿ AICC (Association Internationale des Interpretes de conference), FIT (Federation Internationale des Transdueteurs), AITC (Association Internationale des Traducteurs de conference), National Translations Center, USA, ಲಂಡನ್ನಿನ ASLIB ಮುಂತಾದ ಅನೇಕ ಸಂಸ್ಥೆಗಳು ಇಂದು ಭಾಷಾಂತರ ಸೇವೆಯನ್ನು ಒದಗಿಸುತ್ತಿವೆ. ಪ್ರಪಂಚದ ಎಲ್ಲೆಡೆಯಲ್ಲೂ ಇಂದು ಭಾಷಾಂತರಕ್ಕೆ ಹೆಚ್ಚಿನ ಸ್ಥಾನಮಾನಗಳು ದೊರೆತಿವೆ.

## 5. ಆಡಳಿತಾತ್ಮಕ

ಸ್ವತಂತ್ರ ಭಾರತದಲ್ಲಿ ಹಿಂದಿಯನ್ನು ರಾಷ್ಟ್ರಭಾಷೆಯಾಗಿ ಪರಿಗಣಿಸಿದ್ದರ ಪರಿಣಾಮವಾಗಿ ಕೇಂದ್ರ ಸರ್ಕಾರದ ಕಛೇರಿಗಳಲ್ಲಿ ಹಿಂದಿ ಭಾಷೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಹಾಗೆಯೇ ರಾಜ್ಯಗಳಲ್ಲಿ ಆಯಾ ಭಾಷೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಕರ್ನಾಟಕದಲ್ಲಿ ಕನ್ನಡ ಭಾಷೆಯನ್ನು ಅನುಷ್ಠಾನಗೊಳಿಸಲು ಕನ್ನಡ ಕಾವಲು ಸಮಿತಿಯನ್ನು ಪ್ರಾರಂಭಿಸಿ ಈಗ ಅದಕ್ಕೆ ಹೆಚ್ಚಿನ

ಸ್ಥಾನಮಾನ ನೀಡಿ 'ಕನ್ನಡ ಅಭಿವೃದ್ಧಿ ಪ್ರಾಧಿಕಾರ' ಸ್ಥಾಪಿಸಲಾಗಿದೆ. ಹೀಗಾಗಿ ಆಡಳಿತಾತ್ಮಕ ದೃಷ್ಟಿಯಿಂದ ತಲತಲಾಂತರದಲ್ಲಿ ರೂಢಿಯಲ್ಲಿ ಬಂದ ಆಂಗ್ಲ ಭಾಷೆಯಲ್ಲಿರುತ್ತಿದ್ದ, ಸರ್ಕಾರಿ ಕಡತಗಳಲ್ಲಿ ಬರೆಯುವ ಟಿಪ್ಪಣಿಗಳನ್ನು ಕನ್ನಡೀಕರಿಸುವ ಪ್ರಯತ್ನ ಸಾಗಿದೆ. ಸರ್ಕಾರಿ ಸುತ್ತೋಲೆಗಳು, ಆದೇಶಗಳು, ಕಾನೂನುಗಳು ಕನ್ನಡದಲ್ಲಿ ಮೂಡಿಬರುತ್ತಿವೆ. ಇದಕ್ಕಾಗಿ ಅನೇಕ ತರಬೇತಿ ಕಾರ್ಯಕ್ರಮಗಳನ್ನು ನೀಡಲಾಗುತ್ತಿದೆ. ಇದೇ ರೀತಿ ಇತರ ರಾಜ್ಯಗಳಲ್ಲೂ ಪ್ರಯತ್ನ ಸಾಗಿದೆ. ತಮ್ಮ ತಮ್ಮ ಭಾಷೆಯ ಸಂಸ್ಕೃತಿಯ, ಕಲೆ, ಸಾಹಿತ್ಯ, ಅಭಿವೃದ್ಧಿಪಡಿಸಲು ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಲಾಗುತ್ತಿದೆ. ಈ ನಿಟ್ಟಿನಲ್ಲಿ ಕರ್ನಾಟಕದಲ್ಲಿ ಕನ್ನಡ ವಿಶ್ವವಿದ್ಯಾಲಯ, ತಮಿಳು ನಾಡಿನಲ್ಲಿ ತಮಿಳು ವಿಶ್ವವಿದ್ಯಾಲಯ, ಆಂಧ್ರದಲ್ಲಿ ತೆಲಗು ವಿಶ್ವವಿದ್ಯಾಲಯಗಳು ಇಂದು ಚುರುಕಿನ ಕಾರ್ಯ ನಡೆಸಿವೆ. ''ಆಡಳಿತ ಭಾಷೆಯಾಗಿ ಕನ್ನಡ'' ಎನ್ನುವ ಒಂದು ಚಳುವಳಿಯೇ ಇಂದು ರಾಜ್ಯದಲ್ಲಿ ನಡೆದಿದೆ. ಇದರಿಂದಾಗಿ ಭಾಷಾಂತರಕ್ಕೆ ಹೆಚ್ಚಿನ ಮಹತ್ವ ಬಂದಿದೆ. ಆಡಳಿತದ ಪ್ರತಿಯೊಂದು ಹಂತದಲ್ಲೂ ಭಾಷಾಂತರ ಕ್ರಿಯೆ ನಡೆಯುತ್ತಿದೆ.

### 6. ಮಾನವಿಕ

ವೈಜ್ಞಾನಿಕ ವಿಷಯಗಳಲ್ಲದೇ ಮಾನವಿಕ ವಿಷಯಗಳನ್ನು ಇಂದು ಭಾಷಾಂತರಿಸಲಾಗುತ್ತಿದೆ. ಮಾನವ ಶಾಸ್ತ್ರಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ರಚಿಸುವುದು ಅಥವಾ ಭಾಷಾಂತರ ಮಾಡುವುದು ಮತ್ತು ಮಾತೃ ಭಾಷೆಯಲ್ಲಿ ಪಾಠ ಪ್ರವಚನ ಮಾಡುವುದು ಇಂದು ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ವಿಶೇಷವಾಗಿ ನಡೆದಿದೆ. ವೈಜ್ಞಾನಿಕ ವಿಷಯಗಳಲ್ಲಿ ಇರುವ ಮಡಿವಂತಿಕೆ ಮಾನವಿಕ ವಿಷಯಗಳಲ್ಲಿ ಕಾಣುವುದಿಲ್ಲ. ಹಾಗಾಗಿ ಇದು ಹೆಚ್ಚು ವೇಗವಾಗಿ ಮುಂದೆ ಸಾಗಿದೆ. ಸ್ನಾತಕೋತ್ತರ ಮಟ್ಟದಲ್ಲೂ ಆಯಾ ಭಾಷೆಗಳಲ್ಲಿ ಬೋಧನಾ ಕೆಲಸ ಸಾಗಿದೆ. ಈ ವಿಷಯಗಳ ಪಾರಿಭಾಷಿಕ ಪದಗಳ ಪದಕೋಶ ಹೊರ ಬಂದಿವೆ. ಶಬ್ದಾವಳಿಗಳ ಆಯೋಗ ಸ್ಥಾಪಿತಗೊಂಡಿದೆ. ಈ ಬಗ್ಗೆ ಭಾಷೆ ಭಾಷೆಗಳ ನಡುವೆ ಪೈಪೋಟಿ ಎದ್ದಿದೆ. ತಮ್ಮ ಭಾಷೆ ಇತರ ಭಾಷೆಗಳಿಗಿಂತ ಕಡಿಮೆ ಇಲ್ಲವೆಂದು ತೋರಿಸುವ ಸಲುವಾಗಿ ಒಂದು ರೀತಿಯ ಸಾಮೂಹಿಕ ಪ್ರಯತ್ನ ನಡೆದಿದೆ. ಇದರಿಂದಾಗಿ ಭಾಷಾಂತರ ಕ್ರಿಯೆಗೆ ಹೆಚ್ಚು ಬೆಲೆ ನೀಡಿದಂತಾಗಿದೆ.

### 7. ಪ್ರಸಾರ

ಪ್ರಸಾರ ಮಾಧ್ಯಮಗಳಾದ ಪತ್ರಿಕೆಗಳು, ರೇಡಿಯೋ ಮತ್ತು ದೂರದರ್ಶನಗಳು ಇಂದಿನ ಸಮಾಜದ ಮುನ್ನಡೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಟಿವಿಯಿಂದಾಗಿ ಜನರ ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಜೀವನದಲ್ಲಿ ಮಹತ್ತರ ಬದಲಾವಣೆಯಾಗಿದೆ. ಹಿಂದಿ ಭಾಷೆಯ ಗಂಧಗಾಳಿ ಇಲ್ಲದ ಜನ ಟಿವಿಯಲ್ಲಿ ಪ್ರಸಾರವಾದ 'ರಾಮಾಯಣ' 'ಮಹಾಭಾರತ'ಗಳನ್ನು ಬಹು ಉತ್ಸಾಹದಿಂದ ವೀಕ್ಷಿಸಿದರು. ಸಂಭಾಷಣೆಗಳನ್ನು ಸಂದರ್ಭಕ್ಕೆ ಅನುಗುಣವಾಗಿ ಅರ್ಥಮಾಡಿಕೊಳ್ಳುವ ಮಟ್ಟಕ್ಕೆ ಸ್ವತಃ ತಾವೇ ಭಾಷಾಂತರಿಗಳಾದರು. ಇದೊಂದು ವಿಶೇಷ ಬೆಳವಣಿಗೆ.

ಪತ್ರಿಕೆಗಳು, ಮ್ಯಾಗಜಿನ್‌ಗಳು ಇಂದು ಎಲ್ಲಾ ಮನೆಗಳಲ್ಲೂ ಕಾಣಸಿಗುತ್ತವೆ. ಪ್ರಪಂಚದ ಮೂಲೆ ಮೂಲೆಗಳಿಂದ ಸುದ್ದಿಯನ್ನು ಆಯಾಯಾ ಭಾಷೆಯಲ್ಲಿ ಭಾಷಾಂತರಿಸಿ ಜನಗಳಿಗೆ ಪತ್ರಿಕೆಗಳ ಮೂಲಕ ನೀಡಲಾಗುತ್ತಿದೆ. ಪತ್ರಿಕೆಗಳಲ್ಲಿ ಅಕಾಡೆಮಿಕ್ ಆಸಕ್ತಿಯ ಜೊತೆಗೆ ಕಮರ್ಷಿಯಲ್ ಆಸಕ್ತಿಯೂ ಹಾಸುಹೊಕ್ಕಾಗಿದೆ. ಸುದ್ದಿಯನ್ನು ಬಹು ಬೇಗ ಜನರಿಗೆ

ಮುಟ್ಟಿಸುವ ದೃಷ್ಟಿಯಿಂದ ವರದಿಗಾರ ಸಂವಾದಿ ಪದವನ್ನು ಕಂಡುಕೊಂಡು ಭಾಷಾಂತರಿಸಿ ಜನರಿಗೆ ಉಣ ಬಡಿಸುತ್ತಾನೆ. ಹೀಗಾಗಿ ಪತ್ರಿಕೆಗಳಲ್ಲಿ ಭಾಷಾಂತರ ಕ್ರಿಯೆ ಬಹು ವೇಗವಾಗಿ ಸಾಗುತ್ತಿದೆ.

ರೇಡಿಯೋ, ಧ್ವನಿ ಸುರಳಿ (Cassettes) ಮುಂತಾದ ಶ್ರವ್ಯ ಮಾಧ್ಯಮಗಳಲ್ಲಿ ಭಾಷಾಂತರ ಕ್ರಿಯೆ ನಡೆದಿದೆ. ರಾಜಕೀಯ ವ್ಯಕ್ತಿಗಳ ಭಾಷಣಗಳನ್ನು ಭಾಷಾಂತರಿಸುವ ಪ್ರಕ್ರಿಯೆ ಜೊತೆ ಜೊತೆಗೆ ಸಾಗುವುದನ್ನು ನಾವು ಇಂದು ನೋಡುತ್ತೇವೆ. ರೇಡಿಯೋದಲ್ಲಿ ಪ್ರಸಾರವಾಗುವ ಎಷ್ಟೋ ಕಾರ್ಯಕ್ರಮಗಳು, ಜಾಹೀರಾತುಗಳು ಭಾಷಾಂತರಿಸಲ್ಪಟ್ಟಿದ್ದನ್ನು ಕಾಣಬಹುದು. ಇಂಗ್ಲಿಷ್ ಅಥವಾ ಹಿಂದಿ ಭಾಷೆಯ ಫಿಲ್ಲರ್‌ಗಳು ಕನ್ನಡದಲ್ಲೂ ಅನುವಾದಿಸಲ್ಪಟ್ಟು ಆಕಾಶವಾಣಿ ಪ್ರಸಾರದ ಮಧ್ಯೆ ಜಾಹಿರಾತಿನ ರೂಪದಲ್ಲಿ ಪ್ರಸಾರಗೊಳ್ಳುತ್ತವೆ. ಹಿಂದಿ ಚಲನಚಿತ್ರಗಳ ಟ್ಯೂನ್‌ನಲ್ಲಿ ಕನ್ನಡ ಗೀತೆಗಳು ಕ್ಯಾಸೆಟ್‌ಗಳ ಮೂಲಕ ಪ್ರಸಾರಗೊಳ್ಳುತ್ತವೆ.

ದೃಶ್ಯ ಮಾಧ್ಯಮಗಳಾದ ದೂರದರ್ಶನ, ಚಲನಚಿತ್ರ, ವೀಡಿಯೋಗಳಲ್ಲಿ ಭಾಷಾಂತರ ಪ್ರಮುಖ ಪಾತ್ರ ವಹಿಸುತ್ತದೆ. ಚಲನ ಚಿತ್ರದಲ್ಲಂತೂ ಒಂದು ಭಾಷೆಯಲ್ಲಿ ಖ್ಯಾತಿ ಪಡೆದ ಚಿತ್ರಗಳನ್ನು ಇತರ ಭಾಷೆಗಳಲ್ಲಿ ತರುವ ಪರಿಪಾಠ ಬೆಳೆದಿದೆ. ಪ್ರಾದೇಶಿಕ ಚಿತ್ರಗಳನ್ನು ರಾಷ್ಟ್ರೀಯ ಚಾನಲ್‌ನಲ್ಲಿ ಪ್ರಸಾರ ಮಾಡಿದಾಗ ಅಡಿ ಶೀರ್ಷಿಕೆ ಕೊಡುವ ಪದ್ಧತಿ ಜಾರಿಯಲ್ಲಿದೆ. ಇದೊಂದು ವಿಶೇಷ ರೀತಿಯ ಭಾಷಾಂತರ ಕ್ರಿಯೆ. ಹಾಗೆಯೇ ಧ್ವನಿಪದ ಪರಿವರ್ತನೆ (dubbing) ಕೂಡ ಚಲನಚಿತ್ರದಲ್ಲಿ ನಡೆಯುತ್ತದೆ. ಪಾತ್ರಗಳ ತುಟಿ ಚಾಲನೆಗೆ ಹೊಂದುವಂತೆ ಸಂಭಾಷಣೆಯನ್ನು ಹೊಂದಿಸಲಾಗುತ್ತದೆ. ಈ ಕ್ರಿಯೆ ಎಷ್ಟು ಉತ್ತಮವಾಗಿ ಬಂದಿದೆ ಎಂದರೆ ಇದೊಂದು ಭಾಷಾಂತರವೆಂದೂ ಕೂಡ ದರ್ಶಕರಿಗೆ ತೋರುವುದಿಲ್ಲ. ಇದೊಂದು ವಿಶಿಷ್ಟವಾದ ಪಾತ್ರ. ದೂರದರ್ಶನದಲ್ಲಿ ಪ್ರಸಾರವಾಗುವ ಸೀರಿಯಲ್ (ಧಾರಾವಾಹಿ)ಗಳಲ್ಲಿ ಇಂತಹ ತಂತ್ರಗಳನ್ನು ನಾವು ನೋಡಬಹುದು.

ಕಥೆ, ಕಾದಂಬರಿಗಳನ್ನು ಚಲನಚಿತ್ರವಾಗಿ, ಧಾರವಾಹಿಯಾಗಿ ತರುವಾಗ ಚಿತ್ರಕಥೆ ಬರೆಯಬೇಕಾಗಿದ್ದು ಇದು ಕೂಡ ಒಂದು ರೀತಿಯ ಭಾಷಾಂತರ ಅಥವಾ ರೂಪಾಂತರ ಕ್ರಿಯೆಯಾಗಿದೆ. ಶರಪಂಜರ, ಗೋದಾನ್, ಪಥೇರ್ ಪಾಂಚಾಲೀ ಮುಂತಾದ ಚಲನ ಚಿತ್ರಗಳು 'ನಿರ್ಮಲಾ' 'ಚಂದ್ರಕಾಂತಾ', 'ಮೃಗನಯನೀ' ಮುಂತಾದ ಧಾರಾವಾಹಿಗಳು ಈ ರೀತಿಯ ಕ್ರಿಯೆಗೆ ಉದಾಹರಣೆಗಳು. ಚಿತ್ರಕಥೆ, ಸಂಭಾಷಣೆ, ರಚನೆ, ಭಾಷಾಂತರ ಕ್ರಿಯೆಯ ಅಂಗವಾಗಿ ವಿಶೇಷ ತಂತ್ರಗಳ ಮೂಲಕ ಜನರನ್ನು ಆಕರ್ಷಿಸುತ್ತವೆ.

## 8. ದುಭಾಷಿತ್ವ

ಪರಸ್ಪರ ಭಾಷೆಯನ್ನು ಅರಿಯದ ಇಬ್ಬರ ನಡುವೆ ಸಂಭಾಷಣೆ ನಡೆಯುವಾಗ ಮಧ್ಯದಲ್ಲಿ ಒಬ್ಬ ಭಾಷಾಂತರಕಾರನ ಬಳಕೆ ಮಾಡುವ ಕ್ರಿಯೆಯೇ ದುಭಾಷಿತ್ವ ಕ್ರಿಯೆ. ಎಲ್ಸಿನ್ ಹಾಗೂ ಬಿಲ್ ಕ್ಲಿಂಟನ್ ನಡುವೆ ಮಾತುಕತೆ ನಡೆಯುವಾಗ ರಷ್ಯನ್ ಮತ್ತು ಇಂಗ್ಲಿಷ್ ಭಾಷೆಗಳನ್ನು ಬಲ್ಲ ಒಬ್ಬ ಭಾಷಾಂತರಕಾರ ಅವರ ನಡುವೆ ಕುಳಿತು ಅವರ ಮಾತುಗಳನ್ನು ಭಾಷಾಂತರಿಸಿ ಅವರ ಮಾತುಕತೆಗಳು ಸುಗಮವಾಗಿ ಸಾಗುವಂತೆ ಮಾಡುತ್ತಾನೆ. ಅಂತರರಾಷ್ಟ್ರೀಯ ಸಮಾಲೋಚನೆಗಳಲ್ಲಿ ಈ ದುಭಾಷಿತ್ವದ ಮಹತ್ವ ಹೆಚ್ಚು. ದುಭಾಷಿ ಎರಡೂ ಭಾಷೆಗಳಲ್ಲಿ ಪರಿಣತನಾಗಬೇಕಾಗುತ್ತದೆ. ಅತ್ಯಂತ ಕಡಿಮೆ ಅವಧಿಯಲ್ಲಿ ಸೂಕ್ತ ಪದಗಳನ್ನು ಹುಡುಕಿ ಒಬ್ಬ ವ್ಯಕ್ತಿಯ ಮಾತುಗಳನ್ನು ಯಥಾವತ್ತಾಗಿ ಇನ್ನೊಬ್ಬನಿಗೆ ಮುಟ್ಟಿಸುವ ಕ್ರಿಯೆ ಅಷ್ಟು ಸುಲಭವಲ್ಲ.

### 9. ಏಕಕಾಲಿಕ ಅನುವಾದ

ಏಕಕಾಲದಲ್ಲಿ ಸಭೆಯ ನಡವಳಿಗಳನ್ನು ವಿವಿಧ ಭಾಷೆಗಳಲ್ಲಿ ಭಾಷಾಂತರಿಸುವ ಕ್ರಮ ಇದು. ನಮ್ಮ ಸಂಸತ್‌ನಲ್ಲಿ ಸಂಸತ್ ಸದಸ್ಯರು ಮಾತನಾಡುವ ವಿಷಯಗಳನ್ನು ಭಾಷಾಂತರಿಸುವ ಕ್ರಮ 1964ರಲ್ಲಿ ಜಾರಿಗೆ ಬಂತು. ಗಾಜಿನ ಕೋಣೆಯಲ್ಲಿ ಕುಳಿತ ಭಾಷಾಂತರಕಾರರು ಇಡೀ ಸಭೆಯನ್ನು ನೋಡುತ್ತಿರುತ್ತಾರೆ. ಕಿವಿಗೆ ಮೈಕ್ರೋಫೋನ್ ಹಾಕಿಕೊಂಡು ಸಂಬಂಧಪಟ್ಟ ಭಾಷೆಯ ಭಾಷಾಂತರವನ್ನು ಭಾಷಣಕಾರರ ಜೊತೆ ಜೊತೆ ಮಾಡುತ್ತಾ ಸಾಗುತ್ತಾರೆ. ಕೇಳುವವರಿಗೆ ಭಾಷಾಂತರ ಭಾಷಣವನ್ನೇ ಕೇಳಿದ ಹಾಗಿರುತ್ತದೆ. ಇದೊಂದು ಕಷ್ಟಕರವಾದ ಅನುವಾದ ಕಾರ್ಯ. ಇದು ಮೊದಲು 1919ರಲ್ಲಿ ಪ್ಯಾರಿಸ್‌ನಲ್ಲಿ ಶಾಂತಿ ಸಮ್ಮೇಳನ ನಡೆದಾಗ ಜಾರಿಗೆ ಬಂತು. ನಂತರ ಎರಡನೇ ಮಹಾಯುದ್ಧದ ಯುದ್ಧ ಕೈದಿಗಳನ್ನು ವಿಚಾರಣೆ ಮಾಡಿದಾಗ ಜರ್ಮನಿಯ ನ್ಯೂರಂಬರ್ಗ್‌ನಲ್ಲಿ ಈ ರೀತಿಯ ಭಾಷಾಂತರವನ್ನು ಅಳವಡಿಸಲಾಯಿತು. ಸಭೆ ಸಮಾರಂಭಗಳಲ್ಲಿ ವಾಗ್ಯುದ್ಧ, ಜಗಳ, ಜಗಳ ನಡೆದಾಗ, ಹಾಸ್ಯ ಚಟಾಕಿ ಹಾರಿಸಿದಾಗ ಅನುವಾದ ಮಾಡುವುದು ಕಷ್ಟ. ಈ ವಿಧವಾದ ಭಾಷಾಂತರವನ್ನು (Simultaneous interpretation) ಎನ್ನಲಾಗುತ್ತದೆ.

### 10. ಮೌಖಿಕ ಅನುವಾದ

ಏಕಕಾಲಿಕ ಭಾಷಾಂತರ ಹಾಗೂ ಮೌಖಿಕ ಭಾಷಾಂತರಕ್ಕೂ ಇರುವ ವ್ಯತ್ಯಾಸವೆಂದರೆ ಏಕಕಾಲದಲ್ಲಿ ಭಾಷಣಕಾರರ ಮಾತುಗಳನ್ನು ಅವರ ಜೊತೆ ಜೊತೆಯಾಗಿಯೇ ಅನುವಾದ ಮಾಡುತ್ತಾ ಹೋಗುವುದಾಗಿದೆ. ಮೌಖಿಕದಲ್ಲಿ ಭಾಷಣಕಾರರು ಒಂದೊಂದು ವಾಕ್ಯವನ್ನು ಹೇಳಿ ನಿಲ್ಲಿಸಿದಾಗ ಅದನ್ನು ಸ್ಥಳೀಯ ಜನರಿಗೆ ಅರ್ಥವಾಗುವಂತೆ ಅವರ ಭಾಷೆಯಲ್ಲಿ ಭಾಷಾಂತರಿಸುವುದು. ಇದು ರಾಜಕೀಯ ಭಾಷಣಗಳಲ್ಲಿ ಇತ್ತೀಚೆಗೆ ಹೆಚ್ಚು ಜಾರಿಯಲ್ಲಿ ಬಂದಿದೆ. ರಾಷ್ಟ್ರೀಯ ಧುರೀಣರು ಪ್ರಾಂತಗಳಿಗೆ ಬಂದಾಗ ಅವರ ಭಾಷಣಗಳನ್ನು ಪ್ರಾಂತೀಯ ಭಾಷೆಯಲ್ಲಿ ಮೌಖಿಕವಾಗಿ ಭಾಷಾಂತರಿಸಲಾಗುತ್ತಿದೆ. ಇದರ ಒಂದು ಮುಖ್ಯ ವೈಶಿಷ್ಟ್ಯವೆಂದರೆ ಮೂಲ ಭಾಷಣಕಾರರ ಮಾತಿನ ಭಾವಕೆಡದಂತೆ ಅದೇ ದಾಟಿಯಲ್ಲಿ ಜನರ ಮನಮುಟ್ಟುವಂತೆ ಭಾಷಾಂತರಿಸುವುದು. ಇದೊಂದು ರೀತಿಯ ವಿಶೇಷ ಕಲೆ.

### 11. ಸಮ್ಮೇಳನಾನುವಾದ ( Conference translation )

ಸಮ್ಮೇಳನ ನಡೆಯುವಾಗ ಭಾಷಾಂತರಕಾರ ಪ್ರತಿನಿಧಿಗಳ ಪಕ್ಕದಲ್ಲೇ ಕುಳಿತುಕೊಂಡು ಅವರು ಆಡಿದ ಮಾತುಗಳನ್ನು ಆಲಿಸಿಕೊಂಡು, ಅಲ್ಲಲ್ಲಿ ಟಿಪ್ಪಣಿ ಮಾಡಿಕೊಂಡು, ಪ್ರತಿನಿಧಿಯ ಮಾತು ಮುಗಿದ ನಂತರ ಅವನ ಮಾತಿನ ಸಾರಾಂಶವನ್ನು ಸಭೆಯ ಮುಂದೆ ಭಾಷಾಂತರ ರೂಪದಲ್ಲಿಡುತ್ತಾನೆ. ಹೀಗೆ ಮಾಡುವಾಗ ಭಾಷಾಂತರಕಾರ ವಾಸ್ತವಾಂಶಗಳ (facts) ಬಗ್ಗೆ ಹೆಚ್ಚು ಗಮನ ನೀಡಿ ತನ್ನ ಭಾಷಾಂತರದಲ್ಲಿ ಇವಕ್ಕೆ ಒತ್ತು ನೀಡಬೇಕಾಗುತ್ತದೆ.

### 12. ಸಹಯೋಗಾನುವಾದ

ದೊಡ್ಡ ದೊಡ್ಡ ಆಕರ ಗ್ರಂಥಗಳ ಭಾಷಾಂತರವನ್ನು ಅನೇಕ ಭಾಷಾಂತರಕಾರರ ಸಹಯೋಗದಿಂದ (Collaboration)

ಭಾಷಾಂತರಿಸುವ ಕ್ರಿಯೆ ಇದು. ಇದರಲ್ಲಿ ಮುಖ್ಯವಾಗಿ ಭಾಷಾಂತರಕಾರರ ಮಧ್ಯೆ ಸಹಮತವಿರಬೇಕು. ಭಾಷಾ ಶೈಲಿ ಪಾರಿಭಾಷಿಕ ಪದಗಳ ಬಳಕೆಯಲ್ಲಿ ಪರಸ್ಪರ ಒಮ್ಮತವಿರಬೇಕು. ವಿವಿಧ ಭಾಷಾಂತರಕಾರರ ಮಧ್ಯೆ ಒಮ್ಮತ ಸಾಧಿಸಲು ಒಬ್ಬ ಪ್ರಧಾನ ಸಂಪಾದಕರಿದ್ದು ಈ ರೀತಿಯ ಏಕರೂಪತೆ ತರುವಲ್ಲಿ ಹೆಚ್ಚಿನ ಪ್ರಯತ್ನ ಮಾಡುತ್ತಾರೆ. ಒಟ್ಟಿನಲ್ಲಿ ಎಲ್ಲರ ಸಹಯೋಗದಿಂದ ಗ್ರಂಥ ಭಾಷಾಂತರಗೊಂಡರೂ ಒಬ್ಬರೇ ಭಾಷಾಂತರ ಮಾಡಿದರೆ ಹೇಗಿರುತ್ತೋ ಆ ಪರಿಣಾಮ ಅದು ನೀಡುವಂತಿರಬೇಕು.

**13. ಕಂಪ್ಯೂಟರ್ ಅನುವಾದ :**

ಇತ್ತೀಚಿನ ದಿನಗಳಲ್ಲಿ ಕಂಪ್ಯೂಟರ್ ಬಳಕೆ ಹೆಚ್ಚಿದಂತೆಲ್ಲಾ ಭಾಷಾಂತರ ಕ್ಷೇತ್ರದಲ್ಲೂ ಅದರ ಬಳಕೆ ಅನಿವಾರ್ಯವಾಗಿದೆ. ಕಂಪ್ಯೂಟರ್ ಭಾಷಾಂತರ ಅಥವಾ ಯಂತ್ರಾನುವಾದವನ್ನು ಸ್ವಯಂಚಲಿ ಭಾಷಾಂತರ (automatic translation) ಎಂದೂ ಕರೆಯುತ್ತಾರೆ. 1940ರಲ್ಲಿ ಪ್ರಾರಂಭವಾಗಿದ್ದರೂ ಇನ್ನೂ ಪ್ರಯೋಗದ ಮಟ್ಟದಲ್ಲಿ ಈ ವಿಧಾನ ಕಾರ್ಯವೆಸಗುತ್ತಿದೆ. ಏಕೆಂದರ ಎಲ್ಲಾ ಕ್ಷೇತ್ರಗಳಲ್ಲೂ ಕಂಪ್ಯೂಟರ್ ಅಳವಡಿಸಿ ಭಾಷಾಂತರಿಸುವುದು ಇನ್ನು ಸಾಧ್ಯವಾಗಿಲ್ಲ. ಇದರಲ್ಲಿ ಭಾಷೆ ನೇರವಾಗಿರಬೇಕು. ಪ್ರೋಗ್ರಾಮಿಂಗ್ ಮಾಡಲು ಪೂರ್ವ ಸಂಪಾದನ (Pre-editing) ಮತ್ತು ಉತ್ತರ ಸಂಪಾದನ (post-editing) ಗಳಿಗ ಮನುಷ್ಯನ ಬಳಕೆ ಅಗತ್ಯವಿದೆ. ಸದ್ಯಕ್ಕೆ ಸಾಹಿತ್ಯ ಕ್ಷೇತ್ರದಲ್ಲಿ ಕಂಪ್ಯೂಟರ್‌ನ್ನು ಬಳಸಿ ಭಾಷಾಂತರಿಸಲು ಸಾಧ್ಯವಾಗಿಲ್ಲ. ಈ ಬಗ್ಗೆ ಮುಂದುವರಿದ ದೇಶದಲ್ಲಿ ಹೆಚ್ಚಿನ ಪ್ರಯೋಗ ನಡೆದಿದೆ. ಭಾರತದಲ್ಲೂ ಸಂಶೋಧನೆ ಸಾಗಿದೆ. ಈ ಶತಮಾನದ ಅಂತ್ಯದೊಳಗ ಹೆಚ್ಚಿನ ಸಾಧನೆ ಸಾಧಿಸುವ ಸಾಧ್ಯತೆ ಇದೆ.

ಕಂಪೂಟರ್ ಭಾಷಾಂತರಕ್ಕೆ ಜನ್ಮವಿತ್ತವನು ಎ.ಡಿ. ಬೂತ್, 1946 ರಲ್ಲಿ. ಅವನಿಗೆ ಸಹಾಯಕನಾದವನು ವ್ಯಾರನ್ ವೀವರ್. ಆದರೆ ಯಂತ್ರ ಹೊರಬಂದದ್ದು 1950ರಲ್ಲಿ, ಮಾನವ ಭಾಷಾಂತರಕಾರ ಕೋಶಗಳನ್ನು ಕಂಪ್ಯೂಟರ್ ಮೂಲಕ ಪರಿಶೀಲಿಸಲು ಸಾಧ್ಯವಾಗಿದ್ದು ಅದನ್ನು ಈ ಯಂತ್ರದಲ್ಲಿ ಅಳವಡಿಸಲಾಯಿತು. ಇದರಲ್ಲೂ ಅನೇಕ ದೋಷಗಳು ಉದ್ಭವಿಸಿದವು. ಆನಂತರ 1951ರಲ್ಲಿ ರಾಕ್ ಫೆಲರ್ ಪ್ರತಿಷ್ಠಾನದ ಪ್ರಯತ್ನದಿಂದ ಈ ಯಂತ್ರಾನುವಾದದ ವಿಶಿಷ್ಟ ಸಮಸ್ಯೆಗಳನ್ನು ವಿಶ್ಲೇಷಿಸಲಾಯಿತು. ವಿಷಯನಿಷ್ಠ ಕೋಶಗಳನ್ನು ಸಿದ್ಧಪಡಿಸಲು ಸಂಖ್ಯಾಶಾಸ್ತ್ರೀಯ ವಿಶ್ಲೇಷಣಗಳನ್ನು ಮಾಡಬೇಕೆಂದು ತೀರ್ಮಾನಿಸಲಾಯಿತು. ಇ.ಟಿ.ಎಂ. ಕಾರ್ಪೊರೇಷನ್ ಮತ್ತು ಜಾರ್ಜ್‌ಟೌನ್ ವಿಶ್ವವಿದ್ಯಾಲಯಗಳು ಪ್ರಯೋಗ ನಡೆಸಿ 250 ಶಬ್ದಗಳ ಸೀಮಿತ ಶಬ್ದಕೋಶವನ್ನಿಟ್ಟುಕೊಂಡು ಆಯ್ದ ಕೆಲವು ರಷ್ಯನ್ ವಾಕ್ಯಗಳನ್ನು ಭಾಷಾಂತರಿಸಲಾಯಿತು. 1955ರಲ್ಲಿ ಲಂಡನ್ ವಿಶ್ವವಿದ್ಯಾನಿಲಯದ ಬಿರ್‌ಬೆಕ್ ಕಾಲೇಜಿನ ಗಫೀಲ್ಡ್ ಪ್ರತಿಷ್ಠಾನ ಫ್ರೆಂಚ್ ಭಾಷೆಯ ಭಾಷಾಂತರಕ್ಕೆ ಪ್ರಯತ್ನ ನಡೆಸಿ ಹೆಚ್ಚಿನ ಯಶಸ್ಸು ಪಡೆಯಿತು. ನಂತರ ಜರ್ಮನ್ ಭಾಷೆಯಲ್ಲೂ ಪ್ರಯೋಗ ನಡೆಸಿತು. ಈ ಕ್ಷೇತ್ರದಲ್ಲಿ ಅಮೆರಿಕನ್ನರೂ ರಷ್ಯನರೂ ಹೆಚ್ಚಿನ ಆಸಕ್ತಿ ವಹಿಸಿ, ಪ್ರಯೋಗಗಳನ್ನು ನಡೆಸಿ ಹೆಚ್ಚಿನ ಸಾಧನೆ ಸಾಧಿಸಿದರು. 1950ರಲ್ಲಿ ಬಿರ್‌ಬೆಕ್ ಕಾಲೇಜಿನಲ್ಲಿ APEX C ಕಂಪ್ಯೂಟರ್ ಬಳಸಿ, ಪ್ರಯೋಗ ನಡೆಸಿ ಉತ್ತೇಜಿತ ಫಲಿತಾಂಶ ಕಾಣಲಾಯಿತು. ಹೀಗೆ ಎಲ್ಲೆಡೆ ಈ ಕ್ಷೇತ್ರದಲ್ಲಿ ಪ್ರಯೋಗಗಳು ಸಾಗಿ ಬಂದು ಈಗಂತೂ ಬಹಳಷ್ಟು ಪ್ರಗತಿ ಆಗಿದೆ. ಯಂತ್ರಾನುವಾದದ ಮೂಲಭೂತ ಸಮಸ್ಯೆ ಕೋಶಕ್ಕೆ ಸಂಬಂಧಿಸಿದ್ದು. ಮಾನವ ಭಾಷಾಂತರಕಾರ ಸಂದರ್ಭಕ್ಕೆ ಸೂಕ್ತವಾದ ಅರ್ಥ ಕಂಡುಕೊಳ್ಳಬಲ್ಲ. ಯಂತ್ರಕ್ಕೆ ಈ ಕೌಶಲ್ಯವಿಲ್ಲ.

ಧಾತುಗಳು ನಾಮಪದಗಳ ಏಕವಚನ ರೂಪಗಳು ಮುಂತಾದವುಗಳ ಬದಲಾಗಿ ಶಬ್ದಗಳ 'ಗರಿಷ್ಠ ಘಟಕ' ತಯಾರಿಸಲಾಯಿತು. ಈ ವಿಧಾನದಲ್ಲಿ ಸ್ವಲ್ಪ ಮಟ್ಟಿಗೆ ಯಶಸ್ಸು ಸಿಕ್ಕಿತು. ನಂತರ ಕಂಪ್ಯೂಟರ್ ಒದಗಿಸಬಹುದಾಗಿರುವ ಸೀಮಿತ ಅವಕಾಶದಲ್ಲಿ ಅತ್ಯಂತ ಹೆಚ್ಚು ಶಬ್ದಗಳನ್ನು ಸಂಗ್ರಹಿಸುವ ಪ್ರಯತ್ನ ನಡೆಯಿತು. ಅನಂತರ ಅಂಶಕೋಶ ಸಾಧನೆ ನಡೆಯಿತು. ಅದರಂತೆ ಅಕ್ಷರಗಳ ವರ್ಣಮಾಲೆಯಲ್ಲಿನ ಅವುಗಳ ಸ್ಥಾನಕ್ಕೆ ಅನುಗುಣವಾಗಿ ಸಂಖ್ಯೆ ಗೊತ್ತುಪಡಿಸುವ ಪ್ರಯೋಗ. ಇದರಲ್ಲಿ ಯಶಸ್ಸು ಸಿಗಲಿಲ್ಲ. ನಂತರ ಅಕ್ಷರ ಪ್ರಮಾಣದ ಕ್ರಮದಲ್ಲಿ (Numerical magnitude) ಜೋಡಿಸಲಾದ ಕೋಶವನ್ನು ಮೇಲಿನ ಅರ್ಥ ಮತ್ತು ಕೆಳಗಿನ ಅರ್ಥವೆಂದು ವಿಂಗಡಿಸಲಾಯಿತು. ಇದೂ ಕೂಡ ಹೆಚ್ಚು ಯಶಸ್ಸು ಪಡೆಯಲಿಲ್ಲ. ಕೋಶ ಶೋಧನಾ ಕಾಲವನ್ನು ಕಡಿಮೆ ಮಾಡುವ ದೃಷ್ಟಿಯಿಂದ (Bracketing method) ಸೂಚಿಸಲಾಯಿತು. ಶಬ್ದಕೋಶವನ್ನು ಪರಿಚಿತ ಶಬ್ದಕೋಶ ಮತ್ತು ಅಪರಿಚಿತ ಶಬ್ದಕೋಶವೆಂದು ವರ್ಗೀಕರಿಸಿ ಅವುಗಳನ್ನು ಮೇಲಿನ ಅರ್ಥ ಮತ್ತು ಕೆಳಗಿನ ಅರ್ಥವೆಂಬುದಾಗಿ ವಿಭಜಿಸಲಾಯಿತು. ಹಾಗೂ ವ್ಯಾಕರಣ ಸಮಸ್ಯೆಗಳ ಕ್ಷೇತ್ರದಲ್ಲಿ ಪ್ರಯೋಗ ನಡೆಸಲಾಯಿತು. ಹೀಗೆ ಪ್ರಯೋಗ ಮುಂದುವರಿದುಕೊಂಡು ಬರಲಾಗುತ್ತಿದೆ.

ಕಂಪ್ಯೂಟರ್ ಅನುವಾದದಲ್ಲಿ ಮೂರು ರೀತಿಯ ಸಂದಿಗ್ಧತೆಯನ್ನು ಎದುರಿಸಬೇಕಾಗುತ್ತದೆ. ಮೊದಲನೆಯದು ವಿಷಯಾನುಗುಣವಾಗಿ ಅರ್ಥ ಬದಲಿಸುವುದರಲ್ಲಿ ಉಂಟಾಗುವ ಸಂದಿಗ್ಧತೆ. ಎರಡನೆಯದು ಇತರ ಶಬ್ದಗಳೊಡನೆ ಜೊತೆಗೂಡಿದಾಗ ಅರ್ಥ ಬದಲಾವಣೆಯಲ್ಲಾಗುವ ಸಂದಿಗ್ಧತೆ. ಮೂರನೆಯದು ಸಂದರ್ಭಾನುಗುಣವಾಗಿ ಅರ್ಥ ಬದಲಾವಣೆಯಲ್ಲಾದ ಸಂದಿಗ್ಧತೆ. ಈ ಸಂದಿಗ್ಧತೆಯನ್ನು ಪರಿಹರಿಸಲು ರೈಫ್ಲರ್ ಪೂರ್ವ ಸಂಪಾದಕ (Pre-editor) ಮತ್ತು ಉತ್ತರ ಸಂಪಾದಕ (post-editor) ಇರಬೇಕಾದ ಅಗತ್ಯ ಸೂಚಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಈಗಲೂ ಕೂಡ ಯಂತ್ರಾನುವಾದ ಮಾನವ ಅನುವಾದಕರ ಸಹಾಯವಿಲ್ಲದೇ ಸಾಧ್ಯವಾಗುತ್ತಿಲ್ಲ. ಈಗ ಈ ಕ್ಷೇತ್ರದಲ್ಲಿ ನಡೆಯುತ್ತಿರುವ ಪ್ರಯೋಗಗಳನ್ನು ನೋಡಿದರೆ ಇದರಲ್ಲಿ ಸಂಪೂರ್ಣ ಯಶಸ್ಸು ದೂರವಿಲ್ಲವೆಂದು ತೋರುತ್ತದೆ. ಮುಂದೊಂದು ಕಾಲದಲ್ಲಿ ಭಾಷಾಂತರ ಜಗತ್ತನ್ನು ಕಂಪ್ಯೂಟರ್ ಯಂತ್ರ ಆಕ್ರಮಿಸಿ ಒಂದು ಕ್ರಾಂತಿಕಾರಕ ಬದಲಾವಣೆ ತರಬಲ್ಲದೆಂಬ ಪೂರ್ಣ ವಿಶ್ವಾಸವಿದೆ. ಏನೆಲ್ಲಾ ಸಾಧಿಸಿದ ಮಾನವನಿಗೆ ಇದು ಅಸಾಧ್ಯವೇನೂ ಅಲ್ಲ.

■

# ಭಾಷಾಂತರದ ನೆಲೆ - ಬೆಲೆ

ಭಾಷಾಂತರ ಅತ್ಯಂತ ಮಹತ್ವದ ಜ್ಞಾನ ಶಾಖೆ. ಭಾರತದಲ್ಲಿ ಬಹಳ ಹಿಂದಿನಿಂದಲೂ ಬೇರೆ ಬೇರೆ ರೂಪದಲ್ಲಿ ಭಾಷಾಂತರ ಕ್ರಿಯೆ ನಡೆದುಕೊಂಡು ಬಂದಿದೆಯಾದರೂ, ಇದೊಂದು ಶಾಸ್ತ್ರವಾಗಿಯಾಗಲೀ, ವಿಜ್ಞಾನವಾಗಿಯಾಗಲೀ ಅಥವಾ ಈ ಬಗ್ಗೆ ಶಾಸ್ತ್ರೀಯ ಜಿಜ್ಞಾಸೆಯಾಗಲೀ ಇಂಗ್ಲಿಷಿನಲ್ಲಿ ನಡೆದಷ್ಟು ನಡೆದಿಲ್ಲ. ಹೀಗಾಗಿ ಭಾಷಾಂತರದ ಬಗ್ಗೆ ಏನ ಮಾತನಾಡಬೇಕಾದರೂ ಪಾಶ್ಚಾತ್ಯ ವಿದ್ವಾಂಸರ, ಕೋಶಕಾರರ, ಭಾಷಾಂತರಕಾರರ ಹೇಳಿಕೆ ಮೇಲೆ ಅವಲಂಬಿತವಾಗಬೇಕಾಗಿದೆ. ಭಾಷಾಂತರಕ್ಕೆ ಪಾಶ್ಚಿಮಾತ್ಯ ದೇಶಗಳಲ್ಲಿ ಸಿಕ್ಕಿದಷ್ಟು ನೆಲೆಯಾಗಲೀ ಬೆಲೆಯಾಗಲೀ ನಮ್ಮ ನೆಲದಲ್ಲಿ ದೊರಕಿಲ್ಲ.

**ಪ್ರಕ್ರಿಯೆ ಮತ್ತು ಸಿದ್ಧಾಂತ**

ಇಂದು ಭಾಷಾಂತರ ತೌಲನಿಕ, ವಿವರಣಾತ್ಮಕ ಮತ್ತು ಅನ್ವಯಿಕ, ಭಾಷಾ ವಿಜ್ಞಾನದ ಅಂಗವಾಗಿ ಪರಿಣಮಿಸಿದೆ. ಎರಡು ಪ್ರದೇಶಗಳ, ಎರಡು ಜನಾಂಗಗಳ ಹಾಗೂ ಎರಡು ಸಂಸ್ಕೃತಿಗಳ ಸಂಪರ್ಕ ಸೇತುವಾದ ಭಾಷಾಂತರಕ್ಕೆ ಸರ್ವ ಸಮರ್ಪಕ ಆದರ್ಶ ಪರಿಭಾಷೆ ನೀಡುವುದು ಕಷ್ಟ. ಭಾಷಾಂತರವು ಮೂಲದ ವಸ್ತು, ಭಾವ, ಮತ್ತು ನಿರೂಪಣೆಗಳ ಪೂರ್ಣಾವತಾರವಾಗಿದ್ದುಕೊಂಡು ಮೂಲದ ಸೌಂದರ್ಯವನ್ನು ಕಾಪಾಡಿಕೊಂಡು ಅದರ ಎಲ್ಲಾ ಆಯಾಮಗಳನ್ನು ಸೆರೆಹಿಡಿದ ಕಲಾತ್ಮಕ ಛಾಯಾಚಿತ್ರದಂತೆ ಕಾರ್ಯನಿರ್ವಹಿಸಬೇಕಾಗುತ್ತದೆ. ಕೆಲವೊಮ್ಮೆ ಯಾವುದೇ ನಿಘಂಟು, ಸಮಾನಾರ್ಥಕ ಕೋಶಗಳನ್ನು ಆಶ್ರಯಿಸದೆ ತನಗೆ ಸರಿಕಾಣಿಸಿದ ರೀತಿಯಲ್ಲಿ ತನ್ನ ಪ್ರತಿಭೆ, ಧೀಶಕ್ತಿ ಬಳಸಿ ಚಾಕಚಕ್ಯತೆಯಿಂದ ಭಾಷಾಂತರ ಕಾರ್ಯ ನಿರ್ವಹಿಸಬೇಕಾಗುತ್ತದೆ. ಇಲ್ಲಿ ಅನುವಾದಕನ ಪ್ರಯತ್ನ ಮತ್ತು ವ್ಯವಸ್ಥಿತ ಅಭ್ಯಾಸ ಅವನ ಸಹಾಯಕ್ಕೆ ಬರುತ್ತದೆ. ಈ ರೀತಿಯ ಭಾಷಾಂತರ ಪ್ರಕ್ರಿಯೆಯನ್ನು ಶಾಸ್ತ್ರೀಯ ವಿವೇಚನೆಗೆ ಒಳಪಡಿಸುವ ದೃಷ್ಟಿಯಿಂದ ಜೆ.ಸಿ. ಕ್ಯಾಟ್‌ಫರ್ಡ್‌ನು ಫರ್ತ್ ಮತ್ತು ಹ್ಯಾಲಿಡೇ ಪ್ರತಿಪಾದಿಸಿದ ಭಾಷಾಶಾಸ್ತ್ರೀಯ ಸಿದ್ಧಾಂತವನ್ನು ಭಾಷಾಂತರ ಪ್ರಕ್ರಿಯೆಗೆ ಕ್ರಮಬದ್ಧವಾಗಿ ಅನ್ವಯಿಸಿ ತನ್ನ A Linguistic Theory of Translation ಎಂಬ ಗ್ರಂಥದಲ್ಲಿ ಭಾಷಾಂತರ ಸಿದ್ಧಾಂತವನ್ನು ಮಂಡಿಸಿ, ಭಾಷಾಂತರದಲ್ಲಿ ಹಿಡಿತಕ್ಕೆ ಸಿಗದ ಕಲ್ಪನೆ ಹಾಗೂ ಪ್ರಕ್ರಿಯೆಗಳಿಗೆ ಸೂಕ್ತ ಹೆಸರು ಮತ್ತು ವಿವರಣೆ ನೀಡಿದ್ದಾರೆ.

ಫರ್ತ್ ಮತ್ತು ಹ್ಯಾಲಿಡೇರವರ ಭಾಷಾಶಾಸ್ತ್ರೀಯ ಸಿದ್ಧಾಂತದ ಪ್ರಕಾರ ಕೆಲವು ಮೂಲದ್ರವ್ಯಗಳ ವ್ಯವಸ್ಥಿತ ರೂಪವೇ ಭಾಷಾ ವರ್ತನೆ. ಇವುಗಳನ್ನು ಧ್ವನಿದ್ರವ್ಯ (Phonic substance), ಲಿಪಿದ್ರವ್ಯ (graphic), ಸನ್ನಿವೇಶದ್ರವ್ಯ (situation) ವೆಂದು ನಿರ್ದೇಶಿಸಿ ಇವುಗಳ ವ್ಯವಸ್ಥಿತ ರೂಪವನ್ನು ಧ್ವನಿ ವ್ಯವಸ್ಥೆ (Phonology), ಲಿಪಿ ವ್ಯವಸ್ಥೆ (Graphology)

ಮತ್ತು ವ್ಯಾಕರಣ, ಕೋಶ ಪದಗಳನ್ನು (grammar and lexis) ಒಳಗೊಂಡಂತೆ ಒಟ್ಟು ಭಾಷೆಯಲ್ಲಿ ಕಾಣಬಹುದು. ಸನ್ನಿವೇಶಕ್ಕೂ ವ್ಯಾಕರಣ ಮತ್ತು ಪದಕೋಶಕ್ಕೂ ಇರುವ ಸಂಬಂಧವನ್ನು ಸೂಚಿಸುವ ಹೇಳಿಕೆಯನ್ನು ಸಂದರ್ಭ(context) ಎನ್ನಬಹುದು. ಘಟಕ ರಚನೆ (structure), ವರ್ಗ (class) ಮತ್ತು ವ್ಯವಸ್ಥೆ (system) - ಇವು ಭಾಷೆಯ ಮೂಲಭೂತ ಪ್ರವರ್ಗಗಳು (catagories). ಅರ್ಥಪೂರ್ಣ ಭಾಷಾವಿನ್ಯಾಸವನ್ನು ಒಳಗೊಂಡಿರುವ ಭಾಷಾ ಭಾಗ ಘಟಕಗಳು ಬೇರೆ ಬೇರೆ ದರ್ಜೆಯಲ್ಲಿ (Rank) ಇರುತ್ತವೆ. ಮೇಲ್ದರ್ಜೆಯ ಘಟಕಗಳು ಕೆಳದರ್ಜೆಯ ಘಟಕಗಳನ್ನು ಒಳಗೊಂಡಿರುತ್ತವೆ. ಒಂದು ಘಟಕದಲ್ಲಿರುವ ಕೆಲವು ಅಂಶಗಳು (elements) ಮೇಲಿನ ಘಟಕಗಳಲ್ಲಿ ವರ್ತಿಸುವ ರೀತಿಯಲ್ಲಿ ಸಮಾನತೆ ಇದ್ದರೆ ಆ ಅಂಶಗಳನ್ನು ಒಂದು ವರ್ಗ ಎಂದು ಕರೆಯಲಾಗುತ್ತಿದೆ. ಈ ಸಿದ್ಧಾಂತದ ಮುಖ್ಯ ಅಂಶ 'ಅರ್ಥ'ದ ಪರಿಕಲ್ಪನೆ. ಯಾವುದೇ ಭಾಷಿಕ ರೂಪ ಆ ಭಾಷೆಯೊಳಗೆ ಪಡೆದಿರುವ ಸಂಬಂಧಗಳ ಮೊತ್ತವೇ ಅರ್ಥ. ಇವುಗಳ ರೂಪ್ಯಕ (formal) ಸಂಬಂಧ ಸಂದರ್ಭ ಮೂಲ (centextual) ಸಂಬಂಧವಾಗಿರಬಹುದು. ಇವೆರಡೂ ಆಯಾಭಾಷೆಗೆ ವಿಶಿಷ್ಟವಾದುವು. ಒಂದೊಂದು ಭಾಷೆ ತನ್ನ ಸ್ವಂತ ಅರ್ಥಗಳನ್ನು ಪಡೆದಿರುತ್ತದೆ. ಬೇರೆ ಬೇರೆ ಭಾಷೆಗಳ ಸಮಾನಾರ್ಥಕ (equivalent) ಪದಗಳೇ ಇರಲಿ ಅವುಗಳ ಅರ್ಥ ಖಚಿತವಾಗಿ ಒಂದೇ ಆಗಿರುವುದು ಸಾಧ್ಯವಿಲ್ಲ.

ಕ್ಯಾಟ್‌ಫರ್ಡನ ಭಾಷಾಂತರ ಸಿದ್ಧಾಂತದಲ್ಲಿ ಕೇಂದ್ರೀಯ ಪ್ರಾಮುಖ್ಯತೆಯನ್ನು ಭಾಷಾಂತರ ಸಮಾನಾರ್ಥಕತೆಯ ಪರಿಕಲ್ಪನೆಗೆ ಕೊಡಬೇಕು. ಮೂಲಭಾಷೆಯಲ್ಲಿರುವ ಪಾಠಕ್ಕೆ ಬದಲಾಗಿ ಉದ್ದಿಷ್ಟ ಭಾಷೆಯಲ್ಲಿ ಪ್ರತಿಷ್ಠಾಪಿತವಾಗುವ ಪಾಠವನ್ನು ಭಾಷಾಂತರ ಸಮಾನಾರ್ಥಕವೆಂದು ಹೇಳಬಹುದು. ಸಮರ್ಪಕವಾದ ಭಾಷಾಂತರ ಸಮಾನಾರ್ಥಕವಿರಬೇಕಾದರೆ ಮೂಲಪಾಠ ನಿರ್ದೇಶಿಸುವ ಸನ್ನಿವೇಶದ ವೈಶಿಷ್ಟ್ಯಗಳನ್ನು ಸಾಧ್ಯವಾದಷ್ಟು ಹೆಚ್ಚು ಸಂಖ್ಯೆಯಲ್ಲಿ ಉದ್ದಿಷ್ಟ ಭಾಷೆಯ ಸಮಾನಾರ್ಥಕ ಸೂಚಿಸಬೇಕು. ಎರಡೂ ಪಾಠಗಳು ಎಲ್ಲಾ ವೈಶಿಷ್ಟ್ಯಗಳನ್ನು ಸೂಚಿಸುವುದು ಸಾಮಾನ್ಯವಾಗಿ ಅಸಾಧ್ಯ.

ಕೆಲವೊಮ್ಮೆ ರೂಪ್ಯಕ ಸಂವಾದಿತ್ವವೇ (formal correspondence) ಭಾಷಾಂತರ ಸಮಾನಾರ್ಥಕತೆಯಾಗಿರುತ್ತದೆ. ಒಂದು ಭಾಷೆಯಲ್ಲಿ ಒಂದು ಪದ ಮಾಡುವ ಕೆಲಸವನ್ನು ಇನ್ನೊಂದು ಭಾಷೆಯ ಇನ್ನೊಂದು ಪದ ಮಾಡಿದರೆ ಇವೆರಡೂ ಪದಗಳು ರೂಪ್ಯಕವಾಗಿ ಸಂವಾದಿಯಾಗಿರುತ್ತವೆ. ರೂಪ್ಯಕ ಸಂವಾದಿತ್ವಗಳು ಭಾಷಾಂತರ ಸಮಾನಾರ್ಥಕಗಳಾಗಲೇ ಬೇಕೆಂದಿಲ್ಲ. ಮೂಲಭಾಷೆಯಿಂದ ಉದ್ದಿಷ್ಟ ಭಾಷೆಗೆ ಒಂದು ಸಾರಿ ಬರುವಾಗ ರೂಪ್ಯಕ ಸಂವಾದಿತ್ವದ ಉಲ್ಲಂಘನೆಯಾಗಿದ್ದರೆ ಇದನ್ನು ಸರಿತ (shift) ಎನ್ನುತ್ತೇವೆ. ಸರಿತ ಎಂಬ ಪರಿಕಲ್ಪನೆ ಈ ಸಿದ್ಧಾಂತದಲ್ಲಿ ವ್ಯಾಪಕವಾಗಿ ಬಳಕೆಯಾಗಿದೆ. ಮಟ್ಟಗಳ ನಡುವೆ (levels) ಪ್ರವರ್ಗಗಳ ನಡುವೆ ಸರಿತಗಳು ಏರ್ಪಡಬಹುದು. ವ್ಯವಸ್ಥೆಗಳಲ್ಲಿ ಆಂತರಿಕ ಸರಿತಗಳು ಏರ್ಪಡುತ್ತವೆ. ಎರಡು ಭಾಷೆಗಳಲ್ಲಿ ರೂಪ್ಯಕವಾದ ವ್ಯವಸ್ಥೆಗಳಿರುತ್ತವೆ. ಆದರೆ ಭಾಷಾಂತರದಲ್ಲಿ ಸಂವಾದಿ ವ್ಯವಸ್ಥೆಯ ಒಂದು ಪದವನ್ನು (term) ಬಳಸಿದ್ದರೂ ಆ ಪದ ಸಂವಾದಿಯಾಗಿರುವುದಿಲ್ಲ.

ಕ್ಯಾಟಫರ್ಡನು ಭಾಷಾಂತರ ಪ್ರಭೇದಗಳನ್ನು ಮುಕ್ತ (unbound) ಮತ್ತು ದರ್ಜೆಗಳಿಗೆ ಸೀಮಿತ (Rank bound) ಭಾಷಾಂತರಗಳೆಂದು ವಿಂಗಡಿಸಿದ್ದಾನೆ. ಮೂಲದಲ್ಲಿನ ಘಟಕಗಳನ್ನು ಅದೇ ದರ್ಜೆಯ ಘಟಕಗಳಿಂದ ಭಾಷಾಂತರಿಸಿದರೆ

ಅದು ದರ್ಜೆಗಳಿಗೆ ಸೀಮಿತವಾದ ಭಾಷಾಂತರವಾಗುತ್ತದೆ. ಮುಕ್ತ ಭಾಷಾಂತರದಲ್ಲಿ ಮೂಲಪಾಠವು ಒಂದೇ ದರ್ಜೆಗೆ ಸೀಮಿತವಾಗಿರುವುದಿಲ್ಲ. ಒಂದೆಡೆ ಪದಗಳ ದರ್ಜೆ, ಇನ್ನೊಂದೆಡೆ ವಾಕ್ಯಗಳ ದರ್ಜೆ, ಕೆಲವೊಮ್ಮೆ ವಾಕ್ಯಗಳನ್ನು ಮೀರಿದ ಪರಿಚ್ಛೇದಕ ದರ್ಜೆಗಳಲ್ಲೂ ಸಮಾನಾರ್ಥ ಮೂಡಬಹುದು. ಮುಕ್ತ ಭಾಷಾಂತರದಲ್ಲಿ ಘಟಕಗಳ ನಡುವೆ ಭಾಷಾಂತರವಿರುತ್ತದೆ. ಭಾಷಾ ಪ್ರಭೇದಗಳನ್ನು ಹೆಸರಿಸುವಲ್ಲಿಯೂ ಇಲ್ಲಿಯ ಹೇಳಿಕೆಗಳು ಗಮನಾರ್ಹವಾದುವು. ಉಪ ಭಾಷೆ (dialect) ಪ್ರಾದೇಶಿಕ ಉಪ ಭಾಷೆ, ವ್ಯಕ್ತಿ ಭಾಷೆ (idolect), ಶೈಲಿ, ಸೊಂದಣೆ (register) ಇಂಥ ಒಂದೊಂದು ಪ್ರಭೇದದಲ್ಲಿ ಕೆಲವು ನಿರ್ದಿಷ್ಟ ವ್ಯಾಕರಣಾಂಶಗಳಾಗಲೀ, ಕೋಶಪದದ ಅಂಶವಾಗಲೀ, ಧ್ವನಿ ಅಥವಾ ಲಿಪಿ ವ್ಯವಸ್ಥೆಯ ವಾಕ್ಯ ಅಂಶವಾಗಲೀ ಅನೇಕಾವರ್ತಿ ಬರುವುದನ್ನು ಕಾಣಬಹುದು. ಇವುಗಳು ಆಯಾ ಭಾಷಾ ಪ್ರಭೇದದ ಮುದ್ರೆಗಳು. ಇಂಥ ಮುದ್ರೆ(mark)ಗಳಿಗೆ ರೂಪ್ಯಕವಾಗಿ ಸಂವಾದಿಯಾಗಿದ್ದ ಸಮಾನಾರ್ಥಗಳು ಉದ್ದಿಷ್ಟ ಭಾಷೆಯಲ್ಲಿ ಕೆಲವೊಮ್ಮೆ ಇರುತ್ತವೆ. ಕೆಲವೊಮ್ಮೆ ಇರುವುದಿಲ್ಲ. ಇದ್ದರೂ ಅವುಗಳನ್ನು ಬಳಸಬೇಕೆಂದಿಲ್ಲ.

ಭಾಷಾಂತರಣೀಯತೆ ಕೆಲವೊಂದು ಮಿತಿ ಇದೆ. ಧ್ವನಿ ವ್ಯವಸ್ಥೆ ಮತ್ತು ಲಿಪಿ ವ್ಯವಸ್ಥೆಯ ನಡುವೆ ಭಾಷಾಂತರ ನಡೆಯುವುದು ಸಾಧ್ಯವಿಲ್ಲ. ಭಾಷಾಂತರದಲ್ಲಿ ಸಮಾನ ದ್ರವ್ಯಾಂಶಗಳು ಸೂಚಿತವಾಗಬೇಕು. ಇದಲ್ಲದೆ ಭಾಷೆಗೆ ಸಂಬಂಧಪಟ್ಟಂತೆ, ಸಂಸ್ಕೃತಿಗೆ ಸಂಬಂಧಪಟ್ಟಂತೆ ಅಭಾಷಾಂತರಣೀಯತೆ ತಲೆದೋರಬಹುದು. ಮೂಲಪಾಠದಲ್ಲಿ ಸೂಚಿತವಾದ ಕಾರ್ಯಾತ್ಮಕವಾಗಿ ಪ್ರಸಕ್ತವಾದ (functionally relevent) ಸನ್ನಿವೇಶದ ವೈಶಿಷ್ಟ್ಯಗಳು ಆ ಭಾಷೆಯ ರೂಪ್ಯಕ ವೈಶಿಷ್ಟ್ಯಗಳಾಗಿದ್ದು ಉದ್ದಿಷ್ಟ ಭಾಷೆಯಲ್ಲಿ ಇವುಗಳು ರೂಪ್ಯ ಸಂವಾದಿತ್ವವನ್ನು ಪಡೆಯದಿದ್ದರೆ ಭಾಷಾಂತರ ಅಸಾಧ್ಯವಾಗುತ್ತದೆ. ಹಾಗೆಯೇ ಮೂಲಪಾಠ ಸೂಚಿಸುವ ಸನ್ನಿವೇಶಾಂಶ ಉದ್ದಿಷ್ಟ ಭಾಷಾ ಸಂಸ್ಕೃತಿಯಲ್ಲಿ ಇಲ್ಲದಿದ್ದರೆ ಭಾಷಾಂತರ ಅಸಾಧ್ಯವಾಗುತ್ತದೆ. ವರ್ಗಾವಣೆಗಳ ಮೂಲಕ (transference) ಈ ಸಮಸ್ಯೆಯನ್ನು ತಕ್ಕಮಟ್ಟಿಗೆ ಬಗೆಹರಿಸಬಹುದು.

ಕ್ಯಾಟ್‌ಫರ್ಡ್‌ನ ಭಾಷಾಂತರ ಸಿದ್ಧಾಂತ ಭಾಷಾಂತರ ಶಾಸ್ತ್ರಕ್ಕೆ ವರ್ಣನಾತ್ಮಕ ಖಚಿತತೆಯನ್ನು ತಂದುಕೊಟ್ಟಿದೆ. ಇದರಿಂದಾಗಿ ಭಾಷಾಂತರಕ್ಕೆ ಒಂದು ನೆಲೆ-ಬೆಲೆ ಸಿಕ್ಕಿದಂತಾಗಿದೆ. ಪಾರಿಭಾಷಿಕ ಪರಿಕಲ್ಪನೆಗಳು ಮತ್ತು ಪದಗಳನ್ನು ನೀಡಿ ಹೇಳಿಕೆಗಳನ್ನು ಖಚಿತಗೊಳಿಸಲಾಗಿದೆ. ಅಭಾಷಾಂತರಣೀಯತೆಗೆ ಭಾಷಿಕ, ಸಾಂಸ್ಕೃತಿಕ ಕಾರಣಗಳಿವೆ. ಭಾಷಿಕ ಕಾರಣಗಳಲ್ಲಿ ಹಂಚಿಕೊಂಡ ನಿದರ್ಶಕತ್ವ (shared experience), ಬಹ್ವರ್ಥತೆ (polysemy) ಅನೇಕಾರ್ಥತೆ (oligogemy)ಗಳಿಗೆ ಸಾಂಸ್ಕೃತಿಕ ಕಾರಣಗಳನ್ನು ವಿಚಿತ್ರ ಸಹಸ್ಥಾನತ್ವ (strange collocation) ಎಂಬ ದೃಷ್ಟಿಯಲ್ಲಿ ನೋಡಬಹುದು. ವರ್ಗಾವಣೆಯ ವಿಷಯದಲ್ಲೂ ಶುದ್ಧ (pure) ವರ್ಗಾವಣೆ ಮತ್ತು ಭಾಗಶಃ (partial) ವರ್ಗಾವಣೆ ಎಂದಾಗ ವರ್ಗಾವಣೆ ಎಂಬ ಪರಿಕಲ್ಪನೆಯನ್ನು ಹೆಚ್ಚು ಖಚಿತವಾಗಿ ಚರ್ಚಿಸುವ ಅವಕಾಶ ಮಾಡಿದಂತಾಯಿತು. ಭಾಷಾಂತರ ಸಮಾನಾರ್ಥಕ ಸಂಭಾವ್ಯತೆ (probability), ನಿರ್ಬಂಧಿತ (conditionals) ಸಂಭಾವ್ಯತೆ, ಅನಿರ್ಬಂಧಿತ ಸಂಭಾವ್ಯತೆ. ಸಮಾನಾರ್ಥಕ ಹೀನತೆ (nil equivalence), ಶೂನ್ಯ ಸಮಾನಾರ್ಥಕತೆ (zero equivalence) ಈ ಪರಿಕಲ್ಪನೆಗಳು ಸಮಾನಾರ್ಥಕಗಳಲ್ಲಿ ಎಷ್ಟೆಷ್ಟು ಬಗೆಗಳಿವೆ, ಸಮಾನಾರ್ಥಕತೆಯನ್ನು ಎಷ್ಟು ಖಚಿತವಾಗಿ ಚರ್ಚಿಸಬಹುದು ಎಂಬುದನ್ನು ತೋರಿಸಿಕೊಡುತ್ತದೆ.

ವಿವರಣಾತ್ಮಕ ಖಚಿತತೆಗೆ ಸಹಸ್ಥಾನತ್ವದ (collocation) ಪರಿಕಲ್ಪನೆ ಉದಾಹರಣೆಯಾಗಿದೆ. ಕೋಶಪದದ ಮಟ್ಟದಲ್ಲಿ ಕೆಲವು ಪದಗಳು ಇತರ ಕೆಲವು ನಿರ್ದಿಷ್ಟ ಪದಗಳ ಸಹಚರ್ಯದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತವೆ. ಈ ಪದಗಳನ್ನು ಸಹಸ್ಥಾನಿಗಳು (collocates) ಎನ್ನಬಹುದು. ಖಚಿತತೆಯಿಂದಾಗಿ ಆಂತರಿಕ ಸ್ವಸಾಂಗತ್ಯ ಕಂಡುಬರುತ್ತದೆ. ಸಮಾನಾರ್ಥಕ ಇರಬೇಕಾದರೆ ಪದಗಳು ಸಾಧ್ಯವಾದಷ್ಟು ಹೆಚ್ಚು ಸಂಖ್ಯೆಯಲ್ಲಿ ಸಮಾನ ದ್ರವ್ಯಾಂಶಗಳನ್ನು ಸೂಚಿಸಬೇಕು ಎಂಬುದು ಇದರ ಒಂದು ತತ್ವ. ಲಿಪಿ ವ್ಯವಸ್ಥೆಯ ದ್ರವ್ಯ, ಲಿಪಿ ದ್ರವ್ಯ ಎಂದರೆ ಇಂಥ ಲಿಖಿತ ಸಂಜ್ಞೆಗಳು ಲಿಪಿ ವ್ಯವಸ್ಥೆಯ ಮಟ್ಟದಲ್ಲಿ ಸಮಾನಾರ್ಥಕ ಬೇಕಿದ್ದರೆ ಉದ್ದಿಷ್ಟ ಭಾಷೆಯ ಪದ ಮೂಲ, ಭಾಷೆಯ ಲಿಪಿ ವ್ಯವಸ್ಥೆ, ಸೂಚಿಸುವ ಲಿಪಿ ದ್ರವ್ಯಾಂಶಗಳನ್ನು ಸೂಚಿಸಬೇಕು. ಈ ಸಮಾನಾರ್ಥಕ ಲಿಪಿಯಲ್ಲೇ ಇರತಕ್ಕದ್ದು. ಏಕೆಂದರೆ ಲಿಪಿ ದ್ರವ್ಯಾಂಶಗಳನ್ನು ಧ್ವನಿ ವ್ಯವಸ್ಥೆಗಳ ನಡುವೆ ಲಿಪಿ ವ್ಯವಸ್ಥೆ ಮತ್ತು ವ್ಯಾಕರಣ ಪದಕೋಶಗಳ ನಡುವೆ ಭಾಷಾಂತರ ಸಾಧ್ಯವಿಲ್ಲ. ಈ ಫಲಿತ ಮೇಲೆ ಹೇಳಿದ ಸಮಾನಾರ್ಥಕತೆಯ ಅರ್ಥವನ್ನು ಕುರಿತ ತತ್ವದಿಂದ ನೇರವಾಗಿ ಲಭಿಸುತ್ತದೆ.

ಒಂದು ಭಾಷೆಯ ಪಠ್ಯ ಸಾಮಗ್ರಿಯ ಬದಲಿಗೆ ಇನ್ನೊಂದು ಭಾಷೆಯ ಪಠ್ಯ ಸಾಮಗ್ರಿಯನ್ನು ಪ್ರತಿಷ್ಠಾಪಿಸಿದಾಗ ಭಾಷಾಂತರ ಕ್ರಿಯೆ ನಡೆಯುತ್ತದೆ. ಈ ಪಾಠದ ಸಾಮಗ್ರಿ ಲಿಪಿಗೆ ಸೀಮಿತವಾಗಬಹುದು, ಧ್ವನಿಗೆ ಸೀಮಿತವಾಗಬಹುದು, ವ್ಯಾಕರಣ, ಕೋಶಪದಗಳಿಗೆ ಸೀಮಿತವಾಗಬಹುದು. ಲಿಪಿಯನ್ನಷ್ಟೇ ಬದಲಿಸಿದರೂ ಭಾಷಾಂತರವೇ ಆಗುತ್ತದೆ. ಹಾಗೆಯೇ ಮೂಲಭಾಷೆಯ ಧ್ವನಿಯ ಬದಲಿಗೆ ಉದ್ದಿಷ್ಟ ಭಾಷೆಯ ಧ್ವನಿ ಪ್ರತಿಷ್ಠಾಪಿತವಾಗುತ್ತದೆ. ಭಾಷಾಂತರದ ವ್ಯಾಪ್ತಿಯನ್ನು ಕ್ರಮಬದ್ಧವಾಗಿ ಲಿಪಿ ವ್ಯವಸ್ಥೆಗೆ ಮತ್ತು ಧ್ವನಿ ವ್ಯವಸ್ಥೆಗೆ ಅನ್ವಯಿಸಿದರೆ ಇವೆರಡೂ ಭಾಷಾಂತರ ಪ್ರಭೇದಗಳು ನೇರವಾಗಿ ಫಲಿತವಾಗುತ್ತದೆ ಎನ್ನುತ್ತಾರೆ ಎಡ್ವರ್ಡ್ ನೋರೋನರವರು. (ಭಾಷಾಂತರ ಪ್ರಕ್ರಿಯೆಯ ಒಂದು ಸ್ಪಷ್ಟೀಕರಣ: ಕ್ಯಾಟ್‌ಫರ್ಡನ ಭಾಷಾಶಾಸ್ತ್ರೀಯ ಸಿದ್ಧಾಂತ : ನಾಗವಲ್ಲಿ, 1979 : ಪುಟ 20 ಭಾಷಾಂತರ ಕಲೆ) ಇವರ ಪ್ರಕಾರ ಕ್ಯಾಟ್‌ಫರ್ಡ್ ಮಂಡಿಸಿದ ಭಾಷಾಂತರ ಸಿದ್ಧಾಂತ ಸ್ಪಷ್ಟ ಸಿದ್ಧಾಂತ, ಸೂತ್ರ, ವ್ಯಾಪ್ತಿಗಳೊಡನೆ ಸ್ವಸಾಂಗತ್ಯವನ್ನು ಪಡೆದು ಭಾಷಾಂತರ ಶಾಸ್ತ್ರವನ್ನು ಪರಿಪೂರ್ಣವಾಗಿ ವಿವೇಚಿಸಲು ಅನುವು ಮಾಡಿಕೊಟ್ಟಿದೆ ಹಾಗೂ ಭಾಷಾಂತರಕ್ಕೆ ಇಂದು ಒಂದು ನೆಲೆ-ಬೆಲೆ ತಂದುಕೊಟ್ಟಿದೆ.

## ಪ್ರಭಾವ - ಪರಿಣಾಮ

ಮೂಲಕೃತಿಯನ್ನು ಓದಲಾಗದ ಕೊರತೆಯನ್ನು ನೀಗಿಸಿ, ಮೂಲಕೃತಿಯ ವಾಚಕರ ಮನಸ್ಸಿನ ಮೇಲೆ ಉಂಟು ಮಾಡುವ ರಸಭಾವವನ್ನೇ ಭಾಷಾಂತರಿತ ಕೃತಿಯೂ ಸಹ ಮಾಡಬೇಕು. ಅದು ಒಂದು ಕಲೆಯಾಗಿರುವುದರಿಂದ ಎಲ್ಲಾ ಕಲೆಗಳಂತೆ ನಿರಂತರವಾಗಿ ಉಳಿದು ಬಂದು ಮುಂದಿನ ಪೀಳಿಗೆಯ ಭಾಷಾಂತರಕಾರರಿಗೆ ಸ್ಫೂರ್ತಿದಾಯಕವಾಗಬೇಕು. ಮೂಲ ಕೃತಿ ವಾಸ್ತವಿಕತೆಯನ್ನು ಗ್ರಹಿಸಲು ಉತ್ತಮ ಭಾಷಾಂತರಕಾರ ಪಾರದರ್ಶಕ ಗಾಜಿನಂತೆ ವರ್ತಿಸುತ್ತಾನೆ. ಆಗ ಅವನ ಭಾಷಾಂತರವು ಯಾವ ಲೋಪವು ಇಲ್ಲದೇ ಭಾಷೆಯನ್ನು ಉಪಯೋಗಿಸುವುದು ಸ್ವಚ್ಛ ಗಾಜಿನ ಭಾಷಾಂತರವಾದರೆ. ಅದೇ ಗ್ರಂಥಗಳಿಗೆ ಪ್ರಾಚೀನ ಶೈಲಿಯ ಭಾಷೆಯನ್ನು ಉಪಯೋಗಿಸಿದರೆ ಬಣ್ಣದ ಗಾಜಿನ ಭಾಷಾಂತರವಾಗುತ್ತದೆ. ಪ್ರಾಚೀನ

ಸಾಹಿತ್ಯದ ಭಾಷಾಂತರದಲ್ಲಿ ಗತಕಾಲಕ್ಕೂ ಪ್ರಸ್ತುತ ಕಾಲಕ್ಕೂ ಇರುವ ನಿರ್ದಿಷ್ಟ ವ್ಯತ್ಯಾಸವನ್ನು ಗಮನಿಸಿ ವಾಸ್ತವಿಕ ಸ್ಥಾನದಲ್ಲಿ ವೀಕ್ಷಿಸುವ ಕ್ರಮವನ್ನು ಸ್ಪಷ್ಟಾತ್ಮಕ ನೋಟವೆನ್ನುತ್ತೇವೆ. ಮೂಲಕೃತಿಯ ವಿಷಯ ಭಾವನಾತ್ಮಕವಾಗಿ ಇಲ್ಲದ ಪ್ರಾಸ್ತಾವಿಕವಾಗಿ (allusive) ಇದ್ದರೆ ಭಾಷಾಂತರ ಸುಲಭಸಾಧ್ಯವಲ್ಲ. ಹಾಗೆಯೇ ಮೂಲಕೃತಿಯಲ್ಲಿ ಬಳಕೆಯಲ್ಲಿಲ್ಲದ ಅಥವಾ ಪಾರಿಭಾಷಿಕ ಶಬ್ದಗಳಿದ್ದರೆ ಭಾಷಾಂತರ ಕಷ್ಟವಾಗುತ್ತದೆ. ಮೂಲಕೃತಿಯ ಲಕ್ಷಣ ಏನೇ ಇದ್ದರೂ ಭಾಷಾಂತರಕಾರ ಶಬ್ದವನು ಸೂಚಿಸುವ ವಸ್ತುವಿನ ಮೇಲೆ ಗಮನ ಕೇಂದ್ರೀಕರಿಸಬೇಕು.

ಸಾಹಿತ್ಯಿಕ ಭಾಷಾಂತರದಲ್ಲಿ ಶಬ್ದಗಳನ್ನು ಬದಿಗಿಟ್ಟು ವಿಷಯವನ್ನು ಗ್ರಹಿಸಿ ಭಾಷಾಂತರಿಸಬಹುದು. ಆದರೆ ತತ್ವಶಾಸ್ತ್ರದ ಭಾಷಾಂತರದಲ್ಲಿ ಇದು ಸಾಧ್ಯವಿಲ್ಲ. ಕಾರಣ ತತ್ವಶಾಸ್ತ್ರದ ಪ್ರತಿಯೊಂದು ಶಬ್ದಕ್ಕೂ ಅದರದೇ ಭಾವನಾತ್ಮಕ ಅರ್ಥವಿದೆ. ವೈಜ್ಞಾನಿಕ ವಿಷಯಗಳ ಭಾಷಾಂತರದಲ್ಲಿ ಪ್ರತಿ ಶಬ್ದಕ್ಕೂ ಅದರ ಅರ್ಥ ಇರುವುದರಿಂದ ಆ ಶಬ್ದಗಳನ್ನು ಭಾಷಾಂತರಿಸದೇ ಹಾಗೆಯೇ ಇಡಬೇಕಾಗುತ್ತದೆ. ಇದರಿಂದಾಗಿ ಅನ್ಯ ಭಾಷೆಯ ಶಬ್ದಗಳ ಬಳಕೆ ಹಾಗೂ ಹೊಸ ಶಬ್ದಗಳ ಸೇರ್ಪಡೆಯಾಗುತ್ತದೆ. ಈ ರೀತಿ ಅನ್ಯ ಶಬ್ದಗಳು ಗ್ರಂಥಗಳಲ್ಲಿ ನುಸುಳಿಕೊಳ್ಳಲು ಭಾಷಾಂತರವೇ ಕಾರಣ. ಒಂದು ಭಾಷೆಯ ಅಭಿವೃದ್ಧಿಯಲ್ಲಿ ಭಾಷಾಂತರ ಮಹತ್ತರ ಪಾತ್ರ ವಹಿಸುತ್ತದೆ ಎಂದಾಯಿತು. ಈ ಕ್ರಿಯೆ ಭಾಷಾಂತರದ ನೆಲೆ - ಬೆಲೆಯನ್ನು ಸೂಚಿಸುತ್ತದೆ.

ಭಾಷಾಂತರ ಕ್ರಿಯೆ ಮೂಲ ಲೇಖಕನ ಕೆಲಸಕ್ಕಿಂತಲೂ ಕಷ್ಟಕರವಾದುದು. ಅನುವಾದಿಸುವ ಗ್ರಂಥ ಪ್ರಕಾರಗಳಲ್ಲಿ ಸ್ವಂತ ಕೃತಿಯನ್ನು ರಚಿಸುವವನು ಉತ್ತಮ ಭಾಷಾಂತರಕಾರನಾಗುತ್ತಾನೆ. ತನ್ನ ಭಾಷೆಯ ಜಾಯಮಾನಕ್ಕೆ ತಕ್ಕಂತ ಗ್ರಂಥವನ್ನು ಭಾಷಾಂತರಿಸಬೇಕಾದಲ್ಲಿ ಅನುವಾದಕನ ಪ್ರಭಾವ ಮೂಲ ಲೇಖನದಲ್ಲಿ ಉಂಟಾಗಿ ಅವನು ಸ್ಪಷ್ಟಾತ್ಮಕ ಲೇಖಕನಾಗುತ್ತಾನೆ. ಮೂಲ ಲೇಖನದೊಂದಿಗೆ ಮಾನಸಿಕ ಭಾಂದವ್ಯವಿದ್ದು ಎರಡೂ ಭಾಷೆಗಳಲ್ಲಿ ಪಾಂಡಿತ್ಯವಿದ್ದು, ಮೂಲ ಕೃತಿಯನ್ನು ವಿಮರ್ಶಾತ್ಮಕವಾಗಿ ಗ್ರಹಿಸುವ ಸಾಮರ್ಥ್ಯ ಭಾಷಾಂತರಕಾರನಿಗಿರಬೇಕು. ಒಂದು ಭಾಷೆಯಲ್ಲಿರುವ ಗ್ರಂಥವನ್ನು ಭಾಷೆಯನ್ನರಿಯದವರಿಗೆ ಮುಚ್ಚಿದ ಪೆಟ್ಟಿಗೆಯ ಐಶ್ವರ್ಯದಂತೆ. ಅದರ ಮೌಲ್ಯ ತಿಳಿಯಬೇಕಾದರೆ ಅದು ಅವನ ಭಾಷೆಗೆ ತರ್ಜುಮೆಯಾದಾಗ ಮಾತ್ರ. ಭಾಷಾಂತರ ಪರ ಭಾಷೆಗಳ ಜ್ಞಾನ ಭಂಡಾರವನ್ನು ಹೊರತೆಗೆಯಲು ಸಾಧನವಾದುದರಿಂದ ಅದಕ್ಕೆ ಹೆಚ್ಚು ಬೆಲೆ ಬಂದಿದೆ.

ವಿಜ್ಞಾನಿಗಳಿಗೆ ಭಾಷಾಂತರ ಹೆಚ್ಚು ಸಹಾಯ ನೀಡಿದೆ. ಒಂದು ದೇಶದಲ್ಲಿ ವೈಜ್ಞಾನಿಕ ಕ್ಷೇತ್ರದಲ್ಲಾದ ಪ್ರಗತಿ ತಿಳಿಯಲು ಭಾಷಾಂತರವಲ್ಲದೆ ಬೇರೆ ದಾರಿಯೇ ಇಲ್ಲ. ಉದಾಹರಣೆಗೆ ಜಪಾನ್, ಚೀನಾ ಮುಂತಾದ ದೇಶಗಳ ಪ್ರಗತಿ ತಿಳಿಯಲು ಭಾಷಾಂತರ ಮುಖ್ಯ. ವೈಜ್ಞಾನಿಕ ಗ್ರಂಥಗಳನ್ನು ಭಾಷಾಂತರಿಸುವಾಗ ಅನುವಾದಕ ಸ್ಪಷ್ಟ ನಿರೂಪಣೆಗಳ ಕಡೆ ಗಮನ ಕೊಡುತ್ತಾನೆಯೇ ಹೊರತು ಲೇಖಕನ ರಸಭಾವಗಳಿಗೆ ಹಾಗೂ ಶೈಲಿಗೆ ಪ್ರಾಧಾನ್ಯ ನೀಡುವುದಿಲ್ಲ. ಹಾಗೆಯೇ ದಾರ್ಶನಿಕ ಗ್ರಂಥಗಳ ಅನುವಾದವೂ ಹೆಚ್ಚು ತಾಂತ್ರಿಕವೆನಿಸಿಕೊಂಡಿದೆ. ಕಾವ್ಯವನ್ನು ಭಾಷಾಂತರಿಸುವಾಗ ಭಾಷೆ, ವಸ್ತು, ಕಾವ್ಯದಲ್ಲಿನ ಕಲಾ ವೈಶಿಷ್ಟ್ಯ ಇವುಗಳನ್ನು ಗಮನಿಸಲಾಗುವುದು. ಹೀಗೆ ವಿವಿಧ ಕ್ಷೇತ್ರಗಳಲ್ಲಿ ಭಾಷಾಂತರ ತನ್ನದೇ ಆದ ನೆಲೆಯನ್ನು ಕಂಡುಕೊಂಡಿದೆ.

## ಲಕ್ಷ್ಯ ಮತ್ತು ಪರಿಮಿತಿ

ಭಾಷಾಂತರಕ್ಕೂ ಒಂದು ಲಕ್ಷ್ಯವಿದೆ. ಬೇರೊಂದು ಭಾಷೆಯಲ್ಲಿನ ಭಾವನೆಯನ್ನು ತನ್ನ ಭಾಷೆಯ ತನ್ನದೇ ಆದ ರೂಢಿಯ ಆಡುಮಾತಿನಲ್ಲಿ ಸರಳವಾಗಿ ನೇರವಾಗಿ ಹೇಳುವುದು ಭಾಷಾಂತರದ ಗುರಿ. ಭಾಷಾಂತರ ಯಾರಿಗಾಗಿ ಮಕ್ಕಳಿಗಾ, ವಯಸ್ಕರಿಗಾ, ವಿದ್ವಾಂಸರಿಗಾ ಎಂಬುದು ನಿರ್ಧರಿತವಾಗಬೇಕು. ಅಲ್ಲದೇ ಕಾಲ, ಅಭಿರುಚಿ ಗಮನಿಸಬೇಕು. ತಾನು ಮಾತ್ರವಲ್ಲ ತನ್ನವರೂ ಉಣ್ಣಬೇಕು ಎಂಬುದು ಭಾಷಾಂತರಕ್ಕೆ ಪ್ರೇರಣೆ ನೀಡುತ್ತದೆ. ಭಾಷಾಂತರಕಾರ ತನ್ನತನವನ್ನು ಮರೆತು ಪರಕಾಯ ಪ್ರವೇಶ ಮಾಡಿ ತನ್ನ ಲಕ್ಷ್ಯವನ್ನು ಮೂಲ ಭಾವನೆಯತ್ತ ಹರಿಸುತ್ತಾನೆ. ಮೂಲ ಭಾವನೆಯನ್ನು ಯಾವ ರೀತಿಯಲ್ಲೂ ಕೆಡಿಸಬಾರದು. ಭಾಷಾಂತರಕಾರನಿಗೆ ಎರಡೂ ಭಾಷೆಯಲ್ಲಿ ಪರಿಣತಿ ಇರಬೇಕು. ತನ್ನ ಲಕ್ಷ್ಯದ ಸಾಧನೆಯಲ್ಲಿ ಭಾಷಾಂತರಕಾರ ಹೆಚ್ಚು ಪರಿಶ್ರಮಪಡಬೇಕು.

ಒಂದು ಭಾಷಾಂತರ ಕೃತಿ ಮತ್ತೆ ಮತ್ತೆ ಭಾಷಾಂತರವಾಗಬಹುದು. ಗುರಿ ಒಂದೇ ಆಗಿದ್ದರೂ ಇದರಲ್ಲಿ ವಿವಿಧತೆ ಕಾಣಬಹುದು. ಒಂದೇ ಕೃತಿಯನ್ನು ಪ್ರೌಢರಿಗಾಗಿ, ಮಕ್ಕಳಿಗಾಗಿ ಭಾಷಾಂತರ ಅಥವಾ ರೂಪಾಂತರಿಸಬಹುದು. ಕೆಲವು ಸಾರಿ ಸಂಗ್ರಹಾನುವಾದ ಮಾಡಬಹುದು. ಇದು ಭಾಷಾಂತರಕಾರನ ಗುರಿಯನ್ನು ಅವಲಂಬಿಸಿರುತ್ತದೆ. ಭಾಷಾಂತರಕಾರ ಓದುಗನಿಗೂ ಕೃತಿಕಾರನಿಗೂ ಮಧ್ಯೆ ಸೇತುವೆಯಂತೆ ಕೆಲಸ ಮಾಡುತ್ತಾನೆ. ''ಹೃದಯ ಹೃದಯಗಳನ್ನು ಬೆಸೆದು, ರಾಷ್ಟ್ರ ರಾಷ್ಟ್ರಗಳ ನಡುವೆ ಸೌಹಾರ್ದತೆಯನ್ನು ಉಂಟು ಮಾಡುವ'' ಭಾಷಾ ರಾಯಭಾರಿ ''ಈ ಭಾಷಾಂತರಿರಕಾರ''. ಭಾಷಾಂತರದ ಗುರಿ ಪರರನ್ನು ಅರಿಯುವುದು, ಅರಿತು ನಡೆಯುವುದು, ಉತ್ತಮ ಸಂಪ್ರದಾಯಗಳ ಬೆಸುಗೆಯಿಂದ ಉತ್ತಮ ಬಾಂಧವ್ಯ ಸ್ಥಾಪಿಸಿ ದೇಶ ದೇಶಗಳಲ್ಲಿ ಶಾಂತಿಗೆ ಬುನಾದಿ ಹಾಕುವುದೇ ಆಗಿದೆ- ಎನ್ನುತ್ತಾರೆ ಶ್ರೀ ಜಿ. ಶ್ಯಾಮಸುಂದರ್ (ಲಕ್ಷ್ಯ ಮತ್ತು ಭಾಷಾಂತರ, ನಾಗವಲ್ಲಿ, ಪುಟ 91) ಭಾಷಾಂತರದ ಲಕ್ಷ್ಯದ ಮೇಲೆ ಅದರ ಬೆಲೆ ಆಧಾರಿತವಾಗಿದೆ.

ಭಾಷಾಂತರದಲ್ಲಿ ಮೂಲಕೃತಿಯ ಉತ್ಕೃಷ್ಟತೆಯೆಲ್ಲ ಯಥಾವತ್ತಾಗಿ ಅವತರಿಸಬೇಕು. ಆದರೆ ಮೂಲ ಮತ್ತು ಉದ್ದಿಷ್ಟ ಭಾಷೆಗಳ ನಡುವಿನ ವ್ಯತ್ಯಾಸದಿಂದಾಗಿ ಜನರ ಆಚಾರ, ವಿಚಾರ, ವ್ಯವಹಾರ, ಸಾಂಸ್ಕೃತಿಕ ಹಿನ್ನೆಲೆಗಳ ವ್ಯತ್ಯಾಸದಿಂದಾಗಿ ಈ ಆದರ್ಶ ಸ್ಥಿತಿಯನ್ನು ಎಲ್ಲಾ ಸಂದರ್ಭಗಳಲ್ಲೂ ತಲುಪುವುದು ಕಷ್ಟ.

ಇದು ಭಾಷಾಂತರಕ್ಕಿರುವ ಪರಿಮಿತಿ, ವಿಶಿಷ್ಟ ಧಾರ್ಮಿಕ ಅರ್ಥವುಳ್ಳ ಮಡಿ, ಪುಣ್ಯ, ಪಾಪ, ಮಾಯೆ, ಲೀಲೆ ಮಂಗಳಾರತಿ, ತೀರ್ಥ ಮುಂತಾದ ಪದಗಳನ್ನು ಇಂಗ್ಲಿಷಿನಂತಹ ವಿದೇಶಿ ಭಾಷೆಗೆ ಅನುವಾದಿಸಲು ಸಾಧ್ಯವಿಲ್ಲ. ಇವನ್ನು ನಾಲ್ಕಾರು ಮಾತುಗಳಲ್ಲಿ ವಿವರಿಸಬೇಕಾಗುವುದು. ಹಾಗೆಯೇ ಒಮ್ಮೊಮ್ಮೆ ಎರಡರ್ಥ, ಮೂರರ್ಥ ಇಲ್ಲವೇ ನಾನಾರ್ಥ ಕೊಡುವ ಪದಗಳಿರುತ್ತವೆ. ಇವನ್ನು ಭಾಷಾಂತರಿಸುವುದು ಕಷ್ಟ. ಉದಾಹರಣೆಗೆ (Life depends on the liver) ಎನ್ನುವ ವಾಕ್ಯಕ್ಕೆ ಬದುಕು ಬಾಳುವವನನ್ನು ಅವಲಂಬಿಸಿರುತ್ತದೆ ಎನ್ನುವ ಅರ್ಥವನ್ನು, ಬದುಕು (ಆಯಸ್ಸು) ಪಿತ್ತಜನಕಾಂಗವನ್ನು (ಅದರ ಸುಸ್ಥಿತಿಯನ್ನು) ಅವಲಂಬಿಸಿರುತ್ತದೆ, ಎನ್ನುವ ಇನ್ನೊಂದರ್ಥವನ್ನು ಕೊಡುತ್ತದೆ. ಹಾಗೆಯೇ 'ಕಂಬಲವಂತಂನ ಬಾಧತೇ ಶೀತಂ' - ಎಂದರೆ 'ಕಂಬಳಿ ಹೊದ್ದಿರುವವನನ್ನು ಶೀತ ಬಾಧಿಸದು' ಎಂದೂ 'ಶೀತ ಯಾವ ಬಲಶಾಲಿಯನ್ನು

ತಾನೇ ಬಾಧಿಸುವುದಿಲ್ಲ' ಎಂದೂ ಅರ್ಥವನ್ನು ಕೊಡುತ್ತದೆ. ಇದೇ ರೀತಿ ಪದಗುಚ್ಛಗಳು, ನುಡಿಗಟ್ಟುಗಳು, ಗಾದೆ ಮಾತುಗಳನ್ನು ಭಾಷಾಂತರಿಸುವುದು ಕಷ್ಟ. ಅವುಗಳನ್ನು ಹೇಳುವಾಗ ವಿವರಣಾತ್ಮಕವಾಗಿ ಮೂಲದ ಆಶಯವನ್ನು ಹೇಳಬಹುದು, ಅಷ್ಟೆ.

ಕಾವ್ಯದ ಭಾಷಾಂತರಕ್ಕೂ ಒಂದು ಪರಿಮಿತಿ ಇದೆ. ಅದು ಸಕ್ಕರೆಯ ಸಿಹಿಯನ್ನು ಬೆಲ್ಲದ ಮೂಲಕ ತೋರಿ ಕೊಟ್ಟಂತೆ. ಇದರ ಬಗ್ಗೆ ಕವಿ ಡಿವಿಜಿ ಹೀಗೆ ಹೇಳುತ್ತಾರೆ:

ಹಗುರಾದ ಮಾತುಗಳು, ನವಿರಾದ ಭಾವಗಳು
ಚೈತ್ರ ಸಂಜೆಯಲಿ ತೋಟದಲಿ ಮೆಲುಮೆಲನೆ
ಸುಳಿಸುಳಿದು ಸೋಕುವೆಲರಿನ ಲಘುವಿಲಾಸಗಳು
ತರ್ಜುಮೆಗೆ ಸಿಲುಕುವುವೆ ಬೇರೆ ಭಾಷೆಯಲಿ?

(ಉಮರನ ಒಸಗೆ 'ಸಮಾಪನೆ'ಯಲ್ಲಿ)

ಕಾವ್ಯದ ಅನುವಾದದಲ್ಲಿ ಮೂಲದ ಭಾವ, ಲಯ, ಅರ್ಥಗಳನ್ನು ಇಡಿಯಾಗಿ, ಅನಾಮತ್ತಾಗಿ ತರುವುದು ಕಷ್ಟ. ಉದಾಹರಣೆಗೆ ಸಂಸ್ಕೃತದ ಒಂದೇ ಅಕ್ಷರದಿಂದ ರಚಿತವಾದ ಈ ಕೆಳಗಿನ ಶ್ಲೋಕವನ್ನು ಅನುವಾದಿಸಲು ಸಾಧ್ಯವೆ?

ನ ನೋನನುನ್ನೋ ನುನ್ನೋನೋ ನಾನಾ ನಾನಾನನ ನನು।
ನುನ್ನೋಽನುನ್ನೋ ನನುನ್ನೇನೋ ನಾನೇನಾ ನುನ್ನನುನ್ನನುತ್॥

(ಕಿರಾತಾರ್ಜುನೀಯ 15-14)

ಹಾಗೆಯೇ ಪಂಪ ಭಾರತದಲ್ಲಿ ಭೀಮನ ನುಡಿ 'ಎನ್ನ ನುಡಿ ಟಾಠಡಾಢಣ' ಎಂಬುದನ್ನು (I am very harsh) ಎಂದರೆ ಮೂಲದ ಆರ್ಭಟ ಮಾಯವಾಗುತ್ತದೆ. ಹೀಗಾಗಿ ಕಾವ್ಯದ ಅನುವಾದಕ್ಕೆ ಒಂದು ಪರಿಮಿತಿ ಇದೆ. "ಸಾಧ್ಯವಾದ ಮಟ್ಟಿಗೂ ಉದ್ದಿಷ್ಟ ಭಾಷೆಯ ಜಾಯಮಾನಕ್ಕೆ ಹೊಂದುವಂತಹ ರೀತಿಯಲ್ಲಿ ನಷ್ಟಗಳಿಗೆ ಪರಿಹಾರ ಕಂಡು ಕೊಳ್ಳಬೇಕಾಗುತ್ತದೆ" ಎನ್ನುತ್ತಾರೆ ಬಾ. ವೇ. ಶ್ರೀಧರರು (ಭಾಷಾಂತರದ ಪರಿಮಿತಿಗಳು, 'ನಾಗವಲ್ಲಿ', ಪುಟ 82) ಇದರಿಂದ ಮೂಲಕೃತಿಯಿಂದ ಸಂಪೂರ್ಣವಾಗಿ ವಂಚಿತರಾಗುವ ಬದಲು ಅದನ್ನು ಆದಷ್ಟು ಮಟ್ಟಿಗಾದರೂ ಸವಿಯಬಹುದು. ಇದು ಭಾಷಾಂತರಕ್ಕಿರುವ ಪರಿಮಿತಿ. ಈ ಪರಿಮಿತಿ ಭಾಷಾಂತರಕ್ಕಿರುವ ನೆಲೆಯನ್ನು ಬೆಲೆಯನ್ನು ನಿಶ್ಚಯಿಸುತ್ತದೆ.

## ಸಾಧನ ಮತ್ತು ಉಪಕರಣ

ಭಾಷಾಂತರ ಸಹಜವಾಗಿ ನಡೆಯುತ್ತಿರುವ ಒಂದು ಪ್ರಕ್ರಿಯೆ. ವ್ಯಕ್ತಿ ತಿಳಿದೋ ತಿಳಿಯದೆಯೋ ಭಾಷಾಂತರ ಮಾಡುತ್ತಲೇ ಇರುತ್ತಾನೆ. ಆಧುನಿಕ ಜಗತ್ತು ಇಷ್ಟು ಕಿರಿದಾಗಲು ಭಾಷಾಂತರ ಕಾರಣ. ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಹಿತ್ಯಿಕ, ವೈಜ್ಞಾನಿಕ, ಬೌದ್ಧಿಕ, ಚಿಂತನೆಗಳು ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಹರಡಲು ಭಾಷಾಂತರ ಕಾರಣ. ಈ ದಿಸೆಯಲ್ಲಿ ವೃತ್ತ ಪತ್ರಿಕೆಗಳು, ಪ್ರಚಾರ ಮಾಧ್ಯಮಗಳು, ಪ್ರಕಟಣೆಗಳು ಸಾಧನಗಳಾಗಿ ಕಾರ್ಯನಿರ್ವಹಿಸುತ್ತವೆ. ಭಾಷಾಂತರ ದೂರದರ್ಶಕ ಹಾಗೂ ಸೂಕ್ಷ್ಮದರ್ಶಕವಾಗಿ ಕೆಲಸ ಮಾಡುತ್ತದೆ.

ಮೂಲಕೃತಿ ರಚನೆಗಿಂತಲೂ ಭಾಷಾಂತರ ಕ್ಲಿಷ್ಟವಾದ ಕಾರ್ಯ, ಭಾಷಾಂತರ ಕಾರ್ಯದಲ್ಲಿ ಅನುವಾದಕನ ಪ್ರತಿಭೆ ಪಾಂಡಿತ್ಯ, ವ್ಯುತ್ಪತ್ತಿ, ಅನುಭವಗಳು ಸಾಧನಗಳು. ಅವನ ಮುಖ್ಯ ಸಾಧನ ಭಾಷಾ ಪ್ರಭುತ್ವ, ಭಾವ ಗ್ರಹಣ ಹಾಗೂ ವಿಷಯದ ಪರಿಜ್ಞಾನ. ಇವು ಭಾಷಾಂತರದಲ್ಲಿ ಸ್ಪಷ್ಟತೆ, ನಿರ್ದಿಷ್ಟತೆ, ಸರಳತೆ ಮತ್ತು ಶುದ್ಧತೆಯನ್ನು ತರಲು ಸಹಕಾರಿಯಾಗುತ್ತವೆ. ಕೋಶಗಳು ಭಾಷಾಂತರದ ಉಪಕರಣಗಳು. ಕೋಶಗಳಿರುವುದರಿಂದ ಭಾಷಾಂತರ ಸುಲಭ ನಿಜ. ಆದರೆ ಅವುಗಳು ಸಂಗಾತಿಯಾದಂತೆ ಕೆಲವೊಮ್ಮೆ ಕೆಟ್ಟ ಮಾರ್ಗದರ್ಶಿಗಳೂ ಆಗುತ್ತವೆ. ಶಬ್ದರೂಪ, ಉಚ್ಚಾರ, ಅರ್ಥಗಳನ್ನು ಅರಿಯಲು ಕೋಶಗಳು ಸಹಕಾರಿಯಾಗುತ್ತವೆ. ಇವುಗಳಲ್ಲದೆ ಅವುಗಳಿಗೆ ಸಂಬಂಧಿಸಿದ ನುಡಿಗಟ್ಟುಗಳು, ಜಾರು ನುಡಿಗಳನ್ನು ನೀಡಲಾಗುತ್ತದೆ. ಕನ್ನಡದಲ್ಲಿ ಮೈಸೂರು ವಿಶ್ವವಿದ್ಯಾಲಯವು ಪ್ರಕಟಿಸಿದ ಇಂಗ್ಲಿಷ್ - ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ - ಕನ್ನಡ ನಿಘಂಟು, ಕಸ್ತೂರಿ ಕೋಶ, ಕನ್ನಡ - ಹಿಂದೀ ಆದರ್ಶಕೋಶ ಮುಂತಾದವು ಕನ್ನಡ ಭಾಷಾಂತರಕಾರರಿಗೆ ಅವಶ್ಯವಾದ ಉಪಕರಣಗಳು. ಇಷ್ಟಾದರೂ ಗಮನಿಸಬೇಕಾದ ಅಂಶವೆಂದರೆ ಕೋಶಕಾರನು ಕೋಶ ರಚಿಸುವಾಗ ಪ್ರಚಲಿತವಿದ್ದ ಅರ್ಥ ಕಾಲಕ್ರಮದಲ್ಲಿ ಬದಲಾಗಿರಬಹುದು. ಹಾಗಾಗಿ ಭಾಷಾಂತರಕಾರ ಚಾಲ್ತಿಯಲ್ಲಿರುವ ಅರ್ಥದ ಬಗ್ಗೆಯೂ ಗಮನ ಹರಿಸಬೇಕು. ಕೆಲವೊಮ್ಮೆ ಮೂಲಲೇಖಕ, ಹೊಸದಾಗಿ ಕೆಲವು ಶಬ್ದಗಳನ್ನು ಮಂಡಿಸಬಹುದು. ಅಂತಹ ಸಂದರ್ಭದಲ್ಲಿ ಕೋಶಗಳಲ್ಲಿ ಅವುಗಳಿಗೆ ಅರ್ಥವೇ ದೊರೆಯದೇ ಹೋಗಬಹುದು. ಅನುವಾದ ಮಾಡುವಾಗ ಮೂಲಲೇಖಕ ಯಾವ ಅರ್ಥದಲ್ಲಿ ಮಾಡಿದ್ದಾನೆ ಎಂದು ನೋಡುವುದು ಮುಖ್ಯ. ನಾನಾ ಆಕರಗಳನ್ನು ಶೋಧಿಸಬೇಕಾಗುತ್ತದೆ. ಟೀಕೆಗಳನ್ನು, ಭಾಷ್ಯಗಳನ್ನು, ಇತರ ಭಾಷೆಗಳಲ್ಲಿ ಬಂದ ಭಾಷಾಂತರಗಳನ್ನು ನೋಡಬೇಕಾಗುತ್ತದೆ. ಇವೆಲ್ಲವೂ ಭಾಷಾಂತರಕಾರರಿಗೆ ಉಪಕರಣಗಳಾಗಿ ಪರಿಣಮಿಸುತ್ತವೆ.

ಈಚೆಗೆ ಗಣಕ ಯಂತ್ರಗಳ ಮೂಲಕ ಭಾಷಾಂತರವನ್ನು ಸಿದ್ಧಪಡಿಸುವ ಪ್ರಯತ್ನ ನಡೆದಿದೆ. ಕಂಪ್ಯೂಟರ್ ಬಳಕೆ ಎಲ್ಲಾ ಕ್ಷೇತ್ರಗಳಲ್ಲಿ ಆದಂತೆ ಭಾಷಾಂತರ ಕ್ಷೇತ್ರದಲ್ಲಿ ಆಗುತ್ತಿದೆ. ಈ ದಿಸೆಯಲ್ಲಿ ಭಾಷಾವಿಜ್ಞಾನಿಗಳು, ಭೌತ ವಿಜ್ಞಾನಿಗಳು, ತಂತ್ರಜ್ಞರು, ಇಂಜಿನಿಯರ್‌ಗಳು ಶ್ರಮ ವಹಿಸುತ್ತಿದ್ದು ಪ್ರಯತ್ನ ಫಲಕಾರಿಯಾಗುತ್ತಿದೆ. ಭಾರತದಂತಹ ಬಹುಭಾಷಾ ರಾಷ್ಟ್ರಕ್ಕೆ ಈ ಗಣಕ ಯಂತ್ರದ ಭಾಷಾಂತರ ಹೆಚ್ಚು ಸಹಕಾರಿಯಾಗಲಿದೆ. ಸಭೆ ಸಮಾರಂಭಗಳಲ್ಲಿ ದುಭಾಷಿ (Interpreter) ಭಾಷಾಂತರ ಕಾರ್ಯನಿರ್ವಹಿಸುತ್ತಾನೆ. ಏನೇ ಆದರೂ ಧೃತಿಗೆಡದಂತಹ ಧೈರ್ಯ, ಏಕಾಏಕಿ ಬರುವಂಥ ಸ್ಮರಣ ಶಕ್ತಿ, ಸಂಪೂರ್ಣ ಅವಧಾನತೆ, ವೇಗ ಮತ್ತು ನಿಖರತೆಗಳ ಒಂದು ಸಂಯೋಜನೆ, ಪ್ರಜ್ಞಾಪೂರ್ವಕವಾಗಿ ಆರೋಪಿಸಿಕೊಂಡಂಥ ಇಚ್ಛೆತ್ತ, ವ್ಯವಹಾರಿಕ ಜ್ಞಾನ, ವಿಷಯ ಜ್ಞಾನ, ಭಾಷಾ ಜ್ಞಾನ ಹಾಗೂ ಸಂಸ್ಕೃತಿ ಜ್ಞಾನ ಇವುಗಳು ದುಭಾಷಿಯ ಮುಖ್ಯ ಸಾಧನಗಳೆನ್ನುತ್ತಾರೆ, ಶ್ರೀಮತಿ ಎಂ. ಜಯಂತಿಬಾಯಿಯವರು (ಭಾಷಾಂತರ ಸಾಧನಗಳು ಮತ್ತು ಉಪಕರಣಗಳು, ನಾಗವಲ್ಲಿ, ಪುಟ 88). ಭಾಷಾಂತರದ ಅವಶ್ಯಕತೆ ಹೆಚ್ಚಿದಂತೆಲ್ಲಾ ಅದರ ಸಾಧನಗಳು ಮತ್ತು ಉಪಕರಣಗಳು ಹೆಚ್ಚುತ್ತಿವೆ. ಇದರಿಂದಾಗಿ ಭಾಷಾಂತರಕ್ಕೆ ಇನ್ನು ಹೆಚ್ಚು ಬೆಲೆ ಬಂದು, ಅದರ ನೆಲೆ ಹೆಚ್ಚು ಗಟ್ಟಿಯಾಗುತ್ತಾ ಹೋಗುತ್ತಿದೆ.

### ಶಿಕ್ಷಣ ಮತ್ತು ಸಂಸ್ಕೃತಿ

ಇಂದು ಭಾಷಾಂತರ ಎಷ್ಟು ಬೆಳೆದಿದೆ ಎಂದರೆ ಶಿಕ್ಷಣ ಸಮಗ್ರವಾಗಬೇಕಾದರೆ ಭಾಷಾಂತರ ಅನಿವಾರ್ಯ ಎನ್ನುವಷ್ಟರ ಮಟ್ಟಿಗೆ ಸರ್ವವ್ಯಾಪ್ತಿಯಾಗಿದೆ. ಆಡುವ ಭಾಷೆ ಬೇರೆಯಾಗಿದ್ದರೂ ಶಿಕ್ಷಣದ ದೃಷ್ಟಿಯಿಂದ ಪ್ರಾಚೀನ ಕಾಲದಲ್ಲಿ ಗ್ರೀಕ್,

ಸಂಸ್ಕೃತ, ಲ್ಯಾಟಿನ್, ಅರೆಬಿಕ್ ಭಾಷೆಗಳನ್ನು ಕಲಿಯುವುದು ಅನಿವಾರ್ಯವಾಗಿತ್ತು. ಭಾರತದಲ್ಲಂತೂ ಸಂಸ್ಕೃತ ಜ್ಞಾ ಶಿಕ್ಷಣದ ಅವಿಭಾಜ್ಯ ಅಂಗವಾಗಿತ್ತು. ಈಗ ಆ ಸ್ಥಾನವನ್ನು ಇಂಗ್ಲಿಷ್ ಪಡೆದಿದೆ. ಇಂದಿನ ದಿನಗಳಲ್ಲಿ ಇಂಗ್ಲಿಷ ಪರಿಜ್ಞಾನವಿಲ್ಲದಿದ್ದರೆ ಶಿಕ್ಷಣ ಅಪೂರ್ಣವೆಂಬ ಭಾವನೆ ಬಂದಿದೆ. ಹೊರ ಜಗತ್ತಿನತ್ತ ಇಣುಕಲು ಇಂಗ್ಲಿಷ್ ಜ್ಞಾನ ಅಗತ್ಯವಿದೆ.

ಶಿಕ್ಷಣದಲ್ಲಿ ಮುಖ್ಯವಾಗಿ ಎರಡು ದೃಷ್ಟಿಯಿಂದ ಭಾಷಾಂತರ ಅವಶ್ಯಕ. ಒಂದು ಭಾಷೆಗೆ ಅಪರಿಚಿತವಾ ವಿಷಯವನ್ನು ಇನ್ನೊಂದು ಭಾಷೆಗೆ ತೆಗೆದುಕೊಂಡು ಹೋಗಿ ಬೋಧಿಸುವಾಗ ಸಹಜವಾಗಿ ಭಾಷಾಂತರ ಬಳಸಬೇಕಾಗುತ್ತದ ಹಾಗೆಯೇ ಇಂತಹ ಭಾಷೆಗಳ ವಿಷಯ ಸಂಪತ್ತನ್ನು ತನ್ನದಾಗಿಸಿಕೊಳ್ಳಲು ಹಾಗೂ ತನ್ನ ಭಾಷೆಯಲ್ಲಿ ಅದನ್ನು ವ್ಯಕ್ತಪಡಿಸಲ ಭಾಷಾಂತರ ಬಳಕೆಯಾಗುತ್ತದೆ. ಇದು ಕೆಲವೊಮ್ಮೆ ಪ್ರತ್ಯಕ್ಷವಾಗಿ, ಕೆಲವೊಮ್ಮೆ ಅಪ್ರತ್ಯಕ್ಷವಾಗಿ ನಡೆಯುವ ಕ್ರಿಯೆ. ಪಠ ಪುಸ್ತಕವನ್ನು ನೇರವಾಗಿ ಅನುವಾದಿಸಿ ಬೋಧಿಸಬಹುದು. ಅಥವಾ ವಿಷಯವನ್ನು ಸಂಗ್ರಹಿಸಿ ಬೋಧಿಸಬಹುದು. ಎರಡ ಸಂದರ್ಭಗಳಲ್ಲಿ ಭಾಷಾಂತರ ಪಾತ್ರ ವಹಿಸುತ್ತದೆ.

ಭಾಷಾಶಾಸ್ತ್ರದ ದೃಷ್ಟಿಯಿಂದ ಎಲ್ಲಾ ಭಾಷೆಗಳೂ ಸಮಾನವೇ. ಆದರೆ ಒಂದು ಭಾಷೆಯ ಮಹತ್ವ ಬೆಳೆಯುವುದು ಆ ಭಾಷೆಯ ಜನರ ಸಾಧನೆ, ಸಾಮರ್ಥ್ಯಗಳಿಂದ. ಆ ಬಗ್ಗೆ ತಿಳಿಯಲು ಬೇರೆಯವರು ಪ್ರಯತ್ನಪಡುವಾಗ ಭಾಷಾಂತರ ಮೊರೆ ಹೋಗಬೇಕಾಗುತ್ತದೆ. ಈ ಭಾಷಾಂತರ ಕಾರ್ಯವು ಅನೇಕ ಸಂವಾದಿ ಪದಗಳ ಸೃಷ್ಟಿಗೆ ಹಾಗೂ ಪಾರಿಭಾಷಿ ಪದಗಳನ್ನು ಹಾಗೆಯೇ ಅಳವಡಿಸಿಕೊಳ್ಳಲು ಕಾರಣವಾಗಿದೆ. ಇದರಿಂದ ಭಾಷೆ ಬೆಳೆಯುತ್ತಾ ಹೋಗಿ ಶಿಕ್ಷಣ ಮಾಧ್ಯಮದಲ್ಲೂ ಅದರ ಬಳಕೆ ಹೆಚ್ಚುತ್ತಾ ಹೋಗುತ್ತದೆ.

ಇಂದು ಭಾಷಾಂತರ ಒಂದು ಹವ್ಯಾಸವಾಗಿರದೆ ಅದೊಂದು ಅಧ್ಯಯನದ ವಿಷಯವಾಗಿದೆ. ಆಧುನಿಕ ಭಾಷಾಂತರ ವಿಧಾನಗಳಲ್ಲಿ ಅನುಸರಿಸಬೇಕಾದ ನಿಯಮಗಳು, ಸಿದ್ಧತೆಗಳ ಬಗ್ಗೆ ಅನೇಕ ಕೃತಿ ರಚನೆಯಾಗಿವೆ. ಈ ಬಗ್ಗೆ ಸಂಶೋಧನೆಗಳ ನಡೆಯುತ್ತಿವೆ. ಭಾಷಾಂತರದಲ್ಲಿ ಡಿಪ್ಲೊಮೊ, ಎಂ. ಫಿಲ್, ಪಿ. ಹೆಚ್‌ಡಿ. ಗಳು ಪ್ರಾರಂಭವಾಗಿದೆ. ವಿಶ್ವವಿದ್ಯಾನಿಲಯಗಳಲ್ಲಿ ಭಾಷಾಂತರ ವಿಭಾಗ ಪ್ರಾರಂಭಿಸಲಾಗುತ್ತಿದೆ. ಇದರಿಂದಾಗಿ ಶಿಕ್ಷಣ ಕ್ಷೇತ್ರದಲ್ಲಿ ಇಂದು ಭಾಷಾಂತರಕ್ಕೆ ಹೆಚ್ಚಿನ ಬೆಲ ಬಂದಿದ್ದು, ಅದು ಭದ್ರವಾಗಿ ನೆಲಸುವ ಎಲ್ಲಾ ಲಕ್ಷಣಗಳನ್ನು ತೋರಿಸುತ್ತಿದೆ.

ಭಾಷೆಗೂ ಸಂಸ್ಕೃತಿಗೂ ಬಹಳ ಹತ್ತಿರದ ನಂಟು. ಭಾಷೆ ಸಂಸ್ಕೃತಿಯನ್ನು ಉಳಿಸಿ ವರ್ಧಿಸುತ್ತದೆ. ಸಂಸ್ಕೃತಿ ಭಾಷೆಯ ಮೂಲಕ ಅಭಿವ್ಯಕ್ತವಾಗುತ್ತದೆ. ಸಂಸ್ಕೃತಿ ಭಾಷೆಯ ಮೇಲೆ ಪ್ರಭಾವ ಬೀರುತ್ತದೆ. ಒಂದು ಭಾಷೆಯ ಅಭಿವ್ಯಕ್ತಿ ಸಾಮರ್ಥ ಅದರ ಸಂಸ್ಕೃತಿಯನ್ನು ಅವಲಂಬಿಸಿರುತ್ತದೆ. ಸಂಸ್ಕೃತಿ ಭಾಷೆಗೆ ಆಧಾರ ಹಾಗೂ ಭಾಷೆ ಸಂಸ್ಕೃತಿಯ ವಾಹಕ. ಸಾಹಿತ್ ಸಮಾಜದ ಪ್ರತಿಬಿಂಬ. ಪ್ರತಿ ಸಮಾಜಕ್ಕೂ ತನ್ನದೇ ಆದ ಸಂಸ್ಕೃತಿ ಇರುತ್ತದೆ. ಸಾಂಸ್ಕೃತಿಕ ಅಗತ್ಯಕ್ಕನುಗುಣವಾಗಿ ಅದು ಭಾಷೆಗೆಪದಕೋಶವಿರುತ್ತದೆ. ಉದಾಹರಣೆಗೆ 'Beating the breast' ಎದೆ ಬಡಿದುಕೊಳ್ಳುವುದು. ನಮ್ಮ ಸಂಸ್ಕೃತಿಯಲ್ಲಿ ದುಃಖದ ಸಂಕೇತವಾದರೆ ಆಫ್ರಿಕನ್ ಸಂಸ್ಕೃತಿಯಲ್ಲಿ ಹರ್ಷದ ಸಂಕೇತವಾಗುತ್ತದೆ. ಕನ್ನಡ - ತೆಲುಗು. ಕನ್ನಡ-ತಮಿಳು ಭಾಷಾಂತರ ಕನ್ನಡ-ಇಂಗ್ಲಿಷ್, ಕನ್ನಡ-ಜರ್ಮನ್ ಭಾಷಾಂತರಕ್ಕಿಂತ ಸುಲಭ. ಏಕೆಂದರೆ, ದ್ರಾವಿಡ ಭಾಷೆಗಳು ಒಂದೇ ಸಂಸ್ಕೃತಿಯ ನೆಲೆಗಟ್ಟಿನ ಮೇಲೆ ನಿಂತಿರುವುದು. ಆದ್ದರಿಂದ ಭಾಷಾಂತರಕಾರ (bilingual) ಮಾತ್ರವಲ್ಲ (bi cultural)

ಕೂಡ ಆಗಬೇಕಾಗುತ್ತದೆ. ಎರಡೂ ಭಾಷೆ ಮತ್ತು ಸಂಸ್ಕೃತಿಗಳಲ್ಲಿ ಪರಿಣತಿ ಇರಬೇಕಾಗುತ್ತದೆ. ಸರಳ ಸಂಸ್ಕೃತಿಯಿಂದ ಸಂಕೀರ್ಣ ಸಂಸ್ಕೃತಿಗೆ ಭಾಷಾಂತರಿಸುವುದು ಸಂಕೀರ್ಣ ಸಂಸ್ಕೃತಿಯಿಂದ ಸರಳ ಸಂಸ್ಕೃತಿಗೆ ಭಾಷಾಂತರಿಸುವುದಕ್ಕಿಂತ ಸುಲಭ.

ಸಾಂಸ್ಕೃತಿಕ ಸಮಸ್ಯೆಗಳನ್ನು 1. ಪರಿಸರ (ecology) 2. ವಸ್ತು ಸಂಸ್ಕೃತಿ (material culture) 3. ಸಾಮಾಜಿಕ ಸಂಸ್ಕೃತಿ (social culture) 4. ಧಾರ್ಮಿಕ ಸಂಸ್ಕೃತಿ (religious culture) ಮತ್ತು 5. ಭಾಷಿಕ ಸಂಸ್ಕೃತಿ (linguistic culture) ಎಂದು ಐದು ವಿಭಾಗಗಳಾಗಿ ಯೂಜೀನ್ ನೀಡಾ ವಿಂಗಡಿಸಿದ್ದಾರೆ. ಪರಿಸರ ಸಂಸ್ಕೃತಿಯ ಮೇಲೆ ಪ್ರಭಾವ ಬೀರುತ್ತದೆ. ಮರಳುಗಾಡಿನ ಬದುಕಿಗೂ, ಪರ್ವತ ಶ್ರೇಣಿಗಳಲ್ಲಿನ ಬದುಕಿಗೂ ಬಹಳ ವ್ಯತ್ಯಾಸವಿದೆ. ಇದು ಅಲ್ಲಿಯ ಸಂಸ್ಕೃತಿ ಸಾಹಿತ್ಯದ ಮೇಲೆ ಪ್ರಭಾವ ಬೀರುತ್ತದೆ. ಹಾಗೆಯೇ ಪ್ರತಿಯೊಂದು ಜನಾಂಗ ಬಳಸುವ ವಸ್ತು, ಅಗತ್ಯಗಳು ಬೇರೆ ಬೇರೆ ಆಗಿದ್ದು, ಈ ವೈವಿಧ್ಯ ಸಾಂಸ್ಕೃತಿಕ ತೊಡಕನ್ನು ಒಡ್ಡುತ್ತದೆ. ಕರಾವಳಿ ತೀರದಲ್ಲಿ ಮೀನುಗಾರರು ದೋಣಿ, ಬಲೆ ಬಳಸುವುದರಿಂದ ಅವರ ಸಂಸ್ಕೃತಿ ಮೇಲೆ ಅವುಗಳ ಪ್ರಭಾವ ಬೀಳುತ್ತದೆ. ಹಾಗೆಯೇ ಆಯಾಯಾ ಸಮಾಜಗಳಲ್ಲಿನ ಪದ್ಧತಿಗಳಿಗನುಸಾರವಾಗಿ ಭಾಷೆ, ಪದಕೋಶ ಇರುತ್ತದೆ. ಈ ಪದಕೋಶಗಳಲ್ಲಿ Intimate vocabulary ಮತ್ತು cultural vocabulary ಎಂದಿದ್ದು ಭಾಷಾಂತರಿಸುವಾಗ ಮೊದಲನೆಯದು ಎರಡನೆಯದಕ್ಕಿಂತ ಸ್ವಲ್ಪ ಸುಲಭವಾಗುತ್ತದೆ. ಏಕೆಂದರೆ cultural vocabulary ಆಯಾ ಸಮಾಜಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಹಾಗೆಯೇ ಬಾಂಧವ್ಯ ಸೂಚಕ kinship termಗಳೂ ಕೂಡ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬದಲಾಗುತ್ತದೆ. ಕನ್ನಡದ ಚಿಕ್ಕಪ್ಪ, ದೊಡ್ಡಪ್ಪ, ಮಾವ ಎಲ್ಲರಿಗೂ ಇಂಗ್ಲಿಷಿನಲ್ಲಿ uncle ಎನ್ನುವುದು ಇದಕ್ಕೆ ಉದಾಹರಣೆ. ಧಾರ್ಮಿಕ ವಿಧಿ ವಿಧಾನಗಳು ಕೂಡ ಒಂದು ಸಂಸ್ಕೃತಿಯಿಂದ ಇನ್ನೊಂದು ಸಂಸ್ಕೃತಿಗೆ ವಿಭಿನ್ನವಾಗಿರುತ್ತವೆ. ಭಾರತೀಯ ಸಂಸ್ಕೃತಿ, ಪಾಶ್ಚಾತ್ಯ ಸಂಸ್ಕೃತಿಗಳಲ್ಲಿ ಕಾಣುವ ಧಾರ್ಮಿಕ ಹಿನ್ನೆಲೆಗಳು ಸಂಪೂರ್ಣ ಭಿನ್ನವಾಗಿವೆ. ಭಾಷೆಗಳ ರಚನೆಯಲ್ಲಿ ವಿಭಿನ್ನತೆ ಇದೆ. ಭಾಷೆಯ ವರ್ತನೆಯೇ ಭಾಷಿಕ ಸಂಸ್ಕೃತಿ. ಆಯಾ ಭಾಷೆಗಳ ವಿಶೇಷ ಲಕ್ಷಣಗಳೇ ಭಾಷಾಂತರಿಸುವಾಗ ಸಮಸ್ಯೆ ಒಡ್ಡುತ್ತವೆ. ಇದರಲ್ಲಿ ಪದಕೋಶ ಸಮಸ್ಯೆಗಳು ವ್ಯಾಕರಣ ಸಮಸ್ಯೆಗಳನ್ನು ನಾವು ಕಾಣಬಹುದು. ಒಂದೇ ವಸ್ತು ಅಥವಾ ಪರಿಕಲ್ಪನೆ ಮೂಲ ಮತ್ತು ಉದ್ದಿಷ್ಟ ಭಾಷೆಗಳೆರಡರಲ್ಲೂ ಇದ್ದರೆ ಸಮಾನಾರ್ಥಕ ಶಬ್ದವನ್ನು ಹಾಕಬಹುದು. ಸಮಾನಾರ್ಥಕ ಶಬ್ದ ಸಿಗದೇ ಇದ್ದಾಗ ಅತ್ಯಂತ ಹತ್ತಿರದ ಸಮಾನಾರ್ಥಕ ಶಬ್ದವನ್ನು ಹಾಕಬೇಕಾಗುತ್ತದೆ. ಸಾರ್ವತ್ರಿಕ ಸಂಸ್ಕೃತಿಯೊಂದು ನಿರ್ಮಾಣವಾದಾಗ ಈ ಸಮಾನಾರ್ಥಕ ಶಬ್ದದ ಸಮಸ್ಯೆ ಉಳಿಯುವುದಿಲ್ಲ. ಇದು ಪದಕೋಶದ ಸಮಸ್ಯೆ. ಎಲ್ಲಾ ಭಾಷೆಗಳ ರಚನೆಯೂ ಒಂದೇ ರೀತಿ ಇರುವುದಿಲ್ಲ. ಲಿಂಗಗಳು, ವಚನಗಳು, ಕಾಲಗಳು, ಒಂದೊಂದು ಭಾಷೆಯಲ್ಲಿ ಒಂದೊಂದು ರೀತಿಯಲ್ಲಿವೆ. ಹಾಗೆಯೇ ವಾಕ್ಯ ರಚನೆಯಲ್ಲಿ ವ್ಯತ್ಯಾಸವಿರುತ್ತದೆ. ಕೆಲವೊಂದು ಭಾಷೆಗಳಲ್ಲಿ ಪ್ರಧಾನ ವಾಕ್ಯ, ಅನೇಕ ಉಪ ವಾಕ್ಯಗಳಿದ್ದರೆ ಕೆಲವು ಭಾಷೆಗಳಲ್ಲಿ ಈ ಸೌಲಭ್ಯವಿರುವುದಿಲ್ಲ. ಭಾಷಿಕ ಸಂಸ್ಕೃತಿಯ ತೊಡಕುಗಳನ್ನು ಯೂಜೀನ್ ನೀಡಾ 1. ಧ್ವನ್ಯಾತ್ಮಕ (phonological) 2. ಆಕೃತಿಯಾತ್ಮಕ (mrophological) 3. ವಾಕ್ಯ ರಚನಾತ್ಮಕ (syntactic) ಹಾಗೂ 4. ಕೋಶಾತ್ಮಕ (lexical factors) ಎಂದು ನಾಲ್ಕು ವರ್ಗಗಳಾಗಿ ವಿಂಗಡಿಸಿದ್ದಾರೆ.

ಭಾಷೆಗಳು ಮೂಲಭೂತವಾಗಿ ಸಂಸ್ಕೃತಿಯ ಒಂದು ಭಾಗವಾದುದರಿಂದ ಸಾಂಸ್ಕೃತಿಕ ಅರಿವು ಬಹು ಮುಖ್ಯ. ಇದನ್ನು ಅರಿಯಲು ವಿವಿಧ ಸಾಂಸ್ಕೃತಿಕ ಅಂಶಗಳ ಮತ್ತು ಅವನ್ನು ಪ್ರತಿನಿಧಿಸುವ ಶಬ್ದಗಳ ಬಗ್ಗೆ ಸಂಶೋಧನೆ ಅಗತ್ಯ. ವಿಜ್ಞಾನದ ಪರಿಪೂರ್ಣ ಅಧ್ಯಯನಕ್ಕೆ ಭಾಷಾ ವಿಜ್ಞಾನ ಹಾಗೂ ವಿಶ್ಲೇಷಣಾತ್ಮಕ ಸಾಮಾಜಿಕ ಮಾನವ ಶಾಸ್ತ್ರದ ಸಂಯುಕ್ತ ಜ್ಞಾನ ಅಗತ್ಯ. ಇವೆರಡೂ ಜ್ಞಾನವಿದ್ದವನು ಯಶಸ್ವಿ ಭಾಷಾಂತರಕಾರ ಆಗಬಲ್ಲನು.

ಆಧುನಿಕ ಜಗತ್ತಿನಲ್ಲಿ ಭಾಷಾಂತರಕ್ಕೆ ಮಹತ್ವದ ಸ್ಥಾನ ದೊರೆತಿದೆ. ಇದು ಕೇವಲ ಮಾನವಿಕ ವಿಷಯಗಳಿಗಷ್ಟೇ ಸೀಮಿತವಾಗಿರದೆ ನಾಗರೀಕತೆಯ ವಿವಿಧ ಮುಖಗಳನ್ನು ನಮಗೆ ಪರಿಚಯ ಮಾಡಿಸಿಕೊಡುತ್ತದೆ. ವಿಜ್ಞಾನ, ತಾಂತ್ರಿಕ, ಕಲೆ, ಸಾಹಿತ್ಯ ಮುಂತಾದ ಎಲ್ಲಾ ಕ್ಷೇತ್ರಗಳಲ್ಲೂ ಭಾಷಾಂತರ ತನ್ನ ನೆಲೆ-ಬೆಲೆಯನ್ನು ಕಂಡುಕೊಂಡಿದೆ. ಸಾಮಾಜಿಕ - ಐತಿಹಾಸಿಕ, ರಾಷ್ಟ್ರೀಯ - ಜನಾಂಗೀಯ, ಸಾಹಿತ್ಯಕ - ಭಾಷಿಕ ವಿಷಯಗಳ ಬಗ್ಗೆ ಸಹಜವಾಗಿ ಉದ್ಭವಿಸುವ ಎಲ್ಲಾ ಪ್ರಮುಖ ಸಮಸ್ಯೆಗಳನ್ನು ಬಗೆಹರಿಸುವುದು ಭಾಷಾಂತರದ ಮುಖ್ಯ ಉದ್ದೇಶವಾಗಿದೆ. ಇಂದು ವೈಜ್ಞಾನಿಕ - ತಾಂತ್ರಿಕ ಕ್ರಾಂತಿ ಜೀವನದ ಎಲ್ಲಾ ಕ್ಷೇತ್ರಗಳನ್ನು ಆವರಿಸಿದೆ. ಅಷ್ಟೇ ಅಲ್ಲ, ಅಂತರರಾಷ್ಟ್ರೀಯ ವಿಜ್ಞಾನ ಕ್ಷೇತ್ರದಲ್ಲಿ ಹೊಸ ಮೈತ್ರಿಯನ್ನು ತಂದುಕೊಟ್ಟಿದೆ.

ಅಂತಾರಾಷ್ಟ್ರೀಯ ಭಾಷಾಂತರ ಒಕ್ಕೂಟದ ಸದಸ್ಯರಾದ ಎಡ್ಮಂಡ್ ಕ್ಯಾರಿ ಭಾಷಾಂತರ ಆಧುನಿಕ ಯುಗದಲ್ಲಿ ಎಂಥ ಮಹತ್ವ ಸ್ಥಾನ ಪಡೆದಿದೆ ಎಂಬುದನ್ನು ಈ ರೀತಿ ವಿವರಿಸುತ್ತಾರೆ: ''ಪ್ರತಿ ದಿನ ಸುಮಾರು 60 ಕೃತಿಗಳು ವಿವಿಧ ಭಾಷೆಗಳಲ್ಲಿ ಭಾಷಾಂತರವಾಗಿ ಪ್ರಕಟಗೊಳ್ಳುತ್ತಿವೆ. ಮೂರು ನಾಲ್ಕು ಅಂತಾರಾಷ್ಟ್ರೀಯ ಭೇಟಿಗಳು ನಡೆಯುತ್ತವೆ. ತಮ್ಮ ಭಾಷೆಗೆ ಡಬ್ ಆದ ಹತ್ತಾರು ಬಗೆಯ ಚಲನಚಿತ್ರಗಳು ರಜತ ಪರದೆಯ ಮೇಲೆ ಕಾಣಿಸಿಕೊಳ್ಳುತ್ತವೆ. ಬೆರಳಚ್ಚು ಯಂತ್ರಗಳು ಒಂದೇ ಸಮನೆ ಬೆರಳಚ್ಚಿಸುವ ಕಾರ್ಯದಲ್ಲಿ ತೊಡಗಿರುತ್ತವೆ. ಭಾಷಾಂತರಗೊಂಡ ಅನೇಕ ಪುಟಗಳಷ್ಟು ವಿಷಯಗಳು ರೇಡಿಯೋ ಮೂಲಕ ಪ್ರಸಾರಗೊಳ್ಳುತ್ತವೆ. ನಿರಂತರವಾಗಿ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನೇಕ ದಸ್ತಾವೇಜುಗಳು ಭಾಷಾಂತರಗೊಳ್ಳುತ್ತಿರುತ್ತವೆ'' (E. Cary : Translation in Modern Times, Geneva, 1956 page 62). ಹೀಗೆಂದಾಗ ಒಂದು ವಿಚಾರ ಸ್ಪಷ್ಟವಾಗುತ್ತದೆ - ನಾವು ಭಾಷಾಂತರ ಯುಗದಲ್ಲಿ ಇಂದು ಜೀವಿಸಿದ್ದೇವೆ ಅಂದ ಮೇಲೆ ಭಾಷಾಂತರ ಚಟುವಟಿಕೆ ಇಲ್ಲದಿದ್ದರೆ ಬಹುಸಂಖ್ಯಾತ ಜನರ ನಡುವೆ, ಬಹು ಭಾಷೆಗಳ ನಡುವೆ, ಸಂಸ್ಕೃತಿ ಮತ್ತು ಧಾರ್ಮಿಕ ವಿಷಯಗಳ ನಡುವೆ ನಡೆಯುತ್ತಿರುವ ಐತಿಹಾಸಿಕ ಸಂಗತಿಗಳು ಬೆಳಕಿಗೆ ಬರುತ್ತಿರಲಿಲ್ಲ.

ಇಂದು ಸಾವಿರಾರು ಮಂದಿ ಭಾಷಾಂತರ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ. ಇದಕ್ಕೆ ಭಾಷಾಂತರಕಾರರಲ್ಲದೆ ಇತರರೂ ತಮ್ಮ ಕಾಣಿಕೆ ಸಲ್ಲಿಸುತ್ತಿದ್ದಾರೆ. ವಾಣಿಜ್ಯೋದ್ಯಮಕ್ಕಾಗಿ ಸಾವಿರಾರು ಮಂದಿ ಪ್ರತಿದಿನ ವಿದೇಶಗಳಿಗೆ ಹೋಗುತ್ತಾರೆ. ಹಾಗೆಯೇ ವ್ಯಾಸಂಗಕ್ಕಾಗಿ ಇತರ ಕೆಲಸಗಳಿಗಾಗಿ ಹೋಗುತ್ತಾರೆ. ಹೋಟೆಲ್, ವಾಹನ, ವ್ಯವಹಾರ, ಶಾಲಾ ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ವ್ಯವಹರಿಸುವಾಗ ಭಾಷಾಂತರ ಕಾರ್ಯ ಅರಿವಿಲ್ಲದೇ ನಡೆಯುತ್ತದೆ. ಬೇರೆ ಬೇರೆ ಭಾಷೆಗಳನ್ನು ಕಲಿಸುವಾಗ, ಕಲಿಯುವಾಗ ಭಾಷಾಂತರ ಕ್ರಿಯೆ ನಡೆಯುತ್ತದೆ. ಅಂತರರಾಷ್ಟ್ರೀಯ ಸಮ್ಮೇಳನಗಳು ಪ್ರತಿನಿತ್ಯ ನಡೆಯುತ್ತಿರುವುದರಿಂದ ಅಲ್ಲೂ ಭಾಷಾಂತರ ಕಾರ್ಯ ನಡೆಯುತ್ತದೆ.

ಕಳೆದ 10 ವರ್ಷಗಳಲ್ಲಿ ಭಾಷಾಂತರ ಕ್ಷೇತ್ರದಲ್ಲಿ ಒಂದು ದೊಡ್ಡ ಕ್ರಾಂತಿಯೇ ನಡೆದಿದೆ. ಭಾಷಾಂತರ ಚಟುವಟಿಕೆ ಬೃಹತ್ ಪ್ರಮಾಣದಲ್ಲಿ ಬೆಳೆದು ಆ ಕ್ಷೇತ್ರದಲ್ಲೂ ಅನೇಕ ಸಂಶೋಧನೆಗಳು, ವೈಜ್ಞಾನಿಕ ಆವಿಷ್ಕಾರಗಳು ನಡೆದು ಅದು ಭದ್ರವಾಗಿ ತನ್ನ ನೆಲೆ-ಬೆಲೆಗಳನ್ನು ಕಂಡುಕೊಳ್ಳುತ್ತಿದೆ. 20ನೆಯ ಶತಮಾನದ ಮಧ್ಯಭಾಗದಲ್ಲಿ ಅಂತರರಾಷ್ಟ್ರೀಯ ಸಂಪರ್ಕ ವ್ಯಾಪಕವಾಗಿ ಬೆಳೆದು ಪ್ರಪಂಚ ಬಹಳ ಹತ್ತಿರಕ್ಕೆ ಬಂದಿತು. ಪ್ರಪಂಚದ ಭೂಪಟದಲ್ಲಿ ಅನೇಕ ಹೊಸ ಹೊಸ ರಾಷ್ಟ್ರಗಳು ಹುಟ್ಟಿಕೊಂಡವು. ಅಂತರರಾಷ್ಟ್ರೀಯ ಸಂಸ್ಥೆಗಳು ಹುಟ್ಟಿಕೊಂಡವು. ಸಂಚಾರ ವ್ಯವಸ್ಥೆ ಉತ್ತಮಗೊಂಡು ದೇಶ ದೇಶಗಳ ನಡುವೆ ಸಂಪರ್ಕ ವ್ಯವಸ್ಥೆ ಉತ್ತಮಗೊಂಡಿದೆ. ತಾಂತ್ರಿಕ ವೈಜ್ಞಾನಿಕ ಕ್ಷೇತ್ರದಲ್ಲಿ ಬಿರುಗಾಳಿ ಬೀಸಲು ಭಾಷಾಂತರ ಕೂಡ ತನ್ನ ಸಹಾಯ ಹಸ್ತ ಚಾಚಿದೆ. ವಿಷಯ, ವಿಚಾರಗಳ ವಿನಿಮಯ ಇಂದು ನಿರಂತರವಾಗಿ ಸಾಗಿದೆ. ಅಂತರರಾಷ್ಟ್ರೀಯ ಸಹಕಾರದಿಂದ ಸಂಶೋಧನಾ ಕ್ಷೇತ್ರದಲ್ಲಿ ಜಂಟೀ ಕಾರ್ಯಾಚರಣೆ ಏರ್ಪಟ್ಟಿದೆ. ಪತ್ರಿಕೆಗಳು, ದೂರದರ್ಶನ, ಆಕಾಶವಾಣಿಗಳು ಸಂಪರ್ಕ ಸೇತುವೆಗಳಾಗಿವೆ. ಹೀಗಾಗಿ ಭಾಷಾಂತರ ಇಂದು ಒಂದು ಪ್ರತ್ಯೇಕ ಅಧ್ಯಯನ ವಿಷಯವಾಗಿ ಹೊರ ಹೊಮ್ಮಿದೆ. ಜಗತ್ತಿನಾದ್ಯಂತ ತನ್ನ ನೆಲೆ-ಬೆಲೆಯನ್ನು ಕಂಡುಕೊಂಡಿದೆ. ■

